॥ ಶ್ರೀ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥಮಾಲಾ

ನಂ.—೧೭

ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

( ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದ )

ಆದಿಖಂಡ

೧—೬೩ ಅಧ್ಯಾಯಗಳು

ಅನುವಾದಕರು :

ಬೇಲದಕೆರೆ ಸೂರ್ಯನಾರಾಯಣ ಶಾಸ್ತ್ರಿ

ಸಾಹಿತ್ಯವಿದ್ವಾನ್

ಕನ್ನಡ ಪಂಡಿತ (ಮೈಸೂರು); ಕನ್ನಡ ವಿದ್ವಾನ್ (ಮದ್ರಾಸು).

ಮೈಸೂರು :

ಬೆಂಗಳೂರು ಪ್ರೆಸ್ ಬ್ರಾಂಚ್,

೧೯೪೯.

# ಮುನ್ನುಡಿ



ಪ್ರಾಣಿಗಳನ್ನು ಸೃಷ್ಟಿಮಾಡಿದ ಬ್ರಹ್ಮನು ಅವುಗಳನ್ನು ಸ್ವೇಚ್ಛೆಯಾಗಿ ಹೋಗಲು ಬಿಡದೆ ಕರ್ತವ್ಯವೆಂಬ ವ್ಯಾಜದಿಂದ ತನ್ನ ಅಧೀನದಲ್ಲಿಟ್ಟುಕೊಂಡಿರುವನು. ಆ ಬ್ರಹ್ಮನ ನಿಯಮವೇ ಈ ಕರ್ತವ್ಯವು. ಅದನ್ನು ಮಾಡದಿದ್ದರಾಗಲಿ, ಅದಕ್ಕೆ ವ್ಯತಿರಿಕ್ತವಾಗಿ ನಡೆದರಾಗಲಿ, ತಪ್ಪುಮಾಡಿದಂತಾಗುವುದು. ಸೃಷ್ಟಿಮಾಡಲ್ಪಟ್ಟ ಪ್ರಾಣಿಗಳು ಎರಡು ಬಗೆಯಾಗಿರುವುವು. ಆಹಾರ ಮೈಥುನೇಚ್ಛೆಗಳು, ಎಲ್ಲಕ್ಕೂ ಸಾಧಾರಣವಾಗಿದ್ದರೂ ಅವನ್ನು ವಿವೇಕಿಗಳು, ಅವಿವೇಕಿಗಳು ಎಂದು ಕರೆಯ ಬಹುದು. ಇವುಗಳಲ್ಲಿ ಮನುಷ್ಯ ಸಾಮಾನ್ಯರು ವಿವೇಕಿಗಳು. ಇತರ ಪ್ರಾಣಿಗಳು ಅವಿವೇಕಿಗಳು. ಇವುಗಳಲ್ಲಿ ಈ ಬ್ರಹ್ಮನ ಕರ್ತವ್ಯ ಪಾಲನೆಗೆ ವಿಷಯರಾದವರು ಮನುಷ್ಯರು. ಇವರಿಗೆ ಆ ವಿವೇಕವನ್ನು ತಿಳಿಸಲು, ತಮ್ಮ ಅನುಕೂಲಗಳನ್ನು ತಾವೇ ಮಾಡಿಕೊಳ್ಳಲು, ಅನುಕೂಲವಾಗಿ ವೇದಗಳನ್ನು ಸ್ಮರಿಸಿ ಅವನ್ನು ಇವರಿಗೆ ದಯಪಾಲಿಸಿದ್ದಾನೆ. "ವೇದೋ ಧರ್ಮ ಮೂಲಂ" ಎಂದು ಹೇಳಿರುವಂತೆ ಅವೇ ಎಲ್ಲಕ್ಕೂ ಕಾರಣಗಳು.

ಈ ವೇದಗಳು ಜನಸಾಮಾನ್ಯಕ್ಕೆ ಕೆಲವುಕಡೆ ಅರ್ಥವಾಗದೆಯೂ, ಕೆಲವುಕಡೆ ಸಂದೇಹವನ್ನುಂಟುಮಾಡುತ್ತಲೂ, ಕೆಲವುಕಡೆ, ಬೋಧಿಸ

ತಕ್ಕ ಕಾರ್ಯಗಳನ್ನು ಸಂಕ್ಷೇಪವಾಗಿಯೂ, ಹೇಳಿರುವುದರಿಂದ ಇವನ್ನು ನಿವಾರಿಸಿಕೊಳ್ಳಲು ಬೇರೆ ಮಾರ್ಗವು ಅವಶ್ಯಕವಾಯಿತು. ಅದಕ್ಕೋಸ್ಕರ ಆ ಬ್ರಹ್ಮನು ಮಾನಸಪುತ್ರರನ್ನು ಸೃಷ್ಟಿಸಿ ಅವರಿಂದ ಧರ್ಮ ಶಾಸ್ತ್ರಗಳನ್ನೂ ಇತರ ಶಾಸ್ತ್ರಗಳನ್ನೂ ರೂಪಿಸಿದನು. ಇವೆಲ್ಲವೂ ಆ ವೇದಾರ್ಥವನ್ನು ಸರಿಯಾಗಿ ತಿಳಿಯಲು ಸಹಕಾರಿಯಾದುವು.

ವೇದಗಳು ರಾಜಾಜ್ಞೆಯಂತಿರುವುದರಿಂದಲೂ, ಧರ್ಮಶಾಸ್ತ್ರಗಳು ಉದಾಸೀನರಂತೆ ವಿಷಯಗಳನ್ನು ವಿವರಿಸುತ್ತಲೂ ಇರುವುದರಿಂದ ಸುಕುಮಾರಮತಿಗಳಾದ ಕೆಲವರ ಮನಸ್ಸಿನ ಮೇಲೆ ಪರಿಣಾಮವಾಗುವುದಿಲ್ಲ ವೆಂಬುದನ್ನು ಆ ಸರ್ವಾತ್ಮಕನಾದ ಬ್ರಹ್ಮನು ತಿಳಿದು, ಯಾವರೀತಿಯಾದರೆ ಎಲ್ಲರೂ ಸರಿಯಾಗಿ ಆಚರಿಸುವರು, ಎಂಬುದನ್ನು ಯೋಚಿಸಿ ಕಾಂತಾಸಮ್ಮಿತ ರೀತಿಯಿಂದ ಅವೆಲ್ಲದರ ಉಪದೇಶವನ್ನೂ ಮಾಡಲು ನಿಶ್ಚಯಿಸಿ ತಾನೇ ವೇದವ್ಯಾಸ ರೂಪನಾಗಿ ಅವತರಿಸಿ ಉಪದೇಶಮಾಡಿದನು. ಅವೇ ಈ ಪುರಾಣಗಳು.

ಪುರಾಣಗಳು ವೇದಾರ್ಥವನ್ನು ಕಥೆಯ ರೂಪದಲ್ಲಿ ವಿವರಿಸುತ್ತ, ಬಹು ಕಷ್ಟವಾದ ಅಂಶಗಳನ್ನೂ ಸುಲಭ ರೀತಿಯಲ್ಲಿ ಬೋಧಿಸಿ, ಧರ್ಮದಲ್ಲಿ ಆಸಕ್ತಿಯನ್ನು ಹುಟ್ಟಿಸಿ ಸಾಧ್ಯವಾದಷ್ಟನ್ನಾದರೂ ಮಾಡಬೇಕೆಂಬ ಬುದ್ಧಿಯನ್ನುಂಟುಮಾಡುವುವಲ್ಲದೆ ಅಧರ್ಮವನ್ನು ಮನಸ್ಸಿನಿಂದಲೂ ಎಣಿಸಬಾರದು, ಎಂಬುದು ಮನಸ್ಸಿಗೆ ನಾಟುವಂತೆ ಮಾಡಿ ಎಂತಹವರನ್ನೂ ತನ್ನ ದಾರಿಗೆಳೆಯುತ್ತವೆ. ಇದೇ ಇವುಗಳ ವೈಶಿಷ್ಟ್ಯ, ಮತ್ತು ಚತುರತೆ.

ಇವುಗಳು ವರ್ಣನೆಯಲ್ಲಿ ಯಾವ ಕಾವ್ಯಕ್ಕೂ ಕಡಿಮೆಯಾಗಿಲ್ಲ. ಅಲಂಕಾರವಿವರಣೆಯಲ್ಲಿ ಆ ಶಾಸ್ತ್ರಕ್ಕೆ ಭಿಕ್ಷೆ ನೀಡುತ್ತವೆ. ಮತಗಳ ವಿವರಣೆ, ಸೃಷ್ಟಿಯ ವಿಷಯ, ಪ್ರಾಣಿಯ ಉತ್ಪತ್ತಿ, ಎಲ್ಲವನ್ನೂ ಬಹುವಾಗಿ ತಿಳಿಸುತ್ತವೆ. ಒಟ್ಟಿನಲ್ಲಿ ಯಾವ ಶಾಸ್ತ್ರವೇ ಆಗಲಿ ಈ ಪುರಾಣಗಳಿಗಿಂತ ಹೊರಗಾಗಿಲ್ಲ. ಛಂದೋನಿಯಮ, ವ್ಯಾಕರಣನಿಯಮಗಳನ್ನು ಲಕ್ಷಿಸುವುದಿಲ್ಲ. ಇವುಗಳ ಗೌರವದ ಸ್ಥಾನವು ವೇದಗಳಮಟ್ಟಕ್ಕಿರುವುದು.

ಪುರಾಣಗಳು ಹದಿನೆಂಟಿವೆ. ಇವುಗಳಿಗೆ ಸಹಾಯವಾಗಿ ಉಪ ಪುರಾಣಗಳೂ ಹುಟ್ಟಿವೆ. ಇವುಗಳಲ್ಲಿ ಕೆಲವು ಶಿವನನ್ನೂ, ಕೆಲವು ವಿಷ್ಣು ವನ್ನೂ, ಕೆಲವು ಶಕ್ತಿಯನ್ನೂ, ಬೋಧಿಸುವುದರಿಂದ ಅವನ್ನು ಶೈವ ವೈಷ್ಣವ ಶಾಕ್ತಗಳೆಂದು ಮೂರು ಬಗೆಯಾಗಿ ವಿಂಗಡಿಸ ಬಹುದು. ಈ ಪುರಾಣ ಗಳೆಲ್ಲವೂ ಈ ಮೂರು ಭಾಗದಲ್ಲಿಯೇ ಅಡಕವಾಗುತ್ತವೆ.

ಈ ಪದ್ಮಪುರಾಣವು ಪುರಾಣಗಳೆಲ್ಲಕ್ಕಿಂತಲೂ ಯೋಗ್ಯತೆಯ ಲ್ಲಿಯೂ, ಗ್ರಂಥದ ಪರಿಮಿತಿಯಲ್ಲಿಯೂ ದೊಡ್ಡದು. ಮಹಾಭಾರತ ರಾಮಾಯಣಾದಿಗಳು ಒಂದೊಂದು ವ್ಯಕ್ತಿಯ ವಿಷಯವನ್ನೇ ಎತ್ತಿ ಪೂರ್ತಿಯಾಗಿ ಹೇಳಿದ್ದರೂ ಅವುಗಳಿಗಿಂತಲೂ ಆ ವ್ಯಕ್ತಿಯ ವಿಷಯವು ಈ ಪುರಾಣದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ನಮ್ಮ ಆರ್ಯಧರ್ಮಾವ ಲಂಬಿಗಳಿಗೆ ಇದು ಬಹು ಮುಖ್ಯವಾದ ಪ್ರಮಾಣ ಗ್ರಂಥವು. ಇದನ್ನು ರಚಿಸಿದ ಶ್ರೀಮನ್ನಾರಾಯಣನ ಅವತಾರಿಯಾದ ವ್ಯಾಸರು ಈ ಪದ್ಮ ಪುರಾಣವನ್ನು ಆದಿ, ಭೂಮಿ, ಬ್ರಹ್ಮ, ಪಾತಾಳ, ಸೃಷ್ಟಿ, ಉತ್ತರ ಖಂಡಗಳೆಂದು ಆರುಭಾಗವಾಗಿ ವಿಂಗಡಿಸಿದ್ದಾರೆ. ಅವುಗಳ ವಿಷಯವು ಆಯಾ ಖಂಡದ ಆದಿಯಲ್ಲಿ ವಿವರಿಸಲ್ಪಡುತ್ತದೆ.

ನಮ್ಮನ್ನಾಳುವ ಶ್ರೀಮನ್ಮಹಾಪ್ರಭುಗಳವರು, ತಮ್ಮ ಕುಲಕ್ರಮ ವಾಗಿ ಬಂದ ವಿದ್ವತ್ಪಕ್ಷಪಾತದಿಂದಲೂ, ಜ್ಞಾನಪ್ರಸಾರಣೆಯ ಪಿಪಾಸೆ ಯಿಂದಲೂ ಇಂತಹ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿ ಕನ್ನಡಿಗರೆಲ್ಲ ರಿಗೂ ಉಪಕರಿಸುತ್ತಿದ್ದಾರೆ. ಅದಕ್ಕೋಸ್ಕರ ನಾವು ಅವರಿಗೆ ಚಿರಋಣಿ ಗಳಾಗಿರಬೇಕು.

ಇಷ್ಟು ದೊಡ್ಡ ಗ್ರಂಥವನ್ನು ಪರಿವರ್ತಿಸಲು ನನಗೆ ಅಪ್ಪಣೆ ಮಾಡಿದು ದನ್ನು ನಾನು ಶಿರಸಾವಹಿಸಿ ಕೈಲಾದಮಟ್ಟಿಗೂ ಶುದ್ಧವಾಗಿಯೇ ಮಾಡಿ ರುವೆನು. ಪ್ರಮಾದದಿಂದಲೂ, ಅವಸರದಿಂದಲೂ ಸ್ಖಾಲಿತ್ಯಗಳು ಕಂಡು ಬರಬಹುದು. ಉದಾರಮತಿಗಳಾದ ವಾಚಕರು ಅವನ್ನು ಕ್ಷಮಿಸ ಬೇಕಾಗಿ ಕೋರುತ್ತೇನೆ.

ನಮ್ಮೆಲ್ಲರಿಗೂ ಆಶ್ರಯದಾತರೂ ಆಜ್ಞಾದಾಯಕರೂ, ರಕ್ಷಕರೂ, ಉದಾರ ಸ್ವಭಾವದವರೂ, ಆದ ನಮ್ಮ ಶ್ರೀಮನ್ಮಹಾರಾಜರಾದ

ಶ್ರೀಮಜ್ಜಯಚಾಮರಾಜ ಒಡೆಯರ್ ಬಹದ್ದೂರರವರಿಗೆ ಆಯುರಾರೋಗ್ಯಸತ್ಸಂತಾನಾದಿ ಸಕಲ ಸಂಪತ್ತುಗಳೂ ಒದಗಲೆಂದು ಅನನ್ಯಭಕ್ತಿಯಿಂದ ಸರ್ವಶಕ್ತನಾದ ಭಗವಂತನನ್ನು ಪ್ರಾರ್ಥಿಸೋಣ.

ಮಂಗಳಂ ಜಯಚಾಮೇಂದ್ರ
ಮಂಗಳಂ ಯದುಭೂಮಿಪ ॥
ಮಂಗಳಂ ಮಹಿಶೂರ್ ನಾಥ
ಚಾಮುಂಡೀ ದಿಶತಾತ್ತ್ವ ॥

ನಾರಾಯಣ ಸುಧೀಸ್ತ್ರೋಽಯಂ ಸೂರ್ಯೇತಿಪದಪೂರ್ವಕಃ ।
ಪರಿವರ್ತಾಽಸ್ಯ ಪಾದ್ಮಸ್ಯ ನರಸಿಂಹಪದಾನುಗಃ ॥

ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ,
ಸಾಹಿತ್ಯ ವಿದ್ವಾನ್
ಕನ್ನಡ ಪಂಡಿತ, ಕನ್ನಡ ವಿದ್ವಾನ್

# ಪೀಠಿಕೆ

ಶ್ರೀ ವ್ಯಾಸಪ್ರಣೀತವಾದ ಪದ್ಮಪುರಾಣಕ್ಕೆ ಈ ಆದಿಖಂಡವೇ ಮೊದಲನೆಯದು. ಇದನ್ನು ಸ್ವರ್ಗಖಂಡವೆಂದೂ ಕರೆಯುತ್ತಾರೆ. ಮೊದಲನೆಯ ಖಂಡವಾದುದರಿಂದ ಆದಿಖಂಡವೆಂದೂ, ಸ್ವರ್ಗದಾಯಕ ವಾದ ಪುಣ್ಯಗಳಿಗೆ ಕಾರಣವಾದ ತೀರ್ಥಗಳನ್ನು ವಿವರಿಸಿ, ಅದರಿಂದ ಸ್ವರ್ಗವನ್ನು ಹೊಂದು, ಎಂದು ಹೇಳಿರುವುದರಿಂದ ಸ್ವರ್ಗಖಂಡವೆಂದೂ ಹೆಸರು ಬಂದಿದೆ.

ಈ ಖಂಡದಲ್ಲಿ ಈ ಭೂಲೋಕದಲ್ಲಿರುವ ತೀರ್ಥಗಳ ಹೆಸರನ್ನು ಹೇಳಿ, ಅವುಗಳಿಗೆ ಆ ಹೆಸರು ಬರಲು ಕಾರಣ, ಅಲ್ಲಿ ಮುಕ್ತಿಯನ್ನು ಪಡೆಯುವ ರೀತಿ, ಅವುಗಳಯೋಗ್ಯತೆ, ಇವುಗಳು ಸ್ಪಷ್ಟವಾಗಿ ವರ್ಣಿತ ವಾಗಿವೆ.

ಸ್ವರ್ಗವಾಸಿಗಳಾದ ದೇವತೆಗಳೂ ಭೂಲೋಕಕ್ಕೆ ಬಂದು ತಮ್ಮ ಪಾಪಗಳನ್ನು ಕಳೆದುಕೊಂಡು ಹಿತವನ್ನು ಸಾಧಿಸಿಕೊಂಡರೆಂದ ಮೇಲೆ ನಮ್ಮ ಈ ಪುಣ್ಯಭೂಮಿಯನ್ನು ಬಿಟ್ಟರೆ ಪುಣ್ಯ ಸಂಪಾದನೆಗೆ ಬೇರೊಂದು ಸ್ಥಳವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಇವೆಲ್ಲವನ್ನೂ ನೋಡಿದರೆ ಈ ಕರ್ಮಭೂಮಿಯಲ್ಲಿ ಕರ್ಮಗಳನ್ನು ಮಾಡುತ್ತ ಇಲ್ಲಿನ ಸೌಖ್ಯಗಳನ್ನೇ

ಅನುಭವಿಸುತ್ತ ಏಕಿರಬಾರದು? ಉತ್ತಮಲೋಕಗಳಿಗೆ ಹೋಗಿ ಅಲ್ಲಿ ಸುಖವನ್ನು ಅನುಭವಿಸಿ ಆ ಪುಣ್ಯವು ಕಳೆದನಂತರ ಇಲ್ಲಿಗೇಕೆ ಮತ್ತೆ ಬರಬೇಕು? ಎಂಬ ಜಿಜ್ಞಾಸೆಯೂ ಬರುತ್ತದೆ. ಆದರೆ ಹೆಚ್ಚು ಹಣವು ದೊರತಂತೆಲ್ಲಾ ಹಳ್ಳಿಯವನು ಅನಕೂಲಗಳಿಗೆ ಆಶ್ರಯವಾದ ಪಟ್ಟಣ ಗಳಿಗೆ ಹೋಗಿ ಸುಖವನ್ನು ಅನುಭವಿಸುವ ಬುದ್ಧಿಯನ್ನು ಆ ಹಣವು ಹುಟ್ಟಿಸುತ್ತದೆ. ಅದೇರೀತಿಯಲ್ಲಿ ಆ ಪುಣ್ಯಗಳಿಗೆಬೇಕಾದ ಸಾಮಗ್ರ್ಯ ಗಳು ಈ ಕರ್ಮಭೂಮಿಯಲ್ಲಿ ಸಾಕಾದಷ್ಟಿಲ್ಲ. ಅದನ್ನು ಅನುಭವಿಸಲು ಸ್ವರ್ಗ ಮುಂತಾದ ಸ್ಥಳಗಳಿಗೇ ಹೋಗಬೇಕು. ಅಲ್ಲದೇ ಪಾಪಪುಣ್ಯ ಗಳನ್ನು ಅನುಭವಿಸಲು, ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿದ ಪರ ಮಾತ್ಮನು ಬೇರೆಬೇರೆ ಸ್ಥಳಗಳನ್ನು ನಿರ್ಮಿಸಿ ಸತ್ತನಂತರ ಇಷ್ಟವಿರಲಿ, ಇಲ್ಲದಿರಲಿ ಅವರು ಅಲ್ಲಲ್ಲಿಗೆ ಹೋಗಬೇಕೆಂದು ನಿಯಮಿಸಿರುತ್ತಾನೆ. ಆದು ದರಿಂದ ಅದು ನಮ್ಮ ಅಧೀನವಲ್ಲ.

ತಾರಣ ಸಂವತ್ಸರ<br>ಕಾರ್ತೀಕ ಶುಕ್ಲ ೫

ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ,
ಉಭಯಭಾಷಾ ಪಂಡಿತ.

# ವಿಷಯಾನುಕ್ರಮಣಿಕೆ.

## ಹದಿನೇಳನೆಯ ಅಧ್ಯಾಯ—

ನರ್ಮದೆಯ ಉತ್ತರ ದಡದಲ್ಲಿರುವ ಪತ್ರೇಶ್ವರ ತೀರ್ಥದ ಮಹಿಮೆ. ಗರ್ಜಿಸುವ ಮೇಘದ ಧ್ವನಿ, ಬ್ರಹ್ಮಾವರ್ತ, ಅಂಗಾರೇಶ್ವರ, ಕಪಿಲಾತೀರ್ಥ, ಕಾಂಚೀತೀರ್ಥ, ಕುಂಡಲೇಶ್ವರ, ಪಿಪ್ಪಲೇಶ್ವರ, ವಿಮಲೇಶ್ವರ, ಪುಷ್ಕರಿಣೀ ಇವುಗಳ ಮಹಿಮೆಯನ್ನು ಹೇಳುತ್ತಾ ನರ್ಮದೆಯನ್ನು ಸ್ತುತಿಸುವುದು .. ೧೩೩–೧೩೭

## ಹದಿನೆಂಟನೆಯ ಅಧ್ಯಾಯ—

ಶೂಲಭೇದತೀರ್ಥ, ಭೀಮೇಶ್ವರತೀರ್ಥ, ಆದಿತ್ಯೇಶ್ವರ, ಮಲ್ಲಿಕೇಶ್ವರ, ವರುಣೇಶ್ವರ, ನೀರಾಜೇಶ್ವರ, ಕೋಟಿತೀರ್ಥ, ಅಗಸ್ತ್ಯೇಶ್ವರ, ಸೂರ್ಯಸ್ತೋತ್ರ, ಶಕ್ರತೀರ್ಥ, ಋಷಿತೀರ್ಥ, ನಾರದತೀರ್ಥ, ದೇವತೀರ್ಥ, ಅಮರಕಂಟಕತೀರ್ಥ, ವಾಮನೇಶ್ವರ ಎರಡನೆಯ ಋಷಿತೀರ್ಥ, ವಟೇಶ್ವರ, ಭೀಮೇಶ್ವರ, ವಾರಣೇಶ್ವರ, ಸೋಮತೀರ್ಥ, ಪಿಂಗಳೇಶ್ವರ, ಸುರಭಿಕೇಶ್ವರ ನಾರಕೇಶ್ವರ, ಕೋಟಿಕೇಶ್ವರ, ಗಂಗಾವತರಣ, ನಂದಿತೀರ್ಥ, ದ್ವೀಪೇಶ್ವರ ವ್ಯಾಸತೀರ್ಥ, ಏರಂಡೀತೀರ್ಥ, ಇಕ್ಷುನದೀ ಸಂಗಮತೀರ್ಥ, ಸ್ಕಂದತೀರ್ಥ, ಆಂಗಿರಸತೀರ್ಥ, ಲಾಂಗಲತೀರ್ಥ, ವಟೇಶ್ವರ, ಸಂಗಮೇಶ್ವರ, ಭದ್ರತೀರ್ಥ, ಅಂಗಾರೇಶ್ವರ, ಅಯೋನಿಸಂಗಮ ಪಾಂಡವೇಶ್ವರ, ಕಪೋತಿಕೇಶ್ವರ, ಚಂದ್ರಭಾಗಾ ಶಕ್ರತೀರ್ಥ, ಬ್ರಹ್ಮಾವರ್ತತೀರ್ಥ, ಕಪಿಲತೀರ್ಥ, ನರ್ಮದೇಶ್ವರತೀರ್ಥ, ಆದಿತ್ಯಾಯತನತೀರ್ಥ, ಮಾಸೇಶ್ವರ, ನಾಗೇಶ್ವರ, ತಪೋವನ, ಕುಬೇರಭವನ ಕಾಲೇಶ್ವರತೀರ್ಥ, ಮರುತ್ತಾಲಯ ನಾರದತೀರ್ಥ, ಅಹಲ್ಯಾತೀರ್ಥ, ಸೋಮತೀರ್ಥ, ಸ್ತಂಭತೀರ್ಥ, ಯೋಧಿನೀಪುರದ ವಿಷ್ಣುತೀರ್ಥ, ತಾಪಸೇಶ್ವರ

ಪುಟಸಂಖ್ಯೆ

ತೀರ್ಥ, ಕಪಿಲಾ ತೀರ್ಥ, ಗೋ ಭವನ ತೀರ್ಥ, ಗಂಗಾ ತೀರ್ಥ, ಕವಿ ತೀರ್ಥ, ಲವರ್ಣಕ ದ್ವಾರ ಪಾಲ, ಬ್ರಹ್ಮಾವರ್ತ, ಶೀತವನಸ್ನಾನ, ಲೋಕಾರ್ತಿ ತೀರ್ಥ, ಸ್ವರ್ಣ, ಲೋಮಾಪನಯನ ತೀರ್ಥ, ದಶಾಶ್ವಮೇಧಿಕತೀರ್ಥ, ಮಾನುಷತೀರ್ಥ, ಬ್ರಹ್ಮಾನುಸ್ಸರತೀರ್ಥ, ಸಪ್ತರ್ಷಿಕುಂಡ, ಕಪಿಲ ಕೇದಾರ ಕಪಿಷ್ಠಲ ಕೇದಾರ ಸರ್ವತೀರ್ಥ, ರುದ್ರ ಕೋಟಿ, ಕೂಪಹ್ರದ, ಇಲಾಸ್ಪದ ತೀರ್ಥ, ಕಶೀ ತೀರ್ಥ ರಾಮಜನ್ಮ ತೀರ್ಥ, ಪುಂಡರೀಕ ತೀರ್ಥ, ತ್ರಿವಿಷ್ಟಪ ತೀರ್ಥ, ಫಲ ಕೀವನ ದೃಷತ್ಸಾನ, ಸರ್ವದೇವತೀರ್ಥ, ಪಾಣಿಖ್ಯಾತಮಿಶ್ರಕ ತೀರ್ಥ, ವ್ಯಾಸವನ, ಮನೋಜವ ತೀರ್ಥ, ಮಧುವನೀ, ಕೌಶಿಕೀ, ದೃಷದ್ವತೀ ಸಂಗಮ, ವ್ಯಾಸಸ್ಥಲೀ ಋಣಾಂತಕಕೂಪ, ವೇದೀ ತೀರ್ಥ, ಅಹಸ್ಸುದಿನತೀರ್ಥ, ಮೃಗ, ಧೂಮ, ರುದ್ರಪದ, ಶೂಲಪಾಣಿ ಮಹೇಶ್ವರ, ಕೋಟಿತೀರ್ಥ, ವಾಮನಕ ತೀರ್ಥ, ವಿಷ್ಣುಪದ, ಪವನಹ್ರದ, ಅಮರಹ್ರದದಲ್ಲಿರುವ ಸೂರ್ಯ ಸರಸ್ವತಿಯ ಶ್ರೀ ಕುಂಜ ತೀರ್ಥ, ನೈಮಿಷಕುಂಜ, ಮಹಿಮೆಗಳು. .. ೨೫೦–೨೭೧

## ಇಪ್ಪತ್ತೇಳನೆಯ ಅಧ್ಯಾಯ—

ಕನ್ಯಾತೀರ್ಥ, ಸೋಮತೀರ್ಥ, ಸಾರಸ್ವತತೀರ್ಥ, ಔಶನಸ ತೀರ್ಥ, ಕಪಾಲಮೋಚನತೀರ್ಥ, ಅಗ್ನಿ ತೀರ್ಥ, ವಿಶ್ವಾಮಿತ್ರ ತೀರ್ಥ, ಪೃಥೂದಕತೀರ್ಥ, ಮಧುಸ್ರ ತೀರ್ಥ, ಸರಸ್ವತೀ ಅರುಣಾ ಸಂಗಮಾವ ಕೀರ್ಣ ತೀರ್ಥ, ಶತಸಹಸ್ರಕ ತೀರ್ಥ, ಸಾಹಸ್ರಕತೀರ್ಥ,

ಮೂವತ್ತೊಂದನೆಯ ಅಧ್ಯಾಯ—

ವಿಕುಂಡಲನ ಪೂರ್ವಜನ್ಮದ ವಿವರಣೆ, ಯಮಲೋಕವನ್ನು ಹೊಂದದಂತೆ ಮಾಡುವ ಒಳ್ಳೆಯ ಕೆಲಸಗಳ ವರ್ಣನೆ, ವಿಕುಂಡಲನು ಸೋದರನಾದ ಶ್ರೀ ಕುಂಡಲನಿಗೆ ನರಕದಿಂದ ಉದ್ಧಾರವಾಗಲು ತನ್ನ ಹಿಂದಿನ ಎಂಟನೆಯ ಜನ್ಮದಲ್ಲಿ ಮಾಡಿದ್ದ ಧರ್ಮವನ್ನು ಕೊಡಲು ಆದರವರ್ಣನೆ. ವಿಕುಂಡಲನು ಶ್ರೀಕುಂಡಲನಿಗೆ ಪುಣ್ಯವನ್ನು ಕೊಟ್ಟು ಇಬ್ಬರೂ ಸ್ವರ್ಗಕ್ಕೆ ಹೋಗುವುದು .. ೩೧೯—೩೬೧

ಮೂವತ್ತೆರಡನೆಯ ಅಧ್ಯಾಯ—

ಸುಗಂಧತೀರ್ಥ, ರುದ್ರಾವರ್ತತೀರ್ಥ ಗಂಗಾಸರಸ್ವತಿ ಸಂಗಮ, ಕರ್ಣಹ್ರದ, ಕುಬ್ಜಾಮ್ರಕ, ಅರುಂಧತೀವಟ, ಸಾಮುದ್ರಕ, ಬ್ರಹ್ಮಾವರ್ತ ಯಮುನಾ ಪ್ರಭವ, ದರ್ವೀಸಂಕ್ರಮಣತೀರ್ಥ, ಸಿಂಧುತ್ರಭವ ದೇವಿತೀರ್ಥ, ಋಷಿಕುಲ್ಯ, ವೀರಪ್ರಮೋಕ್ಷ, ವಿಧ್ಯಾತೀರ್ಥ,ಮಹೇಶ್ವರೀತೀರ್ಥ, ವೇತಸಿಕಾ, ಸುಂದರೀಕಾ ತೀರ್ಥ, ಬ್ರಾಹ್ಮಣಿಕಾ ತೀರ್ಥ, ನೈಮಿಷ ತೀರ್ಥ, ಗಂಗೋದ್ಭೇದ, ಸರಸ್ವತೀ, ಬಾಹುದ್ರಾರಜನೀ ವಿಮಲ, ಅಶೋಕ, ಗೋಪ್ರಕಾರ, ಸರಯೂ ಗೋಮತಿಯ ರಾಮತೀರ್ಥ, ಶತಸಾಹಸ್ರಕ ತೀರ್ಥ, ಊರ್ಧ್ವಸ್ಥಾನ, ಕೋಟಿತೀರ್ಥ, ಕಪಿಲಾಹ್ರದ ಮಾರ್ಕಂಡೇಯ ತೀರ್ಥ, ಗೋಮತೀಂ ಗಂಗಾ ಸಂಗಮ, ಇವುಗಳ ಮಹಿಮೆ .. ೩೬೨—೩೭೦

ಮೂವತ್ತಮೂರನೆಯ ಅಧ್ಯಾಯ—

ವಾರಾಣಸಿ ಮಹಿಮೆಯ ವರ್ಣನೆ, ಶಿವನು ಪಾರ್ವತಿಗೆ ವಾರಾಣಸೀ ಕ್ಷೇತ್ರದ ಮಹಿಮೆಯನ್ನು ವಿವರಿಸುವುದು. .. ೩೭೧—೩೮೩

ದ್ವಾಪ,ವೈತರಣೀ ನದಿ, ವಿರಜಾತೀರ್ಥ,ಶೋಣಜ್ಯೋತಿರಥ್ಯಾ ಸಂಗಮ, ಶೋಣನರ್ಮದಾ ಸಂಗಮ, ಋಷಭತೀರ್ಥ, ಕೋಸಲದಲ್ಲಿರುವ ಕಾಲತೀರ್ಥ, ಪುಷ್ಪವತೀ ಬದರಿಕಾತೀರ್ಥ, ಮಹೇಂದ್ರಾಚಲದಲ್ಲಿರುವ ರಾಮತೀರ್ಥ, ಮತಂಗ, ಕೇದಾರ, ಶ್ರೀಪರ್ವತ, ದೇವಹ್ರದ, ಋಷಭಪರ್ವತ, ಕಾವೇರೀ ಸಮುದ್ರತೀರದ ಕನ್ಯಾತೀರ್ಥ, ಗೋಕರ್ಣತೀರ್ಥ, ಗಾಯತ್ರೀ ಸ್ಥಾನ, ಸಂವರ್ತವಾಪೀ, ವೇಣಾನದೀ, ಗೋದಾವರೀ, ವೇಣಾಸಂಗಮ, ವರದಾಸಂಗಮ, ಬ್ರಹ್ಮಸ್ಥಾಣ, ಕುಬ್ಜಾವನ, ಕೃಷ್ಣಾವೇಣಾಸಂಗಮದ ದೇವಹ್ರದ, ಜಾತಿಮಾತ್ರಹ್ರದ, ಶರಭಂಗಾಶ್ರಮ ಶೂರ್ಪಾರಕ, ರಾಮತೀರ್ಥ, ಸಪ್ತ ಗೋದಾವರಿ, ದೇವಪಥ, ತುಂಗಕಾರಣ್ಯ, ಮೇಧಾವನ, ಕಾಲಂಜರ, ಚಿತ್ರಕೂಟದಲ್ಲಿರುವ ಮಂದಾಕಿನೀ, ಗುಹಸ್ಥಾನ, ಕೋಟಿತೀರ್ಥ, ಯಶಸ್ಥಾನದಚತುಸ್ಸಮುದ್ರಕೂಪ, ಶೃಂಗಬೇರಪುರಮುಂಜವಟ, ಪ್ರಯಾಗತ್ರಿವೇಣೀ ಸಂಗಮ, ಭೋಗವತಿ ಎಂಬ ವಾಸುಕಿತೀರ್ಥ, ಹಂಸಪ್ರಪತನ, ದಶಾಶ್ವಮೇಧಿಕ, ಗಂಗಾಮಹಿಮೆಯವರ್ಣನ, ವಸಿಷ್ಠನ ಪ್ರಯಾಣ, ಇವುಗಳ ವರ್ಣನೆ, ನಾರದನು ಯುಧಿಷ್ಠಿರನಿಗೆ ತೀರ್ಥಮಹಿಮೆಯನ್ನು ಹೇಳಿ ಹೊರಟುಹೋಗುವುದು, ಯುಧಿಷ್ಠಿರನು ಋಷಿಗಳೊಡನೆ ತೀರ್ಥಯಾತ್ರೆ ಮಾಡುವುದು, ಇವುಗಳ ವರ್ಣನೆ. .. ೪೨೨–೪೪೫

## ನಲವತ್ತನೆಯ ಅಧ್ಯಾಯ—

ಶೌನಕನ ಪ್ರಶ್ನೆಗೆ ಸೂತನು ಧರ್ಮಮಾರ್ಕಂಡೇಯ ಸಂವಾದರೂಪದಿಂದ ಪ್ರಯಾಗದ ಮಹಿಮೆಯನ್ನು ವರ್ಣಿಸುವುದು. .. ೪೪೬–೪೫೪

ಆದಿಖಂಡದ ವಿಷಯ ಸೂಚಿಕೆಯು ಮುಗಿದುದು.



॥ ಶ್ರೀಃ ॥

# ಪದ್ಮಪುರಾಣಮ್

## ॥ ತತ್ರಾದಿಮಮಾದಿಖಣ್ಡಮ್ ॥

### ಪ್ರಥಮೋಽಧ್ಯಾಯಃ

ಕನಕರುಚಿದುಕೂಲಃ ಕುಣ್ಡಲೋಲ್ಲಾಸಿಗಲ್ಲಃ
ಶಮಿತಭುವನಭಾರಃ ಕೋಽಪಿ ಲೀಲಾವತಾರಃ ।
ತ್ರಿಭುವನಸುಖಕಾರೀ ಶೇಷಶಾಯೀ ಮುಕುನ್ದೋ
ಪರಿಕಲಿತರಮಾಙ್ಗೋ ಮಙ್ಗಲಂ ನಸ್ತನೋತು ॥

ನಮಾಮಿ ಗೋವಿನ್ದಪದಾರವಿನ್ದಂ
ಸದೇನ್ದಿರಾನನ್ದನಮುತ್ತಮಾಢ್ಯಮ್ ।
ಜಗಜ್ಜನಾನಾಂ ಹೃದಿ ಸನ್ನಿವಿಷ್ಟಂ
ಮಹಾಜನೈಕಾಯನಮುತ್ತಮೋತ್ತಮಮ್ ॥ ೧ ॥

ಏಕದಾ ಮುನಯಃ ಸರ್ವೇ ಜ್ವಲಜ್ಜ್ವಲನಸನ್ನಿಭಾಃ ।
ಹಿಮವದ್ವಾಸಿನಃ ಸರ್ವೇ ಮುನಯೋ ವೇದಪಾರಗಾಃ ॥ ೨ ॥

---

ಪದ್ಮಪುರಾಣದ ಆದಿಖಂಡದ ಪ್ರಥಮ ಅಧ್ಯಾಯವು

೧. ಮಹಾಲಕ್ಷ್ಮಿಗೆ ಆನಂದಪ್ರದವಾಗಿಯೂ, ಉತ್ತಮವೆಂಬ ವ್ಯವಹಾರಕ್ಕೆ ಅರ್ಹವಾಗಿಯೂ ಇರುವ, ಪ್ರಪಂಚದಲ್ಲಿರುವ ಎಲ್ಲಾ ಜನರ ಹೃದಯದಲ್ಲಿಯೂ ವಾಸಿಸುವ, ಮಹಾಜನರಿಗೆ ಮುಖ್ಯಗಮ್ಯಸ್ಥಾನವಾದ, ಉತ್ತಮವಾದ ವಸ್ತುಗಳಿಗೆಲ್ಲಕ್ಕಿಂತಲೂ ಉತ್ತಮವಾದ, ಗೋವಿಂದನ ಚರಣಕಮಲವನ್ನು ನಮಸ್ಕರಿಸುವೆನು.

೨. ಒಂದಾನೊಂದು ಕಾಲದಲ್ಲಿ, ಉರಿಯುತ್ತಿರುವ ಅಗ್ನಿಗೆ ಸಮಾನರಾದ, ಹಿಮವತ್ಪರ್ವತದಲ್ಲಿ ವಾಸಿಸುವ, ಸಕಲವೇದಗಳನ್ನು ತಿಳಿದಿರುವ, ಎಲ್ಲಾ ಋಷಿಗಳೂ ಶೌನಕಋಷಿಯನ್ನು ನೋಡಲು ಕುತೂಹಲವುಳ್ಳವರಾಗಿ ನೈಮಿಶಾರಣ್ಯವನ್ನು ಹೊಂದಿದರು.

ತ್ರಿಕಾಲಜ್ಞಾ ಮಹಾತ್ಮಾನೋ ನಾನಾಪುಣ್ಯಾಶ್ರಮಾಶ್ರಯಾಃ ।
ಮಹೇನ್ದ್ರಾದ್ರಿರತಾ ಯೇ ಚ ಯೇ ಚ ವಿನ್ಧ್ಯನಿವಾಸಿನಃ ॥ ೩ ॥

ಯೇಽರ್ಬುದಾರಣ್ಯನಿರತಾ ಪುಷ್ಕರಾರಣ್ಯವಾಸಿನಃ ।
ಜಾಮ್ಬುಮಾರ್ಗರತಾ ಯೇ ಚ ಯೇ ಚ ಸತ್ಯನಿವಾಸಿನಃ ॥ ೪ ॥

ಧರ್ಮಾರಣ್ಯರತಾ ಯೇ ಚ ದಣ್ಡಕಾರಣ್ಯವಾಸಿನಃ ।
ಶ್ರೀಶೈಲನಿರತಾ ಯೇ ಚ ಕುರುಕ್ಷೇತ್ರನಿವಾಸಿನಃ ॥ ೫ ॥

ಏತೇ ಚಾನ್ಯೇ ಚ ಬಹವಃ ಸಶಿಷ್ಯಾ ಮುನಯೋಽಮಲಾಃ ।
ನೈಮಿಶಂ ಸಮುಪಾಯಾತಾಃ ಶೌನಕಂ ದ್ರಷ್ಟುಮುತ್ಸುಕಾಃ ॥ ೬ ॥

---

೩. ಕಾಲತ್ರಯಗಳಲ್ಲಿರುವ ವಸ್ತುಗಳನ್ನೂ ಸಾಕ್ಷಾತ್ಕರಿಸುವ, ಉತ್ತಮ ಸ್ವಭಾವದಿಂದ ಕೂಡಿರುವ, ನಾನಾಪುಣ್ಯಾಶ್ರಮಗಳಲ್ಲಿ ವಾಸಿಸುವ, ಋಷಿಗಳ ಮಧ್ಯದಲ್ಲಿ ಮಹೇಂದ್ರ ಮತ್ತು ವಿಂಧ್ಯಪರ್ವತಗಳಲ್ಲಿ ವಾಸಿಸುವ ಎಲ್ಲಾ ಋಷಿಗಳೂ ಆ ನೈಮಿಶಾರಣ್ಯಕ್ಕೆ ಬಂದರು.

೪. ಅದೇ ರೀತಿಯಲ್ಲಿ, ಅರ್ಬುದಾರಣ್ಯದಲ್ಲಿ ವಾಸಮಾಡುವವರೂ, ಪುಷ್ಕರಾರಣ್ಯದಲ್ಲಿ ವಾಸಿಸುವವರೂ, ಜಾಂಬುಮಾರ್ಗವೆಂಬ ಕ್ಷೇತ್ರವಾಸಿಗಳೂ, ಸತ್ಯಕ್ಷೇತ್ರವಾಸಿಗಳೂ ಸಹ ಅಲ್ಲಿಗೆ ಬಂದರು.

೫. ಇದೇ ರೀತಿಯಲ್ಲಿ ಧರ್ಮಾರಣ್ಯವಾಸಿಗಳೂ, ದಂಡಕಾರಣ್ಯವಾಸಿಗಳೂ, ಶ್ರೀಶೈಲಕ್ಷೇತ್ರದಲ್ಲಿರುವವರೂ, ಕುರುಕ್ಷೇತ್ರನಿವಾಸಿಗಳೂ ಸಹ ಬಂದರು.

೬. ಹಿಂದೆ ಹೇಳಿದ ಋಷಿಗಳಲ್ಲದೇ, ಯಾವಾಗಲೂ ಶಾಸ್ತ್ರಾರ್ಥಗಳನ್ನು ಮನನಮಾಡುತ್ತಿರುವ ಬೇರೆಬೇರೆ ಋಷಿಗಳೂ ಕೂಡ ಆ ಶೌನಕ ಮುನಿಯನ್ನು ನೋಡಲು ಉತ್ಸಾಹವುಳ್ಳವರಾಗಿ ಶಿಷ್ಯರೊಂದಿಗೆ ನೈಮಿಶಾರಣ್ಯಕ್ಕೆ ಬಂದರು.

ತಂ ಪೂಜಯಿತ್ವಾ ವಿಧಿವತ್ತೇನ ತೇ ಚ ಸುಪೂಜಿತಾಃ ।
ಆಸನೇಷು ವಿಚಿತ್ರೇಷು ವೃಷ್ಯಾದಿಷು ಯಥಾಕ್ರಮಮ್ ॥ ೭ ॥

ಶೌನಕೇನ ಪ್ರದತ್ತೇಷು ಆಸೀನಾಸ್ತೇ ತಪೋಧನಾಃ ।
ಕೃಷ್ಣಾಶ್ರಿತಾಃ ಕಥಾಃ ಪುಣ್ಯಾಃ ಪರಸ್ಪರಮಥಾಬ್ರುವನ್ ॥ ೮ ॥

ಕಥಾನ್ತೇಷು ತತಸ್ತೇಷಾಂ ಮುನೀನಾಂ ಭಾವಿತಾತ್ಮನಾಮ್ ।
ಆಜಗಾಮ ಮಹಾತೇಜಾಃ ಸೂತಸ್ತತ್ರ ಮಹಾದ್ಯುತಿಃ ॥ ೯ ॥

ವ್ಯಾಸಶಿಷ್ಯಃ ಪುರಾಣಜ್ಞೋ ರೋಮಹರ್ಷಣಸಂಜ್ಞಕಃ ।
ತಾನ್ಪ್ರಣಮ್ಯ ಯಥಾನ್ಯಾಯಂ ಸ ತೈಶ್ಚೈವಾಭಿಪೂಜಿತಃ ॥೧೦॥

ಉಪವಿಷ್ಟಂ ಯಥಾಯೋಗಂ ಶೌನಕಾದ್ಯಾ ಮಹರ್ಷಯಃ ।
ವ್ಯಾಸಶಿಷ್ಯಂ ಸುಖಾಸೀನಂ ಸೂತಂ ವೈ ರೋಮಹರ್ಷಣಮ್ ।
ತಂ ಪಪ್ರಚ್ಛುರ್ಮಹಾಭಾಗಾಃ ಶೌನಕಾದ್ಯಾಸ್ತಪೋಧನಾಃ ॥೧೧॥

---

೭. ಹೀಗೆ ಬಂದ ಋಷಿಗಳೆಲ್ಲರೂ ಶೌನಕಮುನಿಯನ್ನು ಪೂಜಿಸಿ, ಅತನಿಂದ ಸತ್ಕರಿಸಲ್ಪಟ್ಟವರಾಗಿ, ವ್ರತಧಾರಿಗಳು ಕುಳಿತುಕೊಳ್ಳುವುದಕ್ಕೆ ಯೋಗ್ಯವಾದ ನಾನಾ ಬಗೆಯಾದ ಆಸನಗಳಲ್ಲಿ ಕ್ರಮವರಿತು ಕುಳಿತುಕೊಂಡರು.

೮. ಹೀಗೆ ಆಸನಗಳಲ್ಲಿ ಕುಳಿತವರಾಗಿ, ಮುನಿಗಳು ಕೃಷ್ಣನ ಸಂಬಂಧವಾದ, ಪುಣ್ಯಕರಗಳಾದ ಕಥೆಗಳನ್ನು ಒಬ್ಬರಿಗೊಬ್ಬರು ಹೇಳ ತೊಡಗಿದರು.

೯. ಸುಸಂಸ್ಕೃತರಾದ ಆ ಋಷಿಗಳು ಹೇಳಿ ಕೇಳಿಸುವುದರೊಳಗಾಗಿ, ತೇಜಸ್ವಿಯಾಗಿಯೂ, ಕಾಂತಿಯುಕ್ತನಾಗಿಯೂ ಇರುವ, ಸೂತಪುರಾಣಿಕನು ಅಲ್ಲಿಗೆ ಬಂದನು.

೧೦. ವ್ಯಾಸಶಿಷ್ಯನಾಗಿಯೂ, ಪುರಾಣಗಳನ್ನೆಲ್ಲಾ ತಿಳಿದವನಾಗಿಯೂ, ರೋಮಹರ್ಷಣನೆಂದು ಪ್ರಸಿದ್ಧನಾಗಿಯೂ ಇರುವ, ಆ ಮುನಿಯು ಬಂದಿರತಕ್ಕ ಋಷಿಗಳನ್ನೆಲ್ಲಾ ಪೂಜಿಸಿ, ಅವರಿಂದ ತಾನು ಸತ್ಕಾರವನ್ನುಹೊಂದಿ, ಕುಳಿತುಕೊಂಡನು.

೧೧. ಹೀಗೆ ಸುಖವಾಗಿ ಕುಳಿತಿರುವ, ವ್ಯಾಸಶಿಷ್ಯನಾದ, ಸೂತ ಮಹಾ ಮುನಿಯನ್ನು ಕುರಿತು, ಅಲ್ಲಿಗೆ ಬಂದಿರತಕ್ಕ ಮಹಾತಪಸ್ವಿಗಳಾದ ಶೌನಕಾದಿ ಋಷಿಗಳು ಪ್ರಶ್ನೆಮಾಡಿದರು.

॥ ಋಷಯ ಊಚುಃ ॥

ಪೌರಾಣಿಕ ಮಹಾಬುದ್ಧೇ ರೋಮಹರ್ಷಣ ಸುವ್ರತ ।
ತ್ವತ್ತಃ ಶ್ರುತಾ ಮಹಾಪುಣ್ಯಾಃ ಪುರಾ ಪೌರಾಣಿಕೀಃ ಕಥಾಃ ॥೧೨॥

ಸಾಮ್ಪ್ರತಂ ಚ ಪ್ರವೃತ್ತಾಃ ಸ್ಮ ಕಥಾಯಾಃ ಸಕ್ಷಣಾ ಹರೇಃ ।
ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ॥

ಪುನಃ ಪುರಾಣಮಾಚಕ್ಷ್ವ ಹರಿವಾರ್ತಾಸಮನ್ವಿತಮ್ ।
ಹರೇರನ್ಯಕಥಾ ಸೂತ ಶ್ಮಶಾನಸದೃಶೀ ಸ್ಮೃತಾ ॥೧೪॥

ಹರಿಸ್ತೀರ್ಥಸ್ವರೂಪೇಣ ಸ್ವಯಂ ತಿಷ್ಠತಿ ತಚ್ಛ್ರುತಮ್ ॥
ತೀರ್ಥಾನಾಂ ಪುಣ್ಯದಾತೄಣಾಂ ನಾಮಾನಿ ಕಿಲ ಕೀರ್ತಯ ॥೧೫॥

ಕುತ ಏತತ್ಸಮುತ್ಪನ್ನಂ ಕೇನ ವಾ ಪರಿಪಾಲ್ಯತೇ ।
ಕಸ್ಮಿನ್ ಲಯಂ ಸಮಭ್ಯೇತಿ ಜಗದೇತಚ್ಚರಾಚರಮ್ ॥೧೬॥

---

೧೨. ಋಷಿಗಳು ಹೇಳಿದರು: ಎಲೈ ಮಹಾಮೇಧಾವಿಯಾದ, ವ್ರತವನ್ನೆಲ್ಲಾ ಅನುಷ್ಠಾನ ಮಾಡಿರುವ, ಪೌರಾಣಿಕನಾದ, ರೋಮಹರ್ಷಣನೇ! ಪುಣ್ಯಕರವಾದ ಎಷ್ಟೋ ಕಥೆಗಳನ್ನು ಹಿಂದೆ ನಿನ್ನಿಂದ ಕೇಳಿರುವೆವು.

೧೩. ಈಗ ಹರಿಯ ಕಥೆಯನ್ನು ಕೇಳುವುದರಲ್ಲಿ ಉತ್ಸಾಹವುಳ್ಳವರಾಗಿರುವೆವು. ಹರಿಯಲ್ಲಿ ಭಕ್ತಿಯಿಡುವುದೇ ಮಾನವರಿಗೆ ಪರಮಧರ್ಮವು.

೧೪. ಹರಿಯ ವೃತ್ತಾಂತದಿಂದ ಕೂಡಿರುವ ಪುರಾಣವನ್ನು ಮತ್ತೂ ಹೇಳು. ಹರಿಯಿಂದ ಹೊರತಾದ ಕಥೆಯು ಶ್ಮಶಾನಕ್ಕೆ ಸಮವಾದುದು (ಅಂದರೆ ಶ್ಮಶಾನದಷ್ಟು ಅಶುದ್ಧವೆಂದರ್ಥವು).

೧೫. ಹರಿಯೇ ಆಯಾಯ ತೀರ್ಥಸ್ವರೂಪವನ್ನು ತಾಳಿರುವನೆಂದು ಶಾಸ್ತ್ರದಲ್ಲಿ ಪ್ರಸಿದ್ಧಿಯಿರುವುದು. ಆದುದರಿಂದ ಪುಣ್ಯಜನಕವಾದ ತೀರ್ಥದ ಹೆಸರುಗಳನ್ನು ಹೇಳು.

೧೬. ಚರವಾಗಿಯೂ, ಸ್ಥಿರವಾಗಿಯೂ ಇರುವ, ಈ ಪ್ರಪಂಚವು ಯಾರಿಂದ ಸೃಷ್ಟಿಸಲ್ಪಟ್ಟಿತು, ಯಾರು ಕಾಪಾಡುವರು, ಮತ್ತು ಯಾರಲ್ಲಿ ಲಯವನ್ನು ಹೊಂದುವುದು?.

ಕ್ಷೇತ್ರಾಣಿ ಕಾನಿ ಪುಣ್ಯಾನಿ ಕೇ ಚ ಪೂಜ್ಯಾಃ ಶಿಲೋಚ್ಚಯಾಃ ।
ನದ್ಯಶ್ಚ ಕಾಃ ಪರಾಃ ಪುಣ್ಯಾ ನೃಣಾಂ ಪಾಪಹರಾಃ ಶುಭಾಃ ।
ಏತತ್ಸರ್ವಂ ಮಹಾಭಾಗ ಕಥಯಸ್ವ ಯಥಾಕ್ರಮಮ್ ॥೧೭॥

॥ ಸೂತ ಉವಾಚ ॥

ಸಾಧು ಸಾಧು ಮಹಾಭಾಗಾಃ ಸಾಧು ಪೃಷ್ಟಂ ತಪೋಧನಾಃ ।
ತಂ ಪ್ರಣಮ್ಯ ಪ್ರವಕ್ಷ್ಯಾಮಿ ಪುರಾಣಂ ಪದ್ಮಸಂಜ್ಞಕಮ್ ॥೧೮॥

ಪಾರಾಶರ್ಯಂ ಪರಮಪುರುಷಂ ವಿಶ್ವವೇದೈಕಯೋನಿಂ
ವಿದ್ಯಾಧಾರಂ ವಿಪುಲಮತಿದಂ ವೇದವೇದಾನ್ತವೇದ್ಯಮ್ ।
ಶಶ್ವಚ್ಛಾನ್ತಂ ಸ್ವಮತಿವಿಷಯಂ ಶುದ್ಧತೇಜೋವಿಶಾಲಂ
ವೇದವ್ಯಾಸಂ ವಿತತಯಶಸಂ ಸರ್ವದಾಹಂ ನಮಾಮಿ ॥೧೯॥

---

೧೭. 'ಯಾವಕ್ಷೇತ್ರಗಳು ಪುಣ್ಯಕರಗಳು, ಯಾವ ಪರ್ವತಗಳು ಪೂಜಾರ್ಹವಾದವುಗಳು, ಮತ್ತು ಪುಣ್ಯಜನಕಗಳಾದ ನದಿಗಳಾವುವು,' ಶುಭವನ್ನುಂಟುಮಾಡುವ, ಪಾಪವನ್ನು ನಾಶಮಾಡುವ, ಇವೆಲ್ಲವನ್ನೂ ನಮಗೆ ಓ ಮಹಾತ್ಮನಾದ ಮುನಿಯೇ, ಹೇಳು.

೧೮. ಸೂತಮುನಿಯು ಹೇಳಿದನು: ಎಲೈ ಪೂಜ್ಯರಾದ ಋಷಿಗಳೇ! ಬಹಳ ಚೆನ್ನಾಗಿ ಪ್ರಶ್ನೆಯನ್ನು ಮಾಡಿದಿರಿ, ಆ ಹರಿಯನ್ನು ನಮಸ್ಕರಿಸಿ ಪದ್ಮಪುರಾಣವನ್ನು ಹೇಳುವೆನು.

೧೯. ಪರಾಶರರ ಮಗನಾದ, ಪರಮ ಪುರುಷನಾದ, ಸರ್ವವೇದ ವನ್ನೂ ಹೊರಗೆಡವಿದ, ಸರ್ವವಿದ್ಯೆಗಳಿಗೂ ಆಶ್ರಯದಾತನಾದ, ಲೋಕಕ್ಕೆ ಜ್ಞಾನವನ್ನು ಹರಡುವ, ವೇದವೇದಾಂತಗಳಲ್ಲಿ ತಿಳಿಯಲು ಯೋಗ್ಯನಾದ, ಶಾಂತಮೂರ್ತಿಯಾದ, ಆತ್ಮ ಬುದ್ಧಿಗೆ ಗೋಚರನಾದ, ಪರಿಶುದ್ಧವಾದ, ತೇಜೋವಿಸ್ತಾರವುಳ್ಳ, ಲೋಕದಲ್ಲಿ ಹರಡಿರುವ ಕೀರ್ತಿ ಯಿಂದ ಯುಕ್ತನಾದ, ವೇದವ್ಯಾಸಮುನಿಯನ್ನು ಯಾವಾಗಲೂ ನಮ ಸ್ಕರಿಸುವೆನು.

ನಮೋ ಭಗವತೇ ತಸ್ಮೈ ವ್ಯಾಸಾಯಾಮಿತತೇಜಸೇ ।
ಯಸ್ಯ ಪ್ರಸಾದಾದ್ವಕ್ಷ್ಯಾಮಿ ನಾರಾಯಣಕಥಾಮಿಮಾಮ್ ॥೨೦॥

ಪ್ರವಕ್ಷ್ಯಾಮಿ ಮಹಾಪುಣ್ಯಂ ಪುರಾಣಂ ಪದ್ಮಸಂಜ್ಞಿತಮ್ ।
ಸಹಸ್ರಂ ಪಂಚಪಂಚಾಶತ್ ಷಡ್ಭಿಃ ಖಣ್ಡೈಃ ಸಮನ್ವಿತಮ್ ॥೨೧॥

ತತ್ರಾದಾವಾದಿಖಣ್ಡಂ ಸ್ಯಾತ್ ದ್ಭೂಮಿಖಣ್ಡಂ ತತಃ ಪರಮ್ ।
ಬ್ರಹ್ಮಖಣ್ಡಂ ಚ ತತ್ಪಶ್ಚಾತ್ತತಃ ಪಾತಾಲಖಣ್ಡಕಮ್ ॥೨೨॥

ಕ್ರಿಯಾಖಣ್ಡಂ ತತಃ ಖ್ಯಾತಮುತ್ತರಂ ಖಣ್ಡಮನ್ತಿಮಮ್ ।
ಏತದೇವ ಮಹಾಪದ್ಮಮುದ್ಭೂತಂ ಯನ್ಮಯಂ ಜಗತ್ ॥೨೩॥

ತದ್ವೃತ್ತಾನ್ತಾಶ್ರಯಂ ತಸ್ಮಾತ್ಪದ್ಮಮಿತ್ಯುಚ್ಯತೇ ಬುಧೈಃ ।
ಏತತ್ಪುರಾಣಮಮಲಂ ವಿಷ್ಣುಮಾಹಾತ್ಮ್ಯನಿರ್ಮಲಮ್ ॥೨೪॥

---

೨೦. ಯಾರ ಅನುಗ್ರಹದಿಂದ ಈ ಕಥೆಯನ್ನು ಹೇಳಲುದ್ಯುಕ್ತನಾಗಿರುವೆನೋ, ಹೆಚ್ಚಾದ ತೇಜಸ್ಸುಳ್ಳ, ಭಗವಂತನಾದ, ಆ ವ್ಯಾಸಮುನಿಗೆ ನಮಸ್ಕಾರವು.

೨೧. ಆರು ಖಂಡಗಳಿಂದಲೂ, ಐವತ್ತೈದು ಸಾವಿರ ಗ್ರಂಥಗಳಿಂದಲೂ ಕೂಡಿರುವ, ಪುಣ್ಯಪ್ರದವಾದ, ಈ ಪದ್ಮಪುರಾಣವನ್ನು ಹೇಳುವೆನು.

೨೨–೨೩. ಆ ಪುರಾಣದಲ್ಲಿ ಮೊದಲನೆಯದು ಆದಿಖಂಡವು, ಎರಡನೆಯದು ಭೂಮಿಖಂಡವು, ಮೂರನೆಯದು ಬ್ರಹ್ಮಖಂಡವು, ನಾಲ್ಕನೆಯದು ಪಾತಾಳಖಂಡವು, ಐದನೆಯದು ಕ್ರಿಯಾಖಂಡವು. ಕೊನೆಯದು ಉತ್ತರಖಂಡವು. ಈ ಆರುಖಂಡಗಳೂ ಸೇರಿದುದೇ ಮಹಾಪದ್ಮಪುರಾಣವೆಂದು ಪ್ರಖ್ಯಾತವಾಗಿದೆ. ಜಗತ್ತಿನ ವಿಷಯಗಳೆಲ್ಲವನ್ನೂ ಇದರಲ್ಲಿ ವಿವರಿಸಿದೆ.

೨೪. ಇದರ ವೃತ್ತಾಂತವನ್ನು ಹೇಳುವ ಪುರಾಣವನ್ನು ಪದ್ಮಪುರಾಣವೆಂದು ಪಂಡಿತರು ಹೇಳುವರು. ಈ ಪುರಾಣವಾದರೋ ವಿಷ್ಣು ಮಾಹಾತ್ಮ್ಯವನ್ನು ಹೇಳುವುದರಿಂದ ಪರಿಶುದ್ಧವಾಗಿರುವುದು.

ದೇವದೇವೋ ಹರಿರ್ಯದ್ವೈ ಬ್ರಹ್ಮಣೇ ಪ್ರೋಕ್ತವಾನ್ಪುರಾ ।
ಬ್ರಹ್ಮಾ ತು ನಾರದಾಯಾಹ ನಾರದೋಽಸ್ಮದ್ಗುರೋಃ ಪುರಃ ॥೨೫॥

ವ್ಯಾಸಃ ಸರ್ವಪುರಾಣಾನಿ ಸೇತಿಹಾಸಾನಿ ಸಂಹಿತಾಃ ।
ಅಧ್ಯಾಪಯಾಮಾಸ ಗುರುರ್ಮಾಮತಿಪ್ರಿಯಮಾತ್ಮನಃ ॥೨೬॥

ತತ್ತೇಽಹಂ ಸಂಪ್ರವಕ್ಷ್ಯಾಮಿ ಪುರಾಣಮತಿದುರ್ಲಭಮ್ ।
ಯಚ್ಛ್ರುತ್ವಾ ಬ್ರಹ್ಮಹತ್ಯಾದಿಪಾಪೇಭ್ಯೋ ಮುಚ್ಯತೇ ನರಃ ॥೨೭॥

ಸರ್ವತೀರ್ಥಾಭಿಷೇಕಂ ಚ ಲಭತೇ ಶೃಣುತೇ ಚ ಯಃ ।
ಶ್ರದ್ಧಯಾ ಪರಯಾ ಭಕ್ತ್ಯಾ ಶ್ರುತಮಾತ್ರೇಣ ಮುಕ್ತಿದಮ್ ॥೨೮॥

ಅಶ್ರದ್ಧಯಾಪಿ ಶೃಣುತೇ ಲಭತೇ ಪುಣ್ಯಸಞ್ಚಯಮ್ ॥
ತಸ್ಮಾತ್ಸರ್ವಪ್ರಯತ್ನೇನ ಪದ್ಮಂ ಶ್ರೋತ್ರಾತಿಥೀಕುರು ॥೨೯॥

---

೨೫. ದೇವದೇವನಾದ ಹರಿಯೇ ಈ ಪುರಾಣವನ್ನು ಬ್ರಹ್ಮನಿಗೆ ಮೊದಲು ಹೇಳಿದನು. ಬ್ರಹ್ಮನು ನಾರದನಿಗೂ, ನಾರದನು ನಮ್ಮ ಗುರುವಾದ ವ್ಯಾಸನಿಗೂ ಹೇಳಿದನು.

೨೬. ಗುರುವಾದ ವ್ಯಾಸನು ಇತಿಹಾಸಸಹಿತವಾದ ಎಲ್ಲಾ ಪುರಾಣಗಳನ್ನೂ, ಸಂಹಿತೆಗಳನ್ನೂ, ತನಗೆ ಪ್ರಿಯನಾದ ನನಗೆ, ಅಧ್ಯಯನ ಮಾಡಿಸಿದನು.

೨೭. ಶ್ರವಣದಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳನ್ನೂ ಪರಿಹರಿಸುವ, ಅತಿ ಕಷ್ಟದಿಂದ ಸಂಪಾದಿಸಿರುವ, ಆ ಪುರಾಣವನ್ನು ನಾನು ಈಗ ಹೇಳುವೆನು.

೨೮. ಶ್ರದ್ಧಾಭಕ್ತಿಯಿಂದ ಕೂಡಿ ಕೇಳಿದ ಮಾತ್ರದಿಂದಲೇ ಮುಕ್ತಿಯನ್ನು ಕೊಡುವ, ಆ ಪುರಾಣವನ್ನು ಕೇಳುವವನು ಸರ್ವತೀರ್ಥ ಸ್ನಾನಮಾಡಿದ ಪುಣ್ಯವನ್ನು ಹೊಂದುವನು.

೨೯. ಅಶ್ರದ್ಧೆಯಿಂದ ಕೇಳುವವನೂ ಕೂಡ, ಪುಣ್ಯಸಮೂಹವನ್ನು ಹೊಂದುತ್ತಾನೆ. ಆದ್ದರಿಂದ ಈ ಪದ್ಮಪುರಾಣವನ್ನು ಸರ್ವಪ್ರಯತ್ನದಿಂದಲೂ ಶ್ರವಣಮಾಡು.

ತತ್ರಾದಿಖಣ್ಡಂ ವಕ್ಷ್ಯಾಮಿ ಪುಣ್ಯಂ ಪಾಪಪ್ರಣಾಶನಮ್ ।
ಶೃಣ್ವನ್ತು ಮುನಯಃ ಸರ್ವೇ ಸಶಿಷ್ಯಾಸ್ತ್ವತ್ರ ಯೇ ಸ್ಥಿತಾಃ ॥೩೦॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಪ್ರಥಮೋಽಧ್ಯಾಯಃ

---

೩೦. ಇಲ್ಲಿರುವ, ಶಿಷ್ಯಸಮೇತರಾದ, ಎಲ್ಲಾ ಋಷಿಗಳೂ ಕೇಳಿರಿ: ಪಾಪವನ್ನು ಹೋಗಲಾಡಿಸಿ, ಪುಣ್ಯವನ್ನುಂಟುಮಾಡುವ, ಆದಿಖಂಡವನ್ನು ಈಗ ಹೇಳುವೆನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದ್ವಿತೀಯೋಽಧ್ಯಾಯಃ

### ॥ ಸೂತ ಉವಾಚ ॥

ಆದಿಸರ್ಗಮಹಂ ತಾವತ್ಕಥಯಾಮಿ ದ್ವಿಜೋತ್ತಮಾಃ ।
ಜ್ಞಾಯತೇ ಯೇನ ಭಗವಾನ್ ಪರಮಾತ್ಮಾ ಸನಾತನಃ ॥ ೧ ॥
ಸೃಷ್ಟೇಷು ಪ್ರಲಯಾದೂರ್ಧ್ವಂ ನಾಸೀತ್ಕಿಂಚಿದ್ದ್ವಿಜೋತ್ತಮಾಃ ।
ಬ್ರಹ್ಮಸಂಜ್ಞಮಭೂದೇಕಂ ಜ್ಯೋತಿರ್ವೈ ಸರ್ವಕಾರಕಮ್ ॥ ೨ ॥
ನಿತ್ಯಂ ನಿರಞ್ಜನಂ ಶಾನ್ತಂ ನಿರ್ಗುಣಂ ನಿತ್ಯನಿರ್ಮಲಮ್ ।
ಆನನ್ದಸ್ಯ ಪುರಂ ಸ್ವಚ್ಛಂ ಯತ್ಕಾಙ್ಕ್ಷನ್ತಿ ಮುಮುಕ್ಷವಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಎರಡನೆಯ ಅಧ್ಯಾಯವು

೧. ಸೂತನು ಹೇಳಿದನು : ಎಲೈ ಬ್ರಾಹ್ಮಣಶ್ರೇಷ್ಠರೇ ! ತ್ರಿಕಾಲಜ್ಞನಾಗಿಯೂ, ನಿತ್ಯನಾಗಿಯೂ ಇರುವ ಪರಮಾತ್ಮನನ್ನು ಬೋಧಿಸುವ ಆದಿ ಸೃಷ್ಟಿಯನ್ನು ಹೇಳುವೆನು.

೨. ಎಲೈ ಬ್ರಾಹ್ಮಣೋತ್ತಮರೇ ! ಪ್ರಳಯವುಂಟಾದ ಮೇಲೆ, ಸೃಷ್ಟವಾದ ವಸ್ತುಗಳಲ್ಲಿ ಯಾವುದೂ ಇರಲಿಲ್ಲ. ಸರ್ವಕ್ಕೂ ಕಾರಣವಾದ ಜ್ಯೋತಿಸ್ಸ್ವರೂಪವಾದ, ಬ್ರಹ್ಮಸ್ವರೂಪವು ಮಾತ್ರ ಇದ್ದಿತು.

೩. ಆ ಬ್ರಹ್ಮವಸ್ತುವು ಮೋಕ್ಷಾರ್ಥಿಗಳಿಗೆ ಆನಂದ ಪಟ್ಟಣವಾಗಿರುವುದು. ಎಲ್ಲಾ ಕಾಲದಲ್ಲೂ ಇರುವುದು. ಆವುದರ ಲೇಪವೂ ಅದಕ್ಕಿಲ್ಲ. ಶಾಂತವಾಗಿಯೂ, ಸಕಲಗುಣಶೂನ್ಯವಾಗಿಯೂ ಇರುವುದು. ಹೀಗಿರುವ ವಸ್ತುವಿಗೆ ಮಲಸಂಬಂಧ ಹೇಗೆ ಆಗುವುದು ?

ಸರ್ವಜ್ಞಂ ಜ್ಞಾನರೂಪತ್ವಾದನನ್ತಮಜಮವ್ಯಯಮ್ ।
ಅವಿನಾಶಿ ಸದಾ ಸ್ವಚ್ಛಮಚ್ಯುತಂ ವ್ಯಾಪಕಂ ಮಹತ್ ॥ ೪ ॥
ಸರ್ಗಕಾಲೇ ತು ಸಂಪ್ರಾಪ್ತೇ ಜ್ಞಾತ್ವಾ ತಂ ಜ್ಞಾನರೂಪಕಮ್ ।
ಆತ್ಮಲೀನಂ ವಿಕಾರಂ ಚ ತತ್ಸ್ರಷ್ಟುಮುಪಚಕ್ರಮೇ ॥ ೫ ॥
ತಸ್ಮಾತ್ಪ್ರಧಾನಮುದ್ಭೂತಂ ತತಶ್ಚಾಪಿ ಮಹಾನಭೂತ್ ।
ಸಾತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾ ಮಹಾನ್ ॥ ೬ ॥
ಪ್ರಧಾನತತ್ತ್ವೇನ ಸಮಂ ತ್ವಚಾ ಬೀಜಮಿವಾವೃತಮ್ ।
ವೈಕಾರಿಕಸ್ತೈಜಸಶ್ಚ ಭೂತಾದಿಶ್ಚೈವ ತಾಮಸಃ ॥ ೭ ॥
ತ್ರಿವಿಧೋಽಯಮಹಙ್ಕಾರೋ ಮಹತ್ತತ್ತ್ವಾದಜಾಯತ ।
ಯಥಾ ಪ್ರಧಾನೇನ ಮಹಾನ್ಮಹತಾ ಸ ತಥಾವೃತಃ ॥ ೮ ॥

---

೪. ಮತ್ತು ಆ ಬ್ರಹ್ಮಸ್ವರೂಪವು ಜ್ಞಾನರೂಪವೇ ತಾನಾಗಿರುವುದರಿಂದ, ಸರ್ವವನ್ನೂ ತಿಳಿದಿರುವುದು. ಅದಕ್ಕೆ ಉತ್ಪತ್ತಿಯೂ, ನಾಶವೂ ಇಲ್ಲವು. ಹಾಗೆಯೇ ವೃದ್ಧಿ, ಹ್ರಾಸಗಳೂ ಇಲ್ಲ. ಅದಿಲ್ಲದ ಜಾಗವೇ ಇಲ್ಲ. ಅದು ಎಲ್ಲಾ ವಸ್ತುಗಳಲ್ಲಿಯೂ ಇರುವುದು. ಅದಕ್ಕಿಂತ ದೊಡ್ಡದಾದ ವಸ್ತುವು ಬೇರೊಂದಿಲ್ಲವು.

೫. ಪುನಃ ಸೃಷ್ಟಿಸಮಯ ಬಂದಾಗ ಆ ಬ್ರಹ್ಮನು ತನ್ನಲ್ಲಿ ಅಡಗಿರುವ ವಿಕಾರವಸ್ತುಗಳನ್ನೆಲ್ಲಾ ತಿಳಿದು ಸೃಷ್ಟಿಗೆ ಪ್ರಾರಂಭ ಮಾಡಿದನು.

೬. ಆಗ ಪ್ರಧಾನವು ಕಾರ್ಯೋನ್ಮುಖವಾಯಿತು. ಆ ಪ್ರಧಾನದಿಂದ ಮಹತ್ತತ್ವವುಂಟಾಯಿತು. ಆ ಮಹತ್ತತ್ವವು ಸಾತ್ವಿಕ, ರಾಜಸ, ತಾಮಸವೆಂದು ಮೂರುವಿಧವಾಗಿರುವುದು.

೭–೮. ಸಿಪ್ಪೆಯಲ್ಲಿ ಬೀಜವು ಅಡಗಿರುವಂತೆ, ಪ್ರಧಾನ ತತ್ವದಲ್ಲಿ ಮಹತ್ತತ್ವವು ಅಡಗಿರುವುದು. ಮಹತ್ತತ್ವದ ವಿಕಾರವಾದ, ಅಹಂಕಾರ ತತ್ವವು, ಸಾತ್ವಿಕ, ರಾಜಸ, ತಾಮಸವೆಂದು ಮೂರುವಿಧ. ಅಹಂಕಾರತತ್ವವು ಮಹತ್ತತ್ವದಿಂದ ಉತ್ಪನ್ನವಾಯಿತು. ಆ ಅಹಂಕಾರತತ್ವವು, ಪ್ರಧಾನ ತತ್ವದಲ್ಲಿ ಮಹತ್ತತ್ವವು ಅಡಗಿರುವಂತೆ, ತಾನು ಮಹತ್ತತ್ವದಲ್ಲಿ ಅಡಗಿರುವುದು.

ಭೂತಾದಿಸ್ತು ವಿಕುರ್ವಾಣಃ ಶಬ್ದಂ ತನ್ಮಾತ್ರಕಂ ತತಃ ।
ಸಸರ್ಜ ಶಬ್ದತನ್ಮಾತ್ರಾದಾಕಾಶಂ ಶಬ್ದಲಕ್ಷಣಮ್ ॥ ೯ ॥

ಶಬ್ದಮಾತ್ರಂ ತಥಾಕಾಶಂ ಭೂತಾದಿಃ ಸ ಸಮಾವೃಣೋತ್ ।
ಶಬ್ದಮಾತ್ರಂ ತಥಾಕಾಶಂ ಸ್ಪರ್ಶಮಾತ್ರಂ ಸಸರ್ಜ ಹ ॥೧೦॥

ಬಲವಾನಭವದ್ವಾಯುಸ್ತಸ್ಯ ಸ್ಪರ್ಶೋ ಗುಣೋ ಮತಃ ।
ಆಕಾಶಂ ಶಬ್ದಮಾತ್ರಂ ತು ಸ್ಪರ್ಶಮಾತ್ರಂ ಸಮಾವೃಣೋತ್ ॥೧೧॥

ತತೋ ವಾಯುರ್ವಿಕುರ್ವಾಣೋ ರೂಪಮಾತ್ರಂ ಸಸರ್ಜ ಹ ।
ಜ್ಯೋತಿರುತ್ಪದ್ಯತೇ ವಾಯೋಸ್ತದ್ರೂಪಗುಣಮುಚ್ಯತೇ ॥೧೨॥

ಸ್ಪರ್ಶಮಾತ್ರಸ್ತು ವೈ ವಾಯೂ ರೂಪಮಾತ್ರಂ ಸಮಾವೃಣೋತ್ ।
ಜ್ಯೋತಿಶ್ಚಾಪಿ ವಿಕುರ್ವಾಣಂ ರಸಮಾತ್ರಂ ಸಸರ್ಜ ಹ ॥೧೩॥

ಸಂಭವನ್ತಿ ತತೋಽಮ್ಭಾಂಸಿ ರಸಮಾತ್ರಾಣಿ ತಾನಿ ತು ।
ರಸಮಾತ್ರಾಣಿ ಚಾಮ್ಭಾಂಸಿ ರೂಪಮಾತ್ರಂ ಸಮಾವೃಣೋತ್ ॥

---

೯. ಆ ತಾಮಸ ಅಹಂಕಾರದ ವಿಕಾರವೇ ಶಬ್ದತನ್ಮಾತ್ರವು. ಆ ಶಬ್ದತನ್ಮಾತ್ರದಿಂದ ಆಕಾಶೋತ್ಪತ್ತಿಯು.

೧೦. ಆ ತಾಮಸಾಹಂಕಾರದಲ್ಲಿ ಶಬ್ದಮಾತ್ರಾಕಾಶವು ಅಡಗಿರುವುದು. ಆ ಶಬ್ದಮಾತ್ರಾಕಾಶದಿಂದ ಸ್ಪರ್ಶತನ್ಮಾತ್ರವು ಉಂಟಾಯಿತು.

೧೧. ಆ ಸ್ಪರ್ಶತನ್ಮಾತ್ರದಿಂದ ವಾಯುವು ಉಂಟಾಯಿತು. ಆ ವಾಯುವಿನ ಗುಣವು ಸ್ಪರ್ಶವು. ಈ ಆಕಾಶದಲ್ಲಿ ಸ್ಪರ್ಶತನ್ಮಾತ್ರವು ಅಡಗಿರುವುದು.

೧೨. ಆ ವಾಯುವಿನ ವಿಕಾರವೇ ರೂಪತನ್ಮಾತ್ರವು. ಆ ರೂಪಗುಣವುಳ್ಳ ತೇಜಸ್ಸು ವಾಯುವಿನಿಂದ ಉಂಟಾಯಿತು.

೧೩. ಈ ಸ್ಪರ್ಶಮಾತ್ರವಾಯುವಿನಲ್ಲಿ ರೂಪತನ್ಮಾತ್ರವು ಅಡಗಿರುವುದು. ಈ ಜ್ಯೋತಿಸ್ಸಿನ ವಿಕಾರವೇ ರಸತನ್ಮಾತ್ರವು.

೧೪. ಈ ರಸತನ್ಮಾತ್ರದಿಂದಲೇ ರಸಗುಣವುಳ್ಳ ಜಲದ ಉತ್ಪತ್ತಿಯು. ಈ ರಸಮಾತ್ರಜಲದಲ್ಲೀ ರೂಪಮಾತ್ರವು ಅಡಗಿರುವುದು.

ವಿಕುರ್ವಾಣಾನಿ ಚಾಮ್ಭಾಂಸಿ ಗನ್ಧಮಾತ್ರಂ ಸಸರ್ಜಿರೇ ।
ತಸ್ಮಾಜ್ಜಾತಾ ಮಹೀ ಚೇಯಂ ಸರ್ವಭೂತಗುಣಾಧಿಕಾ ॥೧೫॥
ಸಙ್ಘಾದ್ಯಾತೋ ಯತಸ್ತಸ್ಮಾತ್ತಸ್ಯ ಗನ್ಧೋ ಗುಣೋ ಮತಃ ।
ತಸ್ಮಿಂಸ್ತಸ್ಮಿಂಸ್ತು ತನ್ಮಾತ್ರಾತ್ತೇನ ತನ್ಮಾತ್ರತಾ ಸ್ಮೃತಾ ॥೧೬॥
ತನ್ಮಾತ್ರಾಣ್ಯವಿಶೇಷಾಣಿ ವಿಶೇಷಾ ಕ್ರಮಶೋಽಪರಾಃ ।
ಭೂತತನ್ಮಾತ್ರಸರ್ಗೋಽಯಮಹಙ್ಕಾರಾತ್ತು ತಾಮಸಾತ್ ॥೧೭॥
ಕೀರ್ತಿತಸ್ತು ಸಮಾಸೇನ ಮುನಿವರ್ಯಾಸ್ತಪೋಧನಾಃ ।
ತೈಜಸಾನೀನ್ದ್ರಿಯಾಣ್ಯಾಹುರ್ದೇವಾ ವೈಕಾರಿಕಾ ದಶ ॥೧೮॥

---

೧೫. ಈ ಜಲವೇ ವಿಕಾರವನ್ನು ಹೊಂದಿ ಗಂಧತನ್ಮಾತ್ರವನ್ನು ಸೃಷ್ಟಿಸಿತು. ಆ ಗಂಧತನ್ಮಾತ್ರದಿಂದಲೇ ಎಲ್ಲಾ ಭೂತಗಳ ಗುಣಗಳಿಗಿಂತಲೂ ಹೆಚ್ಚು ಗುಣಗಳುಳ್ಳ ಪೃಥಿವಿಯು ಉಂಟಾಯಿತು.

೧೬. ಆ ಭೂಮಿಯು ಉತ್ಪತ್ತಿಯಾಗುವಾಗಲೇ, ಆ ಸಂಸರ್ಗದಿಂದ ಗಂಧವು ಹುಟ್ಟಿತು. ಆದುದರಿಂದ ಪೃಥಿವಿಯ ಗುಣವು ಗಂಧವು, ಹಾಗೆಯೇ ಯಾವಯಾವುದರ ಸಹವಾಸದಿಂದ ಯಾವಯಾವುದು ಹುಟ್ಟುತ್ತದೆಯೋ ಅದರಂತೆಯೇ ಗುಣವು ಹುಟ್ಟುತ್ತದೆ; ಆ ಗುಣವು ಅದರ ಸಂಬಂಧವಾದುದು.

೧೭. ಈ ಪಂಚತನ್ಮಾತ್ರಗಳನ್ನು ಅವಿಶೇಷವೆಂಬುದಾಗಿಯೂ, ಪಂಚತನ್ಮಾತ್ರಗಳಿಂದುಂಟಾದ ಆಕಾಶಾದಿ ಭೂತಗಳನ್ನು ವಿಶೇಷವೆಂಬುದಾಗಿಯೂ ಹೇಳುವರು. ತಾಮಸಾಹಂಕಾರದಿಂದ ಭೂತತನ್ಮಾತ್ರ ಸೃಷ್ಟಿಯಾಯಿತು.

೧೮. ತಪಸ್ವಿಗಳಾದ ಎಲೈ ಋಷಿಗಳೇ! ಈ ರೀತಿಯಾಗಿ ತಾಮಸಾಹಂಕಾರಸೃಷ್ಟಿಯು ಹೇಳಲ್ಪಟ್ಟಿತು. ಸಾತ್ವಿಕಾಹಂಕಾರದಿಂದುಂಟಾದ ಹತ್ತು ಇಂದ್ರಿಯಗಳನ್ನು ತೈಜಸೇಂದ್ರಿಯಗಳೆಂದು ದೇವತೆಗಳು ಹೇಳುವರು.

ಏಕಾದಶಂ ಮನಶ್ಚಾತ್ರ ಕೀರ್ತಿತಂ ತತ್ವಚಿನ್ತಕೈಃ ।
ಜ್ಞಾನೇನ್ದ್ರಿಯಾಣಿ ಪಞ್ಚಾತ್ರ ಪಞ್ಚ ಕರ್ಮೇನ್ದ್ರಿಯಾಣಿ ಚ ॥
ತಾನಿ ವಕ್ಷ್ಯಾಮಿ ತೇಷಾಂ ಚ ಕರ್ಮಾಣಿ ಕುಲಪಾವನಾಃ ।
ಶ್ರವಣಂ ತ್ವಕ್ಚಕ್ಷುರ್ಜಿಹ್ವಾ ನಾಸಿಕಾ ಚೈವ ಪಞ್ಚಮೀ ॥೨೦॥
ಶಬ್ದಾದಿಜ್ಞಾನಸಿದ್ಧ್ಯರ್ಥಂ ಬುದ್ಧಿಯುಕ್ತಾನಿ ಪಞ್ಚ ವೈ ।
ಪಾಯೂಪಸ್ಥಂ ಹಸ್ತಪಾದೌ ಕೀರ್ತಿತಾ ವಾಕ್ಚ ಪಞ್ಚಮೀ ॥೨೧॥
ವಿಸರ್ಗಾನನ್ದಸಿದ್ಧಿಶ್ಚ ಗತ್ಯುಕ್ತೀ ಕರ್ಮ ತತ್ಸ್ಮೃತಮ್ ।
ಆಕಾಶವಾಯುತೇಜಾಂಸಿ ಸಲಿಲಂ ಪೃಥಿವೀ ತಥಾ ॥೨೨॥

---

೧೯. ಮನಸ್ಸು ಹನ್ನೊಂದನೆಯ ಇಂದ್ರಿಯವೆಂಬುದಾಗಿ ತತ್ವಜ್ಞರಿಂದ ನಿರ್ಣೀತವಾಗಿದೆ. ಈ ಹತ್ತು ಇಂದ್ರಿಯಗಳಲ್ಲಿ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು.

೨೦. ಎಲೈ ಕುಲವನ್ನು ಪವಿತ್ರ ಮಾಡುವ ಮುನಿವರ್ಯರೇ ! ಆ ಐದು ಇಂದ್ರಿಯಗಳನ್ನೂ ಅವುಗಳ ಕಾರ್ಯಗಳನ್ನೂ ಹೇಳುತ್ತೇನೆ. ಶ್ರವಣೇಂದ್ರಿಯ, ತ್ವಗಿಂದ್ರಿಯ, ಚಕ್ಷುರಿಂದ್ರಿಯ, ರಸನೇಂದ್ರಿಯ, ಮತ್ತು ಘ್ರಾಣೇಂದ್ರಿಯ ಎಂಬುದಾಗಿ ಈ ಐದು ಜ್ಞಾನೇಂದ್ರಿಯಗಳು.

೨೧. ಈ ಇಂದ್ರಿಯಗಳು ಬುದ್ಧಿಯ ಸಹಾಯದಿಂದ ಶಬ್ದಾದಿ ಜ್ಞಾನವನ್ನುಂಟುಮಾಡುವುವು. ಪಾಯು, ಉಪಸ್ಥ, ಹಸ್ತ, ಪಾದ, ವಾಕ್ಕು, ಈ ಐದು ಕರ್ಮೇಂದ್ರಿಯಗಳು.

೨೨. ಈ ಕರ್ಮೇಂದ್ರಿಯಗಳಿಗೆ ಹೊರಕ್ಕೆ ಬಿಡುವುದು, ಆನಂದವನ್ನುಂಟುಮಾಡುವುದು, ತೆಗೆದುಕೊಳ್ಳುವುದು, ನಡೆಯುವುದು, ಮಾತನಾಡುವುದು, ಇವು ಕಾರ್ಯಗಳು. ಆಕಾಶ, ವಾಯು, ತೇಜಸ್ಸು, ಜಲ, ಪೃಥಿವೀ, ಈ ಐದು ಪಂಚಭೂತಗಳು.

ಶಬ್ದಾದಿಭಿರ್ಗುಣೈರ್ವಿಪ್ರಾಃ ಸಂಯುಕ್ತಾ ಉತ್ತರೋತ್ತರೈಃ ।
ನಾನಾವೀರ್ಯಾಃ ಪೃಥಗ್ಭೂತಾಸ್ತತಸ್ತೇ ಸಂಹತಿಂ ವಿನಾ ॥೨೩॥
ನಾಶಕ್ನುವನ್ ಪ್ರಜಾಃ ಸ್ರಷ್ಟುಮಸಮಾಗತ್ಯ ಕೃತ್ಸ್ನಶಃ ।
ಸಮೇತ್ಯಾನ್ಯೋನ್ಯಸಂಯೋಗಂ ಪರಸ್ಪರಮಥಾಶ್ರಯಾತ್ ॥೨೪॥
ಏಕಸಙ್ಘಾತ ಲಕ್ಷಾಶ್ಚ ಸಂಪ್ರಾಪ್ಯೈಕ್ಯಮಶೇಷತಃ ।
ಪುರುಷಾಧಿಷ್ಠಿತತ್ವಾಚ್ಚ ಪ್ರಧಾನಾನುಗ್ರಹೇಣ ಚ ॥೨೫॥
ಮಹದಾದಯೋ ವಿಶೇಷಾನ್ತಾದಣ್ಡಮುತ್ಪಾದಯನ್ತಿ ತೇ ।
ತತ್ಕ್ರಮೇಣ ವಿವೃದ್ಧಂ ತು ಜಲಬುದ್ಬುದವತ್ಸಲಮ್ ॥೨೬॥

---

೨೩. ಎಲೈ ಬ್ರಾಹ್ಮಣರೇ ! ಕ್ರಮವಾಗಿ ಶಬ್ದ, ಸ್ಪರ್ಶ, ರೂಪ, ರಸ ಗಂಧಗಳಲ್ಲಿ ಒಂದು, ಎರಡು, ಮೂರು, ನಾಲ್ಕು, ಐದನ್ನು ಹೊಂದುವುವು. (ಆಕಾಶಕ್ಕೆ ಶಬ್ದವೂ, ವಾಯುವಿಗೆ ಶಬ್ದಸ್ಪರ್ಶವೂ, ತೇಜಸ್ಸಿಗೆ ಶಬ್ದಸ್ಪರ್ಶರೂಪವೂ, ಜಲಕ್ಕೆ ಶಬ್ದ ಸ್ಪರ್ಶ ರೂಪರಸವೂ, ಪೃಥಿವಿಗೆ ಶಬ್ದ ಸ್ಪರ್ಶ ರೂಪ ರಸ ಗಂಧಗಳೂ, ಗುಣಗಳು). ಇವುಗಳು ಬೇರೆ ಬೇರೆ ಭೂತಗಳು, ಭಿನ್ನ ಭಿನ್ನ ಶಕ್ತಿಯುಳ್ಳವುಗಳು.

೨೪. ಈ ಪಂಚ ಭೂತಗಳು ಒಟ್ಟಿಗೆ ಸೇರದೇ ಪ್ರಜೆಗಳನ್ನು ಸೃಷ್ಟಿ ಮಾಡಲು ಅಸಮರ್ಥಗಳು. ಇವುಗಳು ಒಟ್ಟಿಗೆ ಸೇರಿ ಪರಸ್ಪರಾಶ್ರಯದಿಂದ ಸೃಷ್ಟಿಸುವುವು.

೨೫. ಈ ಭೂತಗಳು ಒಂದು ಗುಂಪಾಗಿ ಪರಸ್ಪರ ಭೇದವನ್ನಡಗಿಸಿಕೊಂಡು ಪುರುಷನು ಅಧಿಷ್ಠಾತೃವಾಗಿರಲಾಗಿ ಪ್ರಧಾನದ ಮಾಹಾತ್ಮ್ಯಯಿಂದ ಸೃಷ್ಟಿಸುವುವು.

೨೬. ಮಹತೀ ಪ್ರಕೃತಿಯು ಮೊದಲುಗೊಂಡು ವಿಶೇಷಭೂತಗಳು ಸೇರಿ ಅಂಡವನ್ನುಂಟುಮಾಡುವುವು. ಈ ಅಂಡವು ವೃದ್ಧಿಹೊಂದಿ, ನೀರಿನ ಗುಳ್ಳೆಯಂತೆ ಒಂದಾಗಿ ಕಾಣಿಸುವುದು.

ಭೂತೇಭ್ಯೋಽಣ್ಡಂ ಮಹಾಪ್ರಾಜ್ಞಾ ವೃದ್ಧಂ ತದುದಕೇಶಯಮ್ ।
ಪ್ರಾಕೃತಂ ಬ್ರಹ್ಮರೂಪಸ್ಯ ವಿಷ್ಣೋಃ ಸ್ಥಾನಮನುತ್ತಮಮ್ ॥೨೭॥
ತತ್ರಾವ್ಯಕ್ತಸ್ವರೂಪೋಽಸೌ ವಿಷ್ಣುರ್ವಿಶ್ವೇಶ್ವರಃ ಪ್ರಭುಃ ।
ಬ್ರಹ್ಮರೂಪಂ ಸಮಾಸ್ಥಾಯ ಸ್ವಯಮೇವ ವ್ಯವಸ್ಥಿತಃ ॥೨೮॥
ಸ್ವೇದಜಾಣ್ಡಮಭೂತ್ತಸ್ಯ ಜರಾಯುಶ್ಚ ಮಹೀಧರಾಃ ।
ಗರ್ಭೋದಕಂ ಸಮುದ್ರಾಶ್ಚ ತಸ್ಯಾಭೂನ್ಮಹದಾತ್ಮನಃ ॥೨೯॥
ಸಾದ್ರಿದ್ವೀಪಸಮುದ್ರಾಶ್ಚ ಸಜ್ಯೋತಿರ್ಲೋಕಸಂಗ್ರಹಃ ।
ತಸ್ಮಿನ್ನಣ್ಡೇಽಭವತ್ಸರ್ವಂ ಸದೇವಾಸುರಮಾನುಷಮ್ ॥೩೦॥
ಅನಾದಿನಿಧನಸ್ಯೈವ ವಿಷ್ಣೋರ್ನಾಭೇಃ ಸಮುತ್ಥಿತಮ್ ।
ಯತ್ಪದ್ಮಂ ತದ್ಧೈಮಮಣ್ಡಮಭೂಚ್ಛ್ರೀಕೇಶವೇಚ್ಛಯಾ ॥೩೧॥

---

೨೭. ಎಲೈ ಮಹಾಮೇಧಾವಿಗಳಾದ ಮುನಿಗಳೇ! ಭೂತಗಳಿಂದ ಬೆಳೆದು ಬಂದಿರುವ ಈ ಮೊಟ್ಟೆಯು, ನೀರಿನಲ್ಲಿದ್ದು ಬ್ರಹ್ಮರೂಪವನ್ನು ಹೊಂದಿದ ವಿಷ್ಣುವಿಗೆ ಶ್ರೇಷ್ಠವಾದ ಮೊದಲನೆಯ ಸ್ಥಾನವಾಗುವುದು.

೨೮. ಆ ಮೊಟ್ಟೆಯಲ್ಲಿ ಅವ್ಯಕ್ತಸ್ವರೂಪವನ್ನು ತಾಳಿದ, ಜಗತ್ತಿಗೆಲ್ಲಾ ಒಡೆಯನಾದ, ಆದಿಕಾರಣನಾದ ವಿಷ್ಣುವು, ತಾನೇ ಬ್ರಹ್ಮರೂಪವನ್ನು ಹೊಂದಿ ಇರುವನು.

೨೯. ಮಹದ್ರೂಪವನ್ನು ತಾಳಿರುವ ಆ ವಿಷ್ಣುವಿನ ಸ್ವೇದೋದಕವೇ ಮೊಟ್ಟೆಯಾಯಿತು. ಗರ್ಭವೇಷ್ಟನ ಚಿಲವೇ ಬೆಟ್ಟಗಳಾಗಿ ಪರಿಣಮಿಸಿತು. ಗರ್ಭಜಲವೇ ಸಮುದ್ರರೂಪವನ್ನು ತಾಳಿತು.

೩೦. ಆ ಮೊಟ್ಟೆಯಲ್ಲಿ ಬೆಟ್ಟಗಳೂ ದ್ವೀಪಗಳೂ, ಸಮುದ್ರಗಳೂ, ಜ್ಯೋತಿಸ್ಸೂ, ದೇವತೆಗಳೂ, ಅಸುರರೂ, ಮನುಷ್ಯರೂ ಮತ್ತು ಇವರುಗಳ ಸೂಕ್ಷ್ಮರೂಪವಾದ ಲೋಕವೂ ಉಂಟಾದವು.

೩೧. ಆದ್ಯಂತರಹಿತನಾದ ವಿಷ್ಣುವಿನ ನಾಭಿಯಿಂದ ಉತ್ಪನ್ನವಾದ ಕಮಲವೇ ಅವನ ಆಜ್ಞೆಯಿಂದ ಚಿನ್ನದ ಮೊಟ್ಟೆಯಾಯಿತು.

ರಜೋಗುಣಧರೋ ದೇವಃ ಸ್ವಯಮೇವ ಹರಿಃ ಪರಃ ।
ಬ್ರಹ್ಮರೂಪಂ ಸಮಾಸ್ಥಾಯ ಜಗತ್ಸ್ರಷ್ಟುಂ ಪ್ರವರ್ತತೇ ॥೩೨॥
ಸೃಷ್ಟಿಂ ಚ ಯಾತ್ಯನುಗುಣಂ ಯಾವತ್ಕಲ್ಪವಿಕಲ್ಪನಾ ।
ನಾರಸಿಂಹಾದಿರೂಪೇಣ ರುದ್ರರೂಪೇಣ ಸಂಹರೇತ್ ॥೩೩॥
ಸ ಬ್ರಹ್ಮರೂಪಂ ವಿಸೃಜನ್ಮಹಾತ್ಮಾ ।
ಜಗತ್ಸಮಸ್ತಂ ಪರಿಪಾತುಮಿಚ್ಛನ್ ।
ರಾಮಾದಿರೂಪಂ ಸ ತು ಗೃಹ್ಯ ಪಾತಿ ।
ಬಭೂವ ರುದ್ರೋ ಜಗದೇತದತ್ತುಮ್ ॥೩೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಿತೀಯೋಽಧ್ಯಾಯಃ

---

೩೨. ಆ ಸರ್ವೋತ್ತಮನಾದ ಹರಿಯೇ ರಜೋಗುಣವನ್ನಾಶ್ರಯಿಸಿ, ಬ್ರಹ್ಮರೂಪವನ್ನು ತಾಳಿ, ಜಗತ್ತಿನ ಸೃಷ್ಟಿಗೆ ಪ್ರಾರಂಭಿಸುವನು.

೩೩. ಪ್ರತಿಯುಗದಲ್ಲಿಯೂ ಪ್ರಳಯಪರ್ಯಂತವಾಗಿ ಸೃಷ್ಟಿಯನ್ನು ಮಾಡುತ್ತಿರುವನು ; ನರಸಿಂಹ ರೂಪದಿಂದಲೂ ರುದ್ರರೂಪದಿಂದಲೂ ಸಂಹರಿಸುವನು.

೩೪. ಮಹಾತ್ಮನಾದ ಆ ವಿಷ್ಣುವೇ ಬ್ರಹ್ಮರೂಪವನ್ನು ಬಿಟ್ಟು ಸಮಸ್ತವಾದ ಪ್ರಪಂಚವನ್ನೂ ಪಾಲಿಸಬೇಕೆಂಬ ಇಚ್ಛೆಯಿಂದ ರಾಮಾದಿ ರೂಪವನ್ನು ತಾಳಿ ಪಾಲಿಸುವನು. ಅವನೇ ಜಗತ್ತನ್ನು ಸಂಹರಿಸಲು ರುದ್ರನಾಗುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಎರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಪದ್ಮಪುರಾಣೇ ಆದಿಖಂಡೇ ತೃತೀಯೋಽಧ್ಯಾಯಃ

॥ ಋಷಯ ಊಚುಃ ॥

**ನದೀನಾಂ ಪರ್ವತಾನಾಂ ಚ ನಾಮಧೇಯಾನಿ ಸರ್ವಶಃ ।**
**ತಥಾ ಜನಪದಾನಾಂ ಚ ಯೇ ಚಾನ್ಯೇ ಭೂಮಿಮಾಶ್ರಿತಾಃ ॥ ೧ ॥**
**ಪ್ರಮಾಣಂ ಚ ಪ್ರಮಾಣಜ್ಞ ಪೃಥಿವ್ಯಾಃ ಕಿಲ ಸರ್ವತಃ ।**
**ನಿಖಿಲೇನ ಸಮಾಚಕ್ಷ್ವ ಕಾನನಾನಿ ಚ ಸತ್ತಮ ॥ ೨ ॥**

॥ ಸೂತ ಉವಾಚ ॥

**ಪಂಚೇಮಾನಿ ಮಹಾಪ್ರಾಜ್ಞಾ ಮಹಾಭೂತಾನಿ ಸಂಗ್ರಹಾತ್ ।**
**ಜಗತೀಸ್ಥಾನಿ ಸರ್ವಾಣಿ ಸಮಾನ್ಯಾಹುರ್ಮನೀಷಿಣಃ ॥ ೩ ॥**

---

ಪದ್ಮಪುರಾಣದ ಆದಿಖಂಡದ ಮೂರನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ಎಲ್ಲಾ ಪರ್ವತಗಳ, ನದಿಗಳ, ದೇಶಗಳ ಮತ್ತು ಭೂಮಿಯಲ್ಲಿರುವ ಪ್ರಸಿದ್ಧವಾದ ಬೇರೆ ವಸ್ತುಗಳ ಹೆಸರನ್ನು ತಿಳಿಸಿರಿ.

೨. ಎಲೈ ಶ್ರೇಷ್ಠನಾದ ಸೂತನೇ! ಪ್ರಮಾಣಜ್ಞನಾದ ನೀನು ಭೂಮಿಯ ಅಳತೆಯನ್ನೂ ಸಮಸ್ತ ಆರಣ್ಯಗಳನ್ನೂ ಹೇಳು.

೩. ಸೂತನು ಹೇಳಿದನು: ಎಲೈ ಮಹಾಪ್ರಾಜ್ಞರೇ! ವಿದ್ವಾಂಸರು ಪ್ರಪಂಚದಲ್ಲಿರುವ ಸಮಸ್ತ ಭೂತಗಳನ್ನೂ ಸಮಸ್ತ ವಸ್ತುಗಳಿಗೂ ಸಾಮಾನ್ಯ ಕಾರಣಗಳನ್ನಾಗಿ ಹೇಳುವರು.

ಭೂಮಿರಾಪಸ್ತಥಾ ವಾಯುರಗ್ನಿರಾಕಾಶಮೇವ ಚ ।
ಗುಣೋತ್ತರಾಣಿ ಸರ್ವಾಣಿ ತೇಷಾಂ ಭೂಮಿಃ ಪ್ರಧಾನತಃ ॥ ೪ ॥
ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗನ್ಧಶ್ಚ ಪಞ್ಚಮಃ ।
ಭೂಮೇರೇತೇ ಗುಣಾಃ ಪ್ರೋಕ್ತಾ ಋಷಿಭಿಸ್ತತ್ತ್ವವೇದಿಭಿಃ ॥ ೫ ॥
ಚತ್ವಾರೋಽಪ್ಸು ಗುಣಾ ವಿಪ್ರಾ ಗಂಧಸ್ತತ್ರ ನ ವಿದ್ಯತೇ ।
ಶಬ್ದಃ ಸ್ಪರ್ಶಶ್ಚ ರೂಪಂ ಚ ತೇಜಸೋಽಥ ಗುಣಾಸ್ತ್ರಯಃ ॥ ೬ ॥
ಶಬ್ದಃ ಸ್ಪರ್ಶಶ್ಚ ವಾಯೋಸ್ತು ಆಕಾಶೇ ಶಬ್ದ ಏವ ಚ ।
ಏತೇ ಪಞ್ಚ ಗುಣಾ ವಿಪ್ರಾ ಮಹಾಭೂತೇಷು ಪಂಚಸು ॥ ೭ ॥
ವರ್ತನ್ತೇ ಸರ್ವಲೋಕೇಷು ಯೇಷು ಭೂತಾಃ ಪ್ರತಿಷ್ಠಿತಾಃ ।
ಅನ್ಯೋನ್ಯೇ ನಾತಿವರ್ತನ್ತೇ ಸಾಮ್ಯಂ ಭವತಿ ವೈ ತದಾ ॥ ೮ ॥

---

೪. ಭೂಮಿ, ನೀರು, ವಾಯು, ಅಗ್ನಿ, ಆಕಾಶ ಇವು ತುದಿಯಿಂದ ಒಂದೊಂದು ಗುಣದಿಂದ ಅಧಿಕವಾಗಿರುವುವು. ಮೊದಲು ಭೂಮಿಯನ್ನು ಹೇಳಲು ಕಾರಣವೇನೆಂದರೆ, ಸಮಸ್ತ ಗುಣಗಳಿಂದಲೂ ಕೂಡಿರುವಿಕೆಯೇ.

೫. ತತ್ವಜ್ಞರಾದ ಋಷಿಗಳು ಭೂಮಿಗೆ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ, ಇವುಗಳೇ ಗುಣಗಳೆಂಬುದಾಗಿ ಹೇಳುವರು.

೬. ಎಲೈ ಬ್ರಾಹ್ಮಣಶ್ರೇಷ್ಠರೇ! ಜಲದಲ್ಲಿ ನಾಲ್ಕು ಗುಣಗಳಿರುವುವು. ಅದರಲ್ಲಿ ಗಂಧವಿಲ್ಲ. ತೇಜಸ್ಸಿಗೆ ಶಬ್ದ, ಸ್ಪರ್ಶ ಮತ್ತು ರೂಪ ಈ ಮೂರು ಗುಣಗಳು.

೭. ಎಲೈ ದ್ವಿಜರೇ! ವಾಯುವಿಗೆ ಶಬ್ದವೂ ಮತ್ತು ಸ್ಪರ್ಶವೂ, ಗುಣಗಳು. ಆಕಾಶದಲ್ಲಿ ಶಬ್ದ ಒಂದೇ ಗುಣವು. ಈ ಐದು ಗುಣಗಳು ಪಂಚಭೂತಗಳಲ್ಲಿರುವುವು.

೮. ಈ ಪಂಚಭೂತಗಳು ಪರಸ್ಪರ ಆಧಿಕ್ಯ ನ್ಯೂನತೆಯನ್ನು ಹೊಂದದಿರುವಾಗ ಸಮವಾಗಿರುವುವು.

ಯದಾ ತು ವಿಷಮೀಭಾವಮಾವಿಶನ್ತಿ ಪರಸ್ಪರಮ್ ।
ತದಾ ದೇಹೈರ್ದೇಹವನ್ತೋ ವ್ಯತಿರೋಹನ್ತಿ ನಾನ್ಯಥಾ ॥ ೯ ॥

ಆನುಪೂರ್ವ್ಯಾ ವಿನಶ್ಯನ್ತಿ ಜಾಯನ್ತೇ ಚಾನುಪೂರ್ವತಃ ।
ಸರ್ವಾಣ್ಯಪರಿಮೇಯಾನಿ ತದೇಷಾಂ ರೂಪಮೈಶ್ವರಮ್ ॥೧೦॥

ಯತ್ರ ಯತ್ರ ಹಿ ದೃಶ್ಯನ್ತೇ ಧಾವನ್ತಿ ಪಞ್ಚಭೌತಿಕಾಃ ।
ತೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ॥೧೧॥

ಅಚಿನ್ತ್ಯಾಃ ಖಲು ಯೇ ಭಾವಾಸ್ತಾನ್ನ ತರ್ಕೇಣ ಸಾಧಯೇತ್ ।
ಸುದರ್ಶನಂ ಪ್ರವಕ್ಷ್ಯಾಮಿ ದ್ವೀಪಂ ತು ಮುನಿಪುಂಗವಾಃ ॥೧೨॥

---

೯. ಈ ಪಂಚ ಭೂತಗಳು ನ್ಯೂನಾಧಿಕ ಭಾವವನ್ನು ಹೊಂದಿದಾಗ ಪ್ರಾಣಿಗಳು ದೇಹಧಾರಣೆ ಮಾಡುವುವು. ಹಾಗಿಲ್ಲದಿದ್ದರೆ ದೇಹವೇ ಉತ್ಪನ್ನವಾಗುವುದಿಲ್ಲ.

೧೦. ಇವು ಕ್ರಮವಾಗಿ ನಾಶವುಂಟಾಗುತ್ತವೆ. (ಹೇಗೆಂದರೆ ಪೃಥಿವಿಗೆ ಜಲದಲ್ಲಿ, ಜಲಕ್ಕೆ ತೇಜಸ್ಸಿನಲ್ಲಿ, ತೇಜಸ್ಸಿಗೆ ವಾಯುವಿನಲ್ಲಿ, ವಾಯುವಿಗೆ ಆಕಾಶದಲ್ಲಿ) ನಾಶವು ಕ್ರಮವಾಗಿಯೇ ಉತ್ಪತ್ತಿಯೂ ಕೂಡ ಆಗುತ್ತದೆ. (ಅಂದರೆ ಆಕಾಶಾದಿಕ್ರಮದಿಂದ) ಹೀಗೆ ಭೂತಗಳಿಗೆ ಹೇಳಿದ ಧರ್ಮಗಳೆಲ್ಲವೂ ಈಶ್ವರನಿಂದಲೇ ಬರುತ್ತವೆ.

೧೧. ಕಣ್ಣಿಗೆ ಕಾಣುವ ವಸ್ತುಗಳೆಲ್ಲವೂ ಪಂಚ ಭೂತಗಳು ಸೇರಿ ಉಂಟಾಗಿರುವುವು. ಕಣ್ಣಿಗೆ ಕಾಣುವ ಪದಾರ್ಥಗಳಿಗೆ ಮಾತ್ರ ಮನುಷ್ಯರು ಪ್ರಮಾಣಗಳನ್ನು ಊಹಿಸುವರು.

೧೨. ದೃಗ್ಗೋಚರವಲ್ಲದ ಪದಾರ್ಥಗಳನ್ನು ಊಹೆಯಿಂದಲೇ ನಿರ್ಣಯಿಸಬಾರದು. (ಅವುಗಳನ್ನು ಶಾಸ್ತ್ರದಿಂದಲೇ ನಿರ್ಣಯಿಸಬೇಕು.) ಎಲೈ ಮುನಿವರ್ಯರೇ ! ಸುದರ್ಶನ ದ್ವೀಪವನ್ನು ವರ್ಣಿಸುವೆನು.

ಪರಿಮಣ್ಡಲೋ ಮಹಾಭಾಗಾ ದ್ವೀಪೋಽಸೌ ಚಕ್ರಸಂಸ್ಥಿತಃ ।
ನದೀಜಲಪರಿಚ್ಛನ್ನಃ ಪರ್ವತೈಶ್ಚಾಬ್ಧಿಸನ್ನಿಭೈಃ ॥೧೩॥

ಪುರೈಶ್ಚ ವಿವಿಧಾಕಾರೈ ರಮ್ಯೈರ್ಜನಪದೈಸ್ತಥಾ ।
ವೃಕ್ಷೈಃ ಪುಷ್ಪಫಲೋಪೇತೈಃ ಸಮ್ಪನ್ನೋ ಧನಧಾನ್ಯವಾನ್ ॥೧೪॥

ಲವಣೇನ ಸಮುದ್ರೇಣ ಸಮನ್ತಾತ್ಪರಿವಾರಿತಃ ।
ಯಥಾ ಹಿ ಪುರುಷಃ ಪಶ್ಯೇದಾದರ್ಶೇ ಮುಖಮಾತ್ಮನಃ ॥೧೫॥

ಏವಂ ಸುದರ್ಶನೋ ದ್ವೀಪೋ ದೃಶ್ಯತೇ ಚಕ್ರಮಣ್ಡಲಃ ।
ದ್ವಿರಂಶೇ ಪಿಪ್ಪಲಸ್ತಸ್ಯ ದ್ವಿರಂಶೇಚ ಶಶೋ ಮಹಾನ್ ॥೧೬॥

ಸರ್ವೌಷಧಿಂ ಸಮಾದಾಯ ಸರ್ವತಃ ಪರಿವಾರಿತಃ ।
ಆಪಸ್ತತೋಽನ್ಯಾ ವಿಜ್ಞೇಯಾಃ ಶೇಷಂ ಸಂಕ್ಷೇಪ ಉಚ್ಯತೇ ॥೧೭॥

---

೧೩. ಎಲೈ ಮಹಾಭಾಗ್ಯಶಾಲಿಗಳೇ ! ಈ ದ್ವೀಪವು ಚಕ್ರದಂತೆ ಗುಂಡಾಗಿರುವುದು. ಮತ್ತು ಇದು ನದಿಗಳ ಜಲದಿಂದಲೂ, ಸಮುದ್ರದಂತಿರುವ ಪರ್ವತಗಳಿಂದಲೂ ಕೂಡಿರುವುದು.

೧೪. ಈ ದ್ವೀಪದಲ್ಲಿ ನಾನಾ ವಿಧವಾದ ಪಟ್ಟಣಗಳಿರುವುವು, ಸುಂದರವಾದ ದೇಶಗಳಿರುವುವು, ಹೂವು ಹಣ್ಣುಗಳಿಂದ ಕೂಡಿದ ವೃಕ್ಷಗಳಿರುವುವು, ಬೇಕಾದ ಧನಧಾನ್ಯಗಳಿರುವುವು.

೧೫. ಈ ದ್ವೀಪದ ಸುತ್ತಲೂ ಲವಣಸಮುದ್ರವಿರುವುದು. ಕನ್ನಡಿಯಲ್ಲಿ ಮುಖವನ್ನು ನೋಡುವಂತೆ ಈ ದ್ವೀಪವನ್ನು ಎಲ್ಲಾ ಕಡೆಯಲ್ಲಿಯೂ ನೋಡಿ ತಿಳಿದುಕೊಳ್ಳಬಹುದು.

೧೬. ಈ ದ್ವೀಪದ ಅಂಶದ್ವಯದಲ್ಲಿ ಪಿಪ್ಪಲ ಖಂಡವೂ, ಇನ್ನು ಅಂಶದ್ವಯದಲ್ಲಿ ಶಶಖಂಡವೂ ಸಹ ಇರುವುವು.

೧೭. ಈ ಖಂಡಗಳು ಎಲ್ಲಾ ಔಷಧಿಗಳಿಂದ ತುಂಬಿರುವುವು. ಮಿಕ್ಕ ಜಾಗದಲ್ಲೆಲ್ಲಾ ನೀರು ತುಂಬಿಕೊಂಡಿರುವುದು. ಇದರಿಂದಲೇ ಬಾಕಿ ವಸ್ತುಗಳು ಸಂಕ್ಷೇಪವಾಗಿ ಇವೆಯೆಂದು ಹೇಳಲ್ಪಟ್ಟವು ಎಂದು ಭಾವಿಸಬೇಕು.

॥ ಋಷಯ ಊಚುಃ ॥

ಉಕ್ತೋ ಯಸ್ಯ ಚ ಸಂಕ್ಷೇಪೋ ಬುದ್ಧಿಮನ್ನಿಧಿವತ್ತ್ವಯಾ ।
ತತ್ವಜ್ಞಶ್ಚಾಸಿ ಸರ್ವಸ್ಯ ವಿಸ್ತರಂ ಸೂತ ನೋ ವದ ॥೧೮॥

ಯಾವಾನ್ ಭೂಮ್ಯವಕಾಶೋಽಯಂ ದೃಶ್ಯತೇ ಶಶಲಕ್ಷಣೇ ।
ತಸ್ಯ ಪ್ರಮಾಣಂ ಪ್ರಬ್ರೂಹಿ ತತೋ ವಕ್ಷ್ಯಸಿ ಪಿಪ್ಪಲಮ್ ।
ಏವಂ ತೈಃ ಕಿಲ ಪೃಷ್ಟಃ ಸ ಸೂತೋ ವಾಕ್ಯಮಥಾಬ್ರವೀತ್ ॥೧೯॥

॥ ಸೂತ ಉವಾಚ ॥

ಪ್ರಾಗಾಯತಾ ಮಹಾಪ್ರಾಜ್ಞಾಃ ಷಡೇತೇ ರತ್ನಪರ್ವತಾಃ ।
ಅವಗಾಢಾಹ್ಯುಭಯತಃ ಸಮುದ್ರೌ ಪೂರ್ವಪಶ್ಚಿಮೌ ॥೨೦॥

ಹಿಮವಾನ್ ಹೇಮಕೂಟಶ್ಚ ನಿಷಧಶ್ಚ ನಗೋತ್ತಮಃ ।
ನೀಲಶ್ಚ ವೈಡೂರ್ಯಮಯಃ ಶ್ವೇತಶ್ಚ ಶಶಿಸನ್ನಿಭಃ ॥೨೧॥

---

೧೮. ಋಷಿಗಳು ಹೇಳಿದರು : ಎಲೈ ಬುದ್ಧಿಶಾಲಿಯಾದ ಸೂತನೇ! ಯಾವ ಖಂಡವನ್ನು ಸಂಕ್ಷೇಪದಿಂದ ತಿಳಿಸಿದೆಯೋ ಆ ದ್ವೀಪದ ಗುಣಗಳನ್ನೆಲ್ಲಾ ತಿಳಿದುಕೊಂಡಿರುವ ನೀನು ವಿಸ್ತಾರವಾಗಿ ನಮಗೆ ಹೇಳು.

೧೯. ಶಶಖಂಡದಲ್ಲಿ ಭೂಮಿಯ ಅವಕಾಶವೆಷ್ಟಿರುವುದು? ಅದನ್ನು ನಮಗೆ ತಿಳಿಸು. ಅನಂತರ ಪಿಪ್ಪಿಲಖಂಡವನ್ನು ತಿಳಿಸುವಿಯಂತೆ. ಹೀಗೆಂಬುದಾಗಿ ಕೇಳಿದ ಪ್ರಶ್ನೆಗೆ ಸೂತ ಪುರಾಣಿಕನು ಮುಂದೆ ಹೇಳುವಂತೆ ಉತ್ತರಹೇಳಿದನು.

೨೦. ಎಲೈ ಪ್ರಜ್ಞಾಸಂಪನ್ನರಾದ ಮುನಿಗಳೇ! ಪೂರ್ವಪಶ್ಚಿಮ ಸಮುದ್ರಪರ್ಯಂತ ಹಬ್ಬಿರುವ ಈ ಆರು, ವಿಸ್ತಾರವಾದ ಪೂರ್ವ ದಿಕ್ಕಿನಲ್ಲಿರುವುವು.

೨೧. ಹಿಮವತ್ಪರ್ವತವು, ಹೇಮಕೂಟವು, ಪರ್ವತಶ್ರೇಷ್ಠವಾದ ನಿಷಧವು, ವೈಡೂರ್ಯಮಣಿಗಳಿಂದ ಕೂಡಿರುವ ನೀಲಪರ್ವತವು, ಮೊಲದ ಆಕಾರವುಳ್ಳ ಶ್ವೇತ ಪರ್ವತವು, ಎಂಬುದಾಗಿ ಆ ಆರು ಪರ್ವತಗಳಲ್ಲಿ ಇವು ಐದು ಪರ್ವತಗಳು

ಸರ್ವಧಾತುಪಿನದ್ಧಶ್ಚ ಶೃಙ್ಗವಾನ್ನಾಮ ಪರ್ವತಃ ।
ಏತೇ ವೈ ಪರ್ವತಾ ವಿಪ್ರಾಃ ಸಿದ್ಧಚಾರಣಸೇವಿತಾಃ ॥೨೨॥
ತೇಷಾಮನ್ತರವಿಷ್ಕಂಭೋ ಯೋಜನಾನಿ ಸಹಸ್ರಶಃ ।
ತತ್ರ ಪುಣ್ಯಾ ಜನಪದಾಸ್ತಾನಿ ವರ್ಷಾಣಿ ಸತ್ತಮಾಃ ॥೨೩॥
ವಸನ್ತಿ ತೇಷು ಸತ್ವಾನಿ ನಾನಾಜಾತೀನಿ ಸರ್ವಶಃ ।
ಇದಂ ತು ಭಾರತಂ ವರ್ಷಂ ತತೋ ಹೈಮವತಂ ಪರಮ್ ॥೨೪॥
ಹೇಮಕೂಟಾತ್ಪರಂ ಚೈವ ಹರಿವರ್ಷಂ ಪ್ರಚಕ್ಷತೇ ।
ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ಚ ॥೨೫॥
ಪ್ರಾಗಾಯತೋ ಮಹಾಭಾಗಾ ಮಾಲ್ಯವಾನ್ನಾಮ ಪರ್ವತಃ ।
ತತಃ ಪರಂ ಮಾಲ್ಯವನ್ತಃ ಪರ್ವತೋ ಗಮಾದನಃ ॥೨೬॥

---

೨೨. ಆರನೆಯದಾದ ಶೃಂಗಪರ್ವತವು ಎಲ್ಲಾ ಖನಿಜಪದಾರ್ಥಗಳಿಂದಲೂ ತುಂಬಿರುವುದು. ಈ ಆರು ಪರ್ವತಗಳೂ ಸಿದ್ಧರಿಗೂ, ಚಾರಣರಿಗೂ ವಾಸಸ್ಥಾನವಾಗಿರುವುವು.

೨೩. ಈ ಪರ್ವತಗಳ ಒಳಭಾಗಗಳು ಸಹಸ್ರಾರು ಯೋಜನ ವಿಶಾಲವಾಗಿರುವುವು. ಎಲೈ ಸದಾಚಾರ ಸಂಪನ್ನರೇ ! ಈ ಪರ್ವತಗಳಲ್ಲಿರುವ ದೇಶಗಳೆಲ್ಲಾ ಪುಣ್ಯಪ್ರಚುರವಾಗಿರುವುವು. ಹಾಗೆಯೇ ವರ್ಷಗಳೂ ಕೂಡ ಪುಣ್ಯದಿಂದ ಕೂಡಿರುವುವು.

೨೪. ಆ ದೇಶಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ, ನಾನಾ ಜಾತಿಯ ಪ್ರಾಣಿಗಳು ವಾಸಿಸುವುವು. ನಮ್ಮಾಶ್ರಮಗಳೆಲ್ಲವೂ ಭಾರತ ವರ್ಷದಲ್ಲಿರುವುವು. ಇದೇ ಭರತ ವರ್ಷವು. ಇದರಾಚೆಗೆ ಹೈಮವತ ವರ್ಷವಿರುವುದು.

೨೫. 'ಹೇಮಕೂಟಪರ್ವತದ ಆಚೆ ಹರಿವರ್ಷವಿದೆ' ಎಂದು ಹೇಳುವರು. ನೀಲಪರ್ವತದ ದಕ್ಷಿಣಕ್ಕೂ, ನಿಷಧಪರ್ವತದ ಉತ್ತರಕ್ಕೂ ಪೂರ್ವದ ಕಡೆಗೆ ಮಾಲ್ಯವತ್ಪರ್ವತವಿರುವುದು.

೨೬. ಎಲೈ ಮಹಾಭಾಗ್ಯಶಾಲಿಗಳೇ ! ಆ ಮಾಲ್ಯವತ್ಪರ್ವತದಿಂದಾಚೆ ಗಂಧಮಾದನವಿರುವುದು.

**ಪರಿಮಣ್ಡಲಸ್ತಯೋರ್ಮಧ್ಯೇ ಮೇರುಃ ಕನಕಪರ್ವತಃ ।**
**ಆದಿತ್ಯತರುಣಾಭಾಸೋ ವಿಧೂಮ ಇವ ಪಾವಕಃ ॥೨೭॥**

**ಯೋಜನಾನಾಂ ಸಹಸ್ರಾಣಿ ಚತುರಶೀತಿರುಚ್ಛ್ರಿತಃ ।**
**ಅಧಸ್ತಾಚ್ಚತುರಶೀತಿರ್ಯೋಜನಾನಾಂ ದ್ವಿಜೋತ್ತಮಾಃ ॥೨೮॥**

**ಊರ್ಧ್ವಮಧಶ್ಚ ತಿರ್ಯಕ್ಚ ಲೋಕಾನಾವೃತ್ಯ ತಿಷ್ಠತಿ ।**
**ತಸ್ಯ ಪಾರ್ಶ್ವೇಷ್ವಮೀ ದ್ವೀಪಾಶ್ಚತ್ವಾರಃ ಸಂಸ್ಥಿತಾ ದ್ವಿಜಾಃ ॥೨೯॥**

**ಭದ್ರಾಶ್ವಃ ಕೇತುಮಾಲಶ್ಚ ಜಮ್ಬೂದ್ವೀಪಶ್ಚ ಸತ್ತಮಾಃ ।**
**ಉತ್ತರಾಶ್ಚೈವ ಕುರುವಃ ಕೃತಪುಣ್ಯಪ್ರತಿಶ್ರಯಾಃ ॥೩೦॥**

---

೨೭. ಮಾಲ್ಯವತ್ಪರ್ವತಕ್ಕೂ ಗಂಧಮಾದನ ಪರ್ವತಕ್ಕೂ ಮಧ್ಯದಲ್ಲಿ ಮಧ್ಯಾಹ್ನದ ಸೂರ್ಯನಂತೆಯೂ, ಹೊಗೆ ಇಲ್ಲದ ಅಗ್ನಿಯಂತೆಯೂ ಹೊಳೆಯುವ, ದುಂಡಾದ ಸುವರ್ಣಮಯವಾದ ಮೇರುಪರ್ವತವಿರುವುದು.

೨೮. ಇದರ ಎತ್ತರವು ಎಂಭತ್ತನಾಲ್ಕು ಸಹಸ್ರ ಯೋಜನವು, ಮತ್ತು ಇದರ ಕೆಳಭಾಗದ ಆಳತೆಯೂ ಸಹ ಅಷ್ಟೇ ಆಗಿರುತ್ತೆ.

೨೯. ಇದು ಮೇಲೆ ಕೆಳಗೆ ಮತ್ತು ತನ್ನ ಸುತ್ತಲೂ ಲೋಕಗಳನ್ನು ಆವರಿಸಿಕೊಂಡಿರುತ್ತೆ. ಎಂಟು ದ್ವೀಪಗಳೊಳಗೆ ಇದರ ಪಾರ್ಶ್ವಗಳಲ್ಲಿ ನಾಲ್ಕು ದ್ವೀಪಗಳಿರುವುವು.

೩೦. ಭದ್ರಾಶ್ವ, ಕೇತುಮಾಲ, ಜಂಬೂದ್ವೀಪ ಮತ್ತು ಪುಣ್ಯವಂತರಾದ ಜನರಿಗೆ ಆಶ್ರಯವಾದ ಉತ್ತರಕುರು ಎಂಬ ಇವೇ ನಾಲ್ಕು ದ್ವೀಪಗಳು.

ವಿಹಗಃ ಸುಮುಖೋ ಯಸ್ತು ಸುಪಾರ್ಶ್ವಸ್ಯಾತ್ಮಜಃ ಕಿಲ ।
ಸ ವೈ ವಿಚಿನ್ತಯಾಮಾಸ ಸೌವರ್ಣಾನ್ ಪ್ರೇಕ್ಷ್ಯ ವಾಯಸಾನ್ ॥

ಮೇರುರುತ್ತಮಮಧ್ಯಾನಾಮಧಮಾನಾಂ ಚ ಪಕ್ಷಿಣಾಮ್ ।
ಅವಿಶೇಷಕರೋ ಯಸ್ಮಾತ್ತಸ್ಮಾದೇನಂ ತ್ಯಜಾಮ್ಯಹಮ್ ॥೩೨॥

ತಮಾದಿತ್ಯೋಽನುಪರ್ಯೇತಿ ಸತತಂ ಜ್ಯೋತಿಷಾಂ ವರಃ ।
ಚಂದ್ರಮಾಶ್ಚ ಸನಕ್ಷತ್ರೋ ವಾಯುಶ್ಚೈವ ಪ್ರದಕ್ಷಿಣಃ ॥೩೩॥

ಸ ಪರ್ವತೋ ಮಹಾಪ್ರಾಜ್ಞಾ ದಿವ್ಯಪುಷ್ಪಸಮನ್ವಿತಃ ।
ಭವನೈರಾವೃತಃ ಸರ್ವೈರ್ಜಾಮ್ಬೂನದಮಯೈಃ ಶುಭೈಃ ॥೩೪॥

---

೩೧. ಸುಪಾರ್ಶ್ವನ ಪುತ್ರನಾದ ಸುಮುಖವೆಂಬ ಪಕ್ಷಿಯು ಸುವರ್ಣಮಯವಾದ ಕಾಗೆಗಳನ್ನು ನೋಡಿ ಹೀಗೆ ಯೋಚಿಸಿತು.

೩೨ ಮೇರು ಪರ್ವತಕ್ಕೆ ಪಕ್ಷಿಗಳಲ್ಲಿ ಉತ್ತಮವು, ಮಧ್ಯಮವು, ಮತ್ತು ಅಧಮವು ಎಂಬ ವಿವೇಕವೇ ಇಲ್ಲ. ಆದುದರಿಂದ ಈ ಪರ್ವತವನ್ನು ಬಿಟ್ಟು ದೂರ ವಾಸಿಸುವೆನು.

೩೩. ಗ್ರಹಗಳಲ್ಲಿ ಮುಖ್ಯನಾದ ಸೂರ್ಯನು ಆ ಬೆಟ್ಟವನ್ನು ಸುತ್ತುವನು. ಅದೇ ರೀತಿಯಾಗಿ ನಕ್ಷತ್ರಗಳೊಡನೆ ಚಂದ್ರನೂ ಸುತ್ತುವನು. ವಾಯುವೂ ಕೂಡ ಪ್ರದಕ್ಷಿಣಾಕಾರವಾಗಿ ಸುತ್ತುವುದು.

೩೪. ಎಲೈ ಪ್ರಾಜ್ಞರೇ! ಆ ಪರ್ವತದಲ್ಲಿ ದಿವ್ಯವಾದ ಪುಷ್ಪಗಳಿರುವುವು. ಅಲ್ಲಿರುವ ಮನೆಗಳೆಲ್ಲವೂ ಸುವರ್ಣಮಯವಾಗಿಯೂ, ಹಿತವಾಗಿಯೂ ಇರುವುವು.

ತತ್ರ ದೇವಗಣಾ ವಿಪ್ರಾ ಗಂಧರ್ವಾಸುರರಾಕ್ಷಸಾಃ ।
ಅಪ್ಸರೋಗಣಸಂಯುಕ್ತಾಃ ಶೈಲೇಕ್ರೀಡಂತಿ ಸರ್ವದಾ ॥೩೫॥

ತತ್ರ ಬ್ರಹ್ಮಾ ಚ ರುದ್ರಶ್ಚ ಶಕ್ರಶ್ಚಾಪಿ ಸುರೇಶ್ವರಃ ।
ಸಮೇತ್ಯ ವಿವಿಧೈರ್ಯಜ್ಞೈರ್ಯಜನ್ತೇಽನೇಕದಕ್ಷಿಣೈಃ ॥೩೬॥

ತುಂಬುರುರ್ನಾರದಶ್ಚೈವ ವಿಶ್ವಾವಸುರ್ಹಾಹಾ ಹೂಹೂಃ ।
ಅಭಿಗಮ್ಯಾಮರಶ್ರೇಷ್ಠಂ ಸ್ತುವಂತಿ ವಿವಿಧೈಃ ಸ್ತವೈಃ ॥೩೭॥

ಸಪ್ತರ್ಷಯೋ ಮಹಾತ್ಮಾನಃ ಕಶ್ಯಪಶ್ಚ ಪ್ರಜಾಪತಿಃ ।
ತತ್ರ ಗಚ್ಛಂತಿ ಭದ್ರಂ ವಃ ಸದಾ ಪರ್ವಣಿ ಪರ್ವಣಿ ॥೩೮॥

---

೩೫. ಆ ಪರ್ವತದಲ್ಲಿ, ಗಂಧರ್ವರೂ, ದೇವತೆಗಳೂ, ಅಸುರರೂ, ರಾಕ್ಷಸರೂ, ಸಹ ಅಪ್ಸರಸ್ತ್ರೀಯರೊಂದಿಗೆ ಯಾವಾಗಲೂ ವಿಹರಿಸುತ್ತಲಿರುವರು.

೩೬. ಅದರಲ್ಲಿ ಬ್ರಹ್ಮನೂ, ರುದ್ರನೂ, ದೇವಾಧಿಪತಿಯಾದ ಇಂದ್ರನೂ ಬಂದು, ಬಹು ದಕ್ಷಿಣೆಗಳಿಂದ ಕೂಡಿರುವ ಯಜ್ಞಗಳನ್ನನುಷ್ಠಾನ ಮಾಡುವರು.

೩೭. ಅಲ್ಲಿ ತುಂಬುರರೂ, ನಾರದರೂ, ವಿಶ್ವಾವಸುವೂ, ಹಾಹಾ ಹೂಹೂ ಎಂಬ ಗಂಧರ್ವನೂ ವಿಷ್ಣುವನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸುವರು.

೩೮. ಪೂಜ್ಯರಾದ ಸಪ್ತಋಷಿಗಳೂ, ಕಶ್ಯಪಬ್ರಹ್ಮನೂ, ಪ್ರತಿ ಪರ್ವಸಮಯದಲ್ಲಿಯೂ ಅಲ್ಲಿಗೆ ಹೋಗುವರು. ಎಲೈ ಋಷಿಗಳೇ! ನಿಮಗೆ ಕುಶಲವಾಗಲಿ.

ತಸ್ಯೈವ ಮೂರ್ಧನ್ಯುಶನಾ ಕಾವ್ಯೋ ದೈತ್ಯೈರ್ಮಹೀಯತೇ ।
ತಸ್ಯ ಹೈಮಾನಿ ರತ್ನಾನಿ ತಸ್ಯೈತೇ ರತ್ನಪರ್ವತಾಃ ॥೩೯॥

ತಸ್ಮಾತ್ಕುಬೇರೋ ಭಗವಾಂಶ್ಚತುರ್ಥಂ ಭಾಗಮಶ್ನುತೇ ।
ತತಃ ಕಲಾಂಶಂ ವಿತ್ತಸ್ಯ ಮನುಷ್ಯೇಭ್ಯಃ ಪ್ರಯಚ್ಛತಿ ॥೪೦॥

ಪಶ್ಯೇತ್ತಸ್ಯಾಂತರೇ ದಿವ್ಯಂ ಸರ್ವರ್ತುಕುಸುಮೈಶ್ಚಿತಮ್ ।
ಕರ್ಣಿಕಾರವನಂ ರಮ್ಯಂ ಶಿಲಾಜಾಲಸಮುಚ್ಛ್ರಿತಮ್ ॥೪೧॥

---

೩೯. ಆ ಬೆಟ್ಟದ ಶಿಖರದಲ್ಲಿ ಶುಕ್ರಾಚಾರ್ಯನು ದೈತ್ಯರಿಂದ ಗೌರವಿಸಲ್ಪಡುತ್ತಾನೆ. ಸುವರ್ಣಗಳೂ, ರತ್ನಗಳೂ, ರತ್ನಪರ್ವತಗಳೂ, ಇವೆಲ್ಲವು ಇದರ ಸಂಬಂಧಿಗಳೇ ಆಗಿವೆ.

೪೦. ಆ ಪರ್ವತದ ನಾಲ್ಕನೇ ಒಂದು ಭಾಗವು ಕುಬೇರನಿಗೆ ಸೇರಿರುವುದು. ಕುಬೇರನು ತನ್ನ ಐಶ್ವರ್ಯದಲ್ಲಿ ಹದಿನಾರರಲ್ಲೊಂದು ಭಾಗವನ್ನು ಮನುಷ್ಯರಿಗೆ ಹಂಚುವನು.

೪೧. ಆದರ ಮಧ್ಯಭಾಗದಲ್ಲಿ ಎಲ್ಲಾ ಋತುಗಳಲ್ಲಿಯೂ, ಸರ್ವ ಪುಷ್ಪಗಳಿಂದಲೂ ಕೂಡಿರುವ ಸುಂದರವಾದ ಬೆಟ್ಟದಾವರೆಯ ವನವು ಇರುವುದು.

ತತ್ರ ಸಾಕ್ಷಾತ್ಪಶುಪತಿರ್ದಿವ್ಯಭೂತೈಃ ಸಮಾವೃತಃ ।
ಉಮಾಸಹಾಯೋ ಭಗವಾನ್ರಮತೇ ಭೂತಭಾವನಃ ॥೪೨॥
ಕರ್ಣಿಕಾರಮಯೀಂ ಮಾಲಾಂ ಬಿಭ್ರದಾಪಾದಲಮ್ಬಿನೀಮ್ ।
ತ್ರಿಭಿರ್ನೇತ್ರೈಃ ಕೃತೋದ್ಯೋತಸ್ತ್ರಿಭಿಃ ಸೂರ್ಯೈರಿವೋದಿತೈಃ ॥೪೩॥
ತಮುಗ್ರತಪಸಃ ಸಿದ್ಧಾಃ ಸುವ್ರತಾಃ ಸತ್ಯವಾದಿನಃ ।
ಪಶ್ಯನ್ತಿ ನ ಹಿ ದುರ್ವೃತ್ತೈಃ ಶಕ್ಯೋ ದ್ರಷ್ಟುಂ ಮಹೇಶ್ವರಃ ॥೪೪॥
ತಸ್ಯ ಶೈಲಸ್ಯ ಶಿಖರಾತ್ಕ್ಷೀರಧಾರಾ ದ್ವಿಜೋತ್ತಮಾಃ ।
ವಿಶ್ವರೂಪಾತ್ಪರಿಮಿತಾ ಭೀಮನಿರ್ಘಾತನಿಸ್ಸ್ವನಾ ॥೪೫॥
ಪುಣ್ಯಾ ಪುಣ್ಯತಮೈರ್ಜುಷ್ಟಾ ಗಙ್ಗಾ ಭಾಗೀರಥೀ ಶುಭಾ ।
ಪ್ಲವನ್ತೀವ ಪ್ರವೇಗೇಣ ಹ್ರದೇ ಚನ್ದ್ರಮಸಃ ಶುಭೇ ॥೪೬॥

---

೪೨. ಆ ವನದಲ್ಲಿ ಶಿವನು ದಿವ್ಯಭೂತಗಳಿಂದ ಕೂಡಿದವನಾಗಿ ಪಾರ್ವತಿಯೊಂದಿಗೆ ಸಂತೋಷವಾಗಿರುವನು.

೪೩. ಆ ಪರಶಿವನು ಕಾಲಿನವರೆಗೂ ಜೋಲಾಡುತ್ತಿರುವ ಬೆಟ್ಟದಾವರೆ ಹೂವಿನ ಮಾಲೆಯನ್ನು ಧರಿಸಿ, ತ್ರಿಸೂರ್ಯರಂತೆ ಜ್ವಲಿಸುತ್ತಿರುವ ನೇತ್ರತ್ರಯದಿಂದ ಪ್ರಕಾಶಿಸುತ್ತಿರುವನು.

೪೪. ಆ ಶಿವನನ್ನು, ಉಗ್ರವಾದ ತಪಸ್ಸನ್ನಾಚರಿಸಿ, ಮೇಲಾದ ನಿಯಮವನ್ನು ಹೊಂದಿ, ಸತ್ಯವನ್ನೇ ಆಡುತ್ತಾ, ತಪಸ್ಸಿದ್ಧಿಯನ್ನು ಹೊಂದಿರುವವರು ಮಾತ್ರ ಸಾಕ್ಷಾತ್ಕರಿಸುವರು. ಆ ಪರಶಿವನು ದುರಾಚಾರಿಗಳಿಗೆ ಯಾವಾಗಲೂ ಗೋಚರನಾಗಲಾರನು.

೪೫. ಎಲೈ ಬ್ರಾಹ್ಮಣಶ್ರೇಷ್ಠರೇ! ಆ ಬೆಟ್ಟದ ಶಿಖರದಿಂದ ಹಾಲಿನಂತೆ ಬೆಳ್ಳಗಿರುವ, ಸಿಡಿಲಿನಂತೆ ಘೋರವಾದ ಧ್ವನಿಯುಳ್ಳ, ಭಾಗಿರಥಿಯು ಸಾಮಾನ್ಯಾಕಾರವನ್ನು ಹೊಂದಿ ಪ್ರವಹಿಸುತ್ತಿರುವಳು.

೪೬. ಪುಣ್ಯವಂತರಿಂದ ಸೇವಿಸಲ್ಪಟ್ಟ, ಪುಣ್ಯವನ್ನು ಕೊಡುವ, ಆ ಗಂಗೆಯು ಚಂದ್ರಹ್ರದವೆಂಬ ಮಡುವಿಗೆ ವೇಗದಿಂದ ಹರಿಯುವಂತೆ ಕಾಣುವಳು.

ತಯಾ ಹ್ಯುತ್ಪಾದಿತಃ ಪುಣ್ಯಃ ಸ ಹ್ರದಃ ಸಾಗರೋಪಮಃ ।
ತಾಂ ಧಾರಯಾಮಾಸ ತದಾ ದುರ್ಧರಾಂ ಪರ್ವತೈರಪಿ ॥೪೭॥

ಶತಂ ವರ್ಷಸಹಸ್ರಾಣಿ ಶಿರಸ್ಯೈವ ಪಿನಾಕಧೃಕ್ ।
ಮೇರೋಸ್ತು ಪಶ್ಚಿಮೇ ಪಾರ್ಶ್ವೇ ಕೇತುಮಾಲೋ
ದ್ವಿಜೋತ್ತಮಾಃ ॥೪೮॥

ಜಮ್ಬೂಖಣ್ಡೇ ತು ತತ್ರೈವ ಮಹಾಜನಪದೋ ದ್ವಿಜಾಃ ।
ಆಯುರ್ದಶಸಹಸ್ರಾಣಿ ವರ್ಷಾಣಾಂ ತತ್ರ ಸತ್ತಮಾಃ ॥೪೯॥

ಸುವರ್ಣವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರಸಾಂ ಸಮಾಃ ।
ಅನಾಮಯಾ ವೀತಶೋಕಾ ನಿತ್ಯಂ ಮುದಿತಮಾನಸಾಃ ॥೫೦॥

---

೪೭–೪೮. ಚಂದ್ರಹ್ರದವೆಂದು ಪ್ರಸಿದ್ಧವಾದ ಆ ಸರಸ್ಸು ಆ ಭಾಗೀರಥಿಯಿಂದಲೇ ಉಂಟಾಗಿ ಸಮುದ್ರದಂತೆ ಕಾಣುತ್ತದೆ. ಬೆಟ್ಟಗಳಿಂದಲೂ ತಡೆಯಲಾಗದ ಆ ಭಾಗೀರಥಿಯನ್ನು ಪರಶಿವನು ತಲೆಯಿಂದ ಲಕ್ಷಾಂತರ ವರ್ಷ ಧರಿಸಿದನು. ಆ ಮೇರುವಿನ ಪಶ್ಚಿಮ ಪಾರ್ಶ್ವದಲ್ಲಿ ಕೇತುಮಾಲವೆಂಬ ಒಂದು ಸ್ಥಳವಿರುವುದು.

೪೯. ಅಲ್ಲೇ ಜಂಬೂಖಂಡವೆಂಬ ಖಂಡದಲ್ಲಿ ಮಹಾಜನಪದವೆಂಬ ದೇಶವಿರುವುದು. ಅಲ್ಲಿರುವ ಮನುಷ್ಯರು ಹತ್ತುಸಾವಿರ ವರ್ಷ ಜೀವಿಸುವವರು.

೫೦. ಮತ್ತು ಅಲ್ಲಿರುವವರು ಚಿನ್ನದಂತೆ ಮೈಬಣ್ಣವುಳ್ಳವರು. ಸ್ತ್ರೀಯರೆಲ್ಲರೂ ಅಪ್ಸರಸ್ತ್ರೀಯರಿಗೆ ಸಮಾನರಾಗಿರುವರು. ಅಲ್ಲಿರುವ ಜನರಿಗೆ ರೋಗದ ಸ್ವರೂಪವೇ ತಿಳಿಯದು. ಅವರು ದುಃಖವನ್ನು ಕಂಡವರೇ ಅಲ್ಲ. ಅವರು ಸದಾ ಸಂತೋಷಚಿತ್ತರಾಗಿಯೇ ಇರುವರು.

**ಜಾಯನ್ತೇ ಮಾನವಾಸ್ತತ್ರ ನಿಸ್ತಪ್ತಕನಕಪ್ರಭಾಃ ।**
**ಗನ್ಧಮಾದನಶೃಙ್ಗೇಷು ಕುಬೇರಃ ಸಹ ರಾಕ್ಷಸೈಃ ॥೩೧॥**

**ಸಂವೃತೋಽಪ್ಸರಸಾಂ ಸಙ್ಘೈರ್ಮೋದತೇ ಗುಹ್ಯಕಾಧಿಪಃ ।**
**ಗನ್ಧಮಾದನಪಾರ್ಶ್ವೇ ತು ಪುರೇ ದಿವ್ಯೋಪಪಾದುಕಾಃ ॥೩೨॥**

**ಏಕಾದಶಸಹಸ್ರಾಣಿ ವರ್ಷಾಣಾಂ ಪರಮಾಯುಷಃ ।**
**ತತ್ರ ಕೃಷ್ಣಾ ನರಾ ವಿಪ್ರಾಸ್ತೇಜೋಯುಕ್ತಾ ಮಹಾಬಲಾಃ ॥೩೩॥**

**ಸ್ತ್ರಿಯಶ್ಚೋತ್ಪಲಪತ್ರಾಭಾಃ ಸರ್ವಾಃ ಸುಪ್ರಿಯದರ್ಶನಾಃ ।**
**ನೀಲೋತ್ಪಲಧರಂ ಶ್ವೇತಂ ಶ್ವೇತಾದ್ಧೈರಣ್ಯಕಂ ಪರಮ್ ॥೩೪॥**

---

೩೧. ಅಲ್ಲಿ ಹುಟ್ಟುವವರು ಕರಗಿಸಿ ಶುದ್ಧವಾದ ಚಿನ್ನದಂತೆ ಹೊಳೆಯುವ ದೇಹದ ಕಾಂತಿಯುಳ್ಳವರು. ಗಂಧಮಾದನದ ಶಿಖರದಲ್ಲಿ ಕುಬೇರನು ರಾಕ್ಷಸರೊಂದಿಗೆ ವಾಸಿಸುವನು.

೩೨. ಆ ಕುಬೇರನು ಅಪ್ಸರಸ್ತ್ರೀಯರ ಗುಂಪುಗಳೊಡನೆ ಸೇರಿ, ಅಲ್ಲಿ ಬಹಳ ಸಂತೋಷಪಡುವನು. ಆ ಗಂಧಮಾದನದ ಪಾರ್ಶ್ವದ ತಪ್ಪಲಲ್ಲಿರುವ ಪಟ್ಟಣದಲ್ಲಿ ದೇವಜಾತಿಗೆ ಸೇರಿದವರು ವಾಸಿಸುವರು.

೩೩. ಅವರು ಹನ್ನೊಂದುಸಾವಿರ ವರ್ಷಗಳಕಾಲ ಬದುಕುವರು. ಅಲ್ಲಿರುವ ಮನುಷ್ಯರು ಕಪ್ಪು ಬಣ್ಣವುಳ್ಳವರಾಗಿರುವರು, ತೇಜಸ್ಸಿನಲ್ಲೂ ಬಲದಲ್ಲೂ, ಮೇಲಾಗಿರುವರು.

೩೪. ಹೆಂಗಸರು ಕುವಲಯದ ಕಾಂತಿಯಿಂದ ಕೂಡಿದವರು; ನೋಡಿದ ಮಾತ್ರಕ್ಕೆ ಸಂತೋಷವನ್ನುಂಟುಮಾಡುವ ಸೌಂದರ್ಯದಿಂದ ಶೋಭಿಸುತ್ತಿರುವರು. ಶ್ವೇತವರ್ಷವು ನೀಲೋತ್ಪಲಗಳಿಂದ ಕೂಡಿರುವುದು. ಇದಕ್ಕಿಂತಲೂ ಹಿರಣ್ಮಯ ವರ್ಷವು ಶ್ರೇಷ್ಠವಾದುದು.

ವರ್ಷಮೈರಾವತಂ ವಿಪ್ರಾ ನಾನಾಜನಪದಾವೃತಮ್ ।
ಧನುಷೀ ತೇ ಮಹಾಭಾಗಾ ದೇವರ್ಷೇರ್ದಕ್ಷಿಣೋತ್ತರೇ ॥೫೫॥

ಇಲಾವೃತ್ತಂ ಮಧ್ಯಗಂ ತು ಪಞ್ಚ ವರ್ಷಾಣಿ ಚೈವ ಹಿ ।
ಉತ್ತರೋತ್ತರಮೇತೇಭ್ಯೋ ವರ್ಷಮುದ್ರಿಚ್ಯತೇ ಗುಣೈಃ ॥೫೬॥

ಆಯುಷ್ಪ್ರಮಾಣಮಾರೋಗ್ಯಂ ಧರ್ಮತಃ ಕಾಮತೋಽರ್ಥತಃ ।
ಸಮನ್ವಿತಾನಿ ಭೂತಾನಿ ತೇಷು ಸರ್ವೇಷು ಸತ್ತಮಾಃ ॥೫೭॥

ಏವಮೇಷಾ ಮಹಾಭಾಗಾಃ ಪರ್ವತೈಃ ಪೃಥಿವೀ ಚಿತಾ ।
ಹೇಮಕೂಟಸ್ತು ಸುಮಹಾನ್ಕೈಲಾಸೋ ನಾಮ ಪರ್ವತಃ ॥೫೮॥

---

೫೫. ಐರಾವತ ವರ್ಷವು ನಾನಾದೇಶಗಳಿಂದ ಕೂಡಿ ಶೋಭಿಸುತ್ತಲಿರುವುದು. ಎಲೈ ಭಾಗ್ಯಶಾಲಿಗಳಾದ ಬ್ರಾಹ್ಮಣರೇ, ಈ ಎರಡು ವರ್ಷಗಳು ದೇವರ್ಷಿಯ ದಕ್ಷಿಣೋತ್ತರ (ಧನುಸ್ಸು) ಬಿಲ್ಲುಗಳಾಗಿ ಶೋಭಿಸುತ್ತಲಿರುವುವು.

೫೬. ಮಧ್ಯದಲ್ಲಿರುವ ಇಲಾವೃತ್ತವೂ ಸೇರಿ ಐದು ವರ್ಷಗಳು. ಉತ್ತರಕ್ಕೆ ಹೋಗುತ್ತ ಹೋಗುತ್ತ ಈ ವರ್ಷಗಳು ಗುಣ ಶ್ರೇಷ್ಠಗಳು.

೫೭. ಎಲೈ ಶ್ರೇಷ್ಠರೇ! ಹಿಂದೆ ಹೇಳಿದ ವರ್ಷ (ಖಂಡ) ಗಳಲ್ಲೆಲ್ಲಾ ವಾಸಿಸುವ ಪ್ರಾಣಿಗಳು ಆಯುಸ್ಸಿನಿಂದಲೂ, ಆರೋಗ್ಯದಿಂದಲೂ, ಧರ್ಮದಿಂದಲೂ, ಕಾಮದಿಂದಲೂ, ಅರ್ಥದಿಂದಲೂ, ಮೇಲು ಮೇಲಾಗಿರುವುವು.

೫೮. ಎಲೈ ಮಹಾತ್ಮರೇ! ಈ ರೀತಿಯಾಗಿ ಪೃಥಿವಿಯು ಪರ್ವತಗಳಿಂದ, ಹೆಣೆಯಲ್ಪಟ್ಟಿರುವುದು. ಹೇಮಕೂಟವೆಂಬ ದೊಡ್ಡ ಪರ್ವತವು ಕೈಲಾಸಪರ್ವತದ ಒಂದು ಭಾಗವು.

ಕ್ಷೇತ್ರೇ ವೈಶ್ರವಣೋ ದೇವೋ ಗುಹ್ಯಕೈಃ ಸಹ ಮೋದತೇ ।
ಅಸ್ಮಾತ್ತುತ್ತರೇಣ ಕೈಲಾಸಂ ಮೈನಾಕಂ ಪರ್ವತಂ ಪ್ರತಿ ॥೫೯॥

ಹಿರಣ್ಯಶೃಙ್ಗಃ ಸುಮಹಾನ್ದಿವ್ಯೋ ಮಣಿಮಯೋ ಗಿರಿಃ ।
ತಸ್ಯ ಪಾರ್ಶ್ವೇ ಮಹದ್ದಿವ್ಯಂ ಶುಭ್ರಂ ಕಾಞ್ಚನವಾಲುಕಮ್ ॥೬೦॥

ರಮ್ಯಂ ವಿಷ್ಣುಸರೋ ನಾಮ ಯತ್ರ ರಾಜಾ ಭಗೀರಥಃ ।
ದೃಷ್ಟ್ವಾ ಭಾಗೀರಥೀಂ ಗಙ್ಗಾಮುವಾಸ ಬಹುಲಾಃ ಸಮಾಃ ॥೬೧॥

ಯೂಪಾ ಮಣಿಮಯಾಸ್ತತ್ರ ಕ್ಷೇತ್ರಾಶ್ಚಾಪಿ ಹಿರಣ್ಮಯಾಃ ।
ತತ್ರೇಷ್ಟ್ವಾ ತು ಗತಃ ಸಿದ್ಧಿಂ ಸಹಸ್ರಾಕ್ಷೋ ಮಹಾಯಶಾಃ ॥೬೨॥

---

೫೯. ಆ ಹೇಮಕೂಟದಲ್ಲಿ ಕುಬೇರನು ಗುಹ್ಯಕರೊಂದಿಗೆ ವಾಸಿಸುವನು. ಈ ಕೈಲಾಸದಿಂದ ಉತ್ತರಕ್ಕೆ ಮೈನಾಕಪರ್ವತದ ಕಡೆಗೆ ಹಿರಣ್ಯಶೃಂಗವೆಂಬ ಪರ್ವತವಿರುವುದು.

೬೦–೬೧. ಆ ಹಿರಣ್ಯಶೃಂಗಪರ್ವತವು ದೊಡ್ಡದಾಗಿಯೂ, ದಿವ್ಯವಸ್ತುಗಳಿಂದ ಕೂಡಿದುದಾಗಿಯೂ, ರತ್ನಾಧಿಕ್ಯವುಳ್ಳದಾಗಿಯೂ ಇರುವುದು. ಅದರ ಪಕ್ಕದಲ್ಲಿ ವಿಶಾಲವಾಗಿಯೂ, ನಿರ್ಮಲವಾಗಿಯೂ, ಹೊನ್ನಿನ ಮರಳುಳ್ಳದಾಗಿಯೂ ಇರುವ ವಿಷ್ಣು ಸರೋವರವಿರುವುದು. ಆ ಸರಸ್ಸಿನಲ್ಲಿ ಭಗೀರಥನು ಗಂಗೆಯನ್ನು ಸಾಕ್ಷಾತ್ಕರಿಸಿ ಬಹಳ ವರ್ಷಗಳು ವಾಸಿಸಿದನು.

೬೨. ಅಲ್ಲಿರುವ ಧ್ವಜಸ್ತಂಭಗಳೆಲ್ಲವೂ ರತ್ನಮಯವಾಗಿರುವುವು. ಭೂಮಿಯೆಲ್ಲಾ ಚಿನ್ನದಿಂದ ಕೂಡಿರುವುದು. ಅಲ್ಲಿಯೇ ಕೀರ್ತಿಶಾಲಿಯಾದ ಇಂದ್ರನು ಯಾಗಮಾಡಿ ಸಿದ್ಧಿಯನ್ನು ಪಡೆದನು.

ಸೃಷ್ಟ್ವಾ ಭೂತಪತಿರ್ಯತ್ರ ಸರ್ವಲೋಕೈಃ ಸನಾತನಃ ।
ಉಪಾಸ್ಯತೇ ತಿಗ್ಮತೇಜಾ ಯತ್ರ ಭೂತೈಃ ಸಮನ್ವಿತಃ ॥೬೩॥
ನರನಾರಾಯಣೌ ಬ್ರಹ್ಮಾ ಮನುಃ ಸ್ಥಾಣುಶ್ಚ ಪಞ್ಚಮಃ ।
ತತ್ರ ದಿವ್ಯಾ ತ್ರಿಪಥಗಾ ಪ್ರಥಮಂ ತು ಪ್ರತಿಷ್ಠಿತಾ ॥೬೪॥
ಬ್ರಹ್ಮಲೋಕಾದಪಕ್ರಾನ್ತಾ ಸಪ್ತಧಾ ಪ್ರತಿಪದ್ಯತೇ ।
ವಟೋದಕಾ ಸಾ ನಲಿನೀ ಪಾವನೀ ಚ ಸರಸ್ವತೀ ॥೬೫॥
ಜಮ್ಬೂನದೀ ಚ ಸೀತಾ ಚ ಗಙ್ಗಾ ಸಿನ್ಧುಶ್ಚ ಸಪ್ತಮಾ ।
ಅಚಿನ್ತ್ಯಾ ದಿವ್ಯಸಂಜ್ಞಾ ಸಾ ಪ್ರಭಾವೈಶ್ಚ ಸಮನ್ವಿತಾ ॥೬೬॥
ಉಪಾಸತೇ ಯತ್ರ ಸತ್ರಂ ಸಹಸ್ರಯುಗಪರ್ಯಯೇ ।
ದೃಶ್ಯಾದೃಶ್ಯಾ ಚ ಭವತಿ ತತ್ರ ತತ್ರ ಸರಸ್ವತೀ ॥೬೭॥

---

೬೩. ಬ್ರಹ್ಮರೂಪವನ್ನು ತಾಳಿ ಜಗತ್ತನ್ನೆಲ್ಲಾ ಸೃಷ್ಟಿಸಿದ, ಪುರಾತನನಾದ, ತೀಕ್ಷ್ಣತೇಜಸ್ಸಿನಿಂದ ಕೂಡಿರುವ, ವಿಷ್ಣುವು ಸರ್ವಲೋಕದ ಸೇವೆಯನ್ನು ಕೈಗೊಳ್ಳುವನು.

೬೪. ಅಲ್ಲೇ ನರನಾರಾಯಣರೂ, ಬ್ರಹ್ಮನೂ, ಮನುವೂ, ಶಿವನೂ ಇರುವರು. ಅಲ್ಲೇ ದೇವಗಂಗೆಯು ಮೊದಲು ಬಂದು ನಿಂತದ್ದು.

೬೫–೬೬. ಬ್ರಹ್ಮ ಲೋಕದಿಂದ ಹೊರಟ ಗಂಗೆಯು ಏಳು ರೀತಿಯಾಗಿ ಪ್ರವಹಿಸಿ, ಏಳು ಹೆಸರನ್ನು ಹೊಂದಿದಳು. ವಟೋದಕಾ ನಲೀನೀ, ಸರಸ್ವತೀ, ಜಂಬೂ, ಸೀತಾ, ಗಂಗಾ, ಮತ್ತು ಏಳನೆಯದಾದ ಸಿಂಧು, ಈ ರೀತಿಯಾಗಿ ಏಳು ನದಿಗಳು. ಈ ಸಿಂಧು ನದಿಯ ಮಹಾತ್ಮೆಯು ಬುದ್ಧಿಗೆ ಗೋಚರವೇ ಆಗಲಾರದು. ಇದಕ್ಕೆ 'ದಿವ್ಯ ನದಿ' ಎಂಬ ಹೆಸರೂ ಉಂಟು.

೬೭. ಇದರ ದಡದಲ್ಲಿ ಕಳೆದ ಸಹಸ್ರಾರು ಯುಗಗಳಿಂದಲೂ, ದೀರ್ಘಕಾಲ ನಡೆಯತಕ್ಕ ಯಾಗಗಳನ್ನು ನಡೆಯಿಸುತ್ತಿರುವರು. ಸರಸ್ವತೀ ನದಿಯಾದರೋ, ಅಲ್ಲಲ್ಲಿ ಕಾಣುತ್ತಲೂ, ಮರೆಯಾಗುತ್ತಲೂ ಇರುವುದು.

ಏತಾ ದಿವ್ಯಾಃ ಸಪ್ತಗಂಗಾಸ್ತ್ರಿಷು ಲೋಕೇಷು ವಿಶ್ರುತಾಃ ।
ರಕ್ಷಾಂಸಿ ವೈ ಹಿಮವತಿ ಹೇಮಕೂಟೇ ಚ ಗುಹ್ಯಕಾಃ ॥೬೮॥

ಸರ್ಪಾ ನಾಗಾಶ್ಚ ನಿಷಧೇ ಗೋಕರ್ಣಂ ಚ ತಪೋವನಮ್ ।
ದೇವಾಸುರಾಣಾಂ ಸರ್ವೇಷಾಂ ಶ್ವೇತಃ ಪರ್ವತ ಉಚ್ಯತೇ ॥೬೯॥

ಗನ್ಧರ್ವಾ ನಿಷಧೇ ನಿತ್ಯಂ ನೀಲೇ ಬ್ರಹ್ಮರ್ಷಯಸ್ತಥಾ ।
ಶೃಙ್ಗವಾಂಸ್ತು ಮಹಾಭಾಗಾ ದೇವಾನಾಂ ಪ್ರತಿಸಂಚರಃ ॥೭೦॥

ಇತ್ಯೇತಾನಿ ಮಹಾಭಾಗಾಃ ಸಪ್ತ ವರ್ಷಾಣಿ ಭಾಗಶಃ ।
ಭೂತಾನ್ಯುಪನಿವಿಷ್ಟಾನಿ ಗತಿಮನ್ತಿ ಧ್ರುವಾಣಿ ಚ ॥೭೧॥

ತೇಷಾಮೃದ್ಧಿರ್ಬಹುವಿಧಾ ದೃಶ್ಯತೇ ದೇವಮಾನುಷಾ ।
ಅಶಕ್ಯಂ ಪರಿಸಂಖ್ಯಾತುಂ ಶ್ರದ್ಧೇಯಾ ತು ಬುಭೂಷತಾ ॥೭೨॥

---

೬೮. ಈ ಏಳು ದಿವ್ಯನದಿಗಳು 'ಸಪ್ತಗಂಗಾ' ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುವು. ಹಿಮವತ್ಪರ್ವತದಲ್ಲಿ ರಾಕ್ಷಸರು ವಾಸಿಸುವರು; ಹೇಮಕೂಟದಲ್ಲಿ ಗುಹ್ಯಕರಿರುವರು.

೬೯. ನಿಷಧಪರ್ವತದಲ್ಲಿ ಸರ್ಪಗಳೂ, ಆನೆಗಳೂ, ಗೋಕರ್ಣವೆಂಬ ತಪೋವನವೂ ಇರುವುವು. ಶ್ವೇತ ಪರ್ವತವು ಎಲ್ಲಾ ದೇವತೆಗಳಿಗೂ, ಅಸುರರಿಗೂ ವಾಸಸ್ಥಾನವು.

೭೦. ನಿಷಧಪರ್ವತದಲ್ಲಿ ಯಾವಾಗಲೂ ಗಂಧರ್ವರು ವಾಸಿಸುವರು. ನೀಲಪರ್ವತದಲ್ಲಿ ಬ್ರಹ್ಮರ್ಷಿಗಳು ಇರುವರು. ಎಲೈ ಪುಣ್ಯಶಾಲಿಗಳೇ! ಶೃಂಗಪರ್ವತದಲ್ಲಿ ದೇವತೆಗಳು ಸಂಚರಿಸುವರು.

೭೧. ಎಲೈ ಮಹಾಭಾಗ್ಯಶಾಲಿಗಳೇ! ವಿಭಾಗಮಾಡಲಾಗಿ ಈ ವರ್ಷಗಳು ಮೇಲಿನ ರೀತಿಯಲ್ಲಿ ಏಳಾಗುವುವು. ಈ ವರ್ಷಗಳು ಒಂದೊಂದರ ತೀರದಲ್ಲಿ ಒಂದೊಂದಿದ್ದುಕೊಂಡು, ಮೋಕ್ಷಪ್ರದವಾದುದರಿಂದ ಸರ್ವರಿಗೂ ಹೊಂದಬೇಕೆಂಬ ಕೋರಿಕೆಗೆ ಪಾತ್ರಗಳಾಗಿ, ಸ್ಥಿರವಾಗಿರುವುವು.

೭೨. ಈ ವರ್ಷಗಳು ದೇವತೆಗಳಿಂದಲೂ ಮನುಷ್ಯರಿಂದಲೂ ನಾನಾಬಗೆಯಾಗಿ ವೃದ್ಧಿಹೊಂದುತ್ತಿರುವುದು. ಇವುಗಳ ವೃದ್ಧಿಯನ್ನು ಹೇಳಲು ಸಾಧ್ಯವಿಲ್ಲವು. ಕೇಳುವ ಇಚ್ಛೆಯಿಂದ ನಂಬತಕ್ಕದ್ದು.

**ಯಾಂ ತು ಪೃಚ್ಛಥ ಮಾಂ ವಿಪ್ರಾ ದಿವ್ಯಾಮೇತಾಂ ಶಶಾಕೃತಿಮ್ ।**
**ಪಾರ್ಶ್ವೇ ಶಶಸ್ಯ ದ್ವೇ ವರ್ಷೇ ಉಕ್ತೇ ಯೇ ದಕ್ಷಿಣೋತ್ತರೇ ॥**
**ಕರ್ಣೇ ತು ನಾಗದ್ವೀಪಶ್ಚ ಕಾಶ್ಯಪದ್ವೀಪ ಏವ ಚ ।**
**ಕರ್ಣದ್ವೀಪಶಿಲೋ ವಿಪ್ರಾಃ ಶ್ರೀಮಾನ್ಮಲಯಪರ್ವತಃ ।**
**ಏತದ್ದ್ವಿತೀಯಂ ದ್ವೀಪಸ್ಯ ದೃಶ್ಯತೇ ಶಶಸನ್ನಿಭಮ್ ॥೭೪॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ತೃತೀಯೋಽಧ್ಯಾಯಃ**

---

೭೩. ಮೊಲದ ಆಕಾರವಾದ ಶಶಖಂಡದ ವಿಚಾರವನ್ನು ಪ್ರಶ್ನೆ ಮಾಡಿದಿರಷ್ಟೇ. ಇದರ ದಕ್ಷಿಣೋತ್ತರಗಳಲ್ಲಿ ಎರಡು ವರ್ಷಗಳಿರುವುವು.

೭೪. ಈ ಶಶಖಂಡದ ಕಿವಿಗಳಾಗಿ ನಾಗದ್ವೀಪ, ಕಾಶ್ಯಪದ್ವೀಪಗಳಿರುವುವು. ಈ ಕರ್ಣದ್ವೀಪಗಳಿಗೆ ತಲೆಯು ಮಲಯಪರ್ವತವು. ಇವು ಮೂರನ್ನೂ ನೋಡಿದರೆ ಮೊಲದ ತಲೆಯಂತೆ ಕಾಣುತ್ತದೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಚತುರ್ಥೋಽಧ್ಯಾಯಃ

॥ ಋಷಯ ಊಚುಃ ॥

**ಮೇರೋರಥೋತ್ತರಂ ಪಶ್ಚಾತ್ಪೂರ್ವಮಾಚಕ್ಷ್ವ ಸೂತ ನಃ ।**
**ನಿಖಿಲೇನ ಮಹಾಬುದ್ಧೇ ಮಾಲ್ಯವನ್ತಂ ಚ ಪರ್ವತಮ್ ॥ ೧ ॥**

॥ ಸೂತ ಉವಾಚ ॥

**ದಕ್ಷಿಣೇನ ತು ನೀಲಸ್ಯ ಮೇರೋಃ ಪಾರ್ಶ್ವೇ ತಥೋತ್ತರೇ ।**
**ಉತ್ತರಾಃ ಕುರವೋ ವಿಪ್ರಾಃ ಪುಣ್ಯಾಃ ಸಿದ್ಧನಿಷೇವಿತಾಃ ॥ ೨ ॥**

**ತತ್ರ ವೃಕ್ಷಾ ಮಧುಫಲಾ ನಿತ್ಯಪುಷ್ಪಫಲೋಪಗಾಃ ।**
**ಪುಷ್ಪಾಣಿ ಚ ಸುಗನ್ಧೀನಿ ರಸವನ್ತಿ ಫಲಾನಿ ಚ ॥ ೩ ॥**

---

ಪದ್ಮಪುರಾಣದ ಆದಿಖಂಡದ ನಾಲ್ಕನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ಎಲೈ ಸೂತಪುರಾಣಿಕನೇ ! ಮೊದಲು ಮೇರುವಿನ ಉತ್ತರದಿಕ್ಕನ್ನು ತಿಳಿಸು ; ಆಮೇಲೆ ಮಾಲ್ಯವತ್ಪರ್ವತವನ್ನು ಹೇಳು.

೨. ಸೂತನು ಹೇಳಿದನು : ಮೇರುಪರ್ವತದ ಉತ್ತರ ಪಾರ್ಶ್ವದಲ್ಲಿ, ನೀಲಪರ್ವತಕ್ಕೆ ದಕ್ಷಿಣದಲ್ಲಿ, ಸಿದ್ಧರಿಗೆ ಆಶ್ರಯವಾಗಿಯೂ ಪುಣ್ಯಭೂಮಿಯಾಗಿಯೂ ಇರುವ, ಆ ಉತ್ತರ ಕುರುದೇಶ ಇರುವುದು.

೩. ಅಲ್ಲಿರುವ ವೃಕ್ಷಗಳು ಸಿಹಿಯಾದ ಫಲಗಳನ್ನೇ ಬಿಡುವುವು. ಯಾವಾಗಲೂ ಫಲಪುಷ್ಪಗಳಿಂದ ಕೂಡಿರುವುವು. ಹೂವುಗಳು ಸುಗಂಧವಾಗಿಯೂ, ಫಲಗಳು ರಸಭರಿತವಾಗಿಯೂ ಇರುವುವು.

ಸರ್ವಕಾಮಫಲಾಸ್ತತ್ರ ಕೇಚಿದ್ವೃಕ್ಷಾ ದ್ವಿಜೋತ್ತಮಾಃ ।
ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ದ್ವಿಜೋತ್ತಮಾಃ ॥ ೪ ॥
ಯೇ ಕ್ಷರನ್ತಿ ಸದಾ ಕ್ಷೀರಂ ತತ್ರ ಷಡ್ರಸಾಮೃತೋಪಮಮ್ ।
ವಸ್ತ್ರಾಣಿ ಚ ಪ್ರಸೂಯನ್ತೇ ಫಲೇಷ್ವಾಭರಣಾನಿ ಚ ॥ ೫ ॥
ಸರ್ವಾ ಮಣಿಮಯೀ ಭೂಮಿಃ ಸೂಕ್ಷ್ಮಕಾಞ್ಚನವಾಲುಕಾ ।
ಸರ್ವರ್ತುಸುಖಸಂಸ್ಪರ್ಶಾ ನಿರ್ಮಲಾಶ್ಚ ತಪೋಧನಾಃ ॥ ೬ ॥
ದೇವಲೋಕಚ್ಯುತಾಃ ಸರ್ವೇ ಜಾಯನ್ತೇ ತತ್ರ ಮಾನವಾಃ ।
ಶುಕ್ಲಾಭಿಜನಸಂಪನ್ನಾಃ ಸರ್ವೇ ಸುಪ್ರಿಯದರ್ಶನಾಃ ॥ ೭ ॥
ಮಿಥುನಾನಿ ಚ ಜಾಯನ್ತೇ ಸ್ತ್ರಿಯಶ್ಚಾಪ್ಸರಸೋಪಮಾಃ ।
ತೇಷಾಂ ತೇ ಕ್ಷೀರಿಣಾಂ ಕ್ಷೀರಂ ಪಿಬನ್ತ್ಯಮೃತಸನ್ನಿಭಮ್ ॥ ೮ ॥

---

೪. ಎಲೈ ಬ್ರಾಹ್ಮಣೋತ್ತಮರೇ! ಕೆಲವು ವೃಕ್ಷಗಳು ಕೋರಿದ ಫಲಗಳನ್ನು ಕೊಡುವುವು; ಮತ್ತೆ ಕೆಲವು ಹಾಲುಳ್ಳ ಮರಗಳು.

೫. ಆ ಮರಗಳು ಯಾವಾಗಲೂ ಪಂಚಾಮೃತಕ್ಕೆ ಸಮವಾದ ಕ್ಷೀರವನ್ನು ಪ್ರಸವಿಸುವುವು; ಬಟ್ಟೆಗಳನ್ನೂ ಕೊಡುವುವು; ಹಣ್ಣುಗಳಲ್ಲಿ ಆಭರಣಗಳನ್ನು ಕೂಡ ಬಿಡುವುವು.

೬. ಎಲ್ಲಾ ಭೂಮಿಯಲ್ಲೂ ರತ್ನಗಳು ಹೇರಳವಾಗಿರುವುವು. ಸೂಕ್ಷ್ಮವಾದ ಚಿನ್ನದ ಪುಡಿಗಳುಳ್ಳ ಮರಳುದಿಣ್ಣೆಗಳು ಕಂಡುಬರುವುವು. ಎಲ್ಲಾ ಋತುಗಳಲ್ಲಿಯೂ, ಭೂಮಿಯು ಸುಖಸ್ಪರ್ಶವುಳ್ಳದ್ದಾಗಿರುವುದು. ಋಷಿಗಳೂ ನಿರ್ಮಲ ಹೃದಯರು.

೭. ಅಲ್ಲಿನ ಜನರೆಲ್ಲಾ ದೇವಲೋಕದಿಂದ ಪುಣ್ಯವನ್ನು ಅನುಭವಿಸಿದನಂತರ ಉಳಿದ ಪುಣ್ಯದಿಂದ ಅಲ್ಲಿಗೆ ಬಂದು ಹುಟ್ಟಿ ಬೆಳೆದವರು; ಶುದ್ಧವಾದ ವಂಶದಲ್ಲಿ ಹುಟ್ಟಿದವರಾಗಿಯೂ, ನೋಡಲು ರಮ್ಯರಾಗಿಯೂ ಇದ್ದಾರೆ.

೮. ಸ್ತ್ರೀಪುರುಷರ ದ್ವಂದ್ವಗಳೂ ಅಲ್ಲಿರುವುವು. ಸ್ತ್ರೀಯರು ಅಪ್ಸರಸ್ತ್ರೀಯರಿಗೆ ಸಮವಾಗಿರುವರು. ಅಲ್ಲಿನ ಜನರು ಅಮೃತಕ್ಕೆ ಸಮವಾದ ಆ ವೃಕ್ಷದ ಹಾಲನ್ನೇ ಕುಡಿಯುವರು.

**ಮಿಥುನಂ ಜಾಯತೇ ಕಾಲೇ ಸಮಂ ನ್ತ್ವಚ್ಚ ಪ್ರವರ್ಧತೇ ।**
**ತುಲ್ಯರೂಪಗುಣೋಪೇತಂ ಸಮವೇಷಂ ತಥೈವ ಚ ॥ ೯ ॥**
**ಏಕಮೇವಾನುರೂಪಂ ಚ ಚಕ್ರದ್ವಯಸಮಂ ದ್ವಿಜಾಃ ।**
**ನಿರಾಮಯಾಶ್ಚ ತೇ ಲೋಕಾ ನಿತ್ಯಂ ಮುದಿತಮಾನಸಾಃ ॥೧೦॥**
**ದಶ ವರ್ಷಸಹಸ್ರಾಣಿ ದಶವರ್ಷಶತಾನಿ ಚ ।**
**ಜೀವನ್ತಿ ತೇ ಮಹಾಭಾಗಾ ನ ಚಾನ್ಯೋನ್ಯಂ ಜಹತ್ಯುತ ॥೧೧॥**
**ಭಾರುಣ್ಡಾ ನಾಮ ಶಕುನಾಸ್ತೀಕ್ಷ್ಣತುಣ್ಡಾ ಮಹಾಬಲಾಃ ।**
**ತಾನ್ನಿರ್ಹರನ್ತೀಹ ಮೃತಾನ್ದರೀಷು ಪ್ರಕ್ಷಿಪನ್ತಿ ಚ ॥೧೨॥**
**ಉತ್ತರಾಃ ಕುರವೋ ವಿಪ್ರಾ ವ್ಯಾಖ್ಯಾತಾಸ್ತೇ ಸಮಾಸತಃ ।**
**ಮೇರೋಃ ಪಾರ್ಶ್ವಮಹಂ ಪೂರ್ವಂ ವಕ್ಷ್ಯಾಮ್ಯಥ ಯಥಾತಥಮ್**

---

೯. ತಾರುಣ್ಯ ಬಂದಾಗ ಸಮಾನ ರೂಪಗುಣಗಳಿಂದ ಕೂಡಿರುವ, ಒಂದೇ ವಿಧವಾದ ಪ್ರೀತಿಯುಳ್ಳ, ಸ್ತ್ರೀಪುರುಷರು ಸೇರಿ ಅಲ್ಲಿ ಬೆಳೆಯುವರು.

೧೦. ಈ ಸ್ತ್ರೀಪುರುಷಯುಗ್ಮವು ಎರಡು ಚಕ್ರಗಳು ಒಂದು ಗಾಡಿಯನ್ನು ಅನುಸರಿಸುವಂತೆ ಪರಸ್ಪರ ಅನುಸರಿಸುವರು. ಇಲ್ಲಿರುವ ಜನಗಳು ರೋಗವನ್ನೇ ತಿಳಿಯರು; ಯಾವಾಗಲೂ ಸಂತುಷ್ಟಹೃದಯರು.

೧೧. ಇವರು ಹನ್ನೊಂದುಸಾವಿರ ವರ್ಷಗಳಕಾಲ ಬದುಕುವರು; ಒಬ್ಬರನ್ನೊಬ್ಬರು ಅಗಲುವುದೇ ಇಲ್ಲ.

೧೨. ಇಲ್ಲಿ ಮೊನೆಯಾದ ಕೊಕ್ಕುಳ್ಳ ಮಹಾ ಬಲಶಾಲಿಗಳಾದ ಭಾರುಂಡವೆಂಬ ಪಕ್ಷಿಗಳು, ಸತ್ತಜನಗಳನ್ನು ಎತ್ತಿಕೊಂಡು ಹೋಗಿ ಹಳ್ಳಗಳಲ್ಲಿ ಹಾಕುವುವು.

೧೩. ಎಲೈ ಬ್ರಾಹ್ಮಣರೇ! ಈ ರೀತಿಯಾಗಿ ಉತ್ತರಕುರುದೇಶವನ್ನು ಸಂಕ್ಷೇಪವಾಗಿ ತಿಳಿಸಿದೆನು. ಮೇರುವಿನ ಪೂರ್ವಪಾರ್ಶ್ವವನ್ನು ಯಥಾಯೋಗ್ಯವಾಗಿ ತಿಳಿಸುವೆನು.

ತಸ್ಯ ಮೂರ್ಧಾಭಿಷೇಕಸ್ತು ಭದ್ರಾಶ್ವಸ್ಯ ತಪೋಧನಾಃ ।
ಭದ್ರಶಾಲವನಂ ಯತ್ರ ಕಾಲಾಮ್ರಶ್ಚ ಮಹಾದ್ರುಮಃ ॥೧೪॥
ಕಾಲಾಮ್ರಸ್ತು ಮಹಾಭಾಗಾ ನಿತ್ಯಪುಷ್ಪಫಲಃ ಶುಭಃ ।
ದ್ರುಮಶ್ಚ ಯೋಜನೋತ್ಸೇಧಃ ಸಿದ್ಧಚಾರಣಸೇವಿತಃ ॥೧೫॥
ತತ್ರ ತೇ ಪುರುಷಾಃ ಶ್ವೇತಾಸ್ತೇಜೋಯುಕ್ತಾ ಮಹಾಬಲಾಃ ।
ಸ್ತ್ರಿಯಃ ಕುಮುದವರ್ಣಾಶ್ಚ ಸುನ್ದರ್ಯಃ ಪ್ರಿಯದರ್ಶನಾಃ ॥೧೬॥
ಚನ್ದ್ರವರ್ಣಾಶ್ಚತುರ್ವರ್ಣಾಃ ಪೂರ್ಣಚನ್ದ್ರನಿಭಾನನಾಃ ।
ಚನ್ದ್ರಶೀತಲಗಾತ್ರಾಶ್ಚ ನೃತ್ಯಗೀತವಿಶಾರದಾಃ ॥೧೭॥
ದಶವರ್ಷಸಹಸ್ರಾಣಿ ತತ್ರಾಯುರ್ದ್ವಿಜಸತ್ತಮಾಃ ।
ಕಾಲಾಮ್ರರಸಪೀತಾಸ್ತೇ ನಿತ್ಯಂ ಸಂಸ್ಥಿತಯೌವನಾಃ ॥೧೮॥

---

೧೪. ಭದ್ರಾಶ್ವವೆಂಬ ವರ್ಷವು ವರ್ಷಗಳಲ್ಲೆಲ್ಲಾ ಮೇಲಾದುದು. ಇದರಲ್ಲಿ ಭದ್ರಶಾಲವೆಂಬ ವನದಲ್ಲಿ ಕಾಲಾಮ್ರವೆಂಬ ದೊಡ್ಡಮರ ವಿರುವುದು.

೧೫. ಈ ಕಾಲಾಮ್ರವಾದರೋ ಒಂದು ಯೋಜನ ಎತ್ತರವುಳ್ಳ ದ್ದಾಗಿ, ಯಾವಾಗಲೂ ಫಲಪುಷ್ಪಗಳಿಂದ ಕೂಡಿ, ಸಿದ್ಧಚಾರಣರಿಗೆ ಸಂತೋಷವನ್ನುಂಟುಮಾಡುವುದು.

೧೬. ಅಲ್ಲಿರುವ ಪುರುಷರಾದರೋ ಬೆಳ್ಳಗಿರುವರು, ತೇಜಸ್ವಿಗಳು ಮತ್ತು ಮಹಾಬಲಶಾಲಿಗಳು; ಬಿಳಿನೈದಿಲೆಗೆ ಸಮಾನವಾದ ವರ್ಣ ದಿಂದ ಕೂಡಿ ಸುಂದರಿಯರಾಗಿ ಮನೋಹರರಾಗಿರುವರು.

೧೭. ಅಲ್ಲಿರುವ ಪದ್ಮಿನಿಯೇ ಮೊದಲಾದ ನಾಲ್ಕು ಜಾತಿಯ ಹೆಂಗಸರೂ ಚಂದ್ರನಂತೆ ಬಣ್ಣವುಳ್ಳವರು ; ಪೂರ್ಣಚಂದ್ರನಂತೆ ಮುಖ ವುಳ್ಳವರು, ಚಂದ್ರನಂತೆ ತಣ್ಣಗಿರುವ ಮೈಯುಳ್ಳವರು ; ನರ್ತನಗಾನ ಗಳಲ್ಲಿ ಬುದ್ಧಿಮತಿಯರು.

೧೮. ಇಲ್ಲಿ ವಾಸಿಸುವ ಜನರು ಕಾಲಾಮ್ರವೆಂಬ ಮಾವಿನ ಮರದ ಹಣ್ಣಿನ ರಸವನ್ನು ಕುಡಿಯುತ್ತಾ, ಯಾವಾಗಲೂ ತರುಣರಾಗಿಯೇ ಇದ್ದುಕೊಂಡು, ಹತ್ತು ಸಹಸ್ರವರ್ಷಗಳು ಬದುಕುವರು.

**ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ।**
**ಸುದರ್ಶನೋ ನಾಮ ಮಹಾಞ್ಜಮ್ಬೂವೃಕ್ಷಃ ಸನಾತನಃ ॥೧೯॥**
**ಸರ್ವಕಾಮಫಲಃ ಪುಣ್ಯಃ ಸಿದ್ಧಚಾರಣಸೇವಿತಃ ।**
**ತಸ್ಯ ನಾಮ್ನಾ ಸಮಾಖ್ಯಾತೋ ಜಮ್ಬೂದ್ವೀಪಃ ಸನಾತನಃ ॥೨೦॥**
**ಯೋಜನಾನಾಂ ಸಹಸ್ರಂ ಚ ಶತಂ ಚ ದ್ವಿಜಸತ್ತಮಾಃ ।**
**ತಥಾ ಮಾಲ್ಯವತಃ ಶೃಙ್ಗೇ ಪೂರ್ವೇ ಪೂರ್ವಾನುಗಾನ್ತಕಾಃ ॥೨೧॥**
**ಯೋಜನಾನಾಂ ಸಹಸ್ರಾಣಿ ಪಞ್ಚಾಶನ್ಮಾಲ್ಯವಾನ್ದ್ವಿಜಾಃ ।**
**ಮಹಾರಜತಸಂಜ್ಞಾಸ್ತೇ ಜಾಯನ್ತೇ ತತ್ರ ಮಾನವಾಃ ॥೨೨॥**
**ಬ್ರಹ್ಮಲೋಕಚ್ಯುತಾಃ ಸರ್ವೇ ಸರ್ವೇ ಚ ಬ್ರಹ್ಮವಾದಿನಃ ।**
**ತಪಸ್ತಪ್ಯನ್ತಿ ತೇ ದಿವ್ಯಂ ಭವನ್ತಿ ಹ್ಯೂರ್ಧ್ವರೇತಸಃ ॥೨೩॥**

---

೧೯. ನೀಲಪರ್ವತಕ್ಕೆ ದಕ್ಷಿಣದಲ್ಲಿ ನಿಷಧಪರ್ವತಕ್ಕೆ ಉತ್ತರದಲ್ಲಿ ಬಹುಕಾಲದಿಂದಿರುವ ಸುದರ್ಶನವೆಂಬ ದೊಡ್ಡದಾದ ನೇರಳೇ ಮರವುದು.

೨೦. ಈ ವೃಕ್ಷವು ತನ್ನ ಹಣ್ಣುಗಳಿಂದ ಎಲ್ಲರ ಕೋರಿಕೆಯನ್ನು ಪೂರ್ತಿಮಾಡುತ್ತಾ, ಪುಣ್ಯವನ್ನು ಕೊಡುತ್ತಾ, ಸಿದ್ಧಚಾರಣರಿಂದ ಸೇವಿತವಾಗಿರುವುದು. ಆ ಮರದಿಂದಲೇ ಆ ಭೂಭಾಗಕ್ಕೆ 'ಜಂಬೂದ್ವೀಪ' ಎಂಬ ಹೆಸರು ಬಂದಿದೆ.

೨೧. ಆ ಜಂಬೂದ್ವೀಪದ ವೈಶಾಲ್ಯವು ಸಾವಿರದನೂರು ಯೋಜನಗಳಿರುವುದು. ಅಲ್ಲಿರುವ ಮಾಲ್ಯವತ್ಪರ್ವತದ ಪೂರ್ವಶಿಖರದಲ್ಲಿ, ಮೇರುವಿನ ಪೂರ್ವಭಾಗದಲ್ಲಿ ವರ್ಣಿಸಿದ ಗುಣಗಳುಳ್ಳ ವಸ್ತುಗಳು ಕಂಡುಬರವುವು.

೨೨. ಎಲೈ ಬ್ರಾಹ್ಮಣೋತ್ತಮರೇ! ಮಾಲ್ಯವತ್ಪರ್ವತದ ವಿಸ್ತಾರವು ಐವತ್ತು ಸಾವಿರ ಯೋಜನವು. ಅಲ್ಲಿನ ಜನರು 'ಮಹಾರಜತ'ರೆಂದು ಪ್ರಸಿದ್ಧರಾಗಿರುವರು.

೨೩. ಆ ಮಾನವರಾದರೋ ಬ್ರಹ್ಮಲೋಕದಿಂದ ಚ್ಯುತರಾದವರು, ಬ್ರಹ್ಮವೊಂದೇ ಸತ್ಯವೆಂದು ಹೇಳುವವರು, ಉತ್ತಮವಾದ ತಪಸ್ಸನ್ನು ಆಚರಿಸುವವರು, ಇಂದ್ರಿಯನಿಗ್ರಹದಿಂದ ಮೇಲ್ಮುಖವಾದ ಶುಕ್ಲವುಳ್ಳವರು.

ರಕ್ಷಣಾರ್ಥಂ ತು ಭೂತಾನಿ ಪ್ರವಿಶನ್ತಿ ದಿವಾಕರಮ್ ।
ಷಷ್ಟಿಸ್ತಾನಿ ಸಹಸ್ರಾಣಿ ಷಷ್ಟಿರೇವ ಶತಾನಿ ಚ ॥೨೪॥
ಅರುಣಸ್ಯಾಗ್ರತೋ ಯಾನ್ತಿ ಪರಿವಾರ್ಯ ದಿವಾಕರಮ್ ।
ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ಆದಿತ್ಯತಾಪತಪ್ತಾಸ್ತೇ ವಿಶನ್ತಿ ಶಶಿಮಣ್ಡಲಮ್ ॥೨೫॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಚತುರ್ಥೋಽಧ್ಯಾಯಃ

---

೨೪. ಸೂರ್ಯನನ್ನು ಕಾಪಾಡಲು ಅಲ್ಲಿರುವ ಅರವತ್ತಾರು ಸಾವಿರ ಪ್ರಾಣಿಗಳು ಆತನ ಬಳಿಗೆ ಹೋಗುತ್ತವೆ.

೨೫. ಅವು ಸೂರ್ಯನನ್ನು ಸುತ್ತುಗಟ್ಟಿಕೊಂಡು, ಅರುಣನ ಮುಂದೆ ಹೋಗುತ್ತವೆ. ಅವು ಅವನನ್ನು ಕಾಪಾಡುತ್ತಾ ಅರವತ್ತಾರು ಸಾವಿರವರ್ಷಗಳವರೆಗೂ ಇರುತ್ತವೆ. ಸೂರ್ಯನ ತಾಪವನ್ನು ತಡೆಯುಲಾರದೇ, ಅನಂತರ ಅವು ಚಂದ್ರಮಂಡಲವನ್ನು ಸೇರುತ್ತವೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಪಂಚಮೋಽಧ್ಯಾಯಃ

॥ ಋಷಯ ಊಚುಃ ॥

**ವರ್ಷಾಣಾಂ ಚೈವ ನಾಮಾನಿ ಪರ್ವತಾನಾಂ ಚ ಸತ್ತಮ ।**
**ಆಚಕ್ಷ್ವ ನೋ ಯಥಾತತ್ತ್ವಂ ಯೇ ಚ ಪರ್ವತವಾಸಿನಃ ॥ ೧ ॥**

॥ ಸೂತ ಉವಾಚ ॥

**ದಕ್ಷಿಣೇನ ತು ಶ್ವೇತಸ್ಯ ನಿಷಧಸ್ಯೋತ್ತರೇಣ ತು ।**
**ವರ್ಷಂ ರಮಣಕಂ ನಾಮ ಜಾಯನ್ತೇ ತತ್ರ ಮಾನವಾಃ ॥ ೨ ॥**

**ಶುಕ್ಲಾಭಿಜನಸಮ್ಪನ್ನಾಃ ಸರ್ವೇಽತಿಪ್ರಿಯದರ್ಶನಾಃ ।**
**ನಿಸ್ಸಪತ್ನಾಶ್ಚ ತೇ ಸರ್ವೇ ಜಾಯನ್ತೇ ತತ್ರ ಮಾನವಾಃ ॥ ೩ ॥**

---

ಪದ್ಮಪುರಾಣದ ಆದಿಖಂಡದ ಐದನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ಎಲೈ ಸೂತನೇ! ವರ್ಷಗಳು, ಪರ್ವತಗಳು, ಅಲ್ಲಿ ವಾಸಿಸುವವರು, ಇವನ್ನೂ ಮತ್ತು ಇವರ ಹೆಸರನ್ನೂ, ಸರಿಯಾಗಿ ನಮಗೆ ತಿಳಿಸು.

೨. ಸೂತನು ಹೇಳಿದನು: ಶ್ವೇತಪರ್ವತದ ದಕ್ಷಿಣಕ್ಕೆ ನಿಷಧ ಪರ್ವತದ ಉತ್ತರದಲ್ಲಿ ರಮಣಕ ವರ್ಷವಿರುವುದು. ಅಲ್ಲಿ ಮಾನವರು ಹುಟ್ಟುತ್ತಾರೆ.

೩. ಅಲ್ಲಿರುವ ಮನುಷ್ಯರು ಒಳ್ಳೆಯ ವಂಶದಲ್ಲಿ ಉತ್ಪನ್ನರಾಗಿ, ಸುಂದರವಾದ ಆಕೃತಿಯಿಂದ ಕೂಡಿ, ದ್ವೇಷವನ್ನೇ ಕಾಣದೇ, ಬೆಳೆಯುವರು.

ದಶ ವರ್ಷಸಹಸ್ರಾಣಿ ಶತಾನಿ ದಶ ಪಞ್ಚ ಚ ।
ಜೀವನ್ತಿ ತೇ ಮಹಾಭಾಗಾ ನಿತ್ಯಂ ಮುದಿತಮಾನಸಾಃ ॥ ೪ ॥

ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ।
ವರ್ಷಂ ಹಿರಣ್ಮಯಂ ನಾಮ ಯತ್ರ ಹೈರಣ್ವತೀ ನದೀ ॥ ೫ ॥

ಯತ್ರ ಚಾಯಂ ಮಹಾಪ್ರಾಜ್ಞಃ ಪಕ್ಷಿರಾಟ್ಪತಗೋತ್ತಮಃ ।
ಯಕ್ಷಾನುಗಾ ವಿಪ್ರವರಾ ಧನ್ವಿನಃ ಪ್ರಿಯದರ್ಶನಾಃ ॥ ೬ ॥

ಮಹಾಬಲಾಸ್ತತ್ರ ಜನಾ ವಿಪ್ರಾ ಮುದಿತಮಾನಸಾಃ ।
ಏಕಾದಶ ಸಹಸ್ರಾಣಿ ವರ್ಷಾಣಾಂ ತೇ ತಪೋಧನಾಃ ॥ ೭ ॥

ಆಯುಷ್ಪ್ರಮಾಣಂ ಜೀವನ್ತಿ ಶತಾನಿ ದಶ ಪಞ್ಚ ಚ ।
ಶೃಙ್ಗಾಣಿ ಚ ವಿಚಿತ್ರಾಣಿ ತ್ರೀಣ್ಯೇವ ದ್ವಿಜಪುಙ್ಗವಾಃ ॥ ೮ ॥

---

೪. ಯಾವಾಗಲೂ ಸಂತುಷ್ಟಚಿತ್ತರಾದ ಆ ಜನರು ಹನ್ನೊಂದು ಸಾವಿರದ ಐದುನೂರು ವರ್ಷಗಳು ಬದುಕುವರು.

೫. ನೀಲಪರ್ವತದಿಂದ ದಕ್ಷಿಣಕ್ಕೆ ನಿಷಧಪರ್ವತದಿಂದ ಉತ್ತರಕ್ಕೆ ಹಿರಣ್ಮಯವರ್ಷವಿರುವುದು. ಅಲ್ಲೀ ಹೈರಣ್ವತೀ ನದಿಯು ಹರಿಯುವುದು.

೬–೭–೮. ಇದೇ ವರ್ಷದಲ್ಲಿ ಪಕ್ಷಿರಾಜನಾದ ಗರುಡನು ವಾಸಿಸುವನು. ಇಲ್ಲಿಯೇ ಸುಂದರರಾಗಿಯೂ, ಧನುರ್ಧಾರಿಗಳಾಗಿಯೂ, ಯಕ್ಷರೊಂದಿಗೆ ಸಂಚರಿಸುವವರಾಗಿಯೂ ಇರುವ, ಬಹಳ ಬಲಶಾಲಿಗಳೂ ಮತ್ತು ಸಂತುಷ್ಟಚಿತ್ತರೂ ಆದ, ತಪಸ್ವಿ ಜನರು ಇರುತ್ತಾರೆ. ಅವರು ಜೀವಿಸಿರುವ ಕಾಲವು ಹನ್ನೆರಡುಸಾವಿರದ ಐನೂರು ವರ್ಷಗಳು. ಎಲೈ ಬ್ರಾಹ್ಮಣ ಶ್ರೇಷ್ಠರೇ! ಅಲ್ಲಿನ ಶಿಖರಗಳಲ್ಲಿ ಮೂರು ಶಿಖರಗಳು ಮಾತ್ರ ವಿಚಿತ್ರವಾದವು.

**ಏಕಂ ಮಣಿಮಯಂ ತತ್ರ ತಥೈಕಂ ರುಕ್ಮಮದ್ಭುತಮ್ ।**
**ಸರ್ವರತ್ನಮಯಂ ಚೈಕಂ ಭವನೈರುಪಶೋಭಿತಮ್ ॥ ೯ ॥**

**ತತ್ರ ಸ್ವಯಂ ಪ್ರಭಾ ದೇವೀ ನಿತ್ಯಂ ವಸತಿ ಶಣ್ಡಿನೀ ।**
**ಉತ್ತರೇಣ ತು ಶೃಙ್ಗಸ್ಯ ಸಮುದ್ರಾನ್ತೇ ದ್ವಿಜೋತ್ತಮಾಃ ॥೧೦॥**

**ವರ್ಷಮೈರಾವತಂ ನಾಮ ತಸ್ಮಾಚ್ಛೃಙ್ಗವತಃ ಪರಮ್ ।**
**ನ ತು ತತ್ರ ಸೂರ್ಯಗತಿರ್ನಜೀರ್ಯನ್ತಿ ಚ ಮಾನವಾಃ ।**
**ಚನ್ದ್ರಮಾಶ್ಚ ಸನಕ್ಷತ್ರೋ ಜ್ಯೋತಿರ್ಭೂತ ಇವಾವೃತಃ ॥೧೧॥**

**ಪದ್ಮಪ್ರಭಾಃ ಪದ್ಮವರ್ಣಾಃ ಪದ್ಮಪತ್ರನಿಭೇಕ್ಷಣಾಃ ।**
**ಪದ್ಮಪತ್ರಸುಗನ್ಧಾಶ್ಚ ಜಾಯನ್ತೇ ತತ್ರ ಮಾನವಾಃ ॥೧೨॥**

---

೯. ಅವುಗಳಲ್ಲಿ ಒಂದು ಮಣಿಮಯವಾದುದು, ಮತ್ತೊಂದು ಸುವರ್ಣಮಯವಾದುದು, ಅದ್ಭುತವೂ ಆದುದು, ಸರ್ವರತ್ನಗಳಿಂದಲೂ ಕೂಡಿರುವುದು ; ಅಲ್ಲದೇ, ಶ್ರೇಷ್ಠವಾದ ಮನೆಗಳಿಂದ ಶೋಭಿಸುತ್ತಲಿರುವುದು.

೧೦. ಆ ಶೃಂಗದಲ್ಲಿ ಸ್ವಯಂಪ್ರಕಾಶಳಾದ ಶಂಡಿನೀದೇವಿಯು ವಾಸಿಸುವಳು. ಈ ಶೃಂಗದ ಉತ್ತರದಿಕ್ಕಿಗೆ ಸಮುದ್ರಪರ್ಯಂತವಾಗಿ ಐರಾವತವರ್ಷವು ಇರುವುದು.

೧೧. ಈ ಶಿಖರದಿಂದ ಕೂಡಿರುವ ಶೃಂಗವತ್ಪರ್ವತಕ್ಕಿಂತಲೂ ಆಚೆಗೆ ಅಂದರೆ ಐರಾವತವರ್ಷದಲ್ಲಿ ಸೂರ್ಯನ ಗತಿಯಿಲ್ಲ. ಅಲ್ಲಿರುವ ಮಾನವರು ಮುಪ್ಪನ್ನೇ ಕಾಣರು. ಚಂದ್ರನೇ ಆಗಲೀ ನಕ್ಷತ್ರಗಳೇ ಆಗಲೀ ಅಲ್ಲಿ ಪ್ರಕಾಶಿಸುವುದಿಲ್ಲ.

೧೨. ಅಲ್ಲಿರುವ ಜನಗಳು ಪದ್ಮಕಾಂತಿಯಿಂದ ಕೂಡಿರುವರು, ಮೈಬಣ್ಣದಲ್ಲಿ ಪದ್ಮವನ್ನು ಹೋಲುವರು, ಪದ್ಮದ ಎಸಳಿನಂತಿರುವ ಕಣ್ಣುಳ್ಳವರು, ಪದ್ಮಸುಗಂಧದಿಂದ ಕೂಡಿರುವ ದೇಹವನ್ನು ಹೊಂದಿರುವರು.

ಅನಿಷ್ಪನ್ನಾ ನಷ್ಟಗನ್ಧಾ ನಿರಾಹಾರಾ ಜಿತೇನ್ದ್ರಿಯಾಃ ।
ದೇವಲೋಕಚ್ಯುತಾಃ ಸರ್ವೇ ತಥಾ ವಿರಜಸೋ ದ್ವಿಜಾಃ ॥೧೩॥
ತ್ರಯೋದಶಸಹಸ್ರಾಣಿ ವರ್ಷಾಣಾಂ ತೇ ದ್ವಿಜೋತ್ತಮಾಃ ।
ಆಯುಷ್ಪ್ರಮಾಣಂ ಜೀವನ್ತಿ ನರಾ ಧಾರ್ಮಿಕಪುಙ್ಗವಾಃ ॥೧೪॥
ಕ್ಷೀರೋದಸ್ಯ ಸಮುದ್ರಸ್ಯ ತಥೈವೋತ್ತರತಃ ಪ್ರಭುಃ ।
ಹರಿರ್ವಸತಿ ವೈಕುಣ್ಠಃ ಶಕಟೇ ಕನಕಾಮಯೇ ॥೧೫॥
ಅಷ್ಟಚಕ್ರಂ ಹಿ ತದ್ಯಾನಂ ಭೂತಯುಕ್ತಂ ಮನೋಜವಮ್ ।
ಅಗ್ನಿವರ್ಣಂ ಮಹಾತೇಜೋ ಜಾಮ್ಬೂನದವಿಭೂಷಿತಮ್ ॥೧೬॥
ಸ ಪ್ರಭುಃ ಸರ್ವಭೂತಾನಾಂ ವಿಭುಶ್ಚ ದ್ವಿಜಸತ್ತಮಾಃ ।
ಸಂಕ್ಷೇಪೋ ವಿಸ್ತರಶ್ಚೈವ ಕರ್ತಾ ಕಾರಯಿತಾ ತಥಾ ॥೧೭॥

---

೧೩. ಅವರು ಗರ್ಭವಾಸದ ದುಃಖವನ್ನೇ ಅರಿಯರು, ದುರ್ಗಂಧ ಶೂನ್ಯರು, ಆಹಾರವನ್ನು ಮುಟ್ಟುವವರೇ ಅಲ್ಲ, ಇಂದ್ರಿಯಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುವರು, ದೇವಲೋಕದಲ್ಲಿ ಪುಣ್ಯವನ್ನನುಭವಿಸಿ ಉಳಿದ ಪುಣ್ಯವನ್ನು ಅನುಭವಿಸುವುದಕ್ಕೆ ಇಲ್ಲಿಗೆ ಬಂದಿರುವರು, ಪಾಪ ಗಂಧವೂ ಅವರಿಗಿಲ್ಲ, ಅವರೆಲ್ಲರೂ ದ್ವಿಜರು.

೧೪. ಧಾರ್ಮಿಕರಾದ ಆ ಪುರುಷಶ್ರೇಷ್ಠರು ಹದಿಮೂರುಸಾವಿರ ವರ್ಷಗಳು ಬದುಕುವರು.

೧೫. ಕ್ಷೀರಸಮುದ್ರಕ್ಕೆ ಉತ್ತರದಲ್ಲಿ ಸರ್ವಜಗತ್ಪ್ರಭುವಾದ ಶ್ರೀಹರಿಯು ವಾಸಮಾಡುವ ವೈಕುಂಠವಿರುವುದು. ಅಲ್ಲಿ ಅವನು ಚಿನ್ನದ ರಥದಲ್ಲಿರುವನು.

೧೬. ಆ ರಥಕ್ಕೆ ಎಂಟು ಚಕ್ರಗಳಿರುವುವು. ಸರ್ವಪ್ರಾಣಿಗಳೂ ಅದರಲ್ಲಿರುವುವು. ಅದು ಮನೋವೇಗದಿಂದ ಚಲಿಸುವುದು ; ಅಗ್ನಿ ಯಂತೆ ಪ್ರಕಾಶಿಸುವುದು ; ಚಿನ್ನದಿಂದ ಅಲಂಕರಿಸಲ್ಪಟ್ಟಿರುವುದು.

೧೭. ಎಲೈ ಬ್ರಾಹ್ಮಣಶ್ರೇಷ್ಠರೇ, ಆ ವಿಷ್ಣುವು ಸರ್ವಪ್ರಾಣಿಗಳಿಗೂ ಒಡೆಯನು, ಸರ್ವ ವ್ಯಾಪಿಯು, ಅಣುವು, ಮಹತ್ತರದವನು, ಮಾಡು ವವನು ಮತ್ತು ಮಾಡಿಸುವವನೂ ಸಹ ಆಗಿದ್ದಾನೆ.

**ಪೃಥಿವ್ಯಾಪಸ್ತಥಾಕಾಶಂ ವಾಯುಸ್ತೇಜಶ್ಚ ಸತ್ತಮಾಃ ।**
**ಸ ಯಜ್ಞಃ ಸರ್ವಭೂತಾನಾಮಾಸ್ಯಂ ತಸ್ಯ ಹುತಾಶನಃ ॥೧೮॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಪಞ್ಚಮೋಽಧ್ಯಾಯಃ**

---

೧೮. ಎಲೈ ಸತ್ಪುರುಷರೇ! ಪೃಥಿವೀ, ಜಲ, ತೇಜಸ್ಸು, ಆಕಾಶ, ವಾಯು, ಇವೆಲ್ಲಾ ಅವನೇ; ಸರ್ವಪ್ರಾಣಿಗಳಿಗೂ ಪೂಜ್ಯನೂ ಅವನೆ, ಅವನ ಮುಖವೇ ಅಗ್ನಿಯು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಷಷ್ಠೋಽಧ್ಯಾಯಃ

॥ ಋಷಯ ಊಚುಃ ॥

ಯದಿದಂ ಭಾರತಂ ವರ್ಷಂ ಪುಣ್ಯಂ ಪುಣ್ಯವಿಧಾಯಕಮ್ ।
ತತ್ಸರ್ವಂ ನಃ ಸಮಾಚಕ್ಷ್ವ ತ್ವಂ ಹಿ ನೋ ಬುದ್ಧಿಮಾನ್ಮತಃ ॥ ೧ ॥
ಅತ್ರ ತೇ ಕೀರ್ತಯಿಷ್ಯಾಮಿ ವರ್ಷಂ ಭಾರತಮುತ್ತಮಮ್ ।
ಪ್ರಿಯಮಿತ್ರಸ್ಯ ದೇವಸ್ಯ ಮನೋರ್ವೈವಸ್ವತಸ್ಯ ಚ ॥ ೨ ॥
ಪೃಥೋಶ್ಚ ಪ್ರಾಜ್ಞವೈಣ್ಯಸ್ಯ ತಥೇಕ್ಷ್ವಾಕೋರ್ಮಹಾತ್ಮನಃ ।
ಯಯಾತೇರಮ್ಬರೀಷಸ್ಯ ಮಾನ್ಧಾತುರ್ನಹುಷಸ್ಯ ಚ ॥ ೩ ॥

---

### ಪದ್ಮಪುರಾಣದ ಆದಿಖಂಡದ ಆರನೆಯ ಅಧ್ಯಾಯವು

೧. ಋಷಿಗಳು ಹೇಳಿದರು: ಎಲೈ ಸೂತನೇ! ಭಾರತವರ್ಷವು ಪುಣ್ಯತಮವಾಗಿಯೂ, ಪುಣ್ಯವನ್ನು ಕೊಡತಕ್ಕುದಾಗಿಯೂ ಇರುವುದು. ಆದುದರಿಂದ ಬುದ್ಧಿಶಾಲಿಯಾದ ನೀನು ಅದರ ಸ್ವರೂಪವೆಲ್ಲವನ್ನೂ ತಿಳಿಸು.

೨. ಸೂತನು ಹೇಳಿದನು: ಎಲೈ ಮುನಿಗಳೇ! ಆ ಭಾರತವರ್ಷವನ್ನು ಈಗ ಹೇಳುವೆನು. ಪ್ರಿಯಮಿತ್ರನಿಗೂ, ವೈವಸ್ವತ ಮನುವಿಗೂ ಈ ಭಾರತವರ್ಷವು ಪ್ರಿಯವಾದುದು.

೩. ವೇನನ ಮಗನಾದ ಪೃಥುಚಕ್ರವರ್ತಿಗೂ, ಇಕ್ಷ್ವಾಕುವಿಗೂ, ಯಯಾತಿಗೂ, ಅಂಬರೀಷನಿಗೂ, ಮಾಂಧಾತೃಚಕ್ರವರ್ತಿಗೂ, ನಹುಷನಿಗೂ, ಇದು ಪ್ರಿಯವಾದುದು.

ತಥೈವ ಮುಚುಕುನ್ದಸ್ಯ ಕುಬೇರೋಶೀನರಸ್ಯ ಚ ।
ಋಷಭಸ್ಯ ತಥೈಲಸ್ಯ ನೃಗಸ್ಯ ನೃಪತೇಸ್ತಥಾ ॥ ೪ ॥

ಕುಶಿಕಸ್ಯೈವ ರಾಜರ್ಷೇರ್ಗಾಥೇಶ್ಚೈವ ಮಹಾತ್ಮನಃ ।
ಸೋಮಸ್ಯ ಚೈವ ರಾಜರ್ಷೇರ್ದಿಲೀಪಸ್ಯ ತಥೈವ ಚ ॥ ೫ ॥

ಅನ್ಯೇಷಾಂ ಚ ಮಹಾಭಾಗಾಃ ಕ್ಷತ್ರಿಯಾಣಾಂ ಬಲೀಯಸಾಮ್ ।
ಸರ್ವೇಷಾಮೇವ ಭೂತಾನಾಂ ಪ್ರಿಯಂ ಭಾರತಮುತ್ತಮಮ್ ॥

ತತೋ ವರ್ಷಂ ಪ್ರವಕ್ಷ್ಯಾಮಿ ಯಥಾಶ್ರುತಮಹೋ ದ್ವಿಜಾಃ ।
ಮಹೇನ್ದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷವಾನಪಿ ॥ ೭ ॥

ವಿನ್ಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ।
ತೇಷಾಂ ಸಹಸ್ರಶೋ ವಿಪ್ರಾಃ ಪರ್ವತಾಸ್ತೇ ಸಮೀಪತಃ ॥ ೮ ॥

ಅವಿಜ್ಞಾತಾಃ ಸಾರವನ್ತೋ ವಿಪುಲಾಶ್ಚಿತ್ರಸಾನವಃ ।
ಅನ್ಯೇ ತು ಯೇ ಪರಿಜ್ಞಾತಾ ಹ್ರಸ್ವಾಹ್ರಸ್ವೋಪಜೀವಿನಃ ॥ ೯ ॥

---

೪—೬. ಹಾಗೆಯೇ ಮುಚುಕುಂದನಿಗೂ, ಕುಬೇರನಿಗೂ, ಉಶೀನರನಿಗೂ, ಋಷಭನಿಗೂ, ಪುರೂರವಸ್ಸಿಗೂ, ನೃಗನಿಗೂ, ರಾಜರ್ಷಿಯಾದ ಕುಶಿಕನಿಗೂ, ಮಹಾತ್ಮನಾದ ಗಾಧಿಗೂ, ಸೋಮನಿಗೂ, ದಿಲೀಪನಿಗೂ ಇನ್ನೂ ಬಲಿಷ್ಠರಾದ ಅನೇಕ ಕ್ಷತ್ರಿಯರಿಗೂ ಮತ್ತು ಎಲ್ಲಾ ಪ್ರಾಣಿಗಳಿಗೂ ಉತ್ತಮವಾದ ಭಾರತಭೂಮಿಯು ಪ್ರಿಯವಾದುದು.

೭—೮. ಇನ್ನು ಮುಂದೆ ನೀನು ಕೇಳಿದ ಹಾಗೆ ವರ್ಷವನ್ನು ತಿಳಿಸುವೆನು. ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ, ಪಾರಿಯಾತ್ರ, ಈ ಏಳು ಪರ್ವತಗಳು "ಸಪ್ತಕುಲಾಚಲ" ಗಳೆಂದು ಪ್ರಸಿದ್ಧವಾಗಿರುವುವು. ಈ ಪರ್ವಗಳ ಸಮೀಪದಲ್ಲಿ ಇವುಗಳಲ್ಲದೇ ಸಾವಿರಾರು ಪರ್ವತಗಳಿರುವುವು.

೯. ಅವೆಲ್ಲವನ್ನು ತಿಳಿಯುವುದು ಕಷ್ಟಸಾಧ್ಯವು. ಅವುಗಳೂ ಸಹ ಗಟ್ಟಿಯಾಗಿಯೂ, ದೊಡ್ಡವಾಗಿಯೂ, ಬಗೆಬಗೆಯಾದ ತಪ್ಪಲುಗಳಿಂದ ಕೂಡಿಯೂ, ಬಹು ವಿಸ್ತಾರವಾಗಿಯೂ ಇರುವುವು; ಮತ್ತೆ ಕೆಲವು ಸಣ್ಣವಾಗಿರುವುವು. ಇವುಗಳ ಸಮೀಪದಲ್ಲಿ ಇನ್ನೂ ಸಣ್ಣ ಬೆಟ್ಟಗಳು ಕಂಡುಬರುವುವು.

ಆರ್ಯಾಮ್ಲೇಚ್ಛಾಶ್ಚ ಧರ್ಮಜ್ಞಾಸ್ತೇ ಮಿಶ್ರಾಃ ಪುರುಷಾ ದ್ವಿಜಾಃ।
ನದೀಂ ಪಿಬನ್ತಿ ವಿಪುಲಾಂ ಗಙ್ಗಾಂ ಸಿನ್ಧುಂ ಸರಸ್ವತೀಮ್ ॥೧೦॥
ಗೋದಾವರೀಂ ನರ್ಮದಾಂ ಚ ಬಹುದಾಂ ಚ ಮಹಾನದೀಮ್ ।
ಶತದ್ರುಂ ಚನ್ದ್ರಭಾಗಾಂ ಚ ಯಮುನಾಂ ಚ ಮಹಾನದೀಮ್ ॥
ದೃಷದ್ವತೀಂ ವಿಪಾಶಾಂ ಚ ವಿಪಾಶಾಂ ಸ್ವಚ್ಛವಾಲುಕಾಮ್ ।
ನದೀಂ ವೇತ್ರವತೀಂ ಚೈವ ಕೃಷ್ಣಾಂ ವೇಣೀಂ ಚ ನಿಮ್ನಗಾಮ್ ॥
ಇರಾವತೀಂ ವಿತಸ್ತಾಂ ಚ ಪಯೋಷ್ಣೀಂ ದೇವಿಕಾಮಪಿ ।
ವೇದಸ್ಮೃತಿಂ ವೇದಶಿರಾಂ ತ್ರಿದಿವಾಂ ಸಿನ್ಧುಲಾಕೃಮಿಮ್ ॥೧೪॥
ಕರೀಷಿಣೀಂ ಚಿತ್ರವಹಾಂ ತ್ರಿಸೇನಾಂ ಚೈವ ನಿಮ್ನಗಾಮ್ ।
ಗೋಮತೀಂ ಧೂತಪಾಪಾಂ ಚ ಚನ್ದನಾಂ ಚ ಮಹಾನದೀಮ್ ॥
ಕೌಶಿಕೀಂ ತ್ರಿದಿವಾಂ ಹೃದ್ಯಾಂ ನಾಚಿತಾಂ ರೋಹಿತಾರಣೀಮ್ ।
ರಹಸ್ಯಾಂ ಶತಕುಮ್ಭಾಂ ಚ ಶರಯೂಂ ಚ ದ್ವಿಜೋತ್ತಮಾಃ ॥೧೫॥

---

೧೦–೨೭. ಧರ್ಮಜ್ಞರಾದ ಆರ್ಯರೂ ಮ್ಲೇಚ್ಛರೂ ಕೂಡಿ, ಗಂಗಾ, ಸಿಂಧೂ, ಯಮುನಾ, ಸರಸ್ವತೀ, ಈ ನದಿಗಳ ತೀರವನ್ನು ಆಶ್ರಯಿಸುವರು. ಮತ್ತು ಪಾಪವನ್ನು ಪರಿಹರಿಸುವ ದೃಷದ್ವತೀ, ವಿಪಾಶಾ, ಸ್ವಚ್ಛವಾಲುಕಾ, ವೇತ್ರವತೀ, ಕೃಷ್ಣಾ, ವೇಣೀ, ಇವುಗಳ ತಟವೂ ಇವರಿಗೆ ವಾಸಸ್ಥಾನವು. ಹಾಗೆಯೇ ಇರಾವತೀ, ವಿತಸ್ತಾ, ಪಯೋಷ್ಣೀ, ದೇವಿಕಾ, ವೇದಸ್ಮೃತಿ, ವೇದಶಿರಸ್, ತ್ರಿದಿವಾ, ಸಿಂಧುಲಾಕೃತಿ, ಇವುಗಳೂ ಕೂಡ ಆ ಮ್ಲೇಚ್ಛ ಆರ್ಯರಿಗೆ ಆಶ್ರಯಗಳು. ಕರೀಷಿಣೀ, ಚಿತ್ರವಹಾ, ತ್ರಿಸೇನಾ, ಗೋಮತೀ, ಧೂತಪಾಪಾ, ಚಂದನಾ ಕೌಶಿಕೀ, ತ್ರಿದಿವಾ, ನಾಚಿತಾ, ರೋಹಿತಾರಣೀ, ರಹಸ್ಯಾ, ಶತಕುಂಭಾ, ಶರಯೂ, ಚರ್ಮಣ್ವತೀ, ವೇತ್ರಪತೀ, ಹಸ್ತಿಸೇನಾ, ದಿಶಾ, ಶರಾವತೀ, ಪಯೋಷ್ಣೀ, ಭೀಮಾ, ಭೀಮರಥೀ, ಕಾವೇರೀ, ವಾಲುಕಾ, ವಾಪೀ, ಶತಮಲೀ, ನೀವಾರಾ, ಮಹಿತಾ, ಸುಪ್ರಯೋಗಾ, ಪವಿತ್ರಾ, ಕೃಷ್ಣಲಾ,

**ಚರ್ಮಣ್ವತೀಂ ವೇತ್ರವತೀಂ ಹಸ್ತಿಸೋಮಾಂ ದಿಶಂ ತಥಾ ।**
**ಶರಾವತೀಂ ಪಯೋಷ್ಣೀಂ ಚ ಭೀಮಾಂ ಭೀಮರಥೀಮಪಿ ॥೧೬॥**

**ಕಾವೇರೀಂ ವಾಲುಕಾಂ ಚಾಪಿ ವಾಪೀಂ ಶತಮಲೀಮಪಿ ।**
**ನೀವಾರಾಂ ಮಹಿತಾಂ ಚಾಪಿ ಸುಪ್ರಯೋಗಾಂ ತಥಾ ನದೀಮ್ ॥**

**ಪವಿತ್ರಾಂ ಕೃಷ್ಣಲಾಂ ಸಿಂಧುಂ ವಾಜಿನೀಂ ಪುರುಮಾಲಿನೀಮ್ ।**
**ಪೂರ್ವಾಭಿರಾಮಾಂ ವೀರಾಂ ಚ ಭೀಮಾಂ ಮಾಲಾವತೀಂ ತಥಾ ॥**

**ಪಲಾಶಿನೀಂ ಪಾಪಹರಾಂ ಮಹೇನ್ದ್ರಾಂ ಪಾಟಲಾವತೀಮ್ ।**
**ಕರೀಷಿಣೀಮಸಿಕ್ನೀಂ ಚ ಕುಶವೀರಾಂ ಮಹಾನದೀಮ್ ॥೧೯॥**

**ಮರುತ್ವಾಂ ಪ್ರವರಾಂ ಮೇನಾಂ ಹೋರಾಂ ಘೃತವತೀಂ ತಥಾ ।**
**ಅನಾಕತೀಮನುಷ್ಣೀಂ ಚ ಸೇವ್ಯಾಂ ಕಾಪೀಂ ಚ ಸತ್ತಮಾಃ ॥೨೦॥**

**ಸದಾವೀರಾಮಧೃಷ್ಯಾಂ ಚ ಕುಶಚೀರಾಂ ಮಹಾನದೀಮ್ ।**
**ರಥಚಿತ್ರಾಂ ಜ್ಯೋತಿರಥಾಂ ವಿಶ್ವಾಮಿತ್ರಾಂ ಕಪಿಞ್ಜಲಾಮ್ ॥**

**ಉಪೇನ್ದ್ರಾಂ ಬಹುಲಾಂ ಚೈವ ಕುವೀರಾಮಮ್ಬುವಾಹಿನೀಮ್ ।**
**ವೈನನ್ದೀಂ ಪಿಞ್ಜಲಾಂ ವೇಣಾಂ ತುಙ್ಗವೇಗಾಂ ಮಹಾನದೀಮ್ ॥**

**ವಿದಿಶಾಂ ಕೃಷ್ಣವೇಗಾಂ ಚ ತಾಮ್ರಾಂ ಚ ಕಪಿಲಾಮಪಿ ।**
**ಧೇನುಂ ಸಕಾಮಾಂ ವೇದಸ್ವಾಂ ಹವಿಃಸ್ರಾವಾಂ ಮಹಾಪಥಾಮ್ ॥**

---

ಸಿಂಧುವಾಜಿನೀ, ಪುರುಮಾಲಿನೀ, ಪೂರ್ವಾಭಿರಾಮಾ, ವೀರಾ, ಭೀಮಾ, ಮಾಲಾವತೀ, ಪಲಾಶಿನೀ, ಪಾಪಹರಾ, ಮಹೇಂದ್ರಾ, ಪಾಟಲಾವತೀ, ಕರೀಷಿಣೀ, ಅಸಿಕ್ನೀ, ಕುಶವೀರಾ, ಮರುತ್ವಾ, ಪ್ರವರಾ, ಮೇನಾ, ಹೋರಾ, ಘೃತವತ್, ಅನಾಕತೀ, ಅನುಷ್ಣೀ, ಸೇವ್ಯಾ, ಕಾರೀ, ಸದಾವೀರಾ, ಅಧೃಷ್ಯಾ, ಕುಶಚೀರಾ, ರಥಚಿತ್ರಾ, ಜ್ಯೋತಿರಥಾ, ವಿಶ್ವಾಮಿತ್ರಾ, ಕಪಿಂಜಲಾ, ಉಪೇಂದ್ರಾ, ಬಹುಲಾ, ಕುವೀರಾ, ಅಂಬುವಾಹಿನೀ, ವೈನಂದೀ, ಪಿಂಜಲಾ, ವೇಣಾ, ತುಂಗವೇಗಾ, ವಿದಿಶಾ, ಕೃಷ್ಣವೇಗಾ, ತಾಮ್ರಾ, ಕಪಿಲಾ, ಧೇನು, ಸಕಾಮಾ, ವೇದಸ್ವಾ, ಹವಿಃಸ್ರಾವಾ, ಮಹಾಪಥಾ, ಶಿಪ್ರಾ, ಪಿಚ್ಛಲಾ, ಭಾರದ್ವಾಜೀ, ಕೌಶಿಕೀ, ಶೋಣಾ, ಬಹುಧಾ, ಚಂದ್ರಮಾ, ದುರ್ಗಾ,

**ಶಿಪ್ರಾಂ ಚ ಪಿಚ್ಛಲಾಂ ಚೈವ ಭಾರದ್ವಾಜೀಂ ಚ ನಿಮ್ನಗಾಮ್ ।**
**ಕೌಶಿಕೀಂ ನಿಮ್ನಗಾಂ ಶೋಣಾಂ ಬಾಹುದಾಮಥ ಚನ್ದ್ರಮಾಮ್**
**ದುರ್ಗಾಮನ್ತಃಶಿಲಾಂ ಚೈವ ಬ್ರಹ್ಮಮೇಧ್ಯಾಂ ದೃಷದ್ವತೀಮ್ ।**
**ಪರೋಕ್ಷಾಮಥ ರೋಹೀಂ ಚ ತಥಾ ಜಮ್ಬೂನದೀಮಪಿ ॥೨೫॥**
**ಸುನಾಸಾಂ ತಪಸಾಂ ದಾಸೀಂ ಸಾಮಾನ್ಯಾಂ ವರುಣಾಮಸೀಮ್ ।**
**ನೀಲಾಂ ಧೃತಿಕರೀಂ ಚೈವ ಪರ್ಣಾಶಾಂ ಚ ಮಹಾನದೀಮ್ ॥೨೬॥**
**ಮಾನವೀಂ ವೃಷಭಾಂ ಭಾಷಾಂ ಬ್ರಹ್ಮಮೇಧ್ಯಾಂ ದೃಷದ್ವತೀಮ್ ।**
**ಏತಾಶ್ಚಾನ್ಯಾಶ್ಚ ಬಹವೋ ಮಹಾನದ್ಯೋ ದ್ವಿಜರ್ಷಭಾಃ ॥೨೭॥**
**ಸದಾ ನಿರಾಮಯಾಂ ಕೃಷ್ಣಾಂ ಮನ್ದಗಾಂ ಮನ್ದವಾಹಿನೀಮ್ ।**
**ಬ್ರಾಹ್ಮಣೀಂ ಚ ಮಹಾಗೌರೀಂ ದುರ್ಗಾಮಪಿ ಚ ಸತ್ತಮಾಃ ॥೨೮॥**
**ಚಿತ್ರೋತ್ಪಲಾಂ ಚಿತ್ರರಥಾಂ ಮಞ್ಜುಲಾಂ ರೋಹಿಣೀಂ ತಥಾ ।**
**ಮನ್ದಾಕಿನೀಂ ವೈತರಣೀಂ ಕೋಕಾಂ ಚಾಪಿ ಮಹಾನದೀಮ್॥೨೯॥**
**ಶುಕ್ತಿಮತೀಮನಙ್ಗಾಂ ಚ ತಥೈವ ವೃಷಸಾಹ್ವಯಾಮ್ ।**
**ಲೌಹಿತ್ಯಾಂ ಕರತೋಯಾಂ ಚ ತಥೈವ ವೃಷಕಾಹ್ವಯಾಮ್ ॥೩೦॥**

---

ಅಂತಃಶಿಲಾ, ಬ್ರಹ್ಮಮೇಧ್ಯಾ, ದೃಷದ್ವತ್, ಪರೋಕ್ಷಾ, ರೋಹೀ, ಜಂಬೂನದೀ, ಸುನಾಸಾ, ತಪಸಾ, ದಾಸೀ, ಸಾಮಾನ್ಯಾ, ವರುಣಾ, ಅಸೀ, ನೀಲಾ, ಧೃತಿಕರೀ, ಪರ್ಣಾಶಾ, ಮಾನವೀ, ವೃಷಭಾ, ಬ್ರಹ್ಮಮೇಧ್ಯಾ, ವೃಷದ್ವತೀ, ಈ ಪೂರ್ವೋಕ್ತವಾದ ನದಿಗಳು ಮಹಾನದಿಗಳು. ಇವುಗಳಲ್ಲದೇ ಬೇರೆ ಮಹಾನದಿಗಳೂ ಪ್ರಸಿದ್ಧವಾಗಿರುವುವು.

೨೮–೩೧. ಅಲ್ಲದೇ ಸದಾನಿರಾಮಯಾ, ಕೃಷ್ಣಾ, ಮಂದಗಾ, ಮಂದವಾಹಿನೀ, ಬ್ರಾಹ್ಮಣೀ, ಮಹಾಗೌರೀ, ದುರ್ಗಾ, ಚಿತ್ರೋತ್ಪಲಾ, ಚಿತ್ರರಥಾ, ಮಂಜುಲಾ, ರೋಹಿಣೀ, ಮಂದಾಕಿನೀ, ವೈತರಣೀ, ಕೋಕಾ, ಶುಕ್ತಿಮತೀ, ಅನಂಗಾ, ವೃಷಸಾಹ್ವಯಾ, ಲೌಹಿತ್ಯಾ, ಕರತೋಯಾ, ವೃಷಕಾಹ್ವಯಾ, ಕುಮಾರೀ, ಋಷಿಕುಲ್ಯಾ, ಮಾರಿಷಾ,

**ಕುಮಾರೀಮೃಷಿಕುಲ್ಯಾಂ ಚ ಮಾರಿಷಾಂ ಚ ಸರಸ್ವತೀಮ್ ।**
**ಮನ್ದಾಕಿನೀಂ ಸುಪುಣ್ಯಾಂ ಚ ಸರ್ವಾಂ ಗಙ್ಗಾಂ ಚ ಸತ್ತಮಾಃ ॥**
**ವಿಶ್ವಸ್ಯ ಮಾತರಃ ಸರ್ವಾಃ ಸರ್ವಾಶ್ಚೈವ ಮಹಾಫಲಾಃ ।**
**ತಥಾ ನದ್ಯಃ ಸ್ವಪ್ರಕಾಶಾಃ ಶತಶೋಽಥ ಸಹಸ್ರಶಃ ॥೩೨॥**
**ಇತ್ಯೇತಾಃ ಸರಿತೋ ವಿಪ್ರಾಃ ಸಮಾಖ್ಯಾತಾ ಯಥಾಸ್ಮೃತಿ ।**
**ಅತ ಊರ್ಧ್ವಂ ಜನಪದಾನ್ನಿಬೋಧ ಗದತೋ ಮಮ ॥೩೩॥**
**ತತ್ರೇಮೇ ಕುರುಪಾಞ್ಚಾಲಾಃ ಶಾಲ್ವಮಾತ್ರೇಯಜಾಙ್ಗಲಾಃ ।**
**ಶೂರಸೇನಾಃ ಪುಲಿನ್ದಾಶ್ಚ ಬೌಧಾ ಮಾಲಾಸ್ತಥೈವ ಚ ॥೩೪॥**
**ಮತ್ಸ್ಯಾಃ ಕುಶಟ್ಟಾಃ ಸೌಗನ್ಧ್ಯಾಃ ಕುನ್ತಯಃ ಕಾಶಿಕೋಶಲಾಃ ।**
**ಚೇದಿಮತ್ಸ್ಯಕರೂಷಾಶ್ಚ ಭೋಜಾಃ ಸಿನ್ಧುಪುಲಿನ್ದಕಾಃ ॥೩೫॥**
**ಉತ್ತಮಾಶ್ಚ ದಶಾರ್ಣಾಶ್ಚ ಮೇಕಲಾಶ್ಚೋತ್ಕಲೈಃ ಸಹ ।**
**ಪಞ್ಚಾಲಾಃ ಕೋಶಲಾಶ್ಚೈವ ನೈಕಪೃಷ್ಠಯುಗನ್ಧರಾಃ ॥೩೬॥**
**ಬೋಧಾ ಮದ್ರಾಃ ಕಲಿಙ್ಗಾಶ್ಚ ಕಾಶಯೋಽಪರಕಾಶಯಃ ।**
**ಜಠರಾಃ ಕುಕುರಾಶ್ಚೈವ ಸದಶಾರ್ಣಾಃ ಸುಸತ್ತಮಾಃ ॥೩೭॥**

---

ಸರಸ್ವತೀ, ಸುಪುಣ್ಯಾ, ಮಂದಾಕಿನೀ, ಸರ್ವಗಂಗಾ ಈ ನದಿಗಳ ನೀರನ್ನು ಕುಡಿಯುತ್ತಾ ಆ ಆರ್ಯಮ್ಲೇಚ್ಛರು ಅವುಗಳ ದಡದಲ್ಲಿಯೇ ಇರುವರು.

೩೨–೩೩. ಈ ನದಿಗಳೆಲ್ಲಾ ತಾಯಿಯಂತೆ ಪ್ರಪಂಚಕ್ಕೆ ಹಿತಕಾರಿಣಿಗಳು, ಅಪರಿಮಿತವಾದ ಫಲಗಳನ್ನು ಕೊಡುವುವು, ಇವುಗಳೊಂದೂ ಕೃತ್ರಿಮಗಳಲ್ಲ, ತಾವಾಗಿಯೇ ಹುಟ್ಟಿದುವು. ಇಂತಹವು ಇನ್ನೂ ಸಾವಿರಾರು ಇವೆ. ನನ್ನ ಸ್ಮೃತಿಗೆ ಗೋಚರವಾದ ನದಿಗಳನ್ನು ಮಾತ್ರ ಹೇಳಿರುವೆನು. ಇನ್ನು ಮುಂದೆ ದೇಶಗಳನ್ನು ಹೇಳುವೆನು, ಕೇಳಿರಿ.

೩೪–೪೪. ದೇಶಗಳು: ಕುರು, ಪಾಂಚಾಲ, ಶಾಲ್ವ, ಮಾತ್ರೇಯ, ಜಾಂಗಲ, ಶೂರಸೇನ, ಪುಲಿಂದ, ಬೌಧ, ಮಾಲ, ಮತ್ಸ್ಯ, ಕುಶಟ್ಟ, ಸೌಗಂಧ್ಯ, ಕುಂತಿ, ಕಾಶಿ, ಕೋಶಲ, ಚೇದಿ, ಮತ್ಸ್ಯ, ಕರೂಷ, ಭೋಜ, ಸಿಂಧು, ಪುಲಿಂದ, ಉತ್ತಮ, ದಶಾರ್ಣ, ಮೇಕಲ, ಉತ್ಕಲ,

ಕುನ್ತಯೋಽವನ್ತಯಶ್ಚೈವ ತಥೈವಾಪರಕುನ್ತಯಃ ।
ಗೋಮನ್ತಾ ಮಲ್ಲಕಾಃ ಪುಣ್ಡ್ರಾ ವಿದರ್ಭಾ ನೃಪವಾಹಿಕಾಃ ॥೩೮॥
ಅಶ್ಮಕಾಃ ಸೋತ್ತರಾಶ್ಚೈವ ಗೋಪರಾಷ್ಟ್ರಾಃ ಕನೀಯಸಃ ।
ಅಧಿರಾಜ್ಯಕುಶಟ್ಟಾಶ್ಚ ಮಲ್ಲರಾಷ್ಟ್ರಶ್ಚ ಕೇರಲಾಃ ॥೩೯॥
ಮಾಲವಾಶ್ಚೋಪವಾಸ್ಯಾಶ್ಚ ವಕ್ರಾವಕ್ರತಪಾಃ ಶಕಾಃ ।
ವಿದೇಹಾ ಮಾಗಧಾಃ ಸದ್ಮಾ ಮಲಜಾ ವಿಜಯಾಸ್ತಥಾ ॥೪೦॥
ಅಙ್ಗಾ ವಙ್ಗಾಃ ಕಲಿಙ್ಗಾಶ್ಚ ಯಕೃಲ್ಲೋಮಾನ ಏವ ಚ ।
ಮಲ್ಲಾಃ ಸುದೇಷ್ಣಾಃ ಪ್ರಹ್ಲಾದಾ ಮಹಿಷಾಃ ಶಶಕಾಸ್ತಥಾ ॥೪೧॥
ಬಾಹ್ಲಿಕಾ ವಾಟಧಾನಾಶ್ಚ ಆಭೀರಾಃ ಕಾಲತೋಯಕಾಃ ।
ಅಪರಾನ್ತಾಃ ಪರಾನ್ತಾಶ್ಚ ಪಂಕ್ಲಾಶ್ಚರ್ಮಚಣ್ಡಕಾಃ ॥೪೨॥
ಅಟವೀಶೇಖರಾಶ್ಚೈವ ಮೇರುಭೂತಾಶ್ಚ ಸತ್ತಮಾಃ ।
ಉಪಾವೃತಾನುಪಾವೃತ್ತಾಃ ಸುರಾಷ್ಟ್ರಾಃ ಕೇಕಯಾಸ್ತಥಾ ॥೪೩॥
ಕುಟ್ಟಾಪರಾನ್ತಾ ಮಾಹೇಯಾಃ ಕಕ್ಷಾಃ ಸಾಮುದ್ರನಿಷ್ಕುಟಾಃ ।
ಅನ್ಧ್ರಾಶ್ಚ ಬಹವೋ ವಿಪ್ರಾ ಅನ್ತರ್ಗಿರ್ಯರ್ಸ್ತಥೈವ ಚ ॥೪೪॥

---

ಪಂಚಾಲ, ಕೋಶಲ, ನೈಕಪೃಷ್ಠ, ಯುಗಂಧರ, ಬೋಧ, ಮದ್ರ, ಕಳಿಂಗ, ಕಾಶೀ, ಅಪರಕಾಶೀ, ಜಠರ, ಕುಕುರ, ಸದಶಾರ್ಣ, ಕುಂತೀ, ಅವಂತೀ, ಅಪರಕುಂತೀ, ಗೋಮಂತ, ಮಲ್ಲಕ, ಪುಂಡ್ರ, ವಿದರ್ಭ, ನೃಪವಾಹಿಕ, ಅಶ್ಮಕ, ಉತ್ತರಾಶ್ಮಕ, ಗೋಪರಾಷ್ಟ್ರ, ಕನೀಯಗೋಪರಾಷ್ಟ್ರ, ಅಧಿರಾಜ್ಯ, ಕುಶಟ್ಟ, ಮಲ್ಲರಾಷ್ಟ್ರ, ಕೇರಳ, ಮಾಲವ, ಉಪವಾಸ್ಯ, ವಕ್ರಾತಪ, ಅವಕ್ರಾತಪ, ಶಕ, ವಿದೇಹ, ಮಾಗಧ, ಸದ್ಮ, ಮಲಜ, ವಿಜಯ, ಅಂಗ, ವಂಗ, ಕಳಿಂಗ, ಯಕೃಲ್ಲೋಮ, ಮಲ್ಲ, ಸುದೇಷ್ಣ, ಪ್ರಹ್ಲಾದ, ಮಹಿಷ, ಶಶಕ, ಬಾಹ್ಲಿಕ, ವಾಟಧಾನ, ಆಭೀರ, ಕಾಲತೋಯಕ, ಅಪರಾಂತ, ಪರಾಂತ, ಪಂಕಲ, ಚರ್ಮಚಂಡ, ಅಟವೀಶೇಖರ, ಮೇರುಭೂತ, ಉಪಾವೃತ್ತ, ಅನುಪಾವೃತ್ತ, ಸುರಾಷ್ಟ್ರ, ಕೇಕಯ, ಕುಟ್ಟಾಪರಾ, ಮಾಹೇಯ, ಕಕ್ಷ, ಸುಮುದ್ರನಿಷ್ಕುಟ, ಅಂಧ, ಇವುಗಳು ಬೆಟ್ಟಗಳ ಒಳಗಿರುವ ದೇಶಗಳು.

ಬಹಿರ್ಗಿರಯೋಽಙ್ಗಮಲದಾ ಮಗಧಾ ಮಾಲವಾರ್ಯಟೀಃ ।
ಸತ್ವತರಾಃ ಪ್ರಾವೃಷೇಯಾ ಭಾರ್ಗವಾಶ್ಚ ದ್ವಿಜರ್ಷಭಾಃ ॥೪೫॥

ಪುಣ್ಡ್ರಾ ಭಾರ್ಗಾಃ ಕಿರಾತಾಶ್ಚ ಸುದೇಷ್ಣಾ ಭಾಸುರಾಸ್ತಥಾ ।
ಶಕಾ ನಿಷಾದಾ ನಿಷಧಾಸ್ತಥೈವಾನರ್ತನೈರ್ಋತಾಃ ॥೪೬॥

ಪೂರ್ಣಲಾಃ ಪೂತಿಮತ್ಸ್ಯಾಶ್ಚ ಕುನ್ತಲಾಃ ಕುಶಕಾಸ್ತಥಾ ।
ತೀರಗ್ರಹಾಃ ಶೂರಸೇನಾ ಈಜಿಕಾಃ ಕಲ್ಪಕಾರಣಾಃ ॥೪೭॥

ತಿಲಭಾಗಾ ಮಸಾರಾಶ್ಚ ಮಧುಮತ್ತಾಃ ಕಕುನ್ದಕಾಃ ।
ಕಾಶ್ಮೀರಾಃ ಸಿನ್ಧುಸೌವೀರಾ ಗಾನ್ಧಾರಾ ದಶಕಾಸ್ತಥಾ ॥೪೮॥

ಅಭಿಸಾರಾಃ ಕುದ್ರುತಾಶ್ಚ ಸೌರಿಲಾ ಬಾಹ್ಲಿಕಾಸ್ತಥಾ ।
ದರ್ವೀ ಚ ಮಾಲವಾದರ್ವಾ ವಾತಜಾಮರಥೋರಗಾಃ ॥೪೯॥

ಬಲರಟ್ಟಾಸ್ತಥಾ ವಿಪ್ರಾಃ ಸುದಾಮಾನಃ ಸುಮಲ್ಲಿಕಾಃ ।
ಬನ್ಧಾಕರೀಕಷಾಶ್ಚೈವ ಕುಲಿನ್ದಾ ಗನ್ಧಿಕಾಸ್ತಥಾ ॥೫೦॥

ವಾನಾಯವೋ ದಶಾಃ ಪಾರ್ಶ್ವರೋಮಾಣಃ ಕುಶಬಿನ್ದವಃ ।
ಕಾಚ್ಛಾ ಗೋಪಾಲಕಚ್ಛಾಶ್ಚ ಜಾಙ್ಗಲಾಃ ಕುರುವರ್ಣಕಾಃ ॥೫೧॥

---

೪೫–೫೨. ಮುಂದೆಹೇಳುವ ಬಹಿರ್ಗಿರಿ, ಅಂಗಮಲದ, ಮಗಧ, ಮಾಲವಾರ್ಯಟಿ, ಸತ್ವತರ, ಪ್ರಾವೃಷೇಯ, ಭಾರ್ಗವ, ಪುಂಡ್ರ, ಭಾರ್ಗ, ಕಿರಾತ, ಸುದೇಷ್ಣ, ಭಾಸುರ, ಶಕ, ನಿಷಾದ, ನಿಷಧ, ಆನರ್ತ, ನೈರ್ಋತ, ಪೂರ್ಣಲ, ಪೂತಿಮತ್ಸ್ಯ, ಕುಂತಕ, ಕುಶಲ, ತೀರ ಗ್ರಹ, ಶೂರಸೇನ, ಈಜಿಕ, ಕಲ್ಪಕಾರಣ, ತಿಲಭಾಗ, ಮಸಾರ, ಮಧು ಮತ್ತ, ಕುಕುಂದಕ, ಕಾಶ್ಮೀರ, ಸಿಂಧು, ಸೌವೀರ, ಗಾಂಧಾರ, ದರ್ಶಕ, ಅಭಿಸಾರ, ಕುದ್ರುತ, ಸೌರಿಲ, ಬಾಹ್ಲಿಕ, ದರ್ಲೀ, ಮಾಲವ, ದರ್ವ, ವಾತಜ, ಆಮರಥ, ಉರಗ, ಬಲರಟ್ಟ, ಸುದಾಮ, ಸುಮಲ್ಲಿಕಾ, ಬಂಧಾ ಕರೀಷ, ಕುಲಿಂದ, ಗಂಧಿಕ, ವನಾಯು, ದಶ, ಪಾರ್ಶ್ವರೋಮ, ಕುಶಬಿಂದು, ಕಾಚ್ಛ, ಗೋಪಾಲಕಚ್ಛ, ಜಾಂಗಲ, ಕುರುವರ್ಣಕ,

ಕಿರಾತಾ ಬರ್ಬರಾಃ ಸಿದ್ಧಾ ವೈದೇಹಾಸ್ತಾಮ್ರಲಿಪ್ತಿಕಾಃ ।
ಔಡ್ರಮ್ಲೇಚ್ಛಾಃ ಸಸೈರಿನ್ಧ್ರಾಃ ಪಾರ್ವತೀಯಾಶ್ಚ ಸತ್ತಮಾಃ ॥೫೨॥
ಅಥಾಪರೇ ಜನಪದಾ ದಕ್ಷಿಣಾ ಮುನಿಪುಙ್ಗವಾಃ ।
ದ್ರವಿಡಾಃ ಕೇರಲಾಃ ಪ್ರಾಚ್ಯಾ ಮೂಷಿಕಾ ಬಾಲಮೂಷಿಕಾಃ ॥೫೩॥
ಕರ್ಣಾಟಕಾ ಮಾಹಿಷಕಾ ವಿಕನ್ಧಾ ಮೂಷಿಕಾಸ್ತಥಾ ।
ಝಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದಾ ನಲಕಾನನಾಃ ॥೫೪॥
ಕೋಕುಟ್ಟಕಾಸ್ತಥಾ ಚೋಲಾಃ ಕೋಕಣಾ ಮಣಿವಾಲವಾಃ ।
ಸಮಙ್ಗಾ ಕನಕಾಶ್ಚೈವ ಕುಕುರಙ್ಗಾರಮಾರಿಷಾಃ ॥೫೫॥
ಧ್ವಜಿನ್ಯುತ್ಸವಸಙ್ಕೇತಾಸ್ತ್ರಿಗರ್ಭಾ ಮಾಲ್ಯಸೇನಯಃ ।
ವ್ಯೂಢಕಾಃ ಕೋರಕಾಃ ಪ್ರೋಷ್ಠಾಃ ಸಙ್ಗವೇಗಧರಾಸ್ತಥಾ ॥೫೬॥
ತಥೈವ ವಿನ್ಧ್ಯರುಲಿಕಾಃ ಪುಲಿನ್ದಾ ವಲ್ಬಲೈಸ್ಸಹ ।
ಮಾಲವಾ ಮಲರಾಶ್ಚೈವ ತಥೈವಾಪರವರ್ತಕಾಃ ॥೫೭॥
ಕುಲಿನ್ದಾಃ ಕಾಲದಾಶ್ಚೈವ ಚಣ್ಡಕಾಃ ಕುರಟಾಸ್ತಥಾ ।
ಮುಶಲಾಸ್ತನವಾಲಾಶ್ಚ ಸತೀರ್ಥಾಪೂತಿಸೃಞ್ಜಯಾಃ ॥೫೮॥

---

ಕಿರಾತ, ಬರ್ಬರ, ಸಿದ್ಧ, ವೈದೇಹ, ತಾಮ್ರಲಿಪ್ತಿಕ, ಔಡ್ರ, ಮ್ಲೇಚ್ಛ, ಸೈರಿಂಧ್ರ, ಪಾರ್ವತೀಯ, ಇವುಗಳೂ ಕೆಲವು ದೇಶಗಳು. ಇವು ಪರ್ವತಪ್ರದೇಶಗಳಲ್ಲಿರುವುವು.

೫೩–೫೯. ಎಲೈ ಮುನಿವರ್ಯರೇ! ಬೇರೆ ದಕ್ಷಿಣ ದೇಶಗಳು ಮುಂದೆ ಹೇಳುವ ರೀತಿಯಲ್ಲಿ ಪ್ರಸಿದ್ಧವಾಗಿರುವುವು. ಅವು ಯಾವುವೆಂದರೇ : ದ್ರವಿಡ, ಕೇರಲ, ಪ್ರಾಚ್ಯ, ಮೂಷಿಕ, ಬಾಲಮೂಷಿಕ, ಕರ್ಣಾಟಕ, ಮಾಹಿಷಿಕ, ವಿಕಂಧ, ಮೂಷಿಕಾ, ಝಿಲ್ಲಿಕ, ಕುಂತಲ, ಸೌಹೃದ, ನಲಕಾನನ, ಕೋಕುಟ್ಟಕ, ಚೋಲ, ಕೋಕಣ, ಮಣಿವಾಲವ, ಸಮಂಗ, ಕನಕ, ಕುಕುರಂಗ, ಅರಮಾರಿಷ, ಧ್ವಜಿನಿ, ಉತ್ಸವಸಂಕೇತ, ತ್ರಿಗರ್ಭ, ಮಾಲ್ಯಸೇನ, ವ್ಯೂಢಕ, ಕೋರಕ, ಪ್ರೋಷ್ಠ, ಸಂಗವೇಗಧರ, ವಿಂಧ್ಯರುಲಿಕ, ಪುಲಿಂದ, ವಲ್ಬಲ, ಮಾಲವ, ಮಲರ, ಅಪರವರ್ತಕ, ಕುಲಿಂದ,ಕಾಲದ, ಚಂಡಿಕ, ಕೂರಡ, ಮುಶಲ, ಸ್ತನವಾಲ, ಸತೀರ್ಥ,

ಅನಿದಾಯಾಃ ಶಿವಾಟಾಶ್ಚ ತಪಾನಾಃ ಸೂತಪಾಸ್ತಥಾ ।
ಋಷಿಕಾಶ್ಚ ವಿದರ್ಭಾಶ್ಚ ಸ್ತಂಗನಾಃ ಪರತಂಗನಾಃ ॥೫೯॥

ಉತ್ತರಾಶ್ಚಾಪರೇ ಮ್ಲೇಚ್ಛಾ ಜನಾ ಹಿ ಮುನಿಪುಂಗವಾಃ ।
ಜವನಾಶ್ಚ ಸಕಾಂಭೋಜಾ ದಾರುಣಾ ಮ್ಲೇಚ್ಛಜಾತಯಃ ॥೬೦॥

ಸಕೃದ್ಗೃಹಾಃ ಕುಲಟ್ಯಾಶ್ಚ ಹೂಣಾಃ ಪಾರಸಿಕೈಃ ಸಹ ।
ತಥೈವ ರಮಣಾಶ್ಚಾನ್ಯಾಸ್ತಥಾ ಚ ದಶಮಾನಿಕಾಃ ॥೬೧॥

ಕ್ಷತ್ರಿಯೋಪನಿವೇಶಾಶ್ಚ ವೈಶ್ಯಶೂದ್ರಕುಲಾನಿ ಚ ।
ಶೂರಾ ಭೀರಾಶ್ಚ ದರದಾಃ ಕಾಶ್ಮೀರಾಃ ಪಶುಭಿಃ ಸಹ ॥೬೨॥

ಖಾಂಡೀಕಾಶ್ಚ ತುಷಾರಾಶ್ಚ ಪದ್ಮಾವಾ ಗಿರಿಗಹ್ವರಾಃ ।
ಆತ್ರೇಯಾಃ ಸಭರದ್ವಾಜಾಸ್ತಥೈವ ಸ್ತನಪೋಷಕಾಃ ॥೬೩॥

ದ್ರೋಷಕಾಶ್ಚ ಕಲಿಙ್ಗಾಶ್ಚ ಕಿರಾತಾನಾಂ ಚ ಜಾತಯಃ ।
ತೋಮರಾ ಹನ್ಯಮಾನಾಶ್ಚ ತಥೈವ ಕರಭಞ್ಜಕಾಃ ॥೬೪॥

---

ಪೂತಿತೀರ್ಥ, ಸಂಜಯ, ಅನಿದಾಯ ಶಿವಾಟ, ತಪನ, ಸೂತಪ, ಋಷಿಕ, ವಿಧರ್ಭ, ಸ್ತಂಗನ, ಪರತಂಗನ, ಇವುಗಳು.

೬೦–೬೫. ಎಲೈ ಮುನಿಗಳೇ! ಉತ್ತರದಲ್ಲಿ ಕೆಲವು ದೇಶಗಳು ಕೇವಲ ಮ್ಲೇಚ್ಛ ಜನಗಳಿಂದಲೇ ಕೂಡಿರುವುವು. ಜವನ, ಕಾಂಭೋಜ, ಈ ದೇಶಗಳಲ್ಲಿರುವವರು ಕ್ರೂರಜನರು ಮತ್ತು ಮ್ಲೇಚ್ಛರು. ಸಕೃಘೃಹ, ಕುಲಟ್ಯ, ಹೂಣ, ಪಾರಸಿಕ, ರಮಣ, ದಶಮಾನಿಕ, ಇವುಗಳಲ್ಲಿ ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ ಬಂದು ನೆಲಸಿದ್ದಾರೆ. ಶೂರ, ಆಭೀರ, ದರದ, ಕಾಶ್ಮೀರ, ಪಶು, ಖಾಂಡೀಕ, ತುಷಾರ, ಪದ್ಮಾವ, ಗಿರಿಗಹ್ವರ, ಆತ್ರೇಯ, ಭರದ್ವಾಜ, ಸ್ತನಪೋಷಕ, ದ್ರೋಷಕ, ಕಲಿಂಗ, ಇವರೆಲ್ಲಾ ಕಿರಾತಜಾತಿಗೆ ಸೇರಿದವರು. ಇವರ ದೇಶವು ಹೀಗೆಯೇ ಪ್ರಸಿದ್ಧವಾಗಿರುವುದು. ತೋಮರ, ಹನ್ಯಮಾನ, ಕರಭಂಜಕ, ಇವೂ ದೇಶದ ಹೆಸರುಗಳು. ಇವುಗಳಲ್ಲದೇ, ಪೂರ್ವದಿಕ್ಕಿನಲ್ಲಿಯೂ,

ಏತೇ ಚಾನ್ಯೇ ಜನಪದಾಃ ಪ್ರಾಚ್ಯೋದೀಚ್ಯಾಸ್ತಥೈವ ಚ ।
ಉದ್ದೇಶಮಾತ್ರೇಣ ಮಯಾ ದೇಶಾಃ ಸಙ್ಕೀರ್ತಿತಾ ದ್ವಿಜಾಃ ।
ಯಥಾಗುಣಬಲಂ ವಾಪಿ ತ್ರಿವರ್ಗಸ್ಯ ಮಹಾಫಲಮ್ ॥೬೫॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಷಷ್ಠೋऽಧ್ಯಾಯಃ

---

ಉತ್ತರದಿಕ್ಕಿನಲ್ಲಿಯೂ, ಇನ್ನೂ ಕೆಲವು ಪ್ರಸಿದ್ಧವಾಗಿರುವುವು. ಈ ದೇಶಗಳಲ್ಲಿ ಧರ್ಮಾರ್ಥಕಾಮಗಳು, ಆಯಾಯ ಜನಗಳ, ಗುಣಬಲಗಳನ್ನನುಸರಿಸಿ ಬೆಳೆಯುವುವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಸಪ್ತಮೋಽಧ್ಯಾಯಃ

**॥ ಋಷಯ ಊಚುಃ ॥**

**ಭಾರತಸ್ಯಾಸ್ಯ ವರ್ಷಸ್ಯ ತಥಾ ಹೈಮವತಸ್ಯ ಚ ।**
**ಪ್ರಮಾಣಮಾಯುಷಃ ಸೂತ ಬಲಂ ಚಾಪಿ ಶುಭಾಶುಭಮ್ ॥ ೧ ॥**

**ಅನಾಗತಮತಿಕ್ರಾನ್ತಂ ವರ್ತಮಾನಂ ಚ ಸತ್ತಮ ।**
**ಆಚಕ್ಷ್ವ ನೋ ವಿಸ್ತರೇಣ ಹರಿವರ್ಷಂ ತಥೈವ ಚ ॥ ೨ ॥**

**॥ ಸೂತ ಉವಾಚ ॥**

**ಚತ್ವಾರಿ ಭಾರತೇ ವರ್ಷೇ ಯುಗಾನಿ ಮುನಿಪುಙ್ಗವಾಃ ।**
**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚ ದ್ವಿಜಸತ್ತಮಾಃ ॥ ೩ ॥**

**ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾಯುಗಂ ದ್ವಿಜಾಃ ।**
**ತತ್ಪಶ್ಚಾದ್ದ್ವಾಪರಂ ಚಾಥ ತತಸ್ತಿಷ್ಯಃ ಪ್ರವರ್ತತೇ ॥ ೪ ॥**

---

ಪದ್ಮಪುರಾಣದಲ್ಲಿ ಆದಿಖಂಡದ ಏಳನೆಯ ಅಧ್ಯಾಯವು

೧–೨. ಋಷಿಗಳು ಹೇಳಿದರು: ಎಲೈ ಸೂತನೇ! ಭಾರತ ವರ್ಷ, ಹೈಮವತವರ್ಷ, ಮತ್ತು ಹರಿವರ್ಷ ಇವುಗಳ ಆಯುಃಪ್ರಮಾಣವನ್ನೂ, ಬಲವನ್ನೂ, ಶುಭಾಶುಭಗಳನ್ನೂ, ಮುಂದೆ ನಡೆಯುವುದನ್ನೂ, ಹಿಂದೆ ನಡೆದುದನ್ನೂ, ಈಗ ನಡೆಯುವುದನ್ನೂ, ನಮಗೆ ವಿಸ್ತಾರವಾಗಿ ಹೇಳು.

೩–೪. ಸೂತನು ಹೇಳಿದನು: ಎಲೈ ಮುನಿವರ್ಯರೇ! ಭಾರತ ವರ್ಷದಲ್ಲಿ ಕೃತ, ತ್ರೇತಾ, ದ್ವಾಪರ, ಕಲಿ ಎಂಬುದಾಗಿ ನಾಲ್ಕುಯುಗಗಳು. ಅವುಗಳಲ್ಲಿ ಮೊದಲು ಕೃತಯುಗವು. ಅನಂತರ ತ್ರೇತಾಯುಗವು. ಆಮೇಲೆ ದ್ವಾಪರಯುಗವು. ಅನಂತರ ಕಲಿಯುಗವು.

ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ಮುನಿಪುಙ್ಗವಾಃ ।
ಆಯುಃಸಙ್ಖ್ಯಾ ಕೃತಯುಗೇ ಸಙ್ಖ್ಯಾತಾ ಹಿ ತಪೋಧನಾಃ ॥ ೫ ॥
ತಥಾ ತ್ರೀಣಿ ಸಹಸ್ರಾಣಿ ತ್ರೇತಾಯಾಮಾಯುಷೋ ವಿದುಃ ।
ದ್ವೇ ಸಹಸ್ರೇ ದ್ವಾಪರೇ ತು ಭುವಿ ತಿಷ್ಠನ್ತಿ ಸಾಮ್ಪ್ರತಮ್ ॥ ೬ ॥
ನ ಪ್ರಮಾಣಸ್ಥಿತಿರ್ಹ್ಯಸ್ತಿ ತಿಷ್ಯೇ ತು ಮುನಿಪುಙ್ಗವಾಃ ।
ಗರ್ಭಸ್ಥಾಶ್ಚ ಮ್ರಿಯನ್ತೇಽತ್ರ ತಥಾ ಜಾತಾ ಮ್ರಿಯನ್ತಿ ಚ ॥ ೭ ॥
ಮಹಾಬಲಾ ಮಹಾಸತ್ತ್ವಾಃ ಪ್ರಜ್ಞಾಗುಣಸಮನ್ವಿತಾಃ ।
ಪ್ರಜಾಯನ್ತೇ ಚ ಜಾತಾಶ್ಚ ಶತಶೋಽಥ ಸಹಸ್ರಶಃ ॥ ೮ ॥
ದ್ವಿಜಾಃ ಕೃತಯುಗೇ ವಿಪ್ರಾ ಬಲಿನಃ ಪ್ರಿಯದರ್ಶನಾಃ ।
ಪ್ರಜಾಯನ್ತೇ ಚ ಜಾತಾಶ್ಚ ಮುನಯೋ ವೈ ತಪೋಧನಾಃ ॥ ೯ ॥
ಮಹೋತ್ಸಾಹಾ ಮಹಾತ್ಮಾನೋ ಧಾರ್ಮಿಕಾಃ ಸತ್ಯವಾದಿನಃ ।
ಪ್ರಿಯದರ್ಶಾ ವಪುಷ್ಮನ್ತೋ ಮಹಾವೀರ್ಯಾ ಧನುರ್ಧರಾಃ ॥೧೦॥

---

೫–೬. ಎಲೈ ತಪಸ್ವಿಗಳೇ! ಕೃತಯುಗದಲ್ಲಿ, ಆಯುಃಪರಿಮಿತಿಯು ನಾಲ್ಕು ಸಹಸ್ರವರ್ಷಗಳು, ತ್ರೇತಾಯುಗದಲ್ಲಿ ಮೂರುಸಾವಿರ ವರ್ಷಗಳು, . ದ್ವಾಪರಯುಗದಲ್ಲಿ ಎರಡುಸಾವಿರ ವರ್ಷಗಳು, ಈರೀತಿ ಭೂಮಿಯಲ್ಲಿ ಜನರು ಬದುಕುತ್ತಾರೆ.

೭. ಕಲಿಯುಗದಲ್ಲಿ ಆಯುಸ್ಸಿಗೆ ನಿಯಮಿತವಾದ ಪ್ರಮಾಣವೇ ಇಲ್ಲವು. ಗರ್ಭದಲ್ಲೇ ಸಾಯುವುದೂ ಉಂಟು ; ಹುಟ್ಟಿ ಸಾಯುವುದೂ ಉಂಟು.

೮–೯. ಕೃತಯುಗದಲ್ಲಿ ಬ್ರಾಹ್ಮಣಕ್ಷತ್ರಿಯವೈಶ್ಯರು ಮಹಾಬಲಶಾಲಿಗಳಾಗಿಯೂ, ದೃಢ ನಿಶ್ಚಯವುಳ್ಳವರಾಗಿಯೂ, ಬುದ್ಧಿವಂತರಾಗಿಯೂ, ಇರುವರು. ಹುಟ್ಟುವಾಗಲೇ ಇಂತಹ ಗುಣಗಳಿಂದ ಕೂಡಿರುವರು ಈರೀತಿ ಸಾವಿರಾರು ಜನರು ಹುಟ್ಟಿದ್ದಾರೆ ; ಅಲ್ಲದೇ ಬಲಿಷ್ಠರೂ, ಸುಂದರವಾದ ಆಕಾರದಿಂದ ಕೂಡಿಯೂ ಮತ್ತು ತಪಸ್ವಿಗಳಾಗಿಯೂ ಇರುವರು.

ವೀರಾ ಹಿ ಯುಧಿ ಜಾಯನ್ತೇ ಕ್ಷತ್ರಿಯಾಶ್ಚಾರುಸಮ್ಮತಾಃ ।
ತ್ರೇತಾಯಾಂ ಕ್ಷತ್ರಿಯಾಸ್ತಾವತ್ಸರ್ವೇ ವೈ ಚಕ್ರವರ್ತಿನಃ ॥೧೧॥

ಸರ್ವವರ್ಣಾಶ್ಚ ಜಾಯನ್ತೇ ಸದೈವ ದ್ವಾಪರೇ ಯುಗೇ ।
ಮಹೋತ್ಸಾಹಾ ವೀರ್ಯವನ್ತಃ ಪರಸ್ಪರವಧೈಷಿಣಃ ॥೧೨॥

ತೇಜಸಾನ್ಧೇನ ಸಂಯುಕ್ತಾಃ ಕ್ರೋಧನಾಃ ಪುರುಷಾಃ ಕಿಲ ।
ಲುಬ್ಧಾಶ್ಚಾನೃತಿಕಾಶ್ಚೈವ ತಿಷ್ಯೇ ಜಾಯನ್ತಿ ಭೋ ದ್ವಿಜಾಃ ॥೧೩॥

ಈರ್ಷ್ಯಾ ಮಾನಸ್ತಥಾ ಕ್ರೋಧೋ ಮಾಯಾಸೂಯಾ ತಥೈವ ಚ ।
ತಿಷ್ಯೇ ಭವನ್ತಿ ಭೂತಾನಾಂ ರಾಗೋ ಲೋಭಶ್ಚ ಸತ್ತಮಾಃ ॥೧೪॥

---

೧೦–೧೧. ತ್ರೇತಾಯುಗದಲ್ಲಿ, ಕ್ಷತ್ರಿಯರು ಉತ್ಸಾಹಶಾಲಿಗಳಾಗಿಯೂ, ಶ್ರೇಷ್ಠಸ್ವಭಾವವುಳ್ಳವರಾಗಿಯೂ, ಧರ್ಮಬುದ್ಧಿಯುಳ್ಳವರಾಗಿಯೂ, ಸತ್ಯವಾದಿಗಳಾಗಿಯೂ, ಸುಂದರರಾಗಿಯೂ, ಶ್ರೇಷ್ಠವಾದ ಶರೀರವುಳ್ಳವರಾಗಿಯೂ, ಧನುಸ್ಸನ್ನು ಧರಿಸಿ ಮಹಾವೀರ್ಯವನ್ನು ಪ್ರದರ್ಶಿಸುವರಾಗಿಯೂ, ಇರುವರು. ಮತ್ತು ಯುದ್ಧದಲ್ಲಿ, ಎಲ್ಲರೂ ಮೆಚ್ಚುವಂತೆ ಹೋರಾಡುವವರಾಗಿಯೂ, ಎಲ್ಲರೂ ಚಕ್ರವರ್ತಿಗಳಾಗಿಯೂ, ಆ ಕ್ಷತ್ರಿಯರು ಇರುವರು.

೧೨. ದ್ವಾಪರಯುಗದಲ್ಲಿ ಸರ್ವವರ್ಣದವರೂ ಉತ್ಸಾಹಶಾಲಿಗಳಾಗಿ, ಪರಸ್ಪರ ಕೊಲೆಯಲ್ಲಿ ತಮ್ಮ ಪ್ರರಾಕ್ರಮವನ್ನು ತೋರಿಸುವರು.

೧೩–೧೪. ಕಲಿಯುಗದಲ್ಲಿ ಮನುಷ್ಯರು ಕೋಪವುಳ್ಳವರಾಗಿಯೂ, ತೇಜಸ್ಸಿಲ್ಲದವರಾಗಿಯೂ, ಲೋಭಿಗಳಾಗಿಯೂ, ಅನೃತ ಭಾಷಿಗಳಾಗಿಯೂ ಇರುವರು. ಈ ಯುಗದಲ್ಲಿ ಇತರರ ಉತ್ಕರ್ಷವನ್ನು ಸಹಿಸಲಾರರು; ತಾವೇ ಎಲ್ಲರಿಗಿಂತಲೂ ಮೇಲೆಂಬುದಾಗಿ ತಿಳಿದುಕೊಳ್ಳುವರು; ಇತರರ ಮೇಲೆ ಯಾವಾಗಲೂ ಕೋಪವನ್ನು ತೋರಿಸುವರು; ಇತರರನ್ನು ವಂಚಿಸುವರು; ಇತರರ ಗುಣಗಳಲ್ಲಿ ದೋಷವನ್ನೇ ಎಣಿಸುವರು; ದ್ರವ್ಯಾದಿಗಳಲ್ಲಿ ಅತ್ಯಾಶೆಯನ್ನು ತೋರಿಸುವರು ; ಕೈಗೆ ಸಿಕ್ಕಿದ ವಸ್ತುಗಳಲ್ಲಿ ಮಮಕಾರವನ್ನು ತೋರಿಸುವರು.

**ಸಂಕ್ಷೇಪೋ ವರ್ತತೇ ವಿಪ್ರಾ ದ್ವಾಪರೇ ಯುಗಮಧ್ಯಕೇ ।**
**ಗುಣೋತ್ತರಂ ಹೈಮವತಂ ಹರಿವರ್ಷಂ ತತಃ ಪರಮ್ ॥೧೫॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಸಪ್ತಮೋಽಧ್ಯಾಯಃ**

---

೧೫. ದ್ವಾಪರಯುಗಮಧ್ಯದಲ್ಲಿ ಕಲಿಯುಗದಲ್ಲಿ ಹೇಳಿರುವ ಧರ್ಮಗಳು ಸಂಕ್ಷಿಪ್ತವಾಗಿರುವುವು. ಭಾರತವರ್ಷಕ್ಕಿಂತಲೂ ಹೈಮವತ ವರ್ಷವು ಮೇಲಾಗಿರುವುದು; ಅದಕ್ಕಿಂತಲೂ ಹರಿವರ್ಷವು ಶ್ರೇಷ್ಠವಾದುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಅಷ್ಟಮೋಽಧ್ಯಾಯಃ

॥ ಋಷಯ ಊಚುಃ ॥

**ಜಮ್ಬೂಖಣ್ಡಸ್ತ್ವಯಾ ಪ್ರೋಕ್ತೋ ಯಥಾವದಿಹ ಸತ್ತಮ ।**
**ವಿಷ್ಕಮ್ಭಸ್ಯ ಚ ಪ್ರಬ್ರೂಹಿ ಪರಿಮಾಣಂ ಚ ತತ್ತ್ವತಃ ॥ ೧ ॥**
**ಸಮುದ್ರಸ್ಯ ಪ್ರಮಾಣಂ ಚ ಸಮ್ಯಗಚ್ಛಿದ್ರದರ್ಶನಃ ।**
**ಶಾಕದ್ವೀಪಂ ಚ ನೋ ಬ್ರೂಹಿ ಕುಶದ್ವೀಪಂ ಚ ಧಾರ್ಮಿಕ ।**
**ಶಾಲ್ಮಲಂ ಚೈವ ತತ್ತ್ವೇನ ಕ್ರೌಞ್ಚದ್ವೀಪಂ ತಥೈವ ಚ ॥ ೨ ॥**
**ವಿಸ್ತಾರಃ ಸುಬಹವೋ ದ್ವೀಪಾ ಯೈರಿದಂ ಸಂತತಂ ಜಗತ್ ।**
**ಸಪ್ತದ್ವೀಪಾನ್ಪ್ರವಕ್ಷ್ಯಾಮಿ ಶೃಣುತ ದ್ವಿಜಪುಙ್ಗವಾಃ ॥ ೩ ॥**

---

ಪದ್ಮಪುರಾಣದ ಆದಿಖಂಡದ ಎಂಟನೆಯ ಅಧ್ಯಾಯವು

೧–೨. ಋಷಿಗಳು ಹೇಳಿದರು: ಎಲೈ ಸೂತನೇ! ಜಂಬೂಖಂಡವನ್ನು ತಿಳಿಸಿರುವೆಯಷ್ಟೇ; ಅದರ ವಿಸ್ತಾರವನ್ನೂ, ಸಮುದ್ರದ ಪ್ರಮಾಣವನ್ನೂ ತಿಳಿಸು; ಹಾಗೆಯೇ ಶಾಕದ್ವೀಪವನ್ನೂ, ಕುಶದ್ವೀಪವನ್ನೂ, ಶಾಲ್ಮಲದ್ವೀಪವನ್ನೂ, ಕ್ರೌಂಚದ್ವೀಪವನ್ನೂ ತಿಳಿಸು.

೩. ಸೂತನು ಹೇಳಿದನು: ಎಲೈ ಬ್ರಾಹ್ಮಣರೇ! ಈ ಜಗತ್ತಿನಲ್ಲಿ ಎಷ್ಟೋ ದ್ವೀಪಗಳಿರುವುವು. ಅವುಗಳಲ್ಲಿ ಏಳು ದ್ವೀಪಗಳನ್ನು ವರ್ಣಿಸುವೆನು, ಕೇಳಿರಿ.

ಅಷ್ಟಾದಶಸಹಸ್ರಾಣಿ ಯೋಜನಾನಿ ದ್ವಿಜೋತ್ತಮಾಃ ।
ಷಟ್ಛತಾನಿ ಚ ಪೂರ್ಣಾನಿ ವಿಷ್ಕಮ್ಭೋ ಜಮ್ಬುಪರ್ವತಃ ॥ ೪ ॥
ಲವಣಸ್ಯ ಸಮುದ್ರಸ್ಯ ವಿಷ್ಕಮ್ಭೋ ದ್ವಿಗುಣಃ ಸ್ಮೃತಃ ।
ನಾನಾಜನಪದಾಕೀರ್ಣೋ ಮಣಿವಿದ್ರುಮಚಿತ್ರಿತಃ ॥ ೫ ॥
ನೈಕಧಾತುವಿಚಿತ್ರೈಶ್ಚ ಪರ್ವತೈರುಪಶೋಭಿತಃ ।
ಸಿದ್ಧಚಾರಣಸಙ್ಕೀರ್ಣಃ ಸಾಗರಃ ಪರಿಮಣ್ಡಲಃ ॥ ೬ ॥
ಶಾಕದ್ವೀಪಂ ಚ ವಕ್ಷ್ಯಾಮಿ ಯಥಾವದಿಹ ಸತ್ತಮಾಃ ।
ಶೃಣುತಾದ್ಯ ಯಥಾನ್ಯಾಯಂ ಬ್ರುವತೋ ಮಮ ಧಾರ್ಮಿಕಾಃ ॥
ಜಮ್ಬೂದ್ವೀಪಪ್ರಮಾಣೇನ ದ್ವಿಗುಣಃ ಸದ್ವಿಜರ್ಷಭಾಃ ।
ವಿಷ್ಕಮ್ಭೇನ ಮಹಾಭಾಗಾಃ ಸಾಗರೋಽಪಿ ವಿಭಾಗಶಃ ॥ ೮ ॥
ಕ್ಷೀರೋದೋ ಮುನಿಶಾರ್ದೂಲಾ ಯೇನ ಸಮ್ಪರಿವಾರಿತಃ ।
ತತ್ರ ಪುಣ್ಯಾ ಜನಪದಾಸ್ತತ್ರ ನ ಮ್ರಿಯತೇ ಜನಃ ।
ಕುತ ಏವ ಹಿ ದುರ್ಭಿಕ್ಷಂ ಕ್ಷಮಾತೇಜೋಯುತಾ ಹಿ ತೇ ॥ ೯ ॥
ಶಾಕದ್ವೀಪಸ್ಯ ಸಂಕ್ಷೇಪೋ ಯಥಾವನ್ಮುನಿಸತ್ತಮಾಃ ।
ಉಕ್ತ ಏಷ ಮಹಾಭಾಗಾಃ ಕಿಮೇತತ್ಕಥಯಾಮಿ ವಃ ॥೧೦॥

---

೪–೬. ಜಂಬೂಪರ್ವತವು ಹದಿನೆಂಟುಸಾವಿರದ ಆರುನೂರು ಯೋಜನವುಳ್ಳದ್ದು. ಲವಣಸಮುದ್ರದ ಪ್ರಮಾಣವಾದರೋ, ಇದಕ್ಕೆ ಎರಡರಷ್ಟು ಭಾಗವು; ಇದು ನಾನಾದೇಶಗಳಿಂದ ಕೂಡಿರುವುದು. ಈ ಸಮುದ್ರದಲ್ಲಿ ಹವಳಗಳೂ, ಮಣಿಗಳೂ, ಹೆಚ್ಚಾಗಿ ದೊರೆಯುವುವು; ಅನೇಕಬಗೆಯಾದ ಧಾತುಗಳಿಂದ ಕೂಡಿರುವ ಪರ್ವತಗಳಿರುವುವು. ಅಲ್ಲಿ ಸಿದ್ಧರೂ, ಚಾರಣರೂ ಇರುವರು. ಈ ಸಮುದ್ರವು ವಿಶಾಲವಾದುದು.

೭–೧೦. ಎಲೈ ಧಾರ್ಮಿಕರೇ! ಶಾಕದ್ವೀಪವನ್ನು ಅದು ಇರುವಂತೆ ವರ್ಣಿಸುವೆನು, ಕೇಳಿರಿ. ಈ ಶಾಕದ್ವೀಪವು ಜಂಬೂದ್ವೀಪಕ್ಕೆ ಎರಡರಷ್ಟಿರುವುದು. ಈ ದ್ವೀಪದಿಂದ ಸುತ್ತುವರೆಯಲ್ಪಟ್ಟ ಕ್ಷೀರಸಮುದ್ರವು ಈ ದ್ವೀಪದ ಪರಿಮಾಣವನ್ನೇ ಹೊಂದಿರುವುದು. ಈ ದ್ವೀಪದಲ್ಲಿ ನಾನಾ ದೇಶಗಳಿರುವುವು. ಅಲ್ಲಿರುವ ಜನಗಳು ಮೃತಿಹೊಂದುವರೇ ಅಲ್ಲ ಮತ್ತು

॥ ಋಷಯ ಊಚುಃ ॥

ಶಾಕದ್ವೀಪಸ್ಯ ಸಂಕ್ಷೇಪೋ ಯಥಾವದಿಹ ಧಾರ್ಮಿಕ ।
ಉಕ್ತಸ್ತ್ವಯಾ ಮಹಾಪ್ರಾಜ್ಞ ವಿಸ್ತರಂ ಬ್ರೂಹಿ ತತ್ತ್ವತಃ ॥೧೧॥

॥ ಸೂತ ಉವಾಚ ॥

ತತ್ರೈವ ಪರ್ವತಾ ವಿಪ್ರಾಃ ಸಪ್ತಾತ್ರ ಮಣಿಪರ್ವತಾಃ ।
ರತ್ನಾಕರಾಸ್ತಥಾ ನದ್ಯಸ್ತೇಷಾಂ ನಾಮಾನಿ ವರ್ಣಯೇ ॥೧೨॥
ಅತೀವ ಗುಣವತ್ಸರ್ವಂ ತತ್ತ್ವಂ ಪೃಚ್ಛಥ ಧಾರ್ಮಿಕಾಃ ।
ದೇವರ್ಷಿಗನ್ಧರ್ವಯುತಃ ಪ್ರಥಮೋ ಮೇರುರುಚ್ಯತೇ ॥೧೩॥
ಪ್ರಾಗಾಯತೋ ಮಹಾಭಾಗಾ ಮಲಯೋ ನಾಮ ಪರ್ವತಃ ।
ತತೋ ಮೇಘಾಃ ಪ್ರವರ್ತನ್ತೇ ಪ್ರವರ್ಷನ್ತಿ ಚ ಸರ್ವಶಃ ॥೧೪॥

---

ಆ ಜನರು ಕ್ಷಮೆಯುಳ್ಳವರೂ, ತೇಜಸ್ಸುಳ್ಳವರೂ ಆಗಿರುವರು, ದುರ್ಭಿಕ್ಷವನ್ನೇ ಅರಿಯರು. ಈರೀತಿಯಾಗಿ ಶಾಕದ್ವೀಪವನ್ನು ಸಂಕ್ಷೇಪವಾಗಿ ತಿಳಿಸಿದೆನು. ಮತ್ತೆ ಯಾವುದನ್ನು ತಿಳಿಸಲಿ?

೧೧. ಋಷಿಗಳು ಹೇಳಿದರು: ಎಲೈ ಮಹಾಪ್ರಾಜ್ಞನಾದ ಸೂತನೇ! ಶಾಕದ್ವೀಪವನ್ನು ಸಂಕ್ಷೇಪವಾಗಿ ತಿಳಿಸಿರುವಿ; ಅದನ್ನು ವಿಸ್ತಾರವಾಗಿ ತಿಳಿಸು.

೧೨. ಸೂತನು ಹೇಳಿದನು: ಎಲೈ ಧಾರ್ಮಿಕರಾದ ಮುನಿಗಳೇ! ಈ ಶಾಕದ್ವೀಪದಲ್ಲಿ ಏಳು ಮಣಿಪರ್ವತಗಳಿರವುವು. ಇಲ್ಲಿರುವ ನದಿಗಳು ಕೂಡ ರತ್ನಗಳಿಂದ ತುಂಬಿವೆ. ಆ ಪರ್ವತಗಳ ಮತ್ತು ನದಿಗಳ ಹೆಸರನ್ನು ಹೇಳುತ್ತೇನೆ ಕೇಳಿರಿ.

೧೩–೧೪. ಎಲೈ ಧಾರ್ಮಿಕರಾದ ಮುನಿಗಳೇ! ಅಲ್ಲಿರುವ ವಸ್ತುಗಳೆಲ್ಲವೂ ಸುಗುಣಗಳಿಂದ ಕೂಡಿರುವುವು. ಪರ್ವತಗಳಲ್ಲಿ ಮೊದಲನೆಯದು ಮೇರುವು. ಇದು ದೇವರ್ಷಿಗಳಿಗೂ, ಗಂಧರ್ವರಿಗೂ, ಆಶ್ರಯವಾಗಿರುವುದು. ಪೂರ್ವದಿಕ್ಕಿನಲ್ಲಿ ವಿಶಾಲವಾದ ಮಲಯ ಪರ್ವತವಿರುವುದು. ಈ ಪರ್ವತದಿಂದ ಮೇಘಗಳು ಹೊರಟು ಎಲ್ಲಾ ಕಡೆಯಲ್ಲಿಯೂ ವರ್ಷಿಸುವುವು.

ತತಃ ಪರೇಣ ಮುನಯೋ ಜಲಧಾರೋ ಮಹಾಗಿರಿಃ ।
ತತೋ ನಿತ್ಯಮುಪಾದತ್ತೇ ವಾಸವಃ ಪರಮಂ ಜಲಮ್ ॥೧೫॥
ತತೋ ವರ್ಷಂ ಪ್ರಭವತಿ ವರ್ಷಾಕಾಲೇ ದ್ವಿಜೋತ್ತಮಾಃ ।
ಉಚ್ಚೈರ್ಗಿರೀ ರೈವತಕೋ ಯತ್ರ ನಿತ್ಯಂ ಪ್ರತಿಷ್ಠಿತಮ್ ॥೧೬॥
ರೇವತೀ ದಿವಿ ನಕ್ಷತ್ರಂ ಪಿತಾಮಹಕೃತಾವಧಿಃ ।
ಉತ್ತರೇಣ ತು ವಿಪ್ರೇನ್ದ್ರಾಃ ಶ್ಯಾಮೋ ನಾಮ ಮಹಾಗಿರಿಃ ॥೧೭॥
ನವಮೇಘಪ್ರಭಃ ಪ್ರಾಂಶುಃ ಶ್ರೀಮಾನುಜ್ಜ್ವಲವಿಗ್ರಹಃ ।
ಯತ್ರ ಶ್ಯಾಮತ್ವಮಾಪನ್ನಾಃ ಪ್ರಜಾ ಮುದಿತಮಾನಸಾಃ ॥೧೮॥

॥ ಋಷಯ ಊಚುಃ ॥

ಸುಮಹಾನ್ಸಂಶಯೋಽಸ್ಮಾಕಂ ಪ್ರಾಪ್ತೋಽಯಂ ಸೂತಯಸ್ತಥಾ।
ಪ್ರಜಾಃ ಕಥಂ ಸೂತ ಸಮ್ಯಕ್ಸಂಪ್ರಾಪ್ತಾಃ ಶ್ಯಾಮತಾಮಿಹ ॥೧೯॥

---

೧೫. ಇದರಿಂದಾಚೆಗೆ ಜಲಧಾರವೆಂಬ ಮಹಾಪರ್ವತವಿರುವುದು. ಇದರಿಂದಲೇ, ಮೇಘಗಳಿಗಧಿಪತಿಯಾದ ಇಂದ್ರನು ಜಲವನ್ನು ತೆಗೆದು ಕೊಳ್ಳುವನು.

೧೬–೧೮. ಎಲೈ ಬ್ರಾಹ್ಮಣಶ್ರೇಷ್ಠರೇ! ಮಳೆಗಾಲದಲ್ಲಿ ಇದರಿಂದಲೇ ಎಲ್ಲಾ ಕಡೆಯಲ್ಲಿಯೂ ಮಳೆ ಸುರಿಯುವುದು. ಇದೇ ರೀತಿಯಲ್ಲೇ ರೈವತಕವೆಂಬ ಮಹಾಪರ್ವತವಿರುವುದು. ಈ ಪರ್ವತದ ಮೇಲೆ ರೇವತೀನಕ್ಷತ್ರವು ಇರುವುದು. ಅದೇ ಇದಕ್ಕೆ ಎಲ್ಲೆಯಾಗಿರುವುದು. ಉತ್ತರದಿಕ್ಕಿನಲ್ಲಿ ಶ್ಯಾಮವೆಂಬ ಮಹಾಪರ್ವತವಿರುವುದು. ಈ ಪರ್ವತವು ಆಗತಾನೇ ಉದಿತವಾದ ಮೇಘದ ಕಾಂತಿಯಿಂದ ಕೂಡಿರುವುದು, ಮತ್ತು ಬಹಳ ಎತ್ತರವಾಗಿರುವುದು. ಇಲ್ಲಿ ವಾಸಿಸುವ ಜನರು ಶ್ಯಾಮಲವರ್ಣದಿಂದ ಕೂಡಿ ಸಂತುಷ್ಟಚಿತ್ತರಾಗಿರುವರು.

೧೯. ಋಷಿಗಳು ಹೇಳಿದರು : ಎಲೈ ಸೂತನೆ! ನಮಗೆ ದೊಡ್ಡ ಸಂಶಯ ಉಂಟಾಗಿದೆ. ಏನೆಂದರೆ, ಅಲ್ಲಿರುವ ಜನಗಳು ಏಕೆ ಕಪ್ಪಾಗಿರುವರು ?

॥ ಸೂತ ಉವಾಚ ॥

ಸರ್ವೇಷ್ವೇವ ಮಹಾಪ್ರಾಜ್ಞಾ ದ್ವೀಪೇಷು ಮುನಿಪುಙ್ಗವಾಃ ।
ಗೌರಃ ಕೃಷ್ಣಶ್ಚ ಪತಗೋ ತಯೋರ್ವರ್ಣಾನ್ತರೇ ದ್ವಿಜಾಃ ॥೨೦॥

ಶ್ಯಾಮೋ ಯಸ್ಮಾತ್ಪ್ರವೃತ್ತೋ ವೈ ತಸ್ಮಾಚ್ಛ್ಯಾಮಗಿರಿಃ ಸ್ಮೃತಃ ।
ತತಃ ಪರಂ ಮುನಿಶ್ರೇಷ್ಠಾ ದುರ್ಗಶೈಲೋ ಮಹೋದಯಃ ॥೨೧॥

ಕೇಸರೀ ಕೇಸರಿಯುತೋ ಯತೋ ವಾತಃ ಪ್ರವರ್ತತೇ ।
ತೇಷಾಂ ಯೋಜನವಿಷ್ಕಮ್ಭೋ ದ್ವಿಗುಣಃ ಪ್ರವಿಭಾಗಶಃ ॥೨೨॥

ವರ್ಷಾಣಿ ತೇಷು ವಿಪ್ರೇನ್ದ್ರಾಃ ಸಂಪ್ರೋಕ್ತಾನಿ ಮನೀಷಿಭಿಃ ।
ಮಹಾಮೇರುರ್ಮಹಾಕಾಶೋ ಜಲದಃ ಕುಮುದೋತ್ತರಃ ॥೨೩॥

ಜಲಧಾರೋ ಮಹಾಪ್ರಾಜ್ಞಾಃ ಸುಕುಮಾರ ಇತಿ ಸ್ಮೃತಃ ।
ರೈವತಸ್ಯ ತು ಕೌಮಾರಃ ಶ್ಯಾಮಸ್ಯ ಮಣಿಕಾಞ್ಚನಃ ॥೨೪॥

---

೨೦. ಸೂತನು ಹೇಳಿದನು : ಎಲೈ ಮಹಾಪ್ರಾಜ್ಞರಾದ ಮುನಿಶ್ರೇಷ್ಠರೇ ! ಎಲ್ಲಾ ದ್ವೀಪಗಳಲ್ಲೂ, ಪಕ್ಷಿಯು, ಬೆಳ್ಳಗೂ ಕಪ್ಪಗೂ ಇರುವದಷ್ಟೆ? ಈ ಎರಡು ವರ್ಣಗಳಿಗೆ ಮಧ್ಯಸ್ಥವಾದುದೇ ಈ ಶ್ಯಾಮ ವರ್ಣವು.

೨೧. ಹೀಗೆ ಶ್ಯಾಮವರ್ಣದಿಂದ ಕೂಡಿರುವುದರಿಂದ ಶ್ಯಾಮ ಪರ್ವತವೆಂಬ ಹೆಸರು ಬಂದಿತು. ಎಲೈ ಮುನಿವರ್ಯರೇ ! ಅಲ್ಲಿಂದ ಮುಂದೆ ದುರ್ಗಶೈಲವು ಇರುವುದು.

೨೨–೨೩. ಅಲ್ಲಿ ಕೇಸರೀ ಎಂಬ ಬೆಟ್ಟವಿರುವುದು. ಅದರಲ್ಲಿ ಕೇಸರೀ ಪುಷ್ಪವಿರುವುದು. ಹೀಗೆಯೇ ಈ ಪರ್ವತದಿಂದ ಬೀಸುವ ಗಾಳಿಯು ಕೇಸರಿಯ ಪರಾಗದಿಂದ ಕೂಡಿ ಬೀಸುತ್ತಿರುವುದು. ಈ ಬೆಟ್ಟಗಳ ವೈಶಾಲ್ಯವು, ಅಗಲಕ್ಕಿಂತ ಉದ್ದವು ಒಂದಕ್ಕೆರಡರಷ್ಟಿರುವುದು. ಇಲ್ಲಿರುವ ವರ್ಷಗಳು ಮಹಾಮೇರು, ಮಹಾಕಾಶ, ಜಲದ, ಕುಮುದೋತ್ತರ, ಎಂದು ಪ್ರಸಿದ್ಧವಾಗಿರುವುವು.

೨೪–೨೬. ಜಲಧಾರ, ಸುಕುಮಾರ ಎಂಬ ಎರಡು ವರ್ಷಗಳೂ ಇರುವುವು. ರೈವತದಲ್ಲಿ ಕೌಮಾರನೆಂಬ ಮಹಾಪುರುಷನೂ ಶ್ಯಾಮ

ಕೇಸರಸ್ಯಾಥ ಮೌದಾಕೀ ಪರೇಣ ತು ಮಹಾನ್ ಪುಮಾನ್ ।
ಪರಿವಾರ್ಯ ತು ವಿಪ್ರೇನ್ದ್ರಾ ದೈರ್ಘ್ಯಂ ಹ್ರಸ್ವತ್ವಮೇವ ಚ ॥೨೫॥

ಜಮ್ಬೂದ್ವೀಪೇನ ಸಙ್ಖ್ಯಾತಸ್ತಸ್ಯ ಮಧ್ಯೇ ಮಹಾದ್ರುಮಃ ।
ಶಾಕೋ ನಾಮ ಮಹಾಪ್ರಾಜ್ಞಾಃ ಪ್ರಜಾಸ್ತಸ್ಯ ಸಹಾನುಗಾಃ ॥

ತತ್ರ ಪುಣ್ಯಾ ಜನಪದಾಃ ಪೂಜ್ಯತೇ ತತ್ರ ಶಙ್ಕರಃ ।
ತತ್ರ ಗಚ್ಛನ್ತಿ ಸಿದ್ಧಾಶ್ಚ ಚಾರಣಾ ದೈವತಾನಿ ಚ ॥೨೭॥

ಧಾರ್ಮಿಕಾಶ್ಚ ಪ್ರಜಾಃ ಸರ್ವಾಶ್ಚಾತ್ವಾರಸ್ತತ್ರ ಸತ್ತಮಾಃ ।
ವರ್ಣಾಃ ಸ್ವಕರ್ಮನಿರತಾ ನ ಚ ಸ್ತೇನೋಽತ್ರ ದೃಶ್ಯತೇ ॥೨೮॥

ದೀರ್ಘಾಯುಷೋ ಮಹಾಪ್ರಾಜ್ಞಾ ಜರಾಮೃತ್ಯುವಿವರ್ಜಿತಾಃ ।
ಪ್ರಜಾಸ್ತತ್ರ ವಿವರ್ಧನ್ತೇ ವರ್ಷಾಸ್ವಿವ ಸಮುದ್ರಗಾಃ ॥೨೯॥

---

ಪರ್ವತದಲ್ಲಿ ಮಣಿಕಾಂಚನನೆಂಬ ಮಹಾಪುರುಷನೂ, ಕೇಸರದಲ್ಲಿ ಮೌದಾಕಿ ಎಂಬ ಮಹಾಪುರುಷನೂ, ಇರುವರು. ಹೀಗೆ ಈ ದ್ವೀಪದಲ್ಲಿ ದೀರ್ಘವಾಗಿಯೂ, ಹ್ರಸ್ವವಾಗಿಯೂ, ಇರುವ ಬೆಟ್ಟಗಳು ನಾನಾ ದಿಕ್ಕಿನಲ್ಲಿ ಹರಡಿಕೊಂಡಿರುವುವು. ಈ ಖಂಡದಲ್ಲಿ ಶಾಕವೆಂಬ ದೊಡ್ಡ ವೃಕ್ಷವಿರುವುದು, ಇದನ್ನಾಶ್ರಯಿಸಿ ಅನೇಕ ಪ್ರಜೆಗಳು ವಾಸಿಸುವರು.

೨೭–೨೯. ಈ ಶಾಕವೃಕ್ಷದಿಂದ ಕೂಡಿರುವ ದೇಶದಲ್ಲಿ ನಾನಾ ರಾಷ್ಟ್ರಗಳಿರುವುವು; ಅಲ್ಲಿ ಶಿವನನ್ನು ಅತಿ ಭಕ್ತಿಯಿಂದ ಪೂಜಿಸುವರು. ಇಲ್ಲಿ ಸಿದ್ಧರೂ, ಚಾರಣರೂ, ದೇವತೆಗಳೂ ಬರುವರು. ಇಲ್ಲಿರುವ ಪ್ರಜೆಗಳೆಲ್ಲರೂ, ಧರ್ಮಪರರು. ತಮಗೆ ಉಕ್ತವಾದ ಕರ್ಮಗಳಲ್ಲಿ ನಿರತರಾದ ನಾಲ್ಕು ವರ್ಣಗಳಿರುವುವು. ಇಲ್ಲಿ ಕಳ್ಳನೇ ಕಾಣಬರುವುದಿಲ್ಲ. ಇಲ್ಲಿರುವ ಪ್ರಜೆಗಳು ದೀರ್ಘಾಯುಗಳು; ಮುಪ್ಪನ್ನೂ, ಅಪಮೃತ್ಯುವನ್ನೂ, ಕಂಡವರೇ ಅಲ್ಲ. ವರ್ಷಾಕಾಲದಲ್ಲಿ ಸಮುದ್ರಕ್ಕೆ ಹೋಗುವ ನದಿಗಳಂತೆ ಪ್ರಜೆಗಳು ಅಭಿವೃದ್ಧಿ ಹೊಂದುತ್ತಿರುವರು.

ಪುಣ್ಯಾಃ ಪುಣ್ಯಜಲಾಸ್ತತ್ರ ಗಙ್ಗಾ ಚ ಬಹುಧಾ ಗತಾ ।
ಸುಕುಮಾರೀ ಕುಮಾರೀ ಚ ಸೀತಾ ಶಿವೋದಕಾ ತಥಾ ॥೩೦॥

ಮಹಾನದೀ ಚ ಭೋ ವಿಪ್ರಾಸ್ತಥಾ ಮಣಿಜಲಾ ನದೀ ।
ಇಕ್ಷುವರ್ಧನಿಕಾ ಚೈವ ನದೀ ಮುನಿವರಾಃ ಸ್ಮೃತಾ ॥೩೧॥

ತತಃ ಪ್ರವೃತ್ತಾಃ ಪುಣ್ಯೋದಾ ನದ್ಯಃ ಪರಮಶೋಭನಾಃ ।
ಸಹಸ್ರಾಣಾಂ ಶತಾನ್ಯೇವ ಯತೋ ವರ್ಷತಿ ವಾಸವಃ ॥೩೨॥

ನ ತಾಸಾಂ ನಾಮಧೇಯಾನಿ ಪರಿಮಾಣಂ ತಥೈವ ಚ ।
ಶಕ್ಯತೇ ಪರಿಸಙ್ಖ್ಯಾತುಂ ಪುಣ್ಯಾಸ್ತಾ ಹಿ ಸರಿದ್ವರಾಃ ॥೩೩॥

ತತಃ ಪುಣ್ಯಾ ಜನಪದಾಶ್ಚತ್ವಾರೋ ಲೋಕವಿಶ್ರುತಾಃ ।
ಮೃಗಾಶ್ಚ ಮಶಕಾಶ್ಚೈವ ಮಾನಸಾ ಮಲ್ಲಕಾಸ್ತಥಾ ॥೩೪॥

ಮೃಗಾಶ್ಚ ಬ್ರಹ್ಮಭೂಯಿಷ್ಠಾಃ ಸ್ವಕರ್ಮನಿರತಾ ದ್ವಿಜಾಃ ।
ಮಶಕೇಷು ತು ರಾಜನ್ಯಾ ಧಾರ್ಮಿಕಾಃ ಸರ್ವಕಾಮದಾಃ ॥೩೫॥

---

೩೦–೩೧. ಇಲ್ಲಿರುವ ನದಿಗಳೆಲ್ಲ ಪುಣ್ಯತಮವಾದುವುಗಳು. ಇಲ್ಲಿ ಗಂಗೆಯೂ, ಸುಕುಮಾರೀ, ಕುಮಾರೀ, ಸೀತಾ, ಶಿವೋದಕಾ, ಮಹಾ ನದೀ, ಮಣಿಜಲಾ, ಇಕ್ಷುವರ್ಧನಿಕಾ ಎಂಬ ಹೆಸರುಗಳಿಂದ ಪ್ರಸಿದ್ಧ ವಾಗಿರುವುವು.

೩೨. ಇಲ್ಲಿ ಬೇಕಾದಹಾಗೆ ಇಂದ್ರನು ಮಳೆಗರೆಯುವನು. ಆದುದ ರಿಂದ ಪುಣ್ಯೋದಕಗಳಾದ ಹತ್ತಾರು, ಸಾವಿರಾರು ನದಿಗಳು ಪ್ರವಹಿಸು ತ್ತಿರುವುವು.

೩೩. ಅವುಗಳ ಹೆಸರನ್ನೂ, ಪರಿಮಾಣವನ್ನೂ ಹೇಳಲಾಗುವು ದಿಲ್ಲ. ಒಟ್ಟಿನಲ್ಲಿ ಅಲ್ಲಿರುವ ನದಿಗಳೆಲ್ಲಾ ಪುಣ್ಯವಾದುವುಗಳು.

೩೪. ಇಂತಹ ಪುಣ್ಯನದಿಗಳಿರುವ ಶಾಕದ್ವೀಪದಲ್ಲಿ, ಮೃಗ, ಶಶಕ, ಮಾನಸ, ಮಲ್ಲಕ, ಎಂಬ ನಾಲ್ಕುದೇಶಗಳು ಇರುವುವು.

೩೫–೩೮. ಈ ಮೃಗವೆಂಬ ದೇಶದಲ್ಲಿರುವರಲ್ಲಿ ತಮ್ಮ ಕರ್ಮದಲ್ಲಾ ಸಕ್ತರಾದ ಬ್ರಾಹ್ಮಣರೇ ಹೆಚ್ಚಾಗಿರುವರು. ಮಶಕದೇಶದಲ್ಲಿ ಧರ್ಮ

ಮಾನಸಾಶ್ಚ ಮಹಾಭಾಗಾ ವೈಶ್ಯಧರ್ಮೋಪಜೀವಿನಃ ।
ಸರ್ವಕಾಮಸಮಾಯುಕ್ತಾಃ ಶೂರಾ ಧರ್ಮಾರ್ಥನಿಶ್ಚಿತಾಃ ॥೩೬॥

ಶೂದ್ರಾಸ್ತು ಮಲ್ಲಕಾನಿತ್ಯಂ ಪುರುಷಾ ಧರ್ಮಶೀಲಿನಃ ।
ನ ತತ್ರ ರಾಜಾ ವಿಪ್ರೇನ್ದ್ರ ನ ದಣ್ಡೋ ನ ಚ ದಾಣ್ಡಿಕಾಃ ।
ಸ್ವಧರ್ಮೇಣೈವ ಧರ್ಮಜ್ಞಾಸ್ತೇ ರಕ್ಷನ್ತಿ ಪರಸ್ಪರಮ್ ॥೩೭॥

ಏತಾವದೇವ ಶಕ್ಯಂ ತು ತತ್ರ ದ್ವೀಪೇ ಪ್ರಭಾಷಿತುಮ್ ।
ಏತದೇವ ಚ ಶ್ರೋತವ್ಯಂ ಶಾಕದ್ವೀಪೇ ಮಹೌಜಸಿ ॥೩೮॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಅಷ್ಟಮೋಽಧ್ಯಾಯಃ

---

ಪರರಾಗಿ, ಬೇಕಾದುದನ್ನು ಕೊಟ್ಟು, ಸಂತೋಷಪಡಿಸುವ ಕ್ಷತ್ರಿಯರು ವಾಸಿಸುವರು. ಮಾನಸದೇಶದಲ್ಲಿ ವೈಶ್ಯ ಧರ್ಮವನ್ನಾಶ್ರಯಿಸಿ ಜೀವಿಸುವ, ಧರ್ಮಾರ್ಥಪರರಾದ ಶೂರರು ವಾಸಿಸುತ್ತಾ, ತಮ್ಮ ಕೋರಿಕೆಯನ್ನೆಲ್ಲಾ ಹೊಂದುವರು. ಮಲ್ಲಕದೇಶದಲ್ಲಿ ಶೂದ್ರರು ವಾಸಿಸುವರು. ಇವರೂ ಸಹ ಧರ್ಮಾಸಕ್ತರಾಗಿಯೇ ಇರುವರು. ಇಲ್ಲಿ ರಾಜರಿಲ್ಲ, ಶಿಕ್ಷೆಯಿಲ್ಲ, ಇಲ್ಲಿ ದಂಡಿಸುವವರೂ ಇಲ್ಲ. ಧರ್ಮವನ್ನು ಚನ್ನಾಗಿ ತಿಳಿದಿರುವ, ಆ ಜನರು, ತಮ್ಮ ತಮ್ಮ ಧರ್ಮವನ್ನು ಮಾತ್ರ ಅನುಷ್ಠಾನ ಮಾಡುತ್ತಾ, ಪರಸ್ಪರ ರಕ್ಷಿಸಿಕೊಳ್ಳುವರು. ಶಾಕದ್ವೀಪದ ವಿಷಯದಲ್ಲಿ ಇಷ್ಟುಮಾತ್ರ ಹೇಳಲು ಸಾಧ್ಯವು. ಕೇಳಬೇಕಾದುದೂ ಇಷ್ಟೇ.

ಇಲ್ಲಿಗೆ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ನವಮೋಽಧ್ಯಾಯಃ

॥ ಸೂತ ಉವಾಚ ॥

ಉತ್ತರೇಷು ಚ ಭೋ ವಿಪ್ರಾ ದ್ವೀಪೇಷು ಶ್ರೂಯತೇ ಕಥಾ ।
ಏವಂ ತತ್ರ ಮಹಾಭಾಗಾ ಬ್ರುವತಸ್ತನ್ನಿಬೋಧತ ॥ ೧ ॥

ಘೃತತೋಯಃ ಸಮುದ್ರೋಽತ್ರ ದಧಿಮಣ್ಡೋದಕೋಽಪರಃ ।
ಸುರೋದಃ ಸಾಗರಶ್ಚೈವ ತಥಾನ್ಯೋ ದುಗ್ಧಸಾಗರಃ ॥ ೨ ॥

ಪರಸ್ಪರೇಣ ದ್ವಿಗುಣಾಃ ಸರ್ವೇ ದ್ವೀಪಾಃ ದ್ವಿಜರ್ಷಭಾಃ ।
ಪರ್ವತಾಶ್ಚ ಮಹಾಪ್ರಾಜ್ಞಾಃ ಸಮುದ್ರೈಃ ಪರಿವಾರಿತಾಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಒಂಭತ್ತನೆಯ ಅಧ್ಯಾಯವು.

೧. ಸೂತನು ಹೇಳಿದನು : ಎಲೈ ಭಾಗ್ಯಶಾಲಿಗಳಾದ ಮುನಿವರ್ಯರೇ ! ಉತ್ತರ ದ್ವೀಪಗಳ ವಿಷಯದಲ್ಲಿ ಪ್ರಸಿದ್ಧವಾದ ಕಥೆಯನ್ನು ಹೇಳುವೆನು, ಕೇಳಿರಿ.

೨–೩. ಘೃತತೋಯ, ದಧಿಮಂಡ, ಸುರೋದ, ದುಗ್ಧಸಾಗರ, ಎಂಬುದಾಗಿ ನಾಲ್ಕು ಸಮುದ್ರಗಳು ಒಂದಕ್ಕಿಂತ ಒಂದು ಎರಡರಷ್ಟು ಕ್ರಮವಾಗಿ ದೊಡ್ಡದಾಗಿರುತ್ತವೆ. ಈ ದ್ವೀಪಗಳ ಮತ್ತು ಪರ್ವತಗಳ ಸುತ್ತಲೂ, ಸಮುದ್ರಗಳಿರುವುವು.

ಗೌರಸ್ತು ಮಧ್ಯಮೋ ದ್ವೀಪೇ ಗಿರಿರ್ಮನಃಶಿಲೋ ಮಹಾನ್ ।
ಪರ್ವತಃ ಪಶ್ಚಿಮೋ ಕೃಷ್ಣೋ ನಾರಾಯಣಸಖೋ ದ್ವಿಜಾಃ ॥ ೪ ॥
ತತ್ರ ರತ್ನಾನಿ ದಿವ್ಯಾನಿ ಸ್ವಯಂ ರಕ್ಷತಿ ಕೇಶವಃ ।
ಪ್ರಸನ್ನಶ್ಚಾಭವತ್ತತ್ರ ಪ್ರಜಾನಾಂ ವ್ಯದಧಾತ್ಸುಖಮ್ ॥ ೫ ॥
ಶರದ್ವೀಪೇ ಕುಶಸ್ತಮ್ಬೋ ಮಧ್ಯೇ ಜನಪದಸ್ಯ ಹ ।
ಸಂಪೂಜ್ಯತೇ ಶಾಲ್ಮಲಿಶ್ಚ ದ್ವೀಪೇ ಶಾಲ್ಮಲಿಕೇ ದ್ವಿಜಾಃ ॥ ೬ ॥
ಕ್ರೌಞ್ಚದ್ವೀಪೇ ಮಹಾಕ್ರೌಞ್ಚೋ ಗಿರೀ ರತ್ನಚಯಾಕರಃ ।
ಸಂಪೂಜ್ಯತೇ ಭೋ ವಿಪ್ರೇನ್ದ್ರಾಶ್ಚಾತುರ್ವರ್ಣ್ಯೇನ ನಿತ್ಯದಾ ॥ ೭ ॥
ಗೋಮನ್ತಃ ಪರ್ವತೋ ವಿಪ್ರಾಃ ಸುಮಹಾನ್ಸರ್ವಧಾತುಕಃ ।
ಯತ್ರ ನಿತ್ಯಂ ನಿವಸತಿ ಶ್ರೀಮಾನ್ಕಮಲಲೋಚನಃ ॥ ೮ ॥
ಮೋಕ್ಷಿಭಿಃ ಸಙ್ಗತೋ ನಿತ್ಯಂ ಪ್ರಭುರ್ನಾರಾಯಣೋ ಹರಿಃ ।
ಶರದ್ವೀಪೇ ತು ವಿಪ್ರೇನ್ದ್ರಾಃ ಪರ್ವತೋ ವಿದ್ರುಮೈಶ್ಚಿತಃ ॥ ೯ ॥

---

೪. ಮಧ್ಯಮದ್ವೀಪದಲ್ಲಿ 'ಮನಃಶಿಲೆ' ಎಂಬ ಶ್ವೇತ ಪರ್ವತವಿರುವುದು. ಪಶ್ಚಿಮದಿಕ್ಕಿನಲ್ಲಿ ನಾರಾಯಣನಂತೆ ಕಪ್ಪಾಗಿಯೂ, ನಾರಾಯಣನಿಗೆ ಪ್ರಿಯವಾಗಿಯೂ ಇರುವ, ಕೃಷ್ಣಪರ್ವತವಿರುವುದು.

೫–೬. ಈ ಕೃಷ್ಣಪರ್ವತದಲ್ಲಿರುವ ರತ್ನಗಳನ್ನು ಕೇಶವನೇ ಸಾಕ್ಷಾತ್ತಾಗಿ ಪಾಲಿಸುವನು. ಅವನೇ ಎಲ್ಲಾ ಪ್ರಜೆಗಳಿಗೂ ಸುಖವನ್ನು ಕೊಡುತ್ತಿರುವನು. ಶರದ್ವೀಪದಲ್ಲಿ, ದೇಶದ ಮಧ್ಯದಲ್ಲಿ, ಕುಶಸ್ತಂಭವೆಂಬ ದರ್ಭೆಯ ಕಾಡಿನಿಂದ ಕೂಡಿರುವ ಪ್ರದೇಶವಿರುವುದು. ಶಾಲ್ಮಲಿಕವೆಂಬ ದ್ವೀಪದಲ್ಲಿ ಒಂದು ಬೂರುಗದ ಮರವು ಪೂಜಿಸಲ್ಪಡುತ್ತಿರುವುದು.

೭–೮. ಕ್ರೌಂಚದ್ವೀಪದಲ್ಲಿ ರತ್ನರಾಶಿಗಳಿಂದ ಕೂಡಿದ ಕ್ರೌಂಚಪರ್ವತವನ್ನು ನಾಲ್ಕು ವರ್ಣದವರೂ ಸದಾ ಪೂಜಿಸುವರು. ಗೋಮಂತಪರ್ವತವು ಸರ್ವಧಾತುಗಳಿಂದ ಕೂಡಿ, ನಾರಾಯಣನ ವಾಸಕ್ಕೆ ಪ್ರಿಯವಾಗಿರುವುದು.

೯–೧೦. ಈ ಪರ್ವತದಲ್ಲಿ ಮೋಕ್ಷಾರ್ಥಿಗಳು ಸರ್ವಜಗತ್ಪ್ರಭುವಾದ, ಪಾಪವನ್ನು ಪರಿಹರಿಸುವ, ಶ್ರೀಮನ್ನಾರಾಯಣನನ್ನು ಸೇವಿಸು

ಸುನಾಮಾ ಚ ಸುದುರ್ಧರ್ಷೋ ದ್ವಿತೀಯೋ ಹೇಮಪರ್ವತಃ ।
ದ್ಯುತಿಮಾನ್ನಾಮ ವಿಪ್ರೇನ್ದ್ರಾಸ್ತೃತೀಯಃ ಕುಮುದೋ ಗಿರಿಃ ॥
ಚತುರ್ಥಃ ಪುಷ್ಪವಾನ್ನಾಮ ಪಞ್ಚಮಸ್ತು ಕುಶೇಶಯಃ ।
ಷಷ್ಠೋ ಹರಿಗಿರಿರ್ನಾಮ ಷಡೇತೇ ಪರ್ವತೋತ್ತಮಾಃ ॥೧೧॥
ತೇಷಾಮನ್ತರವಿಷ್ಕಮ್ಭೋ ದ್ವಿಗುಣಃ ಪರ್ವಭಾಗಶಃ ।
ಔದ್ಭಿದಂ ಪ್ರಥಮಂ ವರ್ಷಂ ದ್ವಿತೀಯಂ ರೇಣುಮಣ್ಡಲಮ್ ॥೧೨॥
ತೃತೀಯಂ ಸುರಥಂ ನಾಮ ಚತುರ್ಥಂ ಲಮ್ಬನಂ ಸ್ಮೃತಮ್ ।
ಧೃತಿಮತ್ಪಞ್ಚಮಂ ವರ್ಷಂ ಷಷ್ಠಂ ವರ್ಷಂ ಪ್ರಭಾಕರಮ್ ॥೧೩॥
ಸಪ್ತಮಂ ಕಾಪಿಲಂ ವರ್ಷಂ ಸಪ್ತೈತೇ ವರ್ಷಲಮ್ಭಕಾಃ ।
ಏತೇಷು ದೇವಗನ್ಧರ್ವಾಃ ಪ್ರಜಾಶ್ಚ ಮುದಿತಾ ದ್ವಿಜಾಃ ।
ವಿಹರನ್ತಿ ರಮನ್ತೇ ಚ ನ ತೇಷು ಮ್ರಿಯತೇ ಜನಃ ॥೧೪॥

---

ತ್ತಿರುವರು. ಶರದ್ವೀಪದಲ್ಲಿ 'ಸುನಾಮ' ಎಂಬ ಹವಳದ ಪರ್ವತವಿರುವುದು. ಸುವರ್ಣಮಯವಾದ 'ದ್ಯುಮತ್' ಎಂಬುದು ಎರಡನೆಯ ಪರ್ವತವು ಮತ್ತು ಕುಮುದಗಿರಿಯು ಮೂರನೆಯದು.

೧೧. ನಾಲ್ಕನೆಯದು ಪುಷ್ಪವತ್ಪರ್ವತವು, ಐದನೆಯದು 'ಕುಶೇಶಯ' ಎಂದು ಪ್ರಸಿದ್ಧವಾಗಿರುವುದು, ಆರನೆಯದು 'ಹರಿಗಿರಿ' ಎಂದು ಹೆಸರುಳ್ಳದ್ದು ; ಈ ರೀತಿಯಾಗಿ ಆರು ಪರ್ವತಶ್ರೇಷ್ಠಗಳಿರುವುವು.

೧೨-೧೪. ಆ ಪರ್ವತಗಳ ಅಳತೆಯು ಪೂರ್ವಭಾಗಗಳಲ್ಲಿ ಎರಡರಷ್ಟಿರುವುದು. ಈ ಪರ್ವದ ಪ್ರಾಂತದ ವರ್ಷಗಳು ಏಳು, ಮೊದಲನೆಯದು ಔದ್ಭಿದ, ಎರಡನೆಯದು ರೇಣುಮಂಡಲ, ಮೂರನೆಯದು ಸುರಥ, ನಾಲ್ಕನೆಯದು ಲಂಬನ, ಐದನೆಯದು ಧೃತಿಮತ್, ಆರನೆಯದು ಪ್ರಭಾಕರ, ಏಳನೆಯದು ಕಾಪಿಲ, ಈ ರೀತಿಯಾಗಿ ಏಳು ವರ್ಷಗಳು. ಈ ವರ್ಷಗಳಲ್ಲಿ ದೇವತೆಗಳೂ, ಗಂಧರ್ವರೂ, ಸಂತೋಷವಾಗಿರುವರು. ಇಲ್ಲಿರುವವರಿಗೆ ಮೃತಿಯ ಭಯವೇ ಇಲ್ಲ.

ನ ತೇಷು ದಸ್ಯವಃ ಸನ್ತಿ ಮ್ಲೇಚ್ಛಜಾತ್ಯೋಽಪಿ ವಾದ್ವಿಜಾಃ ।
ಗೌರಃ ಪ್ರಾಯೋ ಜನಃ ಸರ್ವ ಸುಕುಮಾರಶ್ಚ ಸತ್ತಮಾಃ ॥೧೫॥
ಅವಶಿಷ್ಟೇಷು ಸರ್ವೇಷು ವಕ್ಷ್ಯಾಮಿ ದ್ವಿಜಪುಙ್ಗವಾಃ ।
ಯಥಾಶ್ರುತಂ ಮಹಾಪ್ರಾಜ್ಞಾ ವರ್ಣ್ಯತೇ ಶೃಣುತ ದ್ವಿಜಾಃ ॥೧೬॥
ಕ್ರೌಞ್ಚದ್ವೀಪೇ ಮಹಾಭಾಗಾಃ ಕ್ರೌಞ್ಚೋ ನಾಮ ಮಹಾಗಿರಿಃ ।
ಕ್ರೌಞ್ಚಾತ್ಪರೋ ವಾಮನಕೋ ವಾಮನಾದನ್ಧಕಾರಕಃ ॥೧೭॥
ಅನ್ಧಕಾರಾತ್ಪರೋ ವಿಪ್ರಾ ಮೈನಾಕಃ ಪರ್ವತೋತ್ತಮಃ ।
ಮೈನಾಕಾತ್ಪರತೋ ವಿಪ್ರಾ ಗೋವಿನ್ದೋ ಗಿರಿರುತ್ತಮಃ ॥೧೮॥
ಗೋವಿನ್ದಾತ್ಪರತಶ್ಚೈವ ಪುಣ್ಡರೀಕೋ ಮಹಾಗಿರಿಃ ।
ಪುಣ್ಡರೀಕಾತ್ಪರಶ್ಚಾಪಿ ಪ್ರೋಚ್ಯತೇ ದುನ್ದುಭಿಸ್ವನಃ ॥೧೯॥
ಪುರಸ್ತಾದ್ದ್ವಿಗುಣಸ್ತೇಷಾಂ ವಿಷ್ಕಮ್ಭೋ ಮುನಿಪುಙ್ಗವಾಃ ।
ದೇಶಾಂಸ್ತತ್ರ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥೨೦॥

---

೧೫-೧೬. ಈ ವರ್ಷಗಳಲ್ಲಿ ಕಳ್ಳರ ಹೆಸರೇ ಇಲ್ಲ, ಮ್ಲೇಚ್ಛರೂ ಇಲ್ಲ. ಇಲ್ಲಿರುವರೆಲ್ಲಾ ಬಿಳಿಯ ಜನರು. ಆ ಜನರಾದರೋ ಸುಕುಮಾರವಾದ ಅವಯವ ಉಳ್ಳವರು. ಎಲೈ ಬ್ರಾಹ್ಮಣೋತ್ತಮರೇ! ಉಳಿದ ದೇಶಗಳಲ್ಲೆಲ್ಲಾ ನಾನು ಕೇಳಿರುವ ಮೇರೆಗೆ ವರ್ಣಿಸುವೆನು, ಕೇಳಿರಿ.

೧೭-೨೦. ಕ್ರೌಂಚದ್ವೀಪದಲ್ಲಿ ಕ್ರೌಂಚಪರ್ವತವಿರುವುದು. ಆ ಕ್ರೌಂಚಪರ್ವತದಿಂದಾಚೆಗೆ ವಾಮನ ಪರ್ವತವಿರುವುದು. ಅದರ ಇನ್ನೊಂದು ಭಾಗದಲ್ಲಿ ಅಂಧಕಾರ ಪರ್ವತವಿರುವುದು. ಇದರಿಂದ ಹೊರಗೆ ಮೈನಾಕ ಪರ್ವತವಿರುವುದು. ಮೈನಾಕದಿಂದ ಆಚೆಗೆ ಗೋವಿಂದ ಪರ್ವತವು, ಗೋವಿಂದಪರ್ವತವು ಕಳೆದನಂತರ ಪುಂಡರೀಕ ಪರ್ವತವಿರುವುದು. ಪುಂಡರೀಕದ ಮುಂದೆ ದುಂದುಭಿಸ್ವನವೆಂಬ ಪರ್ವತವಿರುವುದು. ಈ ಪರ್ವತಗಳ ಅಳತೆಯು ಹಿಂದೆ ಹೇಳಿದ ಪರ್ವತಗಳ ಕ್ರಮವನ್ನನುಸರಿಸಿ ಒಂದಕ್ಕೆರಡಾಗಿರುವುದು. ಎಲೈ ಋಷಿಗಳೇ! ಅಲ್ಲಿರುವ ದೇಶಗಳನ್ನು ವರ್ಣಿಸುವೆನು ಕೇಳಿರಿ.

ಕ್ರೌಞ್ಚಸ್ಯ ಕುಶಲೋ ದೇಶೋ ವಾಮನಸ್ಯ ಮನೋನುಗಃ।
ಮನೋನುಗಾತ್ಪರೋ ದೇಶ ಉಷ್ಣೋ ನಾಮ ತಪೋಧನಾಃ॥೨೧॥

ಉಷ್ಣಾತ್ಪರಃ ಪ್ರಾವರಕಃ ಪ್ರಾವರಾದನ್ಧಕಾರಕಃ।
ಅನ್ಧಕಾರಕದೇಶಾತ್ತು ಮುನಿದೇಶಃ ಪರಃ ಸ್ಮೃತಃ ॥೨೨॥

ಮುನಿದೇಶಾತ್ಪರಶ್ಚೈವ ಪ್ರೋಚ್ಯತೇ ದುನ್ದುಭಿಸ್ವನಃ।
ಸಿದ್ಧಚಾರಣಸಙ್ಕೀರ್ಣೋ ಗೌರಃ ಪ್ರಾಯೋ ಜನಃ ಸ್ಮೃತಃ॥೨೩॥

ಏತೇ ದೇಶಾಃ ಸಮಾಖ್ಯಾತಾ ದೇವಗನ್ಧರ್ವಸೇವಿತಾಃ।
ಪುಷ್ಕರೇ ಪುಷ್ಕರೋ ನಾಮ ಪರ್ವತೋ ಮಣಿರತ್ನವಾನ್ ॥೨೪॥

ತತ್ರ ನಿತ್ಯಂ ಪ್ರಸರತಿ ಸ್ವಯಂ ದೇವಃ ಪ್ರಜಾಪತಿಃ।
ಪರ್ಯುಪಾಸನ್ತಿ ತೇ ನಿತ್ಯಂ ದೇವಾಃ ಸರ್ವೇ ಮಹರ್ಷಯಃ॥೨೫॥

ವಾಗ್ಭಿರ್ಮನೋನುಕೂಲಾಭಿಃ ಪೂಜಯನ್ತೋ ದ್ವಿಜೋತ್ತಮಾಃ।
ಜಮ್ಬೂದ್ವೀಪಾತ್ಪ್ರವರ್ತನ್ತೇ ರತ್ನಾನಿ ವಿವಿಧಾನಿ ಚ ॥೨೬॥

---

೨೧–೨೪. ಕ್ರೌಂಚಪರ್ವತದ ಸಮೀಪದಲ್ಲಿರುವ ದೇಶವು ಕುಶಲವೆಂದು ಪ್ರಸಿದ್ಧವಾಗಿರುವುದು. ವಾಮನ ಪರ್ವತಕ್ಕೆ ಸನ್ನಿಹಿತವಾದುದು, ಪ್ರಸಿದ್ಧವಾದ ಮನೋನುಗವೆಂಬ ದೇಶವು. ಈ ಮನೋನುಗದ ಆಚೆಗೆ ಇರುವುದು ಉಷ್ಣದೇಶವು, ಉಷ್ಣದೇಶದ ಹೊರಗೆ ಪ್ರಾವರಕ ದೇಶವು, ಇದರ ಮುಂದೆ ಅಂಧಕಾರಕದೇಶವು, ಅದರ ಮುಂದೆ ಮುನಿದೇಶವು, ಮುನಿದೇಶದ ಮುಂದೆ ದುಂದುಭಿದೇಶವು. ಇಲ್ಲಿರುವ ಜನರು ಪ್ರಾಯಶಃ ಗೌರವರ್ಣಉಳ್ಳವರು. ಈ ದೇಶಗಳೆಲ್ಲವೂ ದೇವತೆಗಳಿಗೂ, ಗಂಧರ್ವರಿಗೂ, ವಾಸಸ್ಥಾನಗಳು. ಪುಷ್ಕರದೇಶದಲ್ಲಿ ಶ್ರೇಷ್ಠರತ್ನಗಳುಳ್ಳ ಪುಷ್ಕರ ಪರ್ವತವಿರುವುದು.

೨೫. ಈ ಪುಷ್ಕರದೇಶದಲ್ಲಿ ಹರಿಯೇ ಪ್ರಜಾಪಾಲಕನಾಗಿ ಸಂಚರಿಸುವನು. ಆ ಹರಿಯನ್ನು ಸಮಸ್ತದೇವತೆಗಳೂ, ಮಹರ್ಷಿಗಳೂ ಯಾವಾಗಲೂ ಭಜಿಸುವರು.

೨೬–೨೮. ಈ ದೇವಮಹರ್ಷಿಗಳು ಹರಿಯನ್ನು ನಾನಾವಿಧವಾಗಿ ಸ್ತೋತ್ರಮಾಡುತ್ತಾ, ಪೂಜಿಸುವರು. ಜಂಬೂದ್ವೀಪದಿಂದ ನಾನಾ

ದ್ವೀಪೇಷು ತೇಷು ಸರ್ವೇಷು ಪ್ರಜಾನಾಂ ಮುನಿಸತ್ತಮಾಃ ।
ವಿಪ್ರಾಣಾಂ ಬ್ರಹ್ಮಚರ್ಯೇಣ ಸತ್ಯೇನ ಚ ದಮೇನ ಚ ॥೨೭॥

ಆರೋಗ್ಯಾಯುಷ್ಪ್ರಮಾಣಾಭ್ಯಾಂ ದ್ವಿಗುಣಂ ದ್ವಿಗುಣಂ ತತಃ ।
ಏತೇ ಜನಪದಾ ವಿಪ್ರಾ ದ್ವೀಪೇಷು ತೇಷು ಸತ್ತಮಾಃ ।
ಉಕ್ತಾ ಜನಪದಾ ಯೇಷು ಧರ್ಮಶ್ಚೈಕಃ ಪ್ರವರ್ತತೇ ॥೨೮॥

ಈಶ್ವರೋ ದಣ್ಡಮುದ್ಯಮ್ಯ ಸ್ವಯಮೇವ ಪ್ರಜಾಪತಿಃ ।
ದ್ವೀಪಾನೇತಾನ್ಮುನಿವರಾನ್ರಕ್ಷಂಸ್ತಿಷ್ಠತಿ ಸರ್ವದಾ ॥೨೯॥

ಸ ರಾಜಾ ಸ ಶಿವೋ ವಿಪ್ರಾಃ ಸ ಪಿತಾ ಸ ಪಿತಾಮಹಃ ।
ಗೋಪಾಯತಿ ದ್ವಿಜಶ್ರೇಷ್ಠಾಃ ಪ್ರಜಾಃ ಸದ್ವಿಜಪಣ್ಡಿತಾಃ ॥೩೦॥

ಭೋಜನಮತ್ರ ವಿಪ್ರೇನ್ದ್ರಾಃ ಪ್ರಜಾಃ ಸ್ವಯಮುಪಸ್ಥಿತಮ್ ।
ಸಿದ್ಧಮೇವ ಮಹಾಭಾಗಾ ಭುಞ್ಜತೇ ತದ್ಧಿ ನಿತ್ಯದಾ ॥೩೧॥

---

ವಿಧವಾದ ರತ್ನಗಳು ಹೊರಕ್ಕೆ ಹೋಗುವುವು. ಈ ದ್ವೀಪಗಳಲ್ಲಿ ವಾಸಿಸುವ ಪ್ರಜೆಗಳೂ ಮತ್ತು ಬ್ರಾಹ್ಮಣರೂ, ಬ್ರಹ್ಮಚರ್ಯ, ಸತ್ಯ ಮತ್ತು ಇಂದ್ರಿಯನಿಗ್ರಹ ಇವುಗಳಿಂದ ಕೂಡಿರುವರು. ಹೀಗೆ ಅಂತರಿಂದ್ರಿಯ, ಬಹಿರಿಂದ್ರಿಯಗಳನ್ನು ನಿಗ್ರಹಿಸಿರುವ ಈ ಋಷಿಗಳು, ದ್ವಿಗುಣವಾಗಿ ಆರೋಗ್ಯವನ್ನೂ, ಆಯುಸ್ಸನ್ನೂ, ಹೊಂದಿರುವರು. ಹೀಗೆ ವರ್ಣಿಸಲ್ಪಟ್ಟ ದ್ವೀಪಗಳಲ್ಲಿರುವ ದೇಶಗಳಲ್ಲಿ ಧರ್ಮಮಾತ್ರವೇ ಸ್ಥಿರವಾಗಿ ನಡೆಯುವುದು.

೨೯–೩೦. ಇಲ್ಲಿ ಹರಿಯೇ ದಂಡಧಾರಣ ಮಾಡಿ, ಈ ದ್ವೀಪಗಳನ್ನೂ ಮತ್ತು ಎಲ್ಲಾ ಋಷಿವರ್ಯರನ್ನೂ ಯಾವಾಗಲೂ ರಕ್ಷಿಸುವನು. ಆ ಹರಿಯೇ ರಾಜನು, ಅವನೇ ಶಿವನು, ಅವನೇ ತಂದೆಯು, ಅವನೇ ಬ್ರಹ್ಮನು. ಹೀಗೆ ಸರ್ವಸ್ವರೂಪಿಯಾದ ಆ ಹರಿಯು ಎಲ್ಲಾ ಪ್ರಜೆಗಳನ್ನೂ, ವಿಶೇಷವಾಗಿ ಮುನಿಗಳನ್ನೂ, ಪಂಡಿತರನ್ನೂ ಕಾಪಾಡುವನು.

೩೧–೩೨. ಇಲ್ಲಿರುವ ಪ್ರಜೆಗಳು ಸಿದ್ಧವಾಗಿ ತಾನಾಗಿಯೇ ಒದಗಿದ ಭೋಜನವನ್ನು ಭುಜಿಸಿ, ತೃಪ್ತರಾಗುವರು. ಅಲ್ಲಿಂದ ಮುಂದೆ ಚಚ್ಚಾ

ತತಃ ಪರಂ ಮಹಾಶೈಲೋ ದೃಶ್ಯತೇ ಲೋಕಸಂಸ್ಥಿತಿಃ ।
ಚತುರಸ್ರೋ ಮಹಾಪ್ರಾಜ್ಞಾಃ ಸರ್ವತಃ ಪರಿಮಣ್ಡಲಃ ॥೩೨॥

ತತ್ರ ತಿಷ್ಠನ್ತಿ ವಿಪ್ರೇನ್ದ್ರಾಶ್ಚತ್ವಾರೋ ಲೋಕಸಮ್ಮತಾಃ ।
ದಿಗ್ಗಜಾ ಹಿ ಮುನಿಶ್ರೇಷ್ಠಾ ವಾಮನೈರಾವತಾದಯಃ ॥೩೩॥

ಸುಪ್ರತೀಕಸ್ತಥಾ ವಿಪ್ರಾಃ ಪ್ರಭಿನ್ನಕರಟಾಮುಖಾಃ ।
ತಸ್ಯಾಹಂ ಪರಿಮಾಣಂ ತು ನ ಸಂಖ್ಯಾತುಮಿಹೋತ್ಸಹೇ ॥೩೪॥

ಅಸಂಖ್ಯಾತಃ ಸ ನಿತ್ಯಂ ಹಿ ತಿರ್ಯಗೂರ್ಧ್ವಮಧಸ್ತಥಾ ।
ತತ್ರ ವೈ ವಾಯವೋ ವಾನ್ತಿ ದಿಗ್ಭ್ಯಃ ಸರ್ವಾಭ್ಯ ಏವ ಚ ॥೩೫॥

ಅಸಂಬನ್ಧಾ ಮುನಿಶ್ರೇಷ್ಠಾಸ್ತಾನ್ನಿಗೃಹ್ಣನ್ತಿ ತೇ ಗಜಾಃ ।
ಪುಷ್ಕರೈಃ ಪದ್ಮಸಂಕಾಶೈರ್ನಿಕರ್ಷನ್ತಿ ಮಹಾಪ್ರಭೈಃ ॥೩೬॥

ಶತಧಾ ಪುನರೇವಾಶು ತೇ ತಾನ್ಮುಞ್ಚನ್ತಿ ನಿತ್ಯಶಃ ।
ಶ್ವಸದ್ಭಿರ್ಮುಖನಾಸಾಭ್ಯಾಂ ದಿಗ್ಗಜೈರಿವ ಮಾರುತಾಃ ॥೩೭॥

---

ಕವಾದ ಸುತ್ತಳತೆಯುಳ್ಳ ಮಹಾಶೈಲವು ದೃಗ್ಗೋಚರವಾಗುವುದು. ಈ ಪರ್ವತದಲ್ಲಿ, ವಾಮನ, ಐರಾವತ, ಸುಪ್ರತೀಕ, ಮತ್ತು ಪ್ರಭಿನ್ನ ಕರಟ ಎಂಬ ನಾಲ್ಕು ದಿಗ್ಗಜಗಳು ವಾಸಿಸುವುವು.

೩೪–೩೫. ಈ ಗಜಗಳಾದರೋ ಗಂಡಪ್ರದೇಶಗಳಲ್ಲಿ ಮದೋದಕ ವನ್ನು ಸುರಿಸುವುವು. ಈ ಪರ್ವತದ ಅಳತೆಯನ್ನು ಹೇಳಲು ನಾನು ಉತ್ಸಾಹಪಡುವುದಿಲ್ಲ. ಏಕೆಂದರೆ, ಈ ಪರ್ವತದ ಎತ್ತರವೂ, ಅಗಲವೂ, ಮೂಲವೂ, ಗಣನೆಗೆ ಸಿಕ್ಕುವುದಿಲ್ಲ. ಈ ಪರ್ವತದಲ್ಲಿ ಎಲ್ಲಾ ದಿಕ್ಕು ಗಳಲ್ಲಿಯೂ, ಯಥೇಷ್ಟವಾಗಿ ವಾಯುವು ಬೀಸುವುದು.

೩೬–೩೭. ಅಲ್ಲಿನ ಆನೆಗಳಾದರೋ ಪದ್ಮಸದೃಶವಾದ ತಮ್ಮಸೊಂಡಿಲ ತುದಿಯಿಂದ ವಾಯುವನ್ನು ಯಥೇಚ್ಛವಾಗಿ ತೆಗೆದುಕೊಳ್ಳುವುವು. ಹೀಗೆ ತೆಗೆದುಕೊಂಡ ವಾಯುವನ್ನು ಮೂಗಿನಿಂದಲೂ, ಬಾಯಿಯಿಂದಲೂ, ಬಿಡುವುವು. ಹೀಗೆ ಶ್ವಾಸರೂಪವಾಗಿ ಸಂಚರಿಸುವ ವಾಯುವನ್ನು ನೋಡಿ ಜನರು, ಈ ಗಜಗಳಿಂದಲೇ ವಾಯುವು ಉತ್ಪನ್ನವಾಗಿ ಸಂಚರಿಸು ತ್ತಿರುವುದೋ ಎಂದು ಊಹಿಸುವರು.

ಆಗಚ್ಛನ್ತಿ ದ್ವಿಜಶ್ರೇಷ್ಠಾಸ್ತತ್ರ ತಿಷ್ಠನ್ತಿ ವೈ ಪ್ರಜಾಃ ।
ಯಥೋದ್ದಿಷ್ಟಂ ಮಯಾ ಪ್ರೋಕ್ತಂ ಸಂನಿರ್ಮಾಣಮಿದಂ ಜಗತ್ ॥
ಶ್ರುತ್ವೇದಂ ಪೃಥಿವೀಮಾನಂ ಪುಣ್ಯದಂ ಚ ಮನೋಽನುಗಮ್ ।
ಶ್ರೀಮಾಂಸ್ತರತಿ ವಿಪ್ರೇನ್ದ್ರಾಃ ಸಿದ್ಧಾರ್ಥಃ ಸಾಧುಸಮ್ಮತಃ ।
ಆಯುರ್ಬಲಂ ಚ ಕೀರ್ತಿಶ್ಚ ಪಸ್ಯ ತೇಜಶ್ಚ ವರ್ಧತೇ ॥೩೯॥
ಯಃ ಶೃಣೋತಿ ಸಮಾಖ್ಯಾನಂ ಪರ್ವಣೀದಂ ಧೃತವ್ರತಃ ।
ಪ್ರೀಯನ್ತೇ ಪಿತರಸ್ತಸ್ಯ ತಥೈವ ಚ ಪಿತಾಮಹಾಃ ॥೪೦॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ನವಮೋಽಧ್ಯಾಯಃ

---

೩೮–೪೦. ಈ ಪ್ರದೇಶದಲ್ಲಿ ವಾಸಿಸುವ ಪ್ರಜೆಗಳಿಗೆ ಸರ್ವಸೌಖ್ಯಗಳು ಕರಗತಗಳಾಗುವುವು. ಹೀಗೆ, ಮೊದಲು ಉದ್ದೇಶಮಾಡಿದಂತೆ ಜಗತ್ತಿನ ಸೃಷ್ಟಿಯನ್ನು ತಿಳಿಸಿರುವೆನು. ಈ ರೀತಿಯಾಗಿ ಪೃಥಿವೀಪರಿಮಾಣವನ್ನು ಕೇಳಿದ ಸತ್ಪುರುಷನು ಪುಣ್ಯವನ್ನು ಹೊಂದುವನು. ಇವನ ಸಮಸ್ತ ಕೋರಿಕೆಗಳೂ ಕೈಗೂಡುವುವು. ಇವನಲ್ಲಿ, ಆಯುಸ್ಸು, ಬಲ, ಕೀರ್ತಿ, ಮತ್ತು ತೇಜಸ್ಸು ಇವುಗಳು ವೃದ್ಧಿಯನ್ನು ಹೊಂದುವುವು. ಪರ್ವಕಾಲದಲ್ಲಿ ನಿಯಮದಿಂದ ಕೂಡಿ ಈ ಸಮಾಖ್ಯಾನವನ್ನು ಕೇಳಿದವನ ಪಿತೃಪಿತಾಮಹಾದಿಗಳೂ ತೃಪ್ತರಾಗುವರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದಶಮೋಽಧ್ಯಾಯಃ

॥ ಋಷಯ ಊಚುಃ ॥

ಪೃಥಿವ್ಯಾ ಹಿ ಪರಿಮಾಣಂ ಸಂಸ್ಥಾನಂ ಸರಿತಸ್ತಥಾ ।
ತ್ವತ್ತಃ ಶ್ರುತ್ವಾ ಮಹಾಭಾಗ ಅಮೃತಂ ಪೀತಮೇವ ಚ ॥ ೧ ॥
ತತ್ರ ಭೂಮೌ ಚ ತೀರ್ಥಾನಿ ಪಾವನಾನೀತಿ ನಃ ಶ್ರುತಮ್ ।
ಆಚಕ್ಷ್ವ ತಾನಿ ಸರ್ವಾಣಿ ಯಥಾಫಲಕರಾಣಿ ಚ ।
ಸವಿಶೇಷಂ ಮಹಾಪ್ರಾಜ್ಞ ಶ್ರೋತುಮಿಚ್ಛಾಮಹೇ ತವ ॥ ೨ ॥

॥ ಸೂತ ಉವಾಚ ॥

ಧನ್ಯಂ ಪುಣ್ಯಂ ಮಹಾಖ್ಯಾನಂ ಪೃಷ್ಟಮೇವ ತಪೋಧನಾಃ ।
ಯಥಾಮತಿ ಪ್ರವಕ್ಷ್ಯಾಮಿ ಯಥಾಯೋಗಂ ಯಥಾಶ್ರುತಮ್ ॥

---

### ಪದ್ಮಪುರಾಣದಲ್ಲಿ ಆದಿಖಂಡದ ಹತ್ತನೆಯ ಅಧ್ಯಾಯವು

೧–೨. ಋಷಿಗಳು ಹೇಳಿದರು : ಎಲೈ ಸೂತನೇ! ಪೃಥಿವಿಯ ಅಳತೆಯನ್ನೂ, ಅದರ ಸನ್ನಿವೇಶವನ್ನೂ, ಆಯಾಯ ನದಿಗಳನ್ನೂ, ನಿನ್ನಿಂದಲೇ ಕೇಳಿದರೆ, ಅಮೃತ ಪಾನಮಾಡಿದಂತೆಯೇ ಸರಿ. ಭೂಮಿಯಲ್ಲಿರುವ ನದಿಗಳು ಸರ್ವಪಾಪಗಳನ್ನು ಪರಿಹರಿಸತಕ್ಕವುಗಳೆಂದು ನಾವು ಕೇಳಿರುವೆವು. ಅವುಗಳು ಎಂತೆಂತಹ ಫಲಗಳನ್ನು ಕೊಡುವುವು ಎಂಬುವನ್ನು ವಿಸ್ತಾರವಾಗಿ ಹೇಳು, ಕೇಳಬೇಕೆಂದು ಬಹಳ ಕುತೂಹಲಪಡುತ್ತಿರುವೆವು.

೩. ಸೂತನು ಹೇಳಿದನು: ಎಲೈ ಮುನಿವರ್ಯರೇ! ನೀವು ಕೇಳಬೇಕಾದುದನ್ನೇ ಕೇಳಿದಿರಿ. ಇದನ್ನು ಕೇಳುವುದರಿಂದ, ಮನುಷ್ಯನು ಸಂಪಾದಿಸಬೇಕಾದುದನ್ನು ಸಂಪಾದಿಸಿದಂತಾಗುವುದು, ಪುಣ್ಯವನ್ನೂ ಕೂಡಿಹಾಕಿದಂತಾಗುವುದು. ನನಗೆ ತಿಳಿದಮಟ್ಟಿಗೆ ಹೇಳುತ್ತೇನೆ.

ಪುರಾತನಂ ಪ್ರವಕ್ಷ್ಯಾಮಿ ದೇವರ್ಷೇರ್ನಾರದಸ್ಯ ಹಿ ।
ಯುಧಿಷ್ಠಿರೇಣ ಸಂವಾದಂ ಶೃಣುತ ದ್ವಿಜಸತ್ತಮಾಃ ॥ ೪ ॥

ಹೃತರಾಜ್ಯಾಃ ಪಾಣ್ಡುಪುತ್ರಾ ವನೇ ತಸ್ಮಿನ್ಮಹಾರಥಾಃ ।
ನಿವಸನ್ತಿ ಮಹಾಭಾಗಾ ದ್ರೌಪದ್ಯಾ ಸಹ ಪಾಣ್ಡವಾಃ ॥ ೫ ॥

ಅಥಾಪಶ್ಯನ್ಮಹಾತ್ಮಾನಂ ದೇವರ್ಷಿಂ ತತ್ರ ನಾರದಮ್ ।
ದೀಪ್ಯಮಾನಂ ಶ್ರಿಯಾ ಬ್ರಾಹ್ಮ್ಯಾ ದೀಪ್ತಾಗ್ನಿಸಮತೇಜಸಮ್ ॥

ಸ ತೈಃ ಪರಿವೃತಃ ಶ್ರೀಮಾನ್ಭ್ರಾತೃಭಿಃ ಕುರುನನ್ದನಃ ।
ದಿವಿ ಭಾತಿ ಹಿ ದೀಪ್ತೌಜಾ ದೇವೈರಿವ ಶತಕ್ರತುಃ ॥ ೭ ॥

ಯಥಾ ಚ ದೇವಾನ್ಸಾವಿತ್ರೀ ಯಾಜ್ಞಸೇನೀ ತಥಾ ಪತೀನ್ ।
ನ ಜಹೌ ಧರ್ಮತಃ ಪಾರ್ಥಾನ್ಮೇರುಮರ್ಕಪ್ರಭಾ ಯಥಾ ॥ ೮ ॥

---

೪. ಎಲೈ ಬ್ರಾಹ್ಮಣೋತ್ತಮರೇ! ಪೂರ್ವಕಾಲದಲ್ಲಿ, ನಾರದ ಮುನಿಗೂ ಯುಧಿಷ್ಠಿರನಿಗೂ ನಡೆದ ಸಂವಾದವನ್ನು ಹೇಳುವೆನು, ಕೇಳಿರಿ.

೫. ಮಹಾರಥರಾದ ಪಾಂಡುಪುತ್ರರು ರಾಜ್ಯವನ್ನು ಕಳೆದು ಕೊಂಡು, ಕಾಡಿನಲ್ಲಿ ದ್ರೌಪದಿಯೊಡನೆ ವಾಸಿಸುತ್ತಿದ್ದರು.

೬. ಅನಂತರ ಬ್ರಹ್ಮತೇಜಸ್ಸಿನಿಂದ ಅಗ್ನಿಗೆ ಸಮವಾಗಿ ಪ್ರಕಾಶಿ ಸುತ್ತಿರುವ ನಾರದನನ್ನು ಯುಧಿಷ್ಠಿರನು ನೋಡಿದನು.

೭. ಆ ಸಮಯದಲ್ಲಿ ತಮ್ಮಂದಿರಿಂದ ಕೂಡಿದ ಯುಧಿಷ್ಠಿರನು, ದೇವತೆಗಳಿಂದ ಕೂಡಿ ಸ್ವರ್ಗದಲ್ಲಿ ವಾಸಿಸುವ ಇಂದ್ರನಂತೆ ಪ್ರಕಾಶಿಸು ತ್ತಿದ್ದನು.

೮. ಕಷ್ಟಕಾಲದಲ್ಲಿಯೂ ಪತಿಗಳನ್ನು ಬಿಡದೇ ಸೇವಿಸುವ ದ್ರೌಪ ದಿಯು, ದೇವತೆಗಳನ್ನಾಶ್ರಯಿಸಿದ ಸಾವಿತ್ರಿಯಂತೆಯೂ, ಮೇರುಪರ್ವ ತವನ್ನು ಆಶ್ರಯಿಸಿದ ಸೂರ್ಯನ ಪ್ರಭೆಯಂತೆಯೂ ಪ್ರಕಾಶಿಸಿದಳು.

ಪ್ರತಿಗೃಹ್ಯ ತತಃ ಪೂಜಾಂ ನಾರದೋ ಭಗವಾನೃಷಿಃ ।
ಆಶ್ವಾಸಯದ್ಧರ್ಮಪುತ್ರಂ ಯುಕ್ತರೂಪಪ್ರಿಯೇಣ ಚ ॥ ೯ ॥
ಉವಾಚ ಚ ಮಹಾತ್ಮಾನಂ ಧರ್ಮರಾಜಂ ಯುಧಿಷ್ಠಿರಮ್ ।
ಬ್ರೂಹಿ ಧರ್ಮಭೃತಾಂ ಶ್ರೇಷ್ಠ ಕಿಂ ಪ್ರಾರ್ಥ್ಯಂ ಕಿಂ ದದಾಮಿ ತೇ ॥
ಅಥ ಧರ್ಮಸುತೋ ರಾಜಾ ಪ್ರಣಮ್ಯ ಭ್ರಾತೃಭಿಃ ಸಹ ।
ಉವಾಚ ಪ್ರಾಞ್ಜಲಿರ್ವಾಕ್ಯಂ ನಾರದಂ ದೇವಸಮ್ಮಿತಮ್ ॥೧೧॥
ತ್ವಯಿ ತುಷ್ಟೇ ಮಹಾಭಾಗ ಸರ್ವಲೋಕಾಭಿಪೂಜಿತೇ ।
ಕೃತಮಿತ್ಯೇವ ಮನ್ಯೇ ಹಿ ಪ್ರಸಾದಾತ್ತವ ಸುವ್ರತ ॥೧೨॥
ಯದಿ ತ್ವಯಾಽನುಗ್ರಾಹ್ಯೋಽಸ್ಮಿ ಭ್ರಾತೃಭಿಃ ಸಹಿತೋಽನಘ ।
ಸನ್ದೇಹಂ ಮೇ ಮುನಿಶ್ರೇಷ್ಠ ಹೃದಿಸ್ಥಂ ಛೇತ್ತುಮರ್ಹಸಿ ॥೧೩॥

---

೯. ಒಡನೆಯೇ ಯುಧಿಷ್ಠಿರನಿಂದ ಪೂಜೆಯನ್ನು ಪರಿಗ್ರಹಿಸಿದ ನಾರದ ಋಷಿಯು, ಆ ಸಮಯಕ್ಕೆ ಅತ್ಯಂತ ಅನುರೂಪವಾದ ಮಾತಿನಿಂದ ಆ ಯುಧಿಷ್ಠಿರನನ್ನು ಸಮಾಧಾನಗೊಳಿಸಿದನು.

೧೦. ಎಲೈ ಧಾರ್ಮಿಕ ಶ್ರೇಷ್ಠನಾದ ಯುಧಿಷ್ಠಿರನೇ! ನಿನ್ನ ಕೋರಿಕೆಯು ಯಾವುದಿರುವುದು? ನೀನಗೇನು ಬೇಕು? ನಾನೇನ್ನು ಕೊಡಲಿ? ಹೇಳು.

೧೧. ಅನಂತರ ಧರ್ಮಸುತನು ತಮ್ಮಂದಿರೊಡನೆ ನಮಸ್ಕಾರ ಮಾಡಿ, ಅಂಜಲಿಬದ್ಧನಾಗಿ ದೇವಸಮಾನನಾದ ನಾರದನನ್ನು ಕುರಿತು ಹೀಗೆ ಹೇಳಿದನು.

೧೨–೧೩. ಎಲೈ ನಿಯಮ ಪರನಾದ ನಾರದನೇ! ಲೋಕಪೂಜ್ಯನಾದ ನೀನು ತೃಪ್ತನಾದರೆ, ನಿನ್ನ ಅನುಗ್ರಹದಿಂದ ನನ್ನ ಇಷ್ಟಾರ್ಥವು ಕೈಗೂಡಿತೆಂದೇ ಭಾವಿಸುತ್ತೇನೆ. ಸಹೋದರರೊಡನೆ ನನ್ನನ್ನು ನೀನು ಅನುಗ್ರಹಿಸುವುದಾದರೆ, ಎಲೈ ಭಾಗ್ಯಶಾಲಿಯಾದ ಋಷಿವರ್ಯನೇ! ನನ್ನ ಮನಸ್ಸಿನಲ್ಲಿರುವ ಸಂಶಯವನ್ನು ಹೋಗಲಾಡಿಸು.

ಪ್ರದಕ್ಷಿಣಾಂ ಯಃ ಕುರುತೇ ಪೃಥಿವೀಂ ತೀರ್ಥತತ್ಪರಃ ।
ಕಿಂ ಫಲಂ ತಸ್ಯ ಕಾರ್ತ್ಸ್ನ್ಯೇನ ತದ್ಬ್ರಹ್ಮನ್ವಕ್ತುಮರ್ಹಸಿ ॥೧೪॥

॥ ನಾರದ ಉವಾಚ ॥

ಶೃಣು ರಾಜನ್ನವಹಿತೋ ದಿಲೀಪೇನ ಯಥಾ ಪುರಾ ।
ವಸಿಷ್ಠಸ್ಯ ಸಕಾಶಾದ್ವೈ ಸರ್ವಮೇತದುಪಶ್ರುತಮ್ ॥೧೫॥

ಪುರಾ ಭಾಗೀರಥೀತೀರೇ ದಿಲೀಪೋ ರಾಜಸತ್ತಮಃ ।
ಧರ್ಮ್ಯಂ ವ್ರತಂ ಸಮಾಸ್ಥಾಯ ನ್ಯವಸನ್ಮುನಿವತ್ತದಾ ॥೧೬॥

ಶುಭೇ ದೇಶೇ ಮಹಾರಾಜ ಪುಣ್ಯೇ ದೇವರ್ಷಿಪೂಜಿತೇ ।
ಗಙ್ಗಾದ್ವಾರೇ ಮಹಾತೇಜಾ ದೇವಗನ್ಧರ್ವಸೇವಿತೇ ॥೧೭॥

ಸ ಪಿತೄಂಸ್ತರ್ಪಯಾಮಾಸ ದೇವಾಂಶ್ಚ ಪರಮದ್ಯುತಿಃ ।
ಋಷೀಂಶ್ಚ ತರ್ಪಯಾಮಾಸ ವಿಧಿದೃಷ್ಟೇನ ಕರ್ಮಣಾ ॥೧೮॥

---

೧೪. ಎಲೈ ಬ್ರಾಹ್ಮಣೋತ್ತಮನೇ! ಆಯಾಯ ತೀರ್ಥಗಳನ್ನು ಸೇವಿಸುತ್ತಾ ಭೂಪ್ರದಕ್ಷಿಣೆಮಾಡಿದರೆ ಬರುವ ಪುಣ್ಯವನ್ನು ಸಮಗ್ರವಾಗಿ ತಿಳಿಸು.

೧೫. ನಾರದನು ಹೇಳಿದನು: ಎಲೈ ರಾಜನೇ! ಹಿಂದೆ ದಿಲೀಪ ರಾಜನು ವಸಿಷ್ಠನಿಂದ ಕೇಳಿದ ಈ ವಿಷಯವನ್ನು ಸಮಗ್ರವಾಗಿ ಹೇಳುವೆನು, ಕೇಳು.

೧೬–೧೮. ಪೂರ್ವಕಾಲದಲ್ಲಿ ರಾಜಶ್ರೇಷ್ಠನಾದ ದಿಲೀಪನು ಮುನಿಗಳಂತೆ ಧರ್ಮವ್ರತವನ್ನು ಸ್ವೀಕರಿಸಿ, ಭಾಗೀರಥೀತೀರದಲ್ಲಿವಾಸಿಸುತ್ತಿದ್ದನು. ತೇಜಸ್ವಿಯಾದ ಆ ದಿಲೀಪನಿಗೆ ಭಾಗೀರಥೀ ತೀರದಲ್ಲಿ ದೇವರ್ಷಿಗಳ ಪುರಸ್ಕಾರಕ್ಕೆ ಅರ್ಹವಾಗಿಯೂ, ದೇವತೆಗಳಿಗೂ, ಗಂಧರ್ವರಿಗೂ ಪರಮಪ್ರಿಯವಾಗಿಯೂ ಇರುವ ಗಂಗಾದ್ವಾರವೆಂಬ ಶುಭದೇಶವು, ತಪಸ್ಸ್ಥಾನವಾಗಿದ್ದಿತು. ದಿವ್ಯಕಾಂತಿಯುಳ್ಳ ಆ ದಿಲೀಪನು ಪಿತೃಗಳನ್ನೂ ದೇವತೆಗಳನ್ನೂ, ಋಷಿಗಳನ್ನೂ, ವಿಧ್ಯುಕ್ತವಾದ ಕರ್ಮಾನುಷ್ಠಾನದಿಂದ ತೃಪ್ತಿಪಡಿಸುತ್ತಿದ್ದನು.

ಕಸ್ಯಚಿತ್ತ್ವಥ ಕಾಲಸ್ಯ ಜಪನ್ನೇವ ಮಹಾಮನಾಃ ।
ದದರ್ಶ ಭೂತಸಂಕಾಶಂ ವಸಿಷ್ಠಮೃಷಿಸತ್ತಮಮ್ ॥೧೯॥

ಪುರೋಹಿತಂ ಸ ತಂ ದೃಷ್ಟ್ವಾ ದೀಪ್ಯಮಾನಮಿವ ಶ್ರಿಯಾ ।
ಪ್ರಹರ್ಷಮತುಲಂ ಲೇಭೇ ವಿಸ್ಮಯಂ ಪರಮಂ ಯಯೌ ॥೨೦॥

ಉಪಸ್ಥಿತಂ ಮಹಾರಾಜ ಪೂಜಯಾಮಾಸ ಭಾರತ ।
ಸ ಹಿ ಧರ್ಮಭೃತಾಂ ಶ್ರೇಷ್ಠೋ ವಿಧಿದೃಷ್ಟೇನ ಕರ್ಮಣಾ ॥೨೧॥

ಶಿರಸಾ ಸಾರ್ಘ್ಯಮಾದಾಯ ಶುಚಿಃ ಪ್ರಯತಮಾನಸಃ ।
ನಾಮ ಸಂಕೀರ್ತಯಾಮಾಸ ತಸ್ಮಿನ್ಬ್ರಹ್ಮರ್ಷಿಸತ್ತಮೇ ॥೨೨॥

ದಿಲೀಪೋಽಹಂ ತು ಭದ್ರಂ ತೇ ದಾಸೋಽಸ್ಮಿ ತವ ಸುವ್ರತ ।
ತವ ಸಂದರ್ಶನಾದೇವ ಮುಕ್ತೋಽಹಂ ಸರ್ವಕಿಲ್ಬಿಷೈಃ ॥೨೩॥

---

೧೯. ಹೀಗೆ ಮಹಾತ್ಮನಾದ ಆ ದಿಲೀಪನು ಒಂದಾನೊಂದು ಕಾಲದಲ್ಲಿ ಜಪಮಾಡುತ್ತಿರುವಾಗ; ಪಂಚಭೂತಗಳಂತೆ ಮಹಾ ಮಹಿಮನಾದ ವಸಿಷ್ಠಮಹರ್ಷಿಯನ್ನು ಕಂಡನು.

೨೦–೨೧. ಕಾಂತಿಯಿಂದ ಜ್ವಲಿಸುತ್ತಿರುವ ಪುರೋಹಿತನಾದ ವಸಿಷ್ಠನನ್ನು ಕಂಡು, ರಾಜನು ಪರಮಾನಂದಭರಿತನೂ, ಆಶ್ಚರ್ಯ ಚಕಿತನೂ, ಆದನು. ಅದೇ ಕ್ಷಣದಲ್ಲಿ ದಿಲೀಪಮಹಾರಾಜನು ಶಾಸ್ತ್ರನಿಯಮದಂತೆ ಆ ವಸಿಷ್ಠಮಹರ್ಷಿಯನ್ನು ಪೂಜಿಸಿದನು.

೨೨. ಶಿರಸ್ಸಿನಲ್ಲಿ ಪೂಜಾದ್ರವ್ಯಗಳನ್ನು ಧರಿಸಿ, ಭಕ್ತಿಯಿಂದ ಶುದ್ಧಹೃದಯನಾಗಿ, ಬ್ರಹ್ಮರ್ಷಿಶ್ರೇಷ್ಠನಾದ ಆ ವಸಿಷ್ಠನಲ್ಲಿ ತನ್ನ ಹೆಸರನ್ನು ಹೇಳಿ ನಮಸ್ಕರಿಸಿದನು.

೨೨–೨೩. ಎಲೈ ಮುನಿಪರ್ಯನೇ, ನೀನು ಕುಶಲವೇ! ನಾನೇ ನಿನ್ನ ದಾಸನಾದ ದಿಲೀಪನು, ನಿನ್ನ ದರ್ಶನಮಾತ್ರದಿಂದಲೇ ನಾನು ಎಲ್ಲಾಪಾಪಗಳಿಂದಲೂ ಮುಕ್ತನಾದೆನು. ನರ ಶ್ರೇಷ್ಠನಾದ ದಿಲೀಪನು

ಏವಮುಕ್ತ್ವಾ ಮಹಾರಾಜೋ ದಿಲೀಪೋ ದ್ವಿಪದಾಂ ವರಃ ।
ವಾಗ್ಯತಃ ಪ್ರಾಂಜಲಿರ್ಭೂತ್ವಾ ತೂಷ್ಣೀಮಾಸೀದ್ಯುಧಿಷ್ಠಿರ ॥೨೪॥
ತಂ ದೃಷ್ಟ್ವಾ ನಿಯಮೇನಾಥ ಸ್ವಾಧ್ಯಾಯೇನ ಚ ಕರ್ಷಿತಂ ।
ದಿಲೀಪಂ ನೃಪತಿಶ್ರೇಷ್ಠಂ ಮುನಿಃ ಪ್ರೀತಮನಾಽಭವತ್ ॥೨೫॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದಶಮೋಽಧ್ಯಾಯಃ

---

ಹೀಗೆ ಹೇಳಿ, ಅಂಜಲಿಬದ್ಧನಾಗಿ ನಮಸ್ಕರಿಸಿ, ಮಾತನಾಡದೇ ಸುಮ್ಮನಾದನು. ಎಲೈ ಯುಧಿಷ್ಠಿರನೇ! ಕೃಚ್ಛ್ರಚಾಂದ್ರಾಯಣಾದಿತಪಸ್ಸಿನಿಂದಲೂ, ವೇದಾಧ್ಯಯನದಿಂದಲೂ ಕೂಡಿದ ಆ ದಿಲೀಪಮಹಾರಾಜನನ್ನು ನೋಡಿ ವಸಿಷ್ಠನು ಬಹಳ ಸಂತೋಷಗೊಂಡನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕಾದಶೋಽಧ್ಯಾಯಃ

॥ ವಸಿಷ್ಠ ಉವಾಚ ॥

ಅನೇನ ತವ ಧರ್ಮಜ್ಞ ಪ್ರಶ್ರಯೇಣ ದಮೇನ ಚ ।
ಸತ್ಯೇನ ಚ ಮಹಾಭಾಗ ತುಷ್ಟೋಽಸ್ಮಿ ತವ ಸರ್ವಶಃ ॥ ೧ ॥

ಯಸ್ಯೇದೃಶಸ್ತೇ ಧರ್ಮೋಽಯಂ ಪಿತರಸ್ತಾರಿತಾಸ್ತ್ವಯಾ ।
ತೇನ ಪಶ್ಯಸಿ ಮಾಂ ಪುತ್ರ ಯಾಜ್ಯಶ್ಚಾಸಿ ಮಮಾನಘ ॥ ೨ ॥

ಪ್ರೀತಿರ್ಮೇ ವರ್ಧತೇ ತೇಽದ್ಯ ಬ್ರೂಹಿ ಕಿಂ ಕರವಾಣಿ ತೇ ।
ಯದ್ವಕ್ಷ್ಯಸಿ ನರಶ್ರೇಷ್ಠ ತಸ್ಯ ದಾತಾಸ್ಮಿ ತೇಽನಘ ॥ ೩ ॥

॥ ದಿಲೀಪ ಉವಾಚ ॥

ಪ್ರೀತೇ ತ್ವಯಿ ವಸಿಷ್ಠಾದ್ಯ ಸರ್ವಲೋಕಾಭಿಪೂಜಿತೇ ।
ಕೃತಮಿತ್ಯೇವ ಮನ್ಯೇ ಹಿ ಯದಹಂ ಪೃಷ್ಟವಾನ್ಪ್ರಭುಂ ॥ ೪ ॥

---

ಪದ್ಮಪುರಾಣದ ಆದಿಖಂಡದ ಹನ್ನೊಂದನೆಯ ಅಧ್ಯಾಯವು

೧–೩. ವಸಿಷ್ಠನು ಹೇಳಿದನು: ಎಲೈ ಧರ್ಮಜ್ಞನಾದ ದಿಲೀಪನೇ. ನಿನ್ನ ನಮ್ರತೆಯನ್ನೂ ಇಂದ್ರಿಯನಿಗ್ರಹವನ್ನೂ ಮತ್ತು ಸತ್ಯಸಂಧತೆಯನ್ನೂ ನೋಡಿ ತುಷ್ಟನಾದೆನು. ನಿನ್ನ ಧರ್ಮಾಚರಣೆಯಿಂದ ಪಿತೃಗಳೆಲ್ಲರೂ, ಮುಕ್ತರಾದರು. ಅದರಿಂದಲೇ ನನಗೆ ಯಾಜ್ಯ (ಶಿಷ್ಯ)ನಾಗಿರುವೆ. ನಿನ್ನನ್ನು ನೋಡಿ ನನಗೆ ಬಹಳ ಪ್ರೀತಿಯುಂಟಾಯಿತು. ನಿನಗೇನನ್ನು ಮಾಡಿ ಸಂತೋಷವನ್ನುಂಟು ಮಾಡಲಿ? ನೀನು ಕೇಳಿದ್ದನ್ನು ಕೊಡುವೆನು.

೪–೫. ದಿಲೀಪನು ಹೇಳಿದನು : ಸರ್ವಲೋಕ ಪೂಜ್ಯನಾದ ನೀನು ಪ್ರೀತನಾದರೆ, ನಾನು ಕೇಳುವುದೆಲ್ಲಾ ಕೈಗೂಡುವುದೆಂದೇ ನಂಬಿರುತ್ತೇನೆ.

ಯದಿ ತ್ವಹಮನುಗ್ರಾಹ್ಯಸ್ತವ ಧರ್ಮಭೃತಾಂ ವರ ।
ಪ್ರಕ್ಷ್ಯಾಮಿ ಹೃತ್ಸ್ಥಂ ಸಂದೇಹಂ ತನ್ಮೇ ತ್ವಂ ವಕ್ತುಮರ್ಹಸಿ ॥ ೫ ॥
ಅಸ್ತಿ ಮೇ ಭಗವನ್ಕಶ್ಚಿತ್ತೀರ್ಥೇಭ್ಯೋ ಧರ್ಮಸಂಶಯಃ ।
ತದಹಂ ಶ್ರೋತುಮಿಚ್ಛಾಮಿ ಪೃಥಕ್ಸಂಕೀರ್ತನಂ ತ್ವಯಾ ॥ ೬ ॥
ಪ್ರದಕ್ಷಿಣಾಂ ಯಃ ಪೃಥಿವೀಂ ಕರೋತಿ ದ್ವಿಜಸತ್ತಮ ।
ಕಿಂ ಫಲಂ ತಸ್ಯ ವಿಪ್ರರ್ಷೇ ತನ್ಮೇ ಬ್ರೂಹಿ ತಪೋಧನ ॥ ೭ ॥

॥ ವಸಿಷ್ಠ ಉವಾಚ ॥

ಕಥಯಿಷ್ಯಾಮಿ ತದಹಮೃಷೀಣಾಂ ಯತ್ಪರಾಯಣಮ್ ।
ತದೇಕಾಗ್ರಮನಾಸ್ತಾತ ಶೃಣು ತೀರ್ಥೇಷು ಯತ್ಫಲಮ್ ॥ ೮ ॥
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯತಮ್ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೯ ॥

---

ಎಲೈ ಧರ್ಮಶ್ರೇಷ್ಠನೇ! ನನ್ನಲ್ಲಿ ಅನುಗ್ರಹಬುದ್ಧಿಯು ನಿನಗುಂಟಾದರೆ, ನನ್ನ ಹೃದಯದಲ್ಲಿರುವ ಸಂದೇಹವನ್ನು ಹೇಳುವೆನು, ಅದನ್ನು ಪರಿಹರಿಸು.

೬–೭. ಹೇ ಭಗವನ್! ತೀರ್ಥಗಳ ವಿಷಯದಲ್ಲಿ ನನಗೊಂದು ಸಂದೇಹವುಂಟಾಗಿರುವುದು. ಆದುದರಿಂದ ನಿನ್ನಿಂದ ಆ ತೀರ್ಥಗಳನ್ನು ಬೇರೆ ಬೇರೆ ಕೇಳಬೇಕೆಂಬ ಕುತೂಹಲವಿರುವುದು. ಅಲ್ಲದೇ, ಈ ಭೂಮಿಯನ್ನು ಪ್ರದಕ್ಷಿಣೆ ಮಾಡುವವನಿಗೆ ಬರುವ ಫಲವನ್ನೂ ತಿಳಿಸು.

೮–೯. ವಸಿಷ್ಠನು ಹೇಳಿದನು: ಎಲೈ ದಿಲೀಪ ಮಹಾರಾಜನೇ! ಋಷಿಗಳು ಕೋರುತ್ತಿರುವ ಆ ತೀರ್ಥಫಲವನ್ನು ಹೇಳುವೆನು. ಮನಸ್ಸಿಟ್ಟು ಕೇಳು. ಯಾವನು ಕೈಗಳನ್ನೂ, ಕಾಲುಗಳನ್ನೂ, ಮನಸ್ಸನ್ನೂ, ವಿದ್ಯೆಯನ್ನೂ, ತಪಸ್ಸನ್ನೂ, ಕೀರ್ತಿಯನ್ನೂ, ಅಸದ್ವಿಷಯಗಳಿಂದ ತಡೆದು ಸದ್ವಿಷಯಗಳಲ್ಲಿ ಮಾತ್ರ ಉಪಯೋಗಿಸುವನೋ ಅವನು ತೀರ್ಥಫಲವನ್ನು ಹೊಂದುವನು.

ಪ್ರತಿಗ್ರಹಾದುಪಾವೃತ್ತಃ ಸನ್ತುಷ್ಟೋ ನಿಯತಃ ಶುಚಿಃ ।
ಅಹಙ್ಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥೧೦॥
ಅಕಲ್ಕಿಕೋ ನಿರಾಹಾರೋಽಲಬ್ಧಾಹಾರೋ ಜಿತೇನ್ದ್ರಿಯಃ ।
ವಿಮುಕ್ತಃ ಸರ್ವದೋಷೈರ್ಯಃ ಸ ತೀರ್ಥಫಲಮಶ್ನುತೇ ॥೧೧॥
ಅಕ್ರೋಧನಶ್ಚ ರಾಜೇನ್ದ್ರ ಸತ್ಯಶೀಲೋ ದೃಢವ್ರತಃ ।
ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥೧೨॥
ಋಷಿಭಿಃ ಕ್ರತವಃ ಪ್ರೋಕ್ತಾ ವೇದೇಷ್ವಪಿ ಯಥಾಕ್ರಮಮ್ ।
ಫಲಂ ಚೈವ ಯಥಾತತ್ತ್ವಂ ಪ್ರೇತ್ಯ ಚೇಹ ಚ ಸರ್ವಶಃ ॥೧೩॥
ನ ತೇ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಮಹೀಪತೇ ।
ಬಹೂಪಕರಣಾ ಯಜ್ಞಾ ನಾನಾಸಂಭಾರವಿಸ್ತರಾಃ ॥೧೪॥

---

೧೦. ಯಾವನು ದಾನಕ್ಕೆ ಕೈ ನೀಡದೇ ಸಂತುಷ್ಟನೂ, ನಿಯಮ ಪಾಲಕನೂ ಆಗಿ, ಶುದ್ಧಹೃದಯದಿಂದ ಕೂಡಿದವನಾಗಿ, ಅಹಂಕಾರವನ್ನು ದೂರಮಾಡಿರುವನೋ, ಅವನಿಗೆ ತೀರ್ಥಫಲವು ಲಭಿಸುವುದು.

೧೧-೧೨. ಯಾವನು ಡಂಭವನ್ನು ಬಿಟ್ಟು, ಆಹಾರವನ್ನು ದೂರ ಮಾಡಿಯಾಗಲೀ ಆಥವಾ ಆಹಾರ ಸಿಕ್ಕದೆಯಾಗಲೀ ಇಂದ್ರಿಯಗಳನ್ನು ನಿಗ್ರಹಿಸಿ, ಸರ್ವದೋಷಗಳಿಂದ ದೂರನಾಗಿರವನೋ, ಅವನಿಗೆ ತೀರ್ಥ ಫಲವು ಬೆನ್ನಂಟಿರುವುದು. ಎಲೈ ರಾಜಶ್ರೇಷ್ಠನಾದ ದಿಲೀಪನೇ! ಕೋಪವನ್ನು ಬಿಟ್ಟು, ಸತ್ಯವನ್ನಾಡುತ್ತಾ, ನಿಯಮಪರನಾಗಿ ಸರ್ವಪ್ರಾಣಿಗಳನ್ನೂ ತನ್ನಂತೆ ನೋಡುವವನು ತೀರ್ಥಫಲಕ್ಕೆ ಭಾಗಿಯಾಗುವನು.

೧೩. ಋಷಿಗಳು ಅನೇಕ ಯಜ್ಞಗಳನ್ನು ಹೇಳಿರುವರು. ಅವು ವೇದಗಳಲ್ಲೂ ಪ್ರಸಿದ್ಧವಾಗಿರುವುವು. ಅವುಗಳನ್ನು ದಾಗೆಯೋ ಅನುಷ್ಠಾನ ಮಾಡಿ, ಇಹಪರಗಳಲ್ಲಿ ಫಲಗಳನ್ನು ಪಡೆಯಬಹುದು.

೧೪-೧೫. ಆದರೆ ದರಿದ್ರರು ಆ ಯಜ್ಞಗಳನ್ನು ನಡೆಸಲಾರರು. ಏಕೆಂದರೆ, ಯಜ್ಞಕ್ಕೆ ಬಹುಸಾಮಗ್ರಿಗಳು ಬೇಕಾಗುವುವು. ರಾಜರಾಗಲೀ,

ಪ್ರಾಪ್ಯನ್ತೇ ಪಾರ್ಥಿವೈರೇತೇ ಸಮೃದ್ಧೈರ್ವಾ ನರೈಃ ಕ್ವಚಿತ್ ।
ನ ನಿರ್ಧನೈರ್ನರಗಣೈರೇಕಾತ್ಮಭಿರಸಾಧನೈಃ ॥೧೩॥

ಯೋ ದರಿದ್ರೈರಪಿ ವಿಧಿಃ ಶಕ್ಯಃ ಪ್ರಾಪ್ತುಂ ಜನೇಶ್ವರ ।
ತುಲ್ಯೋ ಯಜ್ಞಫಲೈಃ ಪುಣ್ಯೈಸ್ತಂ ನಿಬೋಧ ಮಹೀಪತೇ ॥೧೬॥

ಋಷೀಣಾಂ ಪರಮಂ ಗುಹ್ಯಮಿದಂ ಧರ್ಮಭೃತಾಂ ವರ ।
ತೀರ್ಥಾಭಿಗಮನಂ ಪುಣ್ಯಂ ಯಜ್ಞೈರಪಿ ವಿಶಿಷ್ಯತೇ ॥೧೭॥

ಅನುಪೋಷ್ಯಾತಿರಾತ್ರಾಣಿ ತೀರ್ಥಾಭಿಗಮನೇನ ಚ ।
ಅದತ್ವಾ ಕಾಞ್ಚನಂ ಗಾಶ್ಚ ದರಿದ್ರೋ ನಾಮ ಜಾಯತೇ ॥೧೮॥

ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ।
ನ ತತ್ಫಲಮವಾಪ್ನೋತಿ ತೀರ್ಥಾಭಿಗಮನೇನ ಚ ॥೧೯॥

---

ಬೇರೆ ಧನಿಕರಾಗಲೀ ಇಂತಹ ಯಜ್ಞಗಳನ್ನು ಎಲ್ಲೋ ಒಂದೆಡೆಯಲ್ಲಿ ನಡೆಸುವರು. ದರಿದ್ರರು ಸಾವಿರಗಟ್ಟಲೆ ಸೇರಿದರೂ ಸಾಧನಶೂನ್ಯರಾಗಿ ಈ ಯಜ್ಞಗಳನ್ನು ನಡೆಸಲಾರರು.

೧೬–೧೭. ಎಲೈ ಜನಪತಿಯಾದ ದಿಲೀಪನೇ! ದರಿದ್ರರೂ ಯಾವುದನ್ನು ನಡೆಯಿಸಬಹುದೋ, ಯಾವುದರಿಂದ ಅನೇಕ ಯಜ್ಞಫಲಗಳನ್ನೂ ಹೊಂದಬಹದೋ, ಅದನ್ನು ಕೇಳು. ಋಷಿಗಳಿಗೆ ಮಾತ್ರ ವೇದ್ಯವಾದ, ಈ ತೀರ್ಥಯಾತ್ರೆಯ ಫಲವು ಯಜ್ಞಫಲಗಳಿಗಿಂತ ಮೇಲಾಗಿರುವುದು.

೧೮. ತೀರ್ಥವನ್ನು ಹೊಂದಿದಾಗ ಒಂದು ರಾತ್ರಿಗಿಂತಲೂ ಹೆಚ್ಚು ಕಾಲ ಉಪವಾಸ ಮಾಡದೆಯೂ, ಸುವರ್ಣವನ್ನೂ ಗೋವನ್ನೂ ದಾನ ಮಾಡದೆಯೂ ಇರುವವನು ದರಿದ್ರನಾಗಿ ಹುಟ್ಟುವನು.

೧೯. ತೀರ್ಥಯಾತ್ರಾಫಲವು ಬಹುದಕ್ಷಿಣೆಯನ್ನು ಕೊಟ್ಟು ನಿಯಮದಿಂದ ಆಚರಿಸಿದ ಅಗ್ನಿಷ್ಟೋಮಾದಿಯಜ್ಞಗಳ ಫಲಗಳಿಗಿಂತಲೂ, ಮಿಗಿಲಾಗಿರುವುದು.

ನೃಲೋಕೇ ದೇವಲೋಕಸ್ಯ ತೀರ್ಥಂ ತ್ರೈಲೋಕ್ಯವಿಶ್ರುತಮ್ ।
ಪುಷ್ಕರಂ ತೀರ್ಥಮಾಸಾದ್ಯ ದೇವದೇವಸಮೋ ಭವೇತ್ ॥೨೦॥
ದಶಕೋಟಿಸಹಸ್ರಾಣಿ ತೀರ್ಥಾನಾಂ ವೈ ಮಹೀಪತೇ ।
ಸಾನ್ನಿಧ್ಯಂ ಪುಷ್ಕರೇ ಯೇಷಾಂ ತ್ರಿಸನ್ಧ್ಯಂ ಸೂರ್ಯವಂಶಜ ॥೨೧॥
ಆದಿತ್ಯಾ ವಸವೋ ರುದ್ರಾಃ ಸಾಧ್ಯಾಶ್ಚ ಸಮರುದ್ಗಣಾಃ ।
ಗನ್ಧರ್ವಾಪ್ಸರಸಶ್ಚೈವ ತತ್ರ ಸನ್ನಿಹಿತಾಃ ಪ್ರಭೋ ॥೨೨॥
ಯತ್ರ ದೇವಾಸ್ತಪಸ್ತಪ್ತ್ವಾ ದೈತ್ಯಾ ಬ್ರಹ್ಮರ್ಷಯಸ್ತಥಾ ।
ದಿವ್ಯಯೋಗಾ ಮಹಾಭಾಗ ಪುಣ್ಯೇನ ಮಹತಾ ದ್ವಿಜಾಃ ॥೨೩॥
ಮನಸಾಪ್ಯಭಿಕಾಮಸ್ಯ ಪುಷ್ಕರಾಣಿ ಮನೀಷಿಣಃ ।
ಪುನನ್ತಿ ಸರ್ವಪಾಪಾನಿ ನಾಕಪೃಷ್ಠೇ ಸ ಪೂಜ್ಯತೇ ॥೨೪॥

---

೨೦-೨೧. ಮನುಷ್ಯಲೋಕದಲ್ಲಿರುವ ಪುಷ್ಕರತೀರ್ಥವು ದೇವಲೋಕದ ತೀರ್ಥವೆಂಬುದಾಗಿ ಮೂರುಲೋಕದಲ್ಲಿಯೂ ಪ್ರಸಿದ್ಧವಾಗಿರುವುದು. ಆ ಪುಷ್ಕರತೀರ್ಥಯಾತ್ರೆಯನ್ನು ಆಚರಿಸಿದವನು ಶಿವನಿಗೆ ಸಮಾನನಾಗುವನು. ಪ್ರಾತಃಕಾಲ, ಮಧ್ಯಾಹ್ನ, ಸಾಯಾಹ್ನ, ಈ ಕಾಲಗಳಲ್ಲಿ ಈ ಪುಷ್ಕರ ತೀರ್ಥದಲ್ಲಿ ನೂರು ಲಕ್ಷ ಕೋಟಿ ತೀರ್ಥಗಳು ಬಂದು ಸೇರುವುವು.

೨೨-೨೩. ದ್ವಾದಶಾದಿತ್ಯರೂ, ಅಷ್ಟವಸುಗಳೂ, ಏಕಾದಶ ರುದ್ರರೂ, ಸಾಧ್ಯರೂ, ದೇವಗಣಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಈ ತೀರ್ಥದಲ್ಲಿ ಬಂದು ಸೇರುವರು. ಈ ಪುಷ್ಕರ ಕ್ಷೇತ್ರದಲ್ಲಿ ದೇವತೆಗಳೂ, ದೈತ್ಯರೂ, ಬ್ರಹ್ಮರ್ಷಿಗಳೂ ತಪಸ್ಸನ್ನಾಚರಿಸಿ, ಮಹಾಪುಣ್ಯವನ್ನು ಕೂಡಿಸಿ, ದಿವ್ಯಫಲಗಳನ್ನು ಹೊಂದುವರು.

೨೪-೨೫. ಈ ಪುಷ್ಕರ ಕ್ಷೇತ್ರವು ಇಲ್ಲಿನ ತೀರ್ಥಯಾತ್ರೆಯನ್ನಾಚರಿಸಬೇಕೆಂದು ಮನಸ್ಸುಮಾಡಿದವನಿಗೂ, ಸರ್ವ ಪಾಪಗಳನ್ನೂ, ಪರಿಹರಿಸುವುದು. ಅಂತಹ ಮನುಷ್ಯನು ಸ್ವರ್ಗಫಲವನ್ನನುಭವಿಸುವನು.

ಅಸ್ಮಿಂಸ್ತೀರ್ಥೇ ಮಹಾಭಾಗ ನಿತ್ಯಮೇವ ಪಿತಾಮಹಃ ।
ಉವಾಸ ಪರಮಪ್ರೀತೋ ದೇವದಾನವಸಮ್ಮತಃ ॥೨೫॥

ಪುಷ್ಕರೇಷು ಮಹಾಭಾಗ ದೇವಾಃ ಸರ್ಷಿಪುರೋಗಮಾಃ ।
ಸಿದ್ಧಿಂ ಪಾರಮಿಕಾಂ ಪ್ರಾಪ್ತಾಃ ಪುಣ್ಯೇನ ಮಹತಾನ್ವಿತಾಃ ॥೨೬॥

ತತ್ರಾಭಿಷೇಕಂ ಯಃ ಕುರ್ಯಾತ್ಪಿತೃದೇವಾರ್ಚನೇ ರತಃ ।
ಅಶ್ವಮೇಧಾದ್ದಶಗುಣಂ ಪ್ರವದಂತಿ ಮನೀಷಿಣಃ ॥೨೭॥

ಅಪ್ಯೇಕಂ ಭೋಜಯೇದ್ವಿಪ್ರಂ ಪುಷ್ಕರಾರಣ್ಯಮಾಶ್ರಿತಃ ।
ತೇನಾಪ್ನೋತ್ಯಜಿತಾನ್ ಲೋಕಾನ್ಬ್ರಹ್ಮಣಃ ಸದನೇ ಸ್ಥಿತಾನ್ ॥

ಸಾಯಂ ಪ್ರಾತಃ ಸ್ಮರೇದ್ಯಸ್ತು ಪುಷ್ಕರಾಣಿ ಕೃತಾಞ್ಜಲಿಃ ।
ಉಪಸ್ಪೃಷ್ಟಂ ಭವೇತ್ತೇನ ಸರ್ವತೀರ್ಥೇಷು ಪಾರ್ಥಿವ ॥೨೯॥

---

ದೇವತೆಗಳಿಗೂ, ದಾನವರಿಗೂ, ಸಮವಾದ ಪ್ರೀತಿಗೆ ಪಾತ್ರನಾದ ಬ್ರಹ್ಮನೂ ಕೂಡ ಈ ತೀರ್ಥದಲ್ಲಿ ನಿರಂತರವೂ ಅತಿ ಪ್ರೀತಿಯಿಂದ ವಾಸಿಸುವನು.

೨೬–೨೭. ಈ ಪುಷ್ಕರ ತೀರ್ಥದಲ್ಲಿ ದೇವತೆಗಳೂ, ಮತ್ತು ಇತರರೂ, ಮಹಾಪುಣ್ಯವನ್ನು ಸಂಪಾದಿಸಿ, ತನುಗೆ ಇಷ್ಟವಾದ, ಮೋಕ್ಷಾದಿ ಸಿದ್ಧಿಗಳನ್ನು ಹೊಂದುವರು. ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಿ, ಇಲ್ಲಿ ಮಾಡಿದ ಸ್ನಾನಕ್ಕೆ ಅಶ್ವಮೇಧಯಾಗಕ್ಕಿಂತಲೂ, ಹತ್ತರಷ್ಟು ಫಲವೆಂದು ವಿದ್ವಾಂಸರು ಹೇಳುವರು.

೨೮–೩೦. ಈ ಪುಷ್ಕರಾರಣ್ಯದಲ್ಲಿ ಕೊನೆಯ ಪಕ್ಷ ಒಬ್ಬ ಬ್ರಾಹ್ಮಣನನ್ನಾದರೂ ಭೋಜನಮಾಡಿಸಿದವನು, ಬ್ರಹ್ಮಲೋಕದಲ್ಲಿ ಯಾರಿಗೂ ಸುಲಭವಲ್ಲದ ಸ್ಥಾನವನ್ನು ಹೊಂದುವನು. ಎಲೈ ರಾಜಶ್ರೇಷ್ಠನಾದ ದಿಲೀಪನೇ ! ಸಾಯಂಕಾಲ ಪ್ರಾತಃಕಾಲಗಳಲ್ಲಿ, ಯಾವನು ಅಂಜಲಿಬದ್ಧನಾಗಿ ಭಕ್ತಿಯಿಂದ ಈ ಪುಷ್ಕರಕ್ಷೇತ್ರವನ್ನು ಸ್ಮರಿಸುವನೋ ಅವನು ಸರ್ವತೀರ್ಥಗಳಲ್ಲೂ ಸ್ನಾನಮಾಡಿದಂತಾಗುವನು. ಸ್ತ್ರೀಯೋ ಆಗಲಿ,

**ಜನ್ಮಪ್ರಭೃತಿ ಯತ್ಪಾಪಂ ಸ್ತ್ರಿಯಾ ವಾ ಪುರುಷಸ್ಯ ವಾ ।**
**ಪುಷ್ಕರೇ ಗತಮಾತ್ರಸ್ಯ ಸರ್ವಮೇವ ಪ್ರಣಶ್ಯತಿ ॥೩೦॥**

**ಯಥಾ ಸುರಾಣಾಂ ಸರ್ವೇಷಾಮಾದಿಸ್ತು ಮಧುಸೂದನಃ ।**
**ತಥೈವ ಪುಷ್ಕರಂ ರಾಜನ್ ತೀರ್ಥಾನಾಮಾದಿರುಚ್ಯತೇ ॥೩೧॥**

**ಉಷ್ಟ್ವಾ ದ್ವಾದಶವರ್ಷಾಣಿ ಪುಷ್ಕರೇ ನಿಯತಃ ಶುಚಿಃ ।**
**ಕ್ರತೂನ್ಸರ್ವಾನವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ॥೩೨॥**

**ಯಸ್ತು ವರ್ಷಶತಂ ಪುಣ್ಯಮಗ್ನಿಹೋತ್ರಮುಪಾಚರೇತ್ ।**
**ಕಾರ್ತಿಕೀಂ ವಾ ವಸೇದೇಕಾಂ ಪುಷ್ಕರೇ ಸಮಮೇವ ತತ್ ॥೩೩॥**

**ದುಷ್ಕರಂ ಪುಷ್ಕರಂ ಗನ್ತುಂ ದುಷ್ಕರಂ ಪುಷ್ಕರೇ ತಪಃ ।**
**ದುಷ್ಕರಂ ಪುಷ್ಕರೇ ದಾನಂ ವಸ್ತುಂ ಚೈವ ಸುದುಷ್ಕರಮ್ ॥೩೪॥**

---

ಪುರುಷನೇ ಆಗಲೀ ಈ ಪುಷ್ಕರಕ್ಷೇತ್ರವನ್ನು ಹೊಂದಿದಮಾತ್ರಕ್ಕೆ ಹುಟ್ಟಿದ ಮೊದಲುಗೊಂಡು ಮಾಡಿದ ಸರ್ವಪಾಪಗಳೂ ನಾಶವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

೩೧–೩೩. ಎಲ್ಲಾ ದೇವತೆಗಳಿಗೂ, ವಿಷ್ಣುವು ಹೇಗೆ ಆದಿಯೋ ಹಾಗೆಯೇ ಸರ್ವತೀರ್ಥಗಳಿಗೂ, ಈ ಪುಷ್ಕರ ತೀರ್ಥವು ಆದಿಯಾದುದು. ಹನ್ನೆರಡುವರ್ಷಗಳಕಾಲ ಶುಚಿಯಾಗಿ ಈಸ್ಥಳದಲ್ಲಿ ನಿಯಮಪರನಾಗಿದ್ದು ಕೊಂಡಿರುವನು, ಸರ್ವಯಾಗಗಳ ಫಲಗಳನ್ನು ಹೊಂದುವನು, ಬ್ರಹ್ಮ ಲೋಕವನ್ನು ಸಹ ಪಡೆಯುವನು. ಕಾರ್ತಿಕಪೌರ್ಣಮಾಸ್ಯೆಯ ದಿನ ಈ ಕ್ಷೇತ್ರವಾಸವು, ನೂರುವರ್ಷ ತಪ್ಪದೇ ನಡೆಯಿಸಿದ ಅಗ್ನಿಹೋತ್ರಕ್ಕೆ ಸಮನಾದುದು.

೩೪–೩೬. ಪುಷ್ಕರ ಕ್ಷೇತ್ರಕ್ಕೆ ಹೋಗುವುದಾಗಲೀ, ಅಲ್ಲಿ ತಪಸ್ಸ ನ್ನಾಚರಿಸುವುದಾಗಲೀ, ಅಲ್ಲಿ ದಾನ ಮಾಡುವುದಾಗಲೀ, ಅಲ್ಲಿ ವಾಸಿ ಸುವುದಾಗಲೀ, ಸ್ವಲ್ಪ ಪುಣ್ಯಗಳಿಗೆ ಸುಲಭವಾಗಲಾರವು. ಮೂರು

ತ್ರೀಣಿ ಶೃಙ್ಗಾಣಿ ಶುಭ್ರಾಣಿ ತ್ರೀಣಿ ಪ್ರಸ್ರವಣಾನಿ ಚ ।
ಪುಷ್ಕರಾಣ್ಯಾದಿತೀರ್ಥಾನಿ ನ ವಿದ್ಮಸ್ತತ್ರ ಕಾರಣಮ್ ॥೩೫॥
ಉಷ್ಯಾಪ್ಯ ದ್ವಾದಶ ವರ್ಷಾಣಿ ನಿಯತೋ ನಿಯತಾಶನಃ ।
ಸ ಮುಕ್ತಃ ಸರ್ವಪಾಪೇಭ್ಯಃ ಸರ್ವಕ್ರತುಫಲಂ ಲಭೇತ್ ॥೩೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕಾದಶೋಽಧ್ಯಾಯಃ

---

ಶಿಖರಗಳು, ಮೂರು ಪರ್ವತಗಳಿಂದ ಹರಿಯುವ ಪ್ರವಾಹಗಳು, ಮೂರು ಮೂರಾಗಿ ಪ್ರಸಿದ್ಧವಾಗಿರಲು ಕಾರಣವನ್ನು ಅರಿಯಲಾರೆವು. ಆಹಾರ ನಿಯಮವನ್ನು ಹೊಂದಿ, ತಪಸ್ಸುಮಾಡುತ್ತ ನಿಯಮಪರನಾಗಿ ಹನ್ನೆರಡುವರ್ಷ ವಾಸಿಸುವನು, ಸರ್ವಪಾಪಗಳಿಂದ ಮುಕ್ತನಾಗಿ, ಸರ್ವ ಯಜ್ಞಫಲವನ್ನೂ ಹೊಂದುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದ್ವಾದಶೋಽಧ್ಯಾಯಃ

॥ ವಸಿಷ್ಠ ಉವಾಚ ॥

**ಪ್ರದಕ್ಷಿಣಮುಪಾವೃತ್ತೋ ಜಮ್ಬೂಮಾರ್ಗಂ ಸಮಾವಿಶೇತ್ ।**
**ಜಮ್ಬೂಮಾರ್ಗಂ ಸಮಾವಿಶ್ಯ ಪಿತೃದೇವರ್ಷಿಪೂಜಿತಮ್ ।**
**ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೧ ॥**

**ತತ್ರೋಷ್ಯ ರಜನೀಃ ಪಂಚ ಷಷ್ಠೇ ಕಾಲೇಽಶ್ನುವನ್ನರಃ ।**
**ನ ದುರ್ಗತಿಮವಾಪ್ನೋತಿ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಮ್ ॥ ೨ ॥**

**ಜಮ್ಬೂಮಾರ್ಗಾದಪಾವೃತ್ತೋ ಗಚ್ಛೇತ್ತುಣ್ಡುಲಿಕಾಶ್ರಮಂ ।**
**ನ ದುರ್ಗತಿಮವಾಪ್ನೋತಿ ಸ್ವರ್ಗಲೋಕೇ ಚ ಪೂಜ್ಯತೇ ॥ ೩ ॥**

---

ಪದ್ಮಪುರಾಣದ ಆದಿಖಂಡದ ಹನ್ನೆರಡನೆಯ ಅಧ್ಯಾಯವು

೧. ವಸಿಷ್ಠನು ಹೇಳಿದನು : ಬಲವುುಖವಾಗಿ ಹೋಗುತ್ತಾ ಜಂಬೂ ಮಾರ್ಗವೆಂಬ ಕ್ಷೇತ್ರವನ್ನು ಪ್ರವೇಶಿಸಬೇಕು. ಪಿತೃಗಳಿಗೂ, ದೇವರ್ಷಿಗಳಿಗೂ, ಪೂಜ್ಯವಾದ ಜಂಬೂಮಾರ್ಗವನ್ನು ಪ್ರವೇಶಿಸಿದ ಮಾತ್ರದಿಂದಲೇ ಅಶ್ವಮೇಧದ ಫಲವನ್ನು ಹೊಂದುವನು ಮತ್ತು ಅವನು ಮರಣಾನಂತರ ವಿಷ್ಣುಲೋಕವನ್ನು ಹೊಂದುವನು.

೨. ಹಗಲು ನಾಲ್ಕನೇ ಜಾವದ ಆದಿಯಲ್ಲಿ ಒಂದಾವೃತ್ತಿ ಆಹಾರ ತೆಗೆದುಕೊಂಡು ಐದು ದಿವಸಗಳು ವಾಸಿಸಿ, ಮನುಷ್ಯನು ಆರನೆಯದಿನ ಊಟಮಾಡಿದರೆ ದುರ್ಗತಿಯನ್ನು ಕಾಣಲಾರನು. ಅಲ್ಲದೇ ಉತ್ತಮವಾದ ಸಿದ್ಧಿಯನ್ನು ಹೊಂದುವನು.

೩. ಜಂಬೂ ದ್ವೀಪದಿಂದ ಹೊರಟು, ತುಂಡೂಲಿಕಾಶ್ರಮಕ್ಕೆ ಹೋಗುವವನು ದುರ್ಗತಿಯನ್ನು ಹೊಂದಲಾರನು. ಮತ್ತು ಸ್ವರ್ಗ ಲೋಕದಲ್ಲಿ ಪೂಜಾರ್ಹನಾಗುವನು.

ಅಗಸ್ತ್ಯಾಶ್ರಮಮಾಸಾದ್ಯ ಪಿತೃದೇವಾರ್ಚನೇ ರತಃ ।
ತ್ರಿರಾತ್ರೋಪೋಷಿತೋ ರಾಜನ್ನಗ್ನಿಷ್ಟೋಮಫಲಂ ಲಭೇತ್ ॥ ೪ ॥
ಶಾಕವೃತ್ತಿಃ ಫಲೈರ್ವಾಪಿ ಕೌಮಾರಂ ವಿನ್ದತೇ ಪರಮ್ ।
ಕನ್ಯಾಶ್ರಮಂ ಸಮಾಸಾದ್ಯ ಶ್ರೀಪುಷ್ಟಂ ಲೋಕಪೂಜಿತಮ್ ॥ ೫ ॥
ಧರ್ಮಾರಣ್ಯಂ ಹಿ ತತ್ಪುಣ್ಯಮಾದ್ಯಂ ಚ ಪಾರ್ಥಿವರ್ಷಭ ।
ಯತ್ರ ಪ್ರವಿಷ್ಟಮಾತ್ರೋ ವೈ ಪಾಪೇಭ್ಯೋ ವಿಪ್ರಮುಚ್ಯತೇ ॥ ೬ ॥
ಅರ್ಚಯಿತ್ವಾ ಪಿತೄನ್ ದೇವಾನ್ನಿಯತೋ ನಿಯತಾಶನಃ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ॥ ೭ ॥
ಪ್ರದಕ್ಷಿಣಂ ತತಃ ಕೃತ್ವಾ ಯಯಾತಿಪತನಂ ವ್ರಜೇತ್ ।
ಹಯಮೇಧಸ್ಯ ಯಜ್ಞಸ್ಯ ಫಲಮಾಪ್ನೋತಿ ತತ್ರ ವೈ ॥ ೮ ॥

---

೪-೬. ಅಗಸ್ತ್ಯಾಶ್ರಮಕ್ಕೆ ಹೋಗಿ ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುತ್ತಾ, ಮೂರುರಾತ್ರಿ ಉಪವಾಸ ಮಾಡುವವನು, ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು. ಕನ್ಯಾಶ್ರಮಕ್ಕೆ ಹೋಗಿ, ಶಾಕಾ ಹಾರವನ್ನಾಗಲೀ, ಫಲಾಹಾರವನ್ನಾಗಲೀ, ತೆಗೆದುಕೊಂಡು ಜೀವಿಸುವ ವನು ತಿರುಗಿ ಕೌಮಾರವನ್ನು ಹೊಂದುವನು. ಸಂಪದ್ಯುಕ್ತವಾಗಿಯೂ, ಲೋಕ ಪೂಜಿತವಾಗಿಯೂ, ಇರುವ ಧರ್ಮಾರಣ್ಯವನ್ನು ಪ್ರವೇಶಿಸಿದ ಮಾತ್ರದಿಂದಲೇ ಮನುಷ್ಯನು ಸರ್ವಪಾಪಗಳಿಂದ ಮುಕ್ತನಾಗುವನು.

೭-೧೦. ಆ ಧರ್ಮಾರಣ್ಯದಲ್ಲಿ, ಪಿತೃಗಳನ್ನೂ, ದೇವತೆಗಳನ್ನೂ ಅರ್ಚಿಸುತ್ತಾ ಆಹಾರನಿಯಮವನ್ನು ಹೊಂದಿ, ಶೌಚ ಸಂತೋಷಾದಿಗ ಳಿಂದ ಕೂಡಿರುವವನು, ಸರ್ವಕಾಮವನ್ನೂ ಪೂರ್ಣ ಮಾಡುವ ಯಜ್ಞ ವಿಶೇಷದ ಫಲವನ್ನು ಹೊಂದುವನು. ಅನಂತರ ಧರ್ಮಾರಣ್ಯವನ್ನು ಬಲಕ್ಕೆ ಬಿಟ್ಟುಕೊಂಡು, ಯಯಾತಿಪತನವೆಂಬ ಸ್ಥಳಕ್ಕೆ ಹೋಗಬೇಕು. ಹೀಗೆ ಮಾಡಿದವನಿಗೆ ಅಶ್ವಮೇಧಯಜ್ಞಫಲವುಂಟಾಗುವುದು. ಅನಂತರ

ಮಹಾಕಾಲಂ ತತೋ ಗಚ್ಛೇನ್ನಿಯತೋ ನಿಯತಾಶನಃ ।
ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ ॥ ೯ ॥
ತತೋ ಗಚ್ಛೇತ ಧರ್ಮಜ್ಞಃ ಸ್ಥಾನಂ ತೀರ್ಥಮುಮಾಪತೇಃ ।
ನಾಮ್ನಾ ಭದ್ರವಟಂ ನಾಮ ತ್ರಿಷು ಲೋಕೇಷು ವಿಶ್ರುತಮ್ ॥೧೦॥
ತತ್ರಾಭಿಗಮ್ಯ ಚೇಶಾನಂ ಗೋಸಹಸ್ರಫಲಂ ಲಭೇತ್ ।
ಮಹಾದೇವಪ್ರಸಾದಾಚ್ಚ ಗಾಣಪತ್ಯಮವಾಪ್ನುಯಾತ್ ॥೧೧॥
ಸಮೃದ್ಧಮಸಪತ್ನಂ ತು ಶ್ರಿಯಾ ಯುಕ್ತಂ ನರೋತ್ತಮ ।
ನರ್ಮದಾಂ ತು ಸಮಾಸಾದ್ಯ ನದೀಂ ತ್ರೈಲೋಕ್ಯವಿಶ್ರುತಾಮ್ ।
ತರ್ಪಯಿತ್ವಾ ಪಿತೄನ್ದೇವಾನಗ್ನಿಷ್ಟೋಮಫಲಂ ಲಭೇತ್ ॥ ೧೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಾದಶೋಽಧ್ಯಾಯಃ

---

ಮಹಾಕಾಳೇಶ್ವರನ ಕ್ಷೇತ್ರವನ್ನು ಹೊಂದಿ ಕೋಟಿತೀರ್ಥದಲ್ಲಿ ಸ್ನಾನ ಮಾಡಿ, ನಿಯಮ ಪರನಾಗಿ ಕ್ಲುಪ್ತಾಹಾರದಿಂದಿರುವವನು, ಅಶ್ವಮೇಧ ಯಾಗದ ಫಲವನ್ನು ಗಳಿಸುವನು. ಅನಂತರ ಧರ್ಮಜ್ಞನಾದ ಪುರುಷನು ಮೂರು ಲೋಕದಲ್ಲೂ ಪ್ರಸಿದ್ಧವಾಗಿರುವ, ಶಿವಕ್ಷೇತ್ರದಲ್ಲಿರುವ ಭದ್ರ ವಟವೆಂಬ ಕ್ಷೇತ್ರವನ್ನು ಹೊಂದಬೇಕು.

೧೧. ಅಲ್ಲಿರುವ ಶಿವನ ದರ್ಶನಮಾತ್ರದಿಂದಲೇ ಗೋಸಹಸ್ರದಾನ ದಿಂದ ಬರುವ ಫಲವನ್ನು ಹೊಂದುವನು. ಮತ್ತು ಮಹಾದೇವನ ಅನುಗ್ರಹದಿಂದ ಗಣಗಳಿಗೆ ಅಧಿಪತಿಯಾಗಿ ನಿಷ್ಕಂಟಕವಾದ ಸಮೃದ್ಧಿ ಯನ್ನು ಅನುಭವಿಸುವನು.

೧೨. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ, ಎಲ್ಲಕ್ಕಿಂತಲೂ ಉತ್ತಮವಾದ, ನರ್ಮದಾನದಿಯನ್ನು ಹೊಂದಿ, ಪಿತೃಗಳಿಗೂ, ದೇವತೆ ಗಳಿಗೂ, ತರ್ಪಣವನ್ನು ಮಾಡುವ ಮನುಷ್ಯನು, ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ತ್ರಯೋದಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ವಸಿಷ್ಠೇನ ದಿಲೀಪಾಯ ಕಥಿತಂ ತೀರ್ಥಮುತ್ತಮಮ್ ।**
**ನರ್ಮದೇತಿ ಚ ವಿಖ್ಯಾತಂ ಪಾಪಪರ್ವತದಾರಣಂ ॥ ೧ ॥**

**ಭೂಯಶ್ಚ ಶ್ರೋತುಮಿಚ್ಛಾಮಿ ತನ್ಮೇ ಕಥಯ ನಾರದ ।**
**ನರ್ಮದಾಯಾಶ್ಚ ಮಾಹಾತ್ಮ್ಯಂ ವಸಿಷ್ಠೋಕ್ತಂ ದ್ವಿಜೋತ್ತಮ ॥**

**ಕಥಮೇಷಾ ಮಹಾಪುಣ್ಯಾ ನದೀ ಸರ್ವತ್ರ ವಿಶ್ರುತಾ ।**
**ನರ್ಮದಾ ನಾಮ ವಿಖ್ಯಾತಾ ತನ್ಮಮ ಬ್ರೂಹಿ ನಾರದ ॥ ೩ ॥**

॥ ನಾರದ ಉವಾಚ ॥

**ನರ್ಮದಾ ಸರಿತಾಂ ಶ್ರೇಷ್ಠಾ ಸರ್ವಪಾಪಪ್ರಣಾಶಿನೀ ।**
**ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥ ೪ ॥**

---

ಪದ್ಮಪುರಾಣದ ಆದಿಖಂಡದ ಹದಿಮೂರನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು : ವಸಿಷ್ಠನು ದಿಲೀಪ ಮಹಾರಾಜನಿಗೆ ಹೇಳಿದಂತೆ, ಸರ್ವಪಾಪವನ್ನು ಪರಿಹರಿಸುವುದಾದ ನರ್ಮದಾ ಎಂದು ಪ್ರಸಿದ್ಧವಾದ ತೀರ್ಥದ ಮಾಹಾತ್ಮ್ಯೆಯನ್ನು ನಿನ್ನಿಂದ ಕೇಳಬೇಕೆಂದು ಬಯಸುವೆನು.

೨–೩. ಎಲೈ ನಾರದಮಹರ್ಷಿಯೇ ! ಸಂಕ್ಷೇಪವಾಗಿ ತಿಳಿಸಿದ ನರ್ಮದೆಯ ಮಾಹಾತ್ಮ್ಯೆಯನ್ನು ವಿಸ್ತಾರವಾಗಿ ತಿಳಿಸು. ಈ ನದಿಗೆ ನರ್ಮದಾ ಎಂಬುದಾಗಿ ಹೆಸರುಂಟಾಗಲು ಕಾರಣವೇನು ? ಮತ್ತು ಮಹಾಪುಣ್ಯನದಿ ಎಂಬುದಾಗಿ ಪ್ರಸಿದ್ಧವಾಗಲು ನಿಮಿತ್ತವೇನೆಂಬುದನ್ನು ದಯವಿಟ್ಟು ತಿಳಿಸುವವನಾಗು.

೪–೫. ನಾರದನು ಹೇಳಿದನು : ನದಿಗಳಲ್ಲೆಲ್ಲಾ ಉತ್ತಮವಾದ ನರ್ಮದಾನದಿಯು ಸರ್ವಪಾಪವನ್ನೂ ಪರಿಹರಿಸುವುದಲ್ಲದೆ, ಸ್ಥಾವರ

**ನರ್ಮದಾಯಾಸ್ತು ಮಾಹಾತ್ಮ್ಯಂ ವಸಿಷ್ಠೋಕ್ತಂ ಮಯಾ ಶ್ರುತಂ**
**ತದೇತದ್ಧಿ ಮಹಾರಾಜ ಸರ್ವಂ ಹಿ ಕಥಯಾಮಿ ತೇ ॥ ೫ ॥**

**ಪುಣ್ಯಾ ಕನಖಲೇ ಗಂಗಾ ಕುರುಕ್ಷೇತ್ರೇ ಸರಸ್ವತೀ ।**
**ಗ್ರಾಮೇ ವಾ ಯದಿ ವಾರಣ್ಯೇ ಪುಣ್ಯಾ ಸರ್ವತ್ರ ನರ್ಮದಾ ॥ ೬ ॥**

**ತ್ರಿಭಿಃ ಸಾರಸ್ವತಂ ತೋಯಂ ಸಪ್ತಾಹೇನ ತು ಯಾಮುನಂ ।**
**ಸದ್ಯಃ ಪುನಾತಿ ಗಂಗೇಯಂ ದರ್ಶನಾದೇವ ನಾರ್ಮದಂ ॥ ೭ ॥**

**ಕಲಿಙ್ಗದೇಶೇ ಪಶ್ಚಾರ್ಧೇ ಪರ್ವತೇಽಮರಕಣ್ಟಕೇ ।**
**ಪುಣ್ಯಾ ಚ ತ್ರಿಷು ಕಾಲೇಷು ರಮಣೀಯಾ ಮನೋರಮಾ ॥ ೮ ॥**

**ಸದೇವಾಸುರಗಂಧರ್ವಾ ಋಷಯಶ್ಚ ತಪೋಧನಾಃ ।**
**ತಪಸ್ತಪ್ತ್ವಾ ಮಹಾರಾಜ ಸಿದ್ಧಿಂ ಚ ಪರಮಾಂ ಗತಾಃ ॥ ೯ ॥**

---

ಜಂಗಮ ಪ್ರಾಣಿಗಳನ್ನೂ ಕೂಡ ಬಂಧದಿಂದ ಬಿಡಿಸುವುದು. ನಾನು ಕೇಳಿರುವ ಮೇರೆಗೆ ವಸಿಷ್ಠೋಕ್ತವಾದ ನರ್ಮದಾ ಮಾಹಾತ್ಮ್ಯವನ್ನು ಸಮಗ್ರವಾಗಿ ತಿಳಿಸುವೆನು.

೬. ಗಂಗೆಯು ಕನಖಲಕ್ಷೇತ್ರದಲ್ಲಿ ಅತ್ಯಂತಪುಣ್ಯಪ್ರದವಾದುದು, ಸರಸ್ವತೀನದಿಯು, ಕುರುಕ್ಷೇತ್ರದಲ್ಲಿ ಬಹುಶ್ರೇಷ್ಠವಾದುದು. ಆದರೆ, ನರ್ಮದಾನದಿಯು ಗ್ರಾಮದಲ್ಲೂ, ಅರಣ್ಯದಲ್ಲಿಯೂ, ಎಲ್ಲೆಲ್ಲೂ ಪುಣ್ಯತಮವಾದುದು.

೭. ಮೂರು ದಿವಸಗಳಲ್ಲಿ ಸ್ನಾನಪಾನಾದಿಗಳನ್ನು ಮಾಡಿದವನನ್ನು ಸರಸ್ವತೀ ಜಲವು ಪರಿಶುದ್ಧನನ್ನಾಗಿ ಮಾಡುವುದು. ಏಳು ದಿವಸ ಗಳಲ್ಲಿ, ಯಮುನಾ ನದಿಯು ಪವಿತ್ರಮಾಡುವುದು. ಗಂಗಾ ಜಲವು ತಕ್ಷಣದಲ್ಲೇ ಪವಿತ್ರಮಾಡುವುದು. ನರ್ಮದಾ ಜಲವಾದರೋ ದರ್ಶನ ಮಾತ್ರದಿಂದಲೇ ಪವಿತ್ರಮಾಡುವುದು.

೮. ಈ ನರ್ಮದಾ ನದಿಯು ಕಳಿಂಗದೇಶದಲ್ಲಿ ಅಮರಕಂಟಕ ವೆಂಬ ಪರ್ವತದ ಪಶ್ಚಾರ್ಧದಲ್ಲಿ ಅತ್ಯಂತ ಪುಣ್ಯವಾದುದು.

೯–೧೦. ಆ ಪ್ರದೇಶದಲ್ಲಿ ದೇವತೆಗಳೂ, ಅಸುರರೂ, ಗಂಧ ರ್ವರೂ, ಋಷಿಗಳೂ, ತಪಸನ್ನಾಚರಿಸಿ ಉತ್ತಮವಾದ ಸಿದ್ಧಿಯನ್ನು

ತತ್ರ ಸ್ನಾತ್ವಾ ಮಹಾರಾಜ ನಿಯಮಸ್ಥೋ ಜಿತೇಂದ್ರಿಯಃ ।
ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಂ ॥೧೦॥
ಜನೇಶ್ವರೇ ನರಃ ಸ್ನಾತ್ವಾ ಪಿಣ್ಡಂ ದತ್ವಾ ಯಥಾವಧಿ ।
ಪಿತರಸ್ತಸ್ಯ ತೃಪ್ಯನ್ತಿ ಯಾವದಾಭೂತಸಂಪ್ಲವಂ ॥೧೧॥
ಪರ್ವತಸ್ಯ ಸಮನ್ತಾತ್ತು ರುದ್ರಕೋಟಿಃ ಪ್ರತಿಷ್ಠಿತಾ ।
ಸ್ನಾನಂ ಯಃ ಕುರುತೇ ತತ್ರ ಗನ್ಧಮಾಲ್ಯಾನುಲೇಪನಂ ॥೧೨॥
ಪ್ರೀತಸ್ತಸ್ಯ ಭವೇತ್ಸರ್ವೋ ರುದ್ರಕೋಟಿರ್ನ ಸಂಶಯಃ ।
ಪರ್ವತೇ ಪಶ್ಚಿಮಸ್ಯಾನ್ತೇ ಸ್ವಯಂ ದೇವೋ ಮಹೇಶ್ವರಃ ॥೧೩॥
ತತ್ರ ಸ್ನಾತ್ವಾ ಶುಚಿರ್ಭೂತ್ವಾ ಬ್ರಹ್ಮಚಾರೀ ಜಿತೇನ್ದ್ರಿಯಃ ।
ಪಿತೃಕಾರ್ಯಂ ತು ಕುರ್ವೀತ ವಿಧಿದೃಷ್ಟೇನ ಕರ್ಮಣಾ ॥೧೪॥

---

ಹೊಂದುವರು. ಅಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ, ಶೌಚ, ಸಂತೋಷ, ಸ್ವಾಧ್ಯಾಯ, ಈಶ್ವರತರ್ಪಣ, ಪ್ರಣಿಧಾನಪರನಾಗಿ ಒಂದು ರಾತ್ರಿಯಲ್ಲಿ ಉಪವಾಸ ಮಾಡಿದವನೂ ಕೂಡ ತನ್ನ ನೂರಾರು ವಂಶಗಳನ್ನು ಉದ್ಧಾರಮಾಡುವನು.

೧೧–೧೩. ಜನೇಶ್ವರಕ್ಷೇತ್ರದಲ್ಲಿ ಸ್ನಾನಮಾಡಿ ವಿಧ್ಯನುಸಾರವಾಗಿ ಪಿತೃಗಳಿಗೆ ಪಿಂಡವನ್ನು ಕೊಟ್ಟರೆ, ಆ ಪಿತೃಗಳು ಮಹಾ ಪ್ರಳಯ ಪರ್ಯಂತವಾಗಿ ತೃಪ್ತಿಗೊಳ್ಳುವರು. ಈ ಪರ್ವತದ ಸರ್ವಭಾಗದಲ್ಲೂ ಕೋಟಿ ರುದ್ರರು ಪ್ರತಿಷ್ಠಿತರಾಗಿರುವರು. ಅಲ್ಲಿ ಸ್ನಾನಮಾಡಿ ಗಂಧ ಮಾಲ್ಯಾದಿಗಳನ್ನು ಸಮರ್ಪಿಸಿದರೆ ಕೋಟಿ ರುದ್ರರೂ, ತೃಪ್ತರಾಗು ವರು. ಈ ಪರ್ವತದ ಪಶ್ಚಿಮ ಭಾಗದಲ್ಲಿ ಸಾಕ್ಷಾದೀಶ್ವರನೇ ವಾಸಿಸು ತ್ತಿರುವನು.

೧೪–೧೫. ಈ ಭಾಗದಲ್ಲಿ ಸ್ನಾನಮಾಡಿ ಶುಚಿಯಾಗಿಯೂ, ಬ್ರಹ್ಮ ಚಾರಿಯಾಗಿಯೂ, ಜಿತೇಂದ್ರಿಯನಾಗಿಯೂ, ಇದ್ದು ಶಾಸ್ತ್ರದಲ್ಲಿ ಹೇಳಿರುವಂತೆ, ಪಿತೃಕಾರ್ಯವನ್ನು ನಡೆಸಬೇಕು. ಪಿತೃದೇವತೆಗಳಿಗೆ

ತಿಲೋದಕೇನ ತತ್ರೈವ ತರ್ಪಯೇತ್ಪಿತೃದೇವತಾಃ ।
ಆಸಪ್ತಮಂ ಕುಲಂ ತಸ್ಯ ಸ್ವರ್ಗೇ ತಿಷ್ಠತಿ ಪಾಣ್ಡವ ॥೧೫॥

ಷಷ್ಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಅಪ್ಸರೋಗಣಸಂಕೀರ್ಣೋ ದಿವ್ಯಸ್ತ್ರೀಪರಿವಾರಿತಃ ॥೧೬॥

ದಿವ್ಯಗನ್ಧಾನುಲಿಪ್ತಶ್ಚ ದಿವ್ಯಾಲಙ್ಕಾರಭೂಷಿತಃ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಾಯತೇ ವಿಪುಲೇ ಕುಲೇ ॥೧೭॥

ಧನವಾನ್ದಾನಶೀಲಶ್ಚ ಧಾರ್ಮಿಕಶ್ಚೈವ ಜಾಯತೇ ।
ಪುನಃ ಸ್ಮರತಿ ತತ್ತೀರ್ಥಂ ಗಮನಂ ತತ್ರ ಕುರ್ವತೇ ।
ತಾರಯಿತ್ವಾ ಕುಲಾನ್ಸಪ್ತ ರುದ್ರಲೋಕಂ ಸ ಗಚ್ಛತಿ ॥೧೮॥

---

ತರ್ಪಣವನ್ನು ಕೊಡಬೇಕು. ಹೀಗೆ ಮಾಡುವುದರಿಂದ ಇವನ ಹಿಂದಿನ ಏಳು ತಲೆಯವರೆಗಿರುವ ಪಿತೃಗಳು ಸ್ವರ್ಗಲೋಕವನ್ನು ಹೊಂದುವರು.

೧೬–೧೭. ಹೀಗೆ ಸ್ನಾನಾದಿಗಳನ್ನಾಚರಿಸಿದವನು ಸ್ವರ್ಗಲೋಕದಲ್ಲಿ ಅಪ್ಸರ ಸ್ತ್ರೀಗಣದಿಂದಲೂ, ದಿವ್ಯ ಸ್ತ್ರೀ ಸಮೂಹದಿಂದಲೂ, ಸೇವಿಸಲ್ಪಟ್ಟು, ಅರವತ್ತುಸಾವಿರ ವರ್ಷ ದಿವ್ಯಭೋಗಗಳನ್ನು ಅನುಭವಿಸುವನು. ಅಲ್ಲಿರುವವರೆಗೂ, ದಿವ್ಯಗಂಧದಿಂದಲೂ, ದಿವ್ಯಾಲಂಕಾರದಿಂದಲೂ, ಶೋಭಿಸುತ್ತಲಿರುವನು. ಅವಧಿಯು ಕಳೆದ ನಂತರ ಈ ಭೂಮಿಗೆ ಬಂದು, ಶ್ರೇಷ್ಠವಾದ ಕುಲದಲ್ಲಿ ಹುಟ್ಟಿ, ಐಶ್ವರ್ಯವಂತನಾಗಿಯೂ, ದಾನಶೀಲನಾಗಿಯೂ, ಧಾರ್ಮಿಕನಾಗಿಯೂ ಇರುವನು.

೧೮. ಪುನಃ ಆ ತೀರ್ಥವನ್ನು ಸ್ಮರಿಸಿಕೊಂಡು, ಅಲ್ಲಿಗೆ ಹೋಗಿ ಸ್ನಾನಾದಿಗಳನ್ನಾಚರಿಸುವನು. ಸಪ್ತಕುಲ ಪುರುಷರಿಗೆ ಮುಕ್ತಿಯನ್ನುಂಟು ಮಾಡುವನು. ತಾನೂ ಕೂಡ ರುದ್ರಲೋಕವನ್ನು ಹೊಂದುವನು.

ಯೋಜನಾನಾಂ ಶತಂ ಸಾಗ್ರಂ ಶ್ರೂಯತೇ ಸರಿತೋತ್ತಮಾ ।
ವಿಸ್ತಾರೇಣ ತು ರಾಜೇನ್ದ್ರ ಯೋಜನದ್ವಯಮನ್ತರಮ್ ॥೧೯॥
ಷಷ್ಟಿಸ್ತೀರ್ಥಸಹಸ್ರಾಣಿ ಷಷ್ಟಿಃ ಕೋಟ್ಯಸ್ತಥೈವ ಚ ।
ಪರ್ವತಸ್ಯ ಸಮನ್ತಾತ್ತು ತಿಷ್ಠನ್ತ್ಯಮರಕಣ್ಟಕೇ ॥೨೦॥
ಬ್ರಹ್ಮಚಾರೀ ಶುಚಿರ್ಭೂತ್ವಾ ಜಿತಕ್ರೋಧೋ ಜಿತೇನ್ದ್ರಿಯಃ ।
ಸರ್ವಹಿಂಸಾನಿವೃತ್ತಶ್ಚ ಸರ್ವಭೂತಹಿತೇ ರತಃ ॥೨೧॥
ಏವಂ ಸರ್ವಸಮಾಚಾರಃ ಕ್ಷೇತ್ರಪಾಲಾನ್ಪರಿವ್ರಜೇತ್ ।
ತಸ್ಯ ಪುಣ್ಯಫಲಂ ರಾಜಞ್ಛೃಣುಷ್ವಾವಹಿತೋ ಹಿ ಮೇ ॥೨೨॥
ಶತಂ ವರ್ಷಸಹಸ್ರಾಣಾಂ ಸ್ವರ್ಗೇ ಮೋದೇತ ಪಾಣ್ಡವ ।
ಅಪ್ಸರೋಗಣಸಂಕೀರ್ಣೇ ದಿವ್ಯಸ್ತ್ರೀಪರಿವಾರಿತೇ ॥೨೩॥

---

೧೯–೨೦. ಈ ಶ್ರೇಷ್ಠವಾದ ನರ್ಮದಾ ನದಿಯು ನೂರು ಯೋಜನಕ್ಕಿಂತಲೂ ಹೆಚ್ಚು ದೀರ್ಘವಾಗಿಯೂ, ಎರಡು ಯೋಜನ ಅಗಲವಾಗಿಯೂ ಇರುವುದು. ಈ ಅಮರಕಂಟಕ ಪರ್ವತದ ಸರ್ವ ಭಾಗದಲ್ಲೂ, ತೀರ್ಥಗಳಿರುವುವು. ಅವುಗಳ ಸಂಖ್ಯೆಯು ಅರವತ್ತು ಕೋಟಿ ಮತ್ತು ಅರವತ್ತು ಸಾವಿರ ಇರುವುದು.

೨೧–೨೨. ಬ್ರಹ್ಮಚರ್ಯದಿಂದಲೂ, ಶೌಚದಿಂದಲೂ, ಕೂಡಿದವನಾಗಿ ಇಂದ್ರಿಯಗಳನ್ನೂ, ಕ್ರೋಧವನ್ನೂ ಜಯಿಸಿ, ಸರ್ವಪ್ರಾಣಿಗಳ ಹಿತವನ್ನೇ ಗುರಿಯಾಗಿಟ್ಟುಕೊಂಡು ಸರ್ವಹಿಂಸೆಯಿಂದ ದೂರವಾಗಬೇಕು. ಹೀಗಿದ್ದುಕೊಂಡು ಕ್ಷೇತ್ರಾಭಿಮಾನಿದೇವತೆಗಳನ್ನು ಶರಣು ಹೊಂದಿರುವ ಪುರುಷನ ಪುಣ್ಯಫಲಗಳನ್ನು ಹೇಳುವೆನು ಕೇಳು.

೨೩–೨೪. ಎಲೈ ಪಾಂಡುಪುತ್ರನಾದ ಧರ್ಮರಾಜನೇ ! ಈ ರೀತಿಯಾಗಿ ನಿಯಮ ಪರನಾದ ಮನುಷ್ಯನು, ಅಪ್ಸರ ಸ್ತ್ರೀಯರಿಂದಲೂ, ದಿವ್ಯಸ್ತ್ರೀಯರಿಂದಲೂ, ಸೇವೆಗೊಳ್ಳಲು ಯೋಗ್ಯವಾದ ಸ್ವರ್ಗಲೋಕ

ದಿವ್ಯಗನ್ಧಾನುಲಿಪ್ತಶ್ಚ ದಿವ್ಯಾಲಂಕಾರಭೂಷಿತಃ ।
ಕ್ರೀಡತೇ ದೇವಲೋಕೇ ತು ದೈವತೈಃ ಸಹ ಮೋದತೇ ॥೨೪॥

ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ವೀರ್ಯವಾನ್ ।
ಗೃಹಂ ಚ ಲಭತೇಽಸೌ ವೈ ನಾನಾರತ್ನವಿಭೂಷಿತಮ್ ॥೨೫॥

ಸ್ತಮ್ಭೈರ್ಮಣಿಮಯೈರ್ದಿವ್ಯೈರ್ವಜ್ರವೈಢೂರ್ಯಭೂಷಿತೈಃ ।
ಆಲೇಪಸಹಿತಂ ದಿವ್ಯಂ ದಾಸೀದಾಸಸಮನ್ವಿತಮ್ ॥೨೬॥

ಮತ್ತಮಾತಙ್ಗಶಬ್ದೈಶ್ಚ ಹಯಾನಾಂ ಹ್ರೇಷಿತೇನ ಚ ।
ಕ್ಷುಭ್ಯತೇ ತಸ್ಯ ತದ್ದ್ವಾರಮಿನ್ದ್ರಸ್ಯ ಭವನಂ ಯಥಾ ॥೨೭॥

ರಾಜರಾಜೇಶ್ವರಃ ಶ್ರೀಮಾನ್ಸರ್ವಸ್ತ್ರೀಜನವಲ್ಲಭಃ ।
ತಸ್ಮಿನ್ಗೃಹ ಉಷಿತ್ವಾ ತು ಕ್ರೀಡಾಭೋಗಸಮನ್ವಿತಃ ॥೨೮॥

---

ದಲ್ಲಿ ಮೂರುಸಾವಿರ ವರ್ಷ ಸುಖವನ್ನನುಭವಿಸುವನು. ಮತ್ತು ಗಂಧಾನುಲಿಪ್ತನಾಗಿಯೂ, ದಿವ್ಯಾಭರಣಗಳಿಂದ ಭೂಷಿತನಾಗಿಯೂ, ದೇವತೆಗಳೊಂದಿಗೆ ಸಂತೋಷದಿಂದ ವಿಹರಿಸುತ್ತಿರುವನು.

೨೫–೨೮. ನಿಯತಕಾಲ ಕಳೆದನಂತರ ಭೂಲೋಕವನ್ನು ಹೊಂದಿ ಪರಾಕ್ರಮಶಾಲಿಯಾದ ರಾಜನಾಗಿ, ನಾನಾರತ್ನಗಳಿಂದ ಕೂಡಿದ ಅರಮನೆಯಲ್ಲಿ ವಾಸಿಸುವನು. ಮತ್ತು ಆ ಅರಮನೆಯು ವಜ್ರ ವೈಢೂರ್ಯಾದಿ ಮಣಿಗಳಿಂದ ಕೆತ್ತಲ್ಪಟ್ಟ ರತ್ನಸ್ತಂಭಗಳಿಂದ ಶೋಭಿಸುತ್ತಿರುವುದು. ಅಲ್ಲಿ ಯಾವ ಚಿತ್ರಗಳಿಗೂ, ಯಾವ ದಾಸ ದಾಸಿಯರಿಗೂ ಕೊರತೆಯಿಲ್ಲ. ಮತ್ತು ಆಸೆಯ ಬಾಗಿಲಲ್ಲಿ ಸಾವಿರಾರು ಆನೆಗಳೂ, ಲಕ್ಷಾಂತರ ಕುದುರೆಗಳೂ, ಧ್ವನಿಮಾಡುತ್ತಿದ್ದು, ಆ ಮನೆಯನ್ನು ಇಂದ್ರವೈಜಯಂತಕ್ಕೆ ಸಮವಾಗಿ ಮಾಡುವುವು. ಆ ಮನೆಯಲ್ಲಿ ರಾಜಾಧಿರಾಜನಾದ ಈ ಮನುಷ್ಯನು, ಸರ್ವಸ್ತ್ರೀಯರ ಅನುರಾಗಕ್ಕೆ ಪಾತ್ರನಾಗಿ ಬೇಕಾದ ಸುಖಗಳನ್ನು ಅನುಭವಿಸುತ್ತಾ ಸರ್ವರೋಗಶೂನ್ಯನಾಗಿ ನೂರು ವರ್ಷಕ್ಕಿಂತಲೂ ಮಿಗಿಲಾಗಿ ಜೀವಿಸುವನು.

ಜೀವೇದ್ವರ್ಷಶತಂ ಸಾಗ್ರಂ ಸರ್ವರೋಗವಿವರ್ಜಿತಃ ।
ಏವಂ ಭೋಗೋ ಭವೇತ್ತಸ್ಯ ಯೋ ಮೃತೋಽಮರಕಣ್ಟಕೇ ।
ಅಗ್ನಿಪ್ರವೇಶೇಽಥ ಜಲೇ ತಥಾ ಚೈವ ಅನಾಶನೇ ॥೨೯॥
ಅನಿವರ್ತಿಕಾ ಗತಿಸ್ತಸ್ಯ ಪರ್ವತಸ್ಯಾಮ್ಬರೇ ಯಥಾ ।
ಪತನಂ ಪತತೇ ಯಸ್ತು ಮಾನವೋ ಮಾನವಾಧಿಪ ॥೩೦॥
ಕನ್ಯಾಸ್ತ್ರೀಣಿ ಸಹಸ್ರಾಣಿ ಏಕೈಕಸ್ಯಾಪಿ ಚಾಪರೇ ।
ತಿಷ್ಠನ್ತಿ ಭವನೇ ತಸ್ಯ ಪ್ರೇಷಣಂ ಪ್ರಾರ್ಥಯನ್ತಿ ಚ ॥೩೧॥
ದಿವ್ಯಭೋಗಸಮುತ್ಪನ್ನಃ ಕ್ರೀಡತೇ ಕಾಲಮಕ್ಷಯಮ್ ।
ಪೃಥಿವ್ಯಾಮಾಸಮುದ್ರಾಯಾಮೀದೃಶೋ ನೈವ ಜಾಯತೇ ॥೩೨॥
ಈದೃಶೋಽಯಂ ನರಶ್ರೇಷ್ಠ ಪರ್ವತೇ ಸುರಕಣ್ಟಕೇ ।
ಕೋಟಿತೀರ್ಥಂ ತು ವಿಜ್ಞೇಯಂ ಪರ್ವತಸ್ಯ ತು ಪಶ್ಚಿಮೇ ॥೩೩॥

---

೨೯. ಈ ರೀತಿಯಾಗಿ ಅಮರಕಂಟಕದಲ್ಲಿ ಮೃತಿಯನ್ನೈದಿದವನಿಗೆ ಸುಖವುಂಟಾಗುವುದು, ಮತ್ತು ಇಲ್ಲಿ ಅಗ್ನಿಯಲ್ಲಿ ಪ್ರವೇಶಿಸಿಯಾಗಲೀ, ನೀರಿನಲ್ಲಿ ಬಿದ್ದಾಗಲೀ, ಆಹಾರತ್ಯಾಗ ಮಾಡಿಯಾಗಲೀ, ಮೃತಿಹೊಂದಿದವನು ಮೋಕ್ಷವನ್ನೇ ಹೊಂದುವನು.

೩೦. ಎಲೈ ಮಾನವಾಧಿಪನಾದ ಧರ್ಮರಾಜನೇ! ಈ ಬೆಟ್ಟದಿಂದ ಧುಮುಕಿ ಪ್ರಾಣತ್ಯಾಗಮಾಡುವ ಮನುಷ್ಯನು, ಹಿಂತಿರುಗದ ಸದ್ಗತಿಯನ್ನು ಹೊಂದಿ ಮುಂದೆ ಹೇಳುವ, ಮಹಾಫಲವನ್ನು ಹೊಂದುವನು.

೩೧. ಅನೂಢರಾದ ಮೂರುಸಾವಿರ ಕನ್ನಿಕೆಯರು ಇವನ ಮನೆಯಲ್ಲಿ ಸೇವಾಪರರಾಗಿರುವರು. ಅಲ್ಲದೇ ಮತ್ತೆಷ್ಟೋ ಮಂದಿಗಳು ಇವನ ಸೇವಕರಾಗಿ ಬಾಳಬೇಕೆಂಬುದಾಗಿ ದೇವರನ್ನು ಪ್ರಾರ್ಥಿಸುತ್ತಿರುವರು.

೩೨. ಮತ್ತೂ ದಿವ್ಯಭೋಗಗಳನ್ನು ಅನುಭವಿಸುತ್ತಾ, ಅಪರಿಮಿತವಾದ ಕಾಲ ಸುಖವಾಗಿರುವನು. ಬೇರೊಬ್ಬನು ಸಮುದ್ರದ ವರೆಗಿರುವ ಭೂಮಿಯಲ್ಲೆಲ್ಲೂ ಇಂತಹವನು ಹುಟ್ಟುವುದಿಲ್ಲವು.

೩೩. ಇಂತಹ ಅಮರಕಂಟಕವೆಂಬ ಈ ಪರ್ವತದಲ್ಲಿ ಈ ರೀತಿಯಾದ ಮಹಾತ್ಮೆಯಿರುವುದು. ಈ ಪರ್ವತದ ಪಶ್ಚಿಮಕ್ಕೆ ಕೋಟಿತೀರ್ಥವೆಂದೊಂದಿರುವುದು.

ರುದ್ರೋ ಜಾಲೇಶ್ವರೋ ನಾಮ ತ್ರಿಷು ಲೋಕೇಷು ವಿಶ್ರುತಃ ।
ತಸ್ಯ ಪಿಣ್ಡಪ್ರದಾನೇನ ಸಂಧ್ಯೋಪಾಸನಕರ್ಮಣಾ ॥೩೪॥
ಪಿತರೋ ದಶ ವರ್ಷಾಣಿ ತರ್ಪಿತಾಸ್ತು ಭವನ್ತಿ ತೇ ।
ದಕ್ಷಿಣೇ ನರ್ಮದಾಯಾಸ್ತು ಕಪಿಲಾಖ್ಯಾ ಮಹಾನದೀ ॥೩೫॥
ಸರಲಾರ್ಜುನಸಂಛನ್ನಾ ನಾತಿದೂರೇ ವ್ಯವಸ್ಥಿತಾ ।
ಅಸ್ತಿ ಪುಣ್ಯಾ ಮಹಾಭಾಗಾ ತ್ರಿಷು ಲೋಕೇಷು ವಿಶ್ರುತಾ ॥೩೬॥
ತತ್ರ ಕೋಟಿಶತಂ ಸಾಗ್ರಂ ತೀರ್ಥಾನಾಂ ತು ಯುಧಿಷ್ಠಿರ ।
ಪುರಾಣೇ ಶ್ರೂಯತೇ ರಾಜನ್ಸರ್ವಂ ಕೋಟಿಗುಣಂ ಭವೇತ್॥೩೭॥
ತಸ್ಯಾಸ್ತೀರೇ ತು ಯೇ ವೃಕ್ಷಾಃ ಪತಿತಾಃ ಕಾಲಪರ್ಯಯಾತ್ ।
ನರ್ಮದಾತೋಯಸಂಯುಕ್ತಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥
ದ್ವಿತೀಯಾ ತು ಮಹಾಭಾಗಾ ವಿಶಲ್ಯಕರಣಾ ಶುಭಾ ।
ತತ್ರ ತೀರೇ ನರಃ ಸ್ನಾತ್ವಾ ವಿಶಲ್ಯೋ ಭವತಿ ಕ್ಷಣಾತ್ ॥೩೯॥

---

೩೪-೩೫. ಅಲ್ಲಿ ಜಾಲೇಶ್ವರನೆಂದು ಪ್ರಸಿದ್ಧನಾದ ಶಿವನು ಇರುವನು. ಆ ಶಿವನನ್ನುದ್ದೇಶಿಸಿ ಸಂಧ್ಯೆಯನ್ನು ಉಪಾಸಿಸುತ್ತಾ, ಪಿಂಡ ಪ್ರದಾನ ಮಾಡಬೇಕು. ಹೀಗೆ ಪಿಂಡಪ್ರದಾನ ಮಾಡುವವನು, ಪಿತೃಗಳನ್ನು ಹತ್ತುವರ್ಷ ತೃಪ್ತಿಗೊಳಿಸುವನು. ಈ ನರ್ಮದಾ ನದಿಗೆ ದಕ್ಷಿಣದಲ್ಲಿ ಸ್ವಲ್ಪ ದೂರದಲ್ಲೇ ಕಪಿಲಾ ಎಂಬ ಮಹಾನದಿ ಇರುವುದು.

೩೬. ಈ ನದಿಯ ದಡದಲ್ಲಿ ಸಕಲ ದೇವದಾರು ವೃಕ್ಷಗಳೂ, ಮತ್ತಿಮರಗಳೂ, ಬೇಕಾದಹಾಗೆ ಬೆಳೆದಿರುವುವು. ಈ ನದಿಯ ಹೆಸರು ಮೂರು ಲೋಕಗಳಲ್ಲೂ ಪ್ರಸಿದ್ಧವಾಗಿರುವುದು.

೩೭. ಈ ನದಿಯಲ್ಲಿ ನೂರು ಕೋಟಿಗಳಿಗಿಂತಲೂ, ಅಧಿಕ ತೀರ್ಥಗಳಿರುವುದಾಗಿ ಪುರಾಣ ಪ್ರಸಿದ್ಧಿಯಿರುವುದು.

೩೮-೪೧. ಈ ನದೀತೀರದಲ್ಲಿ ಬೆಳೆದ ಮರಗಳೂ ಕೂಡ ಕಾಲವಶಾತ್ ಬಿದ್ದು, ನರ್ಮದಾಜಲದಲ್ಲಿ ಸೇರಿದಮಾತ್ರಕ್ಕೆ ಮುಕ್ತಿಯನ್ನು ಹೊಂದುವುವು. ಹೀಗೆಯೇ, ವಿಶಲ್ಯಕರಣಾ ಎಂದು ಪ್ರಸಿದ್ಧವಾದ

ತತ್ರ ದೇವಗಣಾಃ ಸರ್ವೇ ಸಕಿನ್ನರಮಹೋರಗಾಃ ।
ಯಕ್ಷರಾಕ್ಷಸಗನ್ಧರ್ವಾ ಋಷಯಶ್ಚ ತಪೋಧನಾಃ ॥೪೦॥

ಸರ್ವೇ ಸಮಾಗತಾಸ್ತತ್ರ ಪರ್ವತೇಽಮರಕಣ್ಟಕೇ ।
ತೈಶ್ಚ ಸರ್ವೈಃ ಸಮಾಗಮ್ಯ ಮುನಿಭಿಶ್ಚ ತಪೋಧನೈಃ ॥೪೧॥

ನರ್ಮದಾಸಂಶ್ರಿತಾ ಪುಣ್ಯಾ ವಿಶಲ್ಯಾ ನಾಮ ನಾಮತಃ ।
ಉತ್ಪಾದಿತಾ ಮಹಾಭಾಗಾ ಸರ್ವಪಾಪಪ್ರಣಾಶಿನೀ ॥೪೨॥

ತತ್ರ ಸ್ನಾತ್ವಾ ನರೋ ರಾಜನ್ಬ್ರಹ್ಮಚಾರೀ ಜಿತೇನ್ದ್ರಿಯಃ ।
ಉಪೋಷ್ಯ ರಜನೀಮೇಕಾಂ ಕುಲಾನಾಂ ತಾರಯೇಚ್ಛತಮ್ ॥೪೩॥

ಕಪಿಲಾ ಚ ವಿಶಲ್ಯಾ ಚ ಶ್ರೂಯತೇ ರಾಜಸತ್ತಮ ।
ಈಶ್ವರೇಣ ಪುರಾ ಪ್ರೋಕ್ತೇ ಲೋಕಾನಾಂ ಹಿತಕಾಮ್ಯಯಾ ॥೪೪॥

---

ಮತ್ತೊಂದು ನದಿ ಇರುವುದು. ಇದರಲ್ಲಿ ಸ್ನಾನಮಾಡಿದವನ ಸರ್ವ ಪಾಪಗಳೂ ದೂರವಾಗುವುವು. ಹಿಂದೆ ಹೇಳಿದ ಅಮರಕಂಟಕವೆಂಬ ಪರ್ವತದಲ್ಲಿ ದೇವತೆಗಳೂ, ಕಿನ್ನರರೂ, ಮಹೋರಗರೂ, ಯಕ್ಷರೂ, ಗಂಧರ್ವರೂ, ಋಷಿಗಳೂ, ಇವರೆಲ್ಲರೂ ಸೇರುವರು.

೪೨. ಇವರೆಲ್ಲರೂ ಸೇರಿ, ನರ್ಮದಾನದಿಯೊಂದಿಗೆ ಸಂಗಮ ಹೊಂದುವ ವಿಶ್ಯಲಕರಣೀ ಎಂಬ ನದಿಯನ್ನು ಸೃಷ್ಟಿಮಾಡಿದರು.

೪೩. ಅಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ, ಬ್ರಹ್ಮಚರ್ಯದಿಂದ ಒಂದು ರಾತ್ರಿ ಉಪವಾಸ ಮಾಡಿದವನು, ನೂರು ತಲೆಯುವರೆವಿಗೂ ತನ್ನ ಹಿಂದಿನವರಿಗೆ ಸದ್ಗತಿಯನ್ನು ಕೊಡುವನು.

೪೪–೪೬. ಪೂರ್ವದಲ್ಲಿ, ಈಶ್ವರನೇ ಕಪಿಲಾನದಿಯ ಮತ್ತು ವಿಶಲ್ಯಾ ನದಿಯ ಮಹಾತ್ಮೆಯನ್ನು, ಲೋಕಹಿತದ ದೃಷ್ಟಿಯಿಂದ ಹೇಳಿರುವನು. ಈ ತೀರ್ಥಗಳಲ್ಲಿ ಸ್ನಾನ ಮಾಡುವವನು ಅಶ್ವಮೇಧದ ಫಲ

ತತ್ರ ಸ್ನಾತ್ವಾ ನರೋ ರಾಜನ್ನಶ್ವಮೇಧಫಲಂ ಲಭೇತ್ ।
ಅನಶನಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ॥೪೫॥

ಸರ್ವಪಾಪವಿಶುದ್ಧಾತ್ಮಾ ಇನ್ದ್ರಲೋಕಂ ಸ ಗಚ್ಛತಿ ।
ನರ್ಮದಾಯಾಂ ತು ರಾಜೇನ್ದ್ರ ಪುರಾಣೇ ಯಚ್ಛ್ರುತಂ ಮಯಾ॥

ತತ್ರ ತತ್ರ ನರಃ ಸ್ನಾತ್ವಾ ಅಶ್ವಮೇಧಫಲಂ ಲಭೇತ್ ।
ಯೇ ವಸನ್ತ್ಯುತ್ತರೇ ಕೂಲೇ ಇನ್ದ್ರಲೋಕೇ ವಸನ್ತಿ ತೇ ॥೪೭॥

ಸರಸ್ವತ್ಯಾಂ ಚ ಗಙ್ಗಾಯಾಂ ನರ್ಮದಾಯಾಂ ಯುಧಿಷ್ಠಿರ ।
ಸಮಂ ಸ್ನಾನಂ ಚ ದಾನಂ ಚ ಯಥಾ ಮೇ ಶಂಕರೋಽಬ್ರವೀತ್ ॥

ಪರಿತ್ಯಜತಿ ಯಃ ಪ್ರಾಣಾನ್ಸರ್ವತೇಽ ಮರಕಣ್ಟಕೇ ।
ವರ್ಷಕೋಟಿಶತಂ ಸಾಗ್ರಮಿನ್ದ್ರಲೋಕೇ ಮಹೀಯತೇ ॥೪೯॥

ನರ್ಮದಾಯಾ ಜಲಂ ಪುಣ್ಯಂ ಫೇನೋರ್ಮಿಸಮಲಂಕೃತಮ್ ।
ಪವಿತ್ರಂ ಶಿರಸಾ ವನ್ದ್ಯಂ ಸರ್ವಪಾಪೈಃ ಪ್ರಮುಚ್ಯತೇ ॥೫೦॥

---

ವನ್ನು ಹೊಂದುವನು. ಇಲ್ಲಿ ಉಪವಾಸ ಮಾಡುವವನು ಸರ್ವ ಪಾಪಗಳನ್ನೂ ಕಳೆದು, ಇಂದ್ರಲೋಕವನ್ನು ಪಡೆಯುವನು. ನರ್ಮದಾ ನದಿಯ ಮಹಾತ್ಮೆಯನ್ನು ನಾನು ಪುರಾಣಗಳಲ್ಲಿ ಕೇಳಿರುವೆನು.

೪೭–೪೮. ಆಯಾಯ ಉತ್ಕೃಷ್ಟಳಗಳಲ್ಲಿ ಸ್ನಾನಮಾಡುವವನು, ಅಶ್ವಮೇಧದ ಫಲವನ್ನು ಹೊಂದುವನು. ನರ್ಮದಾ ನದಿಯ ಉತ್ತರ ದಡದಲ್ಲಿವಾಸಿಸುವವರು ಇಂದ್ರಲೋಕವನ್ನು ಪಡೆಯುವರು. ಈಶ್ವರನು, ಸರಸ್ವತೀ ನದಿಯಲ್ಲೂ, ಗಂಗಾ ನದಿಯಲ್ಲೂ, ನರ್ಮದಾ ನದಿಯಲ್ಲೂ ಸ್ನಾನದಾನಾದಿಗಳು ಸಮಾನ ಫಲವುಳ್ಳವುಗಳೆಂದು, ನನಗೆ ಹೇಳಿರುವನು.

೪೯–೫೧. ಅಮರಕಂಟಕದಲ್ಲಿ ಪ್ರಾಣತ್ಯಾಗಮಾಡುವವನು, ನೂರು ಕೋಟಿ ವರ್ಷಕ್ಕಿಂತಲೂ ಅಧಿಕವಾಗಿ ಇಂದ್ರಲೋಕದಲ್ಲಿ ಪೂಜಿತನಾಗುವನು. ನೊರೆಯಿಂದಲೂ, ಅಲೆಗಳಿಂದಲೂ ಕೂಡಿದ ಪೂಜ್ಯಜಲ ವಿಶಿಷ್ಟವಾದ ನರ್ಮದಾನದಿಯನ್ನು ಶಿರಸ್ಸಿನಿಂದ ಪ್ರಣಾಮಮಾಡು

ನರ್ಮದಾ ಸರ್ವಪುಣ್ಯಾ ಚ ಬ್ರಹ್ಮಹತ್ಯಾಪಹಾರಿಣೀ ।
ಅಹೋರಾತ್ರೋಪವಾಸೇನ ಮುಚ್ಯತೇ ಬ್ರಹ್ಮಹತ್ಯಯಾ ॥೫೧॥
ಏವಂ ಪುಣ್ಯಾ ಚ ರಮ್ಯಾ ಚ ನರ್ಮದಾ ಪಾಣ್ಡುನನ್ದನ ।
ತ್ರಯಾಣಾಮಪಿ ಲೋಕಾನಾಂ ಪುನಾತ್ಯೇಷಾ ಮಹಾನದೀ ॥೫೨॥
ವಟೇಶ್ವರೇ ಮಹಾಪುಣ್ಯೇ ಗಙ್ಗಾದ್ವಾರೇ ತಪೋವನೇ ।
ಏತೇಷು ಸರ್ವಸ್ಥಾನೇಷು ಯೇಽರ್ದಿತಾಃ ಸಂಶಿತವ್ರತಾಃ ।
ಶ್ರೂಯತೇ ದಶಗುಣಂ ಪುಣ್ಯಂ ನರ್ಮದೋದ್ವಾಸಸಂಗನೇ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ತ್ರಯೋದಶೋಽಧ್ಯಾಯಃ

---

ವವನು, ಸರ್ವಪಾಪಗಳಿಂದಲೂ ಬಿಡುಗಡೆಹೊಂದುವನು. ಬ್ರಹ್ಮಹತ್ಯೆಯ ದೋಷವನ್ನು ಪರಿಹರಿಸುವುದೆಂದು ಪ್ರಸಿದ್ಧವಾದ ನರ್ಮದಾ ನದೀತೀರದಲ್ಲಿ ಒಂದು ಹಗಲಲ್ಲೂ, ಒಂದು ರಾತ್ರಿಯಲ್ಲಿಯೂ, ಉಪವಾಸ ಮಾಡಿದ ಮಾತ್ರಕ್ಕೆ ಬ್ರಹ್ಮಹತ್ಯೆಯಿಂದ ನರನು ಮುಕ್ತನಾಗುವನು.

೫೨-೫೩. ಈ ರೀತಿಯಾಗಿ ಪುಣ್ಯತಮವಾಗಿಯೂ, ರಮ್ಯವಾಗಿಯೂ ಇರುವ ನರ್ಮದಾ ಮಹಾನದಿಯು, ಮೂರುಲೋಕಗಳನ್ನೂ ಪವಿತ್ರಗೊಳಿಸಬಲ್ಲುದು. ವಟೇಶ್ವರ ಕ್ಷೇತ್ರದಲ್ಲಿಯೂ, ಮಹಾಪುಣ್ಯಪ್ರದವಾದ ಗಂಗಾದ್ವಾರದಲ್ಲಿಯೂ, ತಪೋವನದಲ್ಲಿಯೂ, ವ್ರತವನ್ನನುಷ್ಠಾನ ಮಾಡಿ ಪ್ರಾಣತ್ಯಾಗ ಮಾಡುವವರಿಗೆ ಬರುವ ಸದ್ಗತಿಯು ಪ್ರಸಿದ್ಧವಾಗಿರುವುದಷ್ಟೇ. ನರ್ಮದಾ ನದಿಯ ತೀರದಲ್ಲಿ ಪ್ರಾಣತ್ಯಾಗ ಮಾಡುವವರಿಗೆ ಅದಕ್ಕೆ ಹತ್ತುಭಾಗ ಅಧಿಕಫಲವು ಬರುವುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಚತುರ್ದಶೋಽಧ್ಯಾಯಃ

### ॥ ನಾರದ ಉವಾಚ ॥

**ನರ್ಮದಾ ತು ನದೀ ಶ್ರೇಷ್ಠಾ ಪುಣ್ಯಾ ಪುಣ್ಯತಮಾ ತ್ರಿಷು ।**
**ಮುನಿಭಿಸ್ತು ಮಹಾಭಾಗೈರ್ವಿಭಕ್ತಾ ಧರ್ಮಕಾಙ್ಕ್ಷಿಭಿಃ ॥ ೧ ॥**

**ಯಜ್ಞೋಪವೀತಮಾತ್ರಾಣಿ ಪ್ರವಿಭಕ್ತಾನಿ ಪಾಣ್ಡವ ।**
**ತೇಷು ಸ್ನಾತ್ವಾ ತು ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥ ೨ ॥**

**ಜಲೇಶ್ವರಂ ಪರಂ ತೀರ್ಥಂ ತ್ರಿಷು ಲೋಕೇಷು ವಿಶ್ರುತಮ್ ।**
**ತಸ್ಯೋತ್ಪತ್ತಿಂ ಕಥಯತಃ ಶೃಣು ಪಾಣ್ಡವನನ್ದನ ॥ ೩ ॥**

**ಪುರಾ ಮುನಿಗಣಾಃ ಸರ್ವೇ ಸೇನ್ದ್ರಾಶ್ಚೈವ ಮರುದ್ಗಣಾಃ ।**
**ಸ್ತುವನ್ತಿ ತೇ ಮಹಾತ್ಮಾನಂ ದೇವದೇವಂ ಮಹೇಶ್ವರಮ್ ॥ ೪ ॥**

---

ಪದ್ಮಪುರಾಣದ ಆದಿಖಂಡದ ಹದಿನಾಲ್ಕನೆಯ ಅಧ್ಯಾಯವು

೧. ನಾರದನು ಹೇಳಿದನು: ಗಂಗೆ, ಯಮುನೆ, ನರ್ಮದೆ, ಈ ಮೂರರಲ್ಲಿ ನರ್ಮದೆಯೇ ಬಹು ಪುಣ್ಯಕರವಾದುದು. ಧರ್ಮದಲ್ಲಿ ನಿರತರೂ, ಮಹಾತ್ಮರೂ ಆದ ಋಷಿಗಳು ಆರೀತಿ ವಿಭಾಗಿಸಿದ್ದಾರೆ.

೨–೩. ಎಲೈ ಪಾಂಡುಪುತ್ರನಾದ ಧರ್ಮಾತ್ಮಜನೇ! ಒಂದು ಯಜ್ಞೋಪವೀತಪ್ರಮಾಣವನ್ನು ಅನುಸರಿಸಿ ನರ್ಮದಾ ನದಿಯನ್ನು ಪುಣ್ಯಕ್ಷೇತ್ರಗಳಾಗಿ ವಿಭಾಗಿಸಿರುವರು. ಯಾವ ಭಾಗದಲ್ಲಿ ಸ್ನಾನಮಾಡಿದರೂ ಮಾನವನು ಸರ್ವ ಪಾಪಗಳನ್ನೂ ನೀಗುವನು. ಎಲೈ ಪಾಂಡುನಂದನನೇ! ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಜಾಲೇಶ್ವರ ತೀರ್ಥದ ಉತ್ಪತ್ತಿಯನ್ನು ಹೇಳುವೆನು ಕೇಳು.

೪–೫. ಪೂರ್ವದಲ್ಲಿ ಮುನಿಗಳೂ ಇಂದ್ರನೊಡಗೂಡಿದ ದೇವತೆಗಳೂ ದೇವದೇವನೂ, ಮಹಾಮಹಿಮ ಶಾಲಿಯೂ ಆದ ಮಹೇಶ್ವರ

ಸ್ತುವಮಾನಾಸ್ತು ಸಂಪ್ರಾಪ್ತಾ ಯತ್ರ ದೇವೋ ಮಹೇಶ್ವರಃ ।
ವಿಜ್ಞಾಪಯನ್ತಿ ದೇವೇಶಂ ಸೇನ್ದ್ರಾಸ್ತೇ ತು ಮರುದ್ಗಣಾಃ ।
ಭಯೋದ್ವಿಗ್ನಾನ್ವಿರೂಪಾಕ್ಷ ಪರಿತ್ರಾಯಸ್ವ ನಃ ಪ್ರಭೋ ॥ ೫ ॥

॥ ಈಶ್ವರ ಉವಾಚ ॥

ಸ್ವಾಗತಂ ತು ಮುನಿಶ್ರೇಷ್ಠಾಃ ಕಿಮರ್ಥಮಿಹ ಚಾಗತಾಃ ।
ಕಿಂ ದುಃಖಂ ಕೋ ನು ಸಂತಾಪಃ ಕುತೋ ವಾ ಭಯಮಾಗತಮ್॥
ಕಥಯಧ್ವಂ ಮಹಾಭಾಗಾ ಏತದಿಚ್ಛಾಮಿ ವೇದಿತುಮ್ ।
ಏವಮುಕ್ತಾಸ್ತು ರುದ್ರೇಣಾಕಥಯನ್ನಿಯತವ್ರತಾಃ ॥ ೭ ॥

॥ ಋಷಯ ಊಚುಃ ॥

ಅಪಿ ಘೋರೋ ಮಹಾವೀರ್ಯೋ ದಾನವೋ ಬಲದರ್ಪಿತಃ ।
ಬಾಣೋ ನಾಮೇತಿ ವಿಖ್ಯಾತೋ ಯಸ್ಯ ವೈ ತ್ರಿಪುರಂ ಪುರಮ್ ॥

---

ನನ್ನು ಸ್ತೋತ್ರಮಾಡತೊಡಗಿದರು. ಸ್ತೋತ್ರಮಾಡುತ್ತಾ ಮಹೇಶ್ವರನ ಬಳಿಗೆ ಬಂದು 'ಭಯದಿಂದ ದಿಕ್ಕುತೋರದ ನಮ್ಮನ್ನು ಕಾಪಾಡು' ಎಂಬುದಾಗಿ ಬೇಡಿಕೊಂಡರು.

೬-೭. ಈಶ್ವರನು ಹೇಳಿದನು: ಎಲೈ ಮುನಿಶ್ರೇಷ್ಠರೇ! ಏಕೆ ಬಂದಿರಿ? ನಿಮ್ಮ ದುಃಖವೇನು? ಯಾರಿಂದ ಭಯಗೊಂಡು ಹೀಗೆ ಸಂತಾಪ ಪಡುತ್ತಿರುವಿರಿ? ನಿಮ್ಮ ಕಷ್ಟವನ್ನು ಬೇಗ ಹೇಳಿ, ಹೀಗೆಂಬುದಾಗಿ ಹೇಳಿದ ಮಹೇಶ್ವರನ ಮಾತನ್ನು ಕೇಳಿ, ಅನೇಕ ವ್ರತಾಚಾರಗಳಿಂದ ಶುದ್ಧರಾದ ಆ ಋಷಿಗಳು ಹೀಗೆ ಹೇಳಿದರು.

೮-೧೧. ಋಷಿಗಳು ಹೇಳಿದರು: ತ್ರಿಪುರವೆಂಬ ಪಟ್ಟಣದಲ್ಲಿ ಬಾಣನೆಂಬ ಪ್ರಸಿದ್ಧನಾದ ದಾನವನು ಬಲದಿಂದ ಕೊಬ್ಬಿ, ಸರ್ವರಿಗೂ ಭಯಂಕರನಾಗಿರುವನು. ಎಲೈ ವಿರೂಪಾಕ್ಷನೇ! ಆ ತ್ರಿಪುರವು ಅವನ ತೇಜಸ್ಸಿನ ಬಲದಿಂದ, ಅಂತರಿಕ್ಷದಲ್ಲೇ ಇದ್ದುಕೊಂಡು ಸಂಚರಿಸುತ್ತಿರುವುದು. ಅವನಿಂದ ಭೀತರಾದ ನಾವು "ನೀನೇ ಗತಿ" ಎಂದು

**ಗಗನೇ ತು ವಸದ್ದಿವ್ಯಂ ಭ್ರಮತೇ ತಸ್ಯ ತೇಜಸಾ ।**
**ತಸ್ಮಾದ್ಭೀತಾ ವಿರೂಪಾಕ್ಷ ತ್ವಾಮೇವ ಶರಣಂ ಗತಾಃ ॥ ೯ ॥**

**ತ್ರಾಯಸ್ವ ಮಹತೋ ದುಃಖಾದ್ದೇವ ತ್ವಂ ಹಿ ಪರಾ ಗತಿಃ ।**
**ಏವಂ ಪ್ರಸಾದಂ ದೇವೇಶ ಸರ್ವೇಷಾಂ ಕರ್ತುಮರ್ಹಸಿ ॥೧೦॥**

**ಯೇನ ದೇವಾಃ ಸುಪ್ರಸನ್ನಾಃ ಸುಖಮೇಧನ್ತಿ ಶಂಕರ ।**
**ಪರಾಂ ನಿರ್ವೃತಿಮಾಯಾನ್ತಿ ತತ್ಪ್ರಭೋ ಕರ್ತುಮರ್ಹಸಿ ॥೧೧॥**

**॥ ದೇವ ಉವಾಚ ॥**

**ಏತತ್ಸರ್ವಂ ಕರಿಷ್ಯಾಮಿ ಮಾ ವಿಷಾದಂ ಕರಿಷ್ಯಥ ।**
**ಅಚಿರೇಣೈವ ಕಾಲೇನ ಕುರ್ಯಾಂ ಯುಷ್ಮತ್ಸುಖಾವಹಮ್ ॥೧೨॥**

**ಆಶ್ವಾಸಯಿತ್ವಾ ತಾನ್ಸರ್ವಾನ್ನರ್ಮದಾತಟಮಾಸ್ಥಿತಃ ।**
**ಚಿನ್ತಯಾಮಾಸ ಸರ್ವೇಶಸ್ತದ್ವಧಂ ಪ್ರತಿ ಪಾಣ್ಡವ ॥೧೩॥**

---

ನಿನ್ನನ್ನು ಬಂದು ಸೇರಿರುವೆವು. ಈ ಮಹಾಸಂಕಟದಿಂದ ನಮ್ಮನ್ನು ಪಾರಗೊಳಿಸು. ನಮಗೆ ಮತ್ತೊಬ್ಬರೂ ಗತಿಯಿಲ್ಲ. ನಮ್ಮೆಲ್ಲರನ್ನೂ ದಯಮಾಡಿ ಅನುಗ್ರಹಿಸು. ದುಃಖವು ತೊಲಗಿ ಸರ್ವ ದೇವತೆಗಳೂ ಸುಖವಾಗಿರುವಂತೆ ಮಾಡುವ ಭಾರವು ನಿನ್ನದಾಗಿರುವುದು. ಎಲೈ ಜಗತ್ಪ್ರಭುವೇ ! ನೀನೇ ನಮ್ಮೆಲ್ಲರಿಗೂ ಗತಿಯಾಗಿರುವೆ.

೧೨. ಮಹಾದೇವನು ಹೇಳಿದನು: ಎಲೈ ಮುನಿಗಳೇ! ಸ್ವಲ್ಪ ಕಾಲದಲ್ಲೇ ನಿಮಗೆ ಸಂತೋಷವಾಗುವ ಕಾರ್ಯವನ್ನು ಕೈಗೊಳ್ಳುವೆನು. ದುಃಖಪಡಬೇಡಿರಿ.

೧೩–೧೪. ಹೀಗೆಂದು ಅವರೆಲ್ಲರನ್ನೂ ಸಮಾಧಾನಗೊಳಿಸಿ ನರ್ಮದಾ ತೀರವನ್ನು ಸೇರಿ, ಆ ಬಾಣಾಸುರನ ಸಂಹಾರ ಮಾರ್ಗವನ್ನು ಯೋಚಿಸಿ ದನು. ಆ ತ್ರಿಪುರ ಸಂಹಾರವು ಹೇಗಾಗಬೇಕೆಂಬುದಾಗಿ ಯೋಚಿಸುತ್ತಾ ನಾರದನನ್ನು ಸ್ಮರಿಸಿದನು. ಸ್ಮರಣೆ ಮಾಡಿದೊಡನೆಯೇ ನಾರದನು ಮಹೇಶ್ವರನ ಸಮೀಪಕ್ಕೆ ಬಂದು ಸೇರಿದನು.

ಕಥಂ ಕೇನ ಪ್ರಕಾರೇಣ ಹನ್ತವ್ಯಸ್ತ್ರಿಪುರೋ ಮಯಾ ।
ಏವಂ ಸಂಚಿನ್ತ್ಯ ಭಗವಾನ್ನಾರದಂ ಸ್ಮರತೇ ತದಾ ।
ಸ್ಮರಣಾದೇವ ಸಂಪ್ರಾಪ್ತೋ ನಾರದಃ ಸಮುಪಸ್ಥಿತಃ ॥೧೪॥

॥ ನಾರದ ಉವಾಚ ॥

ಆಜ್ಞಾಪಯ ಮಹಾದೇವ ಕಿಮರ್ಥಂ ಸಂಸ್ಮೃತೋ ಹ್ಯಹಮ್ ।
ಕಿಂ ಕಾರ್ಯಂ ತು ಮಹಾದೇವ ಕರ್ತವ್ಯಂ ಕಥಯಸ್ವ ಮೇ ॥೧೫॥

॥ ಈಶ್ವರ ಉವಾಚ ॥

ಗಚ್ಛ ನಾರದ ತತ್ರೈವ ಯತ್ರ ತತ್ತ್ರಿಪುರಂ ಪುರಮ್ ।
ಬಾಣಸ್ಯ ದಾನವೇನ್ದ್ರಸ್ಯ ಶೀಘ್ರಂ ಗಚ್ಛಾಥ ತತ್ಕುರು ॥೧೬॥

ಭರ್ತಾರೋ ದೇವತಾಭಾಶ್ಚ ಸ್ತ್ರಿಯಶ್ಚಾಪ್ಸರಸೋಪಮಾಃ ।
ತಾಸಾಂ ವೈ ತೇಜಸಾ ವಿಪ್ರ ಭ್ರಮನ್ತೇ ತ್ರಿಪುರಂ ದಿವಿ ॥೧೭॥

ತತ್ರ ಗತ್ವಾ ತು ವಿಪ್ರೇನ್ದ್ರ ಮನ್ತ್ರಮನ್ಯಂ ಪ್ರಚೋದಯ ।
ದೇವಸ್ಯ ವಚನಂ ಶ್ರುತ್ವಾ ಮುನಿಸ್ತ್ವರಿತವಿಕ್ರಮಃ ।
ಸ್ತ್ರೀಣಾಂ ಹೃದಯನಾಶಾಯ ಪ್ರವಿಷ್ಟಸ್ತಂ ಪುರಂ ಪ್ರತಿ ॥೧೮॥

---

೧೫. ನಾರದನು ಹೇಳಿದನು: ಎಲೈ ಮಹಾದೇವನೇ! ನನ್ನನ್ನು ಏಕೆ ಸ್ಮರಿಸಿದೆ? ನಾನು ಏನನ್ನು ಮಾಡಬೇಕು? ಸ್ವಾಮಿಯೇ, ಹೇಳು.

೧೬. ಈಶ್ವರನು ಹೇಳಿದನು: ಎಲೈ ನಾರದನೇ! ದಾನವೇಂದ್ರನಾದ ಬಾಣನ ತ್ರಿಪುರವೆಂಬ ಪಟ್ಟಣವನ್ನು ಹೊಂದಿ, ನಾನು ಹೇಳುವ ಆ ಕಾರ್ಯವನ್ನು ಶೀಘ್ರವಾಗಿ ಮಾಡು.

೧೭. ಆ ನಗರದಲ್ಲಿರುವ ಪುರುಷರು ದೇವತೆಗಳಿಗೆ ಸಮಾನರಾಗಿರುವರು. ಸ್ತ್ರೀಯರಾದರೋ ಅಪ್ಸರಸ್ತ್ರೀಯರಿಗೆ ಸದೃಶರಾಗಿರುವರು. ಅವರ ತೇಜಸ್ಸಿನಿಂದ ಆ ಪಟ್ಟಣವು ಅಂತರಿಕ್ಷದಲ್ಲಿ ತಿರುಗುತ್ತಿರುವುದು.

೧೮. ಎಲೈ ಬ್ರಾಹ್ಮಣಶ್ರೇಷ್ಠನಾದ ನಾರದನೇ! ಅಲ್ಲಿಗೆ ಹೋಗಿ ಅತಿ ನಿಗೂಢವಾದ ಮಾತೊಂದನ್ನು ಹೇಳಿ ನಂಬಿಸು. ಹೀಗೆಂಬ ಮಹಾದೇವನ ವಾಕ್ಯವನ್ನು ಕೇಳಿದ ನಾರದನು, ಶೀಘ್ರಗತಿಯಿಂದ ನಡೆದು, ಆ ಪಟ್ಟಣದ ಸ್ತ್ರೀಯರ ಹೃದಯವನ್ನು ಕಲಕುವುದಕ್ಕಾಗಿ ತ್ರಿಪುರವನ್ನು ಪ್ರವೇಶಿಸಿದನು.

ಶೋಭತೇ ತತ್ಪುರಂ ದಿವ್ಯಂ ನಾನಾರತ್ನೋಪಶೋಭಿತಮ್ ।
ಶತಯೋಜನವಿಸ್ತೀರ್ಣಂ ತತೋ ದ್ವಿಗುಣಮಾಯತಮ್ ॥೧೯॥

ತತಃ ಪಶ್ಯತಿ ತತ್ರೈವ ಬಾಣಂ ತು ಬಲದರ್ಪಿತಮ್ ।
ಮಾಲಾಕುಣ್ಡಲಕೇಯೂರೈರ್ಮುಕುಟೇನ ವಿರಾಜಿತಮ್ ॥೨೦॥

ರತ್ನಹಾರೈಶ್ಚ ಸಂಪನ್ನಂ ಚನ್ದ್ರಕಾನ್ತಿವಿಭೂಷಿತಮ್ ।
ರಸನಾ ತಸ್ಯ ರತ್ನಾಢ್ಯಾ ಕರಾಃ ಕನಕಮಣ್ಡಿತಾಃ ।
ಉತ್ಥಿತೋ ನಾರದಂ ದೃಷ್ಟ್ವಾ ದಾನವೇನ್ದ್ರೋ ಮಹಾಬಲಃ ॥೨೧॥

॥ ಬಾಣ ಉವಾಚ ॥

ಸ ದೇವರ್ಷಿಃ ಸ್ವಯಂ ಪ್ರಾಪ್ತೋ ಮದ್ಗೃಹಂ ಪ್ರತಿ ಸಂಪ್ರತಿ ।
ಅರ್ಘ್ಯಂ ಪಾದ್ಯಂ ಯಥಾನ್ಯಾಯಂ ಕ್ರಿಯತಾಂ ದ್ವಿಜಸತ್ತಮ ॥೨೨॥

---

೧೯. ಆ ಪಟ್ಟಣವು ಒಂದುನೂರು ಗಾವುದ ಅಗಲವುಳ್ಳದ್ದಾಗಿಯೂ, ಎರಡುನೂರು ಗಾವುದ ಉದ್ದವುಳ್ಳದ್ದಾಗಿಯೂ, ಇದ್ದು ನಾನಾರತ್ನಗಳಿಂದ ಶೋಭಿಸುತ್ತಲಿತ್ತು.

೨೦–೨೧. ಕರ್ಣಾಭರಣಗಳಿಂದಲೂ, ತೋಳು ಬಂದಿಗಳಿಂದಲೂ, ಕಿರೀಟದಿಂದಲೂ, ಕಂಗೊಳಿಸುತ್ತಲಿರುವ, ಬಲದಿಂದ ಕೊಬ್ಬಿದ ಬಾಣಾಸುರನನ್ನು ನೋಡಿದನು. ಮತ್ತು ಆ ಬಾಣಾಸುರನು ಚಂದ್ರಕಾಂತ ಮಣಿಗಳಿಂದ ಕೂಡಿದ ರತ್ನಹಾರಗಳಿಂದಲೂ, ನಾನಾರತ್ನಗಳಿಂದ ಕೂಡಿದ ಸೊಂಟಪಟ್ಟಿಯಿಂದಲೂ, ಚಿನ್ನದ ಉಂಗುರದಿಂದಲೂ, ಶೋಭಿಸುತ್ತಲಿದ್ದನು. ಹೀಗೆ ಶೋಭಿಸುತ್ತಲಿರುವ ಆ ಬಾಣನು ನಾರದನನ್ನು ಕಂಡೊಡನೆಯೇ ಪ್ರತ್ಯುತ್ಥಾನ ಮಾಡಿ, ಮರ್ಯಾದೆಯಿಂದ ಮುಂದೆ ಹೇಳುವಂತೆ ಹೇಳಿದನು.

೨೨–೨೩. ಬಾಣನು ಹೇಳಿದನು: ಎಲೈ ಬ್ರಾಹ್ಮಣಶ್ರೇಷ್ಠನೇ! ನಾರದ ಮಹರ್ಷಿಯಾದ ನೀನು ತಾನಾಗಿಯೇ ನನ್ನನ್ನು ಅನುಗ್ರಹಿಸಲು ನಮ್ಮ ಮನೆಗೆ ಬಂದಿರುತ್ತೀಯೆ. ಅನುಗುಣವಾಗಿ ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸು. ಈರೀತಿ ಗೌರವಿಸಿ, ಬಹುಕಾಲದ ಮೇಲೆ ದರ್ಶನ

ಚಿರಾತ್ಸಮಾಗತೋ ವಿಪ್ರ ಸ್ಥೀಯತಾಮಿದಮಾಸನಮ್।
ಏವಂ ಸಂಭಾವಯಿತ್ವಾ ತು ನಾರದಂ ಸಮುಪಸ್ಥಿತಮ್ ।
ತಸ್ಯ ಭಾರ್ಯಾ ಮಹಾದೇವೀ ಅನೌಪಮ್ಯಾ ತು ನಾಮತಃ ॥೨೩॥

॥ ಅನೌಪಮ್ಯೋವಾಚ ॥

ಭಗವನ್ಮಾನುಷೇ ಲೋಕೇ ದೇವಾಸ್ತುಷ್ಯನ್ತಿ ಕೇನ ವೈ ।
ವ್ರತೇನ ನಿಯಮೇನಾಪಿ ದಾನೇನ ತಪಸಾಥ ವಾ ॥೨೪॥

॥ ನಾರದ ಉವಾಚ॥

ತಿಲಧೇನುಂ ಚ ಯೋ ದದ್ಯಾದ್ಬ್ರಾಹ್ಮಣೇ ವೇದಪಾರಗೇ ।
ಸಸಾಗರಾ ನವದ್ವೀಪಾ ದತ್ತಾ ಭವತಿ ಮೇದಿನೀ ॥೨೫॥

ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸಾರ್ವಕಾಮಿಕೈಃ ।
ಮೋದತೇ ಚಾಕ್ಷಯಂ ಕಾಲಂ ಸುಚಿರಂ ಕೃತಶಾಸನಃ ॥೨೬॥

---

ಕೊಟ್ಟಿರುವ ಈ ನಾರದಮಹರ್ಷಿಯನ್ನು ಉಚಿತವಾದ ಆಸನದಿಂದ ಸತ್ಕರಿಸಬೇಕೆಂಬುದಾಗಿ ಹೇಳಿ, ಸಿದ್ಧವಾದವುಗಳೆಲ್ಲವುಗಳಿಂದ ಸತ್ಕರಿಸಿದನು. ಹೀಗೆ ಸತ್ಕರಿಸುವಿಕೆಯಲ್ಲಿ ಭಾಗವನ್ನು ಹೊಂದಿದ ಅವನ ಪತ್ನಿಯಾದ ಅನೌಪಮ್ಯಳು ಹೇಳಿದಳು.

೨೪. ಎಲೈ ತ್ರಿಕಾಲಜ್ಞನಾದ ನಾರದಮಹರ್ಷಿಯೇ! ಮನುಷ್ಯಲೋಕದಲ್ಲಿ ಯಾವ ಯಾವ ವ್ರತ, ನಿಯಮ, ದಾನ, ತಪಸ್ಸುಗಳಿಂದ ದೇವತೆಗಳು ತೃಪ್ತಿಗೊಳ್ಳುವರು, ಎಂಬುದನ್ನು ದಯಮಾಡಿ ನನಗೆ ಹೇಳು ಎಂದಳು.

೨೫. ನಾರದನು ಹೇಳಿದನು: ಎಲೌ ಅನೌಪಮ್ಯಳೇ! ತಿಲನಿರ್ಮಿತವಾದ ಧೇನುವನ್ನು ವೇದಾಧ್ಯಯನ ಮಾಡಿದ ಬ್ರಾಹ್ಮಣನಿಗೆ ದಾನ ಮಾಡಿದರೆ, ಸರ್ವ ಸಮುದ್ರಗಳಿಂದಲೂ, ನವದ್ವೀಪಗಳಿಂದಲೂ, ಕೂಡಿರುವ ಭೂಮಿಯನ್ನೇ ದಾನಮಾಡಿದಂತಾಗುವುದು.

೨೬. ಇಂತಹ ದಾನಮಾಡಿದ ಮನುಷ್ಯನು, ಕೋಟಿಸೂರ್ಯರಿಗೆ ಸಮಾನಗಳಾದ, ಸಮಸ್ತ ಪದಾರ್ಥಗಳಿಂದಲೂ ತುಂಬಿರುವ, ವಿಮಾನಗಳನ್ನು ಹೊಂದಿ, ಬೇಕಾದ ಇಷ್ಟಾರ್ಥಗಳನ್ನು ಹೊಂದುತ್ತಾ ಪ್ರಭುವಾಗಿ ಬಾಳುವನು.

ಆಮ್ರಾತಕಕಪಿತ್ಥಾನಿ ಕದಳೀವನಮೇವ ಚ ।
ಕದಮ್ಬಚಮ್ಪಕಾಶೋಕಾ ಅನೇಕಾ ವಿವಿಧದ್ರುಮಾಃ ॥೨೭॥

ಅಷ್ಟಮಿೀ ಚ ಚತುರ್ಥೀ ಚ ದ್ವಾದಶೀ ಚ ತಥಾ ಉಭೇ ।
ಸಂಕ್ರಾನ್ತಿರ್ವಿಷುವಂ ಚೈವ ದಿನಚ್ಛಿದ್ರಮುಖಂ ತಥಾ ॥೨೮॥

ಪುಣ್ಯಾನ್ಯೇತಾನಿ ಸರ್ವಾಣಿ ಉಪವಾಸನ್ತಿ ಯಾಸ್ತ್ರಿಯಃ ।
ತಾಸಾಂ ತು ಧರ್ಮಯುಕ್ತಾನಾಂ ಸ್ವರ್ಗೇ ವಾಸೋ ನ ಸಂಶಯಃ॥

ಕಲಿಕಾಲಾತ್ತು ನಿರ್ಮುಕ್ತಾಃ ಸರ್ವಪಾಪವಿವರ್ಜಿತಾಃ ।
ಉಪವಾಸರತಾ ನಾರ್ಯೋ ನೋಪಸರ್ಪನ್ತಿ ತಾಪಸಾಃ ॥೩೦॥

ಏವಂ ಶ್ರುತ್ವಾ ತು ಸುಶ್ರೋಣಿ ಯಥೇಷ್ಟಂ ಕರ್ತುಮರ್ಹಸಿ ।
ನಾರದಸ್ಯ ವಚಃ ಶ್ರುತ್ವಾ ರಾಜ್ಞೀ ವಚನಮಬ್ರವೀತ್ ॥೩೧॥

ಪ್ರಸಾದಂ ಕುರು ವಿಪ್ರೇನ್ದ್ರ ದಾನಂ ಗೃಹ್ಣ ಯಥೇಪ್ಸಿತಮ್ ।
ಸುವರ್ಣಮಣಿರತ್ನಾನಿ ವಸ್ತ್ರಾಣ್ಯಾಭರಣಾನಿ ಚ ॥೩೨॥

---

೨೭–೨೮. ಅಮಟೆ, ಬೇಲ, ಬಾಳೆ, ಕದಂಬ (ದೇವಯೋಗ್ಯವಾದ ಈಚಲು) ಸಂಪಿಗೆ, ಅಶೋಕ ಇವುಗಳ ವನಗಳು ಪುಣ್ಯತಮವಾದುವುಗಳು. ಶುಕ್ಲ ಕೃಷ್ಣಪಕ್ಷಗಳಲ್ಲಿ ಬರುವ ಅಷ್ಟಮಿೀ, ಚತುರ್ಥೀ, ದ್ವಾದಶೀ, ವಿಷುವಸಂಕ್ರಾಂತಿ ತಿಥಿಚ್ಛಿದ್ರ ಇವುಗಳು ಪುಣ್ಯಕರಗಳು.

೨೯–೩೦. ಇವುಗಳಲ್ಲಿ ಉಪವಾಸ ಮಾಡುವ ಸ್ತ್ರೀಯರಿಗೆ ಖಂಡಿತವಾಗಿಯೂ ಸ್ವರ್ಗವಾಸವು ಸಿಗುವುದು. ಉಪವಾಸಪ್ರಿಯರಾದ ಸ್ತ್ರೀಯರೂ, ಋಷಿಗಳೂ, ಕಲಿದೋಷದಿಂದ ನಿರ್ಮುಕ್ತರಾಗಿ ಸರ್ವಪಾಪಗಳನ್ನೂ ಕಳೆದು ಮೋಕ್ಷಹೊಂದುವರು.

೩೧–೩೨. ಎಲೈ ಅನೌಪಮ್ಯಳೇ! ಇದನ್ನೆಲ್ಲಾ ಕೇಳಿದ ನೀನು ನಿನ್ನಿಷ್ಟದಂತೆ ನಡೆಯಬಹುದೆಂದು ಹೇಳಿದ ನಾರದನ ಉಕ್ತಿಯನ್ನು ಕೇಳಿ, ರಾಜಮಹಿಷಿಯು ಹೀಗೆ ಹೇಳಿದಳು. ಸುವರ್ಣ, ಮಣಿ, ರತ್ನಗಳನ್ನು ನಿನ್ನಿಷ್ಟದಂತೆ ಕೊಡುವೆನು. ನನ್ನಲ್ಲಿ ಪ್ರಸಾದವನ್ನು ತೋರಿಸಿ

ತತ್ತೇ ದಾಸ್ಯಾಮ್ಯಹಂ ವಿಪ್ರ ಯಚ್ಚಾನ್ಯದಪಿ ದುರ್ಲಭಮ್ ।
ಪ್ರತಿಗೃಹ್ಣ ದ್ವಿಜಶ್ರೇಷ್ಠ ಪ್ರೀಯೇತಾಂ ಹರಿಶಂಕರೌ ॥೩೩॥

॥ ನಾರದ ಉವಾಚ ॥

ಅನ್ಯಸ್ಮೈ ದೀಯತಾಂ ಭದ್ರೇ ಕ್ಷೀಣವೃತ್ತಿಶ್ಚ ಯೋ ದ್ವಿಜಃ ।
ವಯಂ ತು ಶೀಲಸಂಪನ್ನಾ ಭಕ್ತಿಸ್ತು ಕ್ರಿಯತೇ ಮಮ ॥೩೪॥

ಏವಂ ತಾಸಾಂ ಮನೋ ಹೃತ್ವಾ ಸರ್ವಾಸಾಮುಪದಿಶ್ಯ ವಾ ।
ಜಗಾಮ ಭರತಶ್ರೇಷ್ಠ ಸ್ವಕೀಯಂ ಸ್ಥಾನಕಂ ಪುನಃ ॥೩೫॥

ಅತ್ರಾಽಽಕೃಷ್ಟಾನ್ತರಾಸ್ತಾಸ್ತು ಅತ್ರ ತ್ವಾಗತಮಾನಸಾಃ ।
ಪುರಿ ಚ್ಛಿದ್ರಂ ಸಮುತ್ಪನ್ನಂ ಬಾಣಸ್ಯ ತು ಮಹಾತ್ಮನಃ ॥೩೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಚತುರ್ದಶೋಽಧ್ಯಾಯಃ

---

ತೆಗೆದುಕೊಳ್ಳಬೇಕು. ಹರಿಶಂಕರರು ಪ್ರೀತರಾಗಲೆಂದು ಉತ್ತಮವಾದ ಯಾವ ವಸ್ತುವನ್ನು ಬೇಕಾದರೂ ಕೊಡುವೆನು, ದಯಮಾಡಿ ತೆಗೆದು ಕೊಳ್ಳಬೇಕು.

೩೪. ನಾರದನು ಹೇಳಿದನು: ಎಲೈ ಭದ್ರೆಯೇ! ಜೀವಿಕೆ ಇಲ್ಲದೇ ಬಡವನಾಗಿರುವ ಬ್ರಾಹ್ಮಣನನ್ನು ನೋಡಿ, ಅವನಿಗೆ ದಾನ ಮಾಡು. ನಾವು ಶೀಲಸಂಪನ್ನರಾಗಿ ಪ್ರತಿಗ್ರಹವನ್ನು ಬಿಟ್ಟವರು. ಆದರೇ ಆಯಾಯ ವಸ್ತುಗಳ ಮಾಹಾತ್ಮ್ಯೆಯನ್ನು ತಿಳಿಸಿ ಜನರಿಗೆ ಆದರ ವನ್ನು ಮಾತ್ರ ಉಂಟುಮಾಡುವೆವು.

೩೫–೩೬. ಹೀಗೆ ಉಪದೇಶಮಾಡಿ ಅವರ ಮನಸ್ಸನ್ನೆಲ್ಲಾ ಬೇರೆ ಕಡೆಗೆ ಎಳೆದು, ನಾರದನು ತನ್ನ ಸ್ಥಳಕ್ಕೆ ಹಿಂತಿರುಗಿದನು. ಹೀಗೆ ನಾರದನ ಉಪದೇಶವನ್ನು ಕೇಳಿದ ಸ್ತ್ರೀಯರ ಮನಸ್ಸಿನ ಸ್ಥೈರ್ಯವು ನಷ್ಟವಾಗಿ ಮನಸ್ಸು ತಿರುಗಲಾರಂಭಿಸಿತು. ಹೀಗೆ ಮಹಾತ್ಮನಾದ ಬಾಣನ ಪಟ್ಟಣದಲ್ಲಿ ದೋಷವುಂಟಾಯಿತು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಪಞ್ಚದಶೋಽಧ್ಯಾಯಃ

### ॥ ನಾರದ ಉವಾಚ ॥

**ಯನ್ಮಾಂ ಪೃಚ್ಛಸಿ ಕೌನ್ತೇಯ ತನ್ನಿಬೋಧ ಚ ತಚ್ಛೃಣು ॥ ೧ ॥**
**ಏತಸ್ಮಿನ್ನನ್ತರೇ ರುದ್ರೋ ನರ್ಮದಾತಟಮಾಸ್ಥಿತಃ ।**
**ನಾಮ್ನಾ ಮಾಹೇಶ್ವರಂ ಸ್ಥಾನಂ ತ್ರಿಷು ಲೋಕೇಷು ವಿಶ್ರುತಮ್ ॥**
**ತಸ್ಮಿನ್ ಸ್ಥಾನೇ ಮಹಾದೇವಶ್ಚಿನ್ತಯಂಸ್ತ್ರೈಪುರಂ ವಧಮ್ ।**
**ಗಾಣ್ಡೀವಂ ಮನ್ದರಂ ಕೃತ್ವಾ ಗುಣಂ ಕೃತ್ವಾ ತು ವಾಸುಕಿಮ್ ॥**
**ಸ್ಥಾನಂ ಕೃತ್ವಾ ತು ವೈಶಾಖಂ ವಿಷ್ಣುಂ ಕೃತ್ವಾ ಶರೋತ್ತಮಮ್ ।**
**ಅಗ್ರೇ ಚಾಗ್ನಿಂ ಪ್ರತಿಷ್ಠಾಪ್ಯ ಮುಖೇ ವಾಯುಃ ಸಮರ್ಪಿತಃ ॥ ೪ ॥**
**ಹಯಾಶ್ಚ ಚತುರೋ ವೇದಾಃ ಸರ್ವದೇವಮಯಂ ರಥಮ್ ।**
**ಚಕ್ರಗೌ ಹ್ಯಶ್ವಿನೌ ದೇವೌ ಅಕ್ಷೇ ಚಕ್ರಧರಃ ಸ್ವಯಮ್ ॥ ೫ ॥**
**ಸ್ವಯಮಿನ್ದ್ರಶ್ಚ ಚಾಪಾನ್ತೇ ಬಾಣೇ ವೈಶ್ರವಣಃ ಸ್ಥಿತಃ ।**
**ಯಮಸ್ತು ದಕ್ಷಿಣೇ ಹಸ್ತೇ ವಾಮೇ ಕಾಲಸ್ತು ದಾರುಣಃ ॥ ೬ ॥**

---

ಪದ್ಮಪುರಾಣದ ಆದಿಖಂಡದ ಹದಿನೈದನೆಯ ಅಧ್ಯಾಯವು.

೧. ನಾರದನು ಹೇಳಿದನು: ಎಲೈ ಯುಧಿಷ್ಠಿರನೇ! ನನ್ನನ್ನು ಪ್ರಶ್ನೆಮಾಡಿದ ವಿಷಯವನ್ನು ಈಗ ಹೇಳುವೆನು, ಕೇಳಿ ತಿಳಿದುಕೋ.

೨-೬. ಇಷ್ಟರಲ್ಲಿ, ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ, ನರ್ಮದಾ ನದಿಯ ದಡದಲ್ಲಿ ಇರುವ ಮಾಹೇಶ್ವರಸ್ಥಾನದಲ್ಲಿ ಕುಳಿತು, ತ್ರಿಪುರವಧೆಯನ್ನು ಕುರಿತು ಹರನು ಯೋಚಿಸುತ್ತಿದ್ದನು. ಹೀಗೆ ಯೋಚಿಸುತ್ತಾ, ಮಂದರ ಪರ್ವತವನ್ನು ಧನುಸ್ಸನ್ನಾಗಿ ಮಾಡಿಕೊಂಡು

ಚಕ್ರಯೋಸ್ತ್ವರಕೇ ನ್ಯಸ್ತಾ ಗನ್ಧರ್ವಾ ಲೋಕವಿಶ್ರುತಾಃ ।
ಪ್ರಜಾಪತೀ ರಥಶ್ರೇಷ್ಠೇ ಬ್ರಹ್ಮಾ ಚೈವ ತು ಸಾರಥಿಃ ॥ ೭ ॥

ಏವಂ ಕೃತ್ವಾ ತು ದೇವೇಶಃ ಸರ್ವದೇವಮಯಂ ರಥಮ್ ।
ಸೋಽತಿಷ್ಠತ್ಸ್ಥಾಣುಭೂತೋ ಹಿ ಸಹಸ್ರಂ ಪರಿವತ್ಸರಾನ್ ॥ ೮ ॥

ಯದಾ ತ್ರೀಣಿ ಸಮೇತಾನಿ ಅನ್ತರಿಕ್ಷಚರಾಣಿ ವೈ ।
ತ್ರಿಪುರಾಣಿ ವಿಶಲ್ಯೇನ ತದಾ ತಾನಿ ಬಿಭೇದ ಸಃ ॥ ೯ ॥

ಶರಃ ಪ್ರಚೋದಿತಸ್ತತ್ರ ರುದ್ರೇಣ ತ್ರಿಪುರಂ ಪ್ರತಿ ।
ಭ್ರಷ್ಟತೇಜಾಃ ಸ್ತ್ರಿಯೋ ಜಾತಾ ಬಲಂ ಚೈಷಾಂ ವ್ಯಶೀರ್ಯತ ॥೧೦॥

---

ವಾಸುಕಿ ಎಂಬ ಸರ್ಪರಾಜನನ್ನು ಧನುಸ್ಸಿನ ಹಗ್ಗವನ್ನಾಗಿ ರಚಿಸಿ, ವೈಶಾಖವನ್ನು ಬಾಣಬಿಡುವ ಜಾಗವನ್ನಾಗಿ ಮಾಡಿದನು. ವಿಷ್ಣುವನ್ನು ಬಾಣವನ್ನಾಗಿ ಮಾಡಿ, ಅದರ ಮುಖದಲ್ಲಿ ಅಗ್ನಿಯನ್ನಿಟ್ಟು, ಅದನ್ನು ವಾಯುವಿನೊಂದಿಗೆ ಸೇರಿಸಿದನು. ನಾಲ್ಕು ವೇದಗಳು ಕುದುರೆಗಳಾದುವು. ಸರ್ವ ದೇವತೆಗಳು ರಥವಾಗಿ ನಿಂತರು. ಅಶ್ವಿನೀ ದೇವತೆಗಳು ಎರಡು ಚಕ್ರವಾದರು. ಚಕ್ರಧರನೇ ಚಕ್ರದ ಅಚ್ಚಾದನು. ಧನುಸ್ಸಿನ ಕೊನೆಯಭಾಗದಲ್ಲಿ ಇಂದ್ರನು ಸಿದ್ಧನಾಗಿ ನಿಂತನು. ಕುಬೇರನು ಬಾಣದಲ್ಲಿ ಸೇರಿದನು. ಬಲಗೈಯಲ್ಲಿ ಯಮನೂ, ಎಡಗೈಯಲ್ಲಿ ಮೃತ್ಯುವೂ ಸಿದ್ಧರಾದರು.

೭-೮. ಸರ್ವಲೋಕಪ್ರಸಿದ್ಧರಾದ ಗಂಧರ್ವರೇ ಚಕ್ರದ ಹಾರೆ ಕಾಲುಗಳಾದರು. ಪ್ರಜಾಸ್ರಷ್ಟೃವಾದ ಬ್ರಹ್ಮನೇ ಸಾರಥಿಯಾದನು. ದೇವತೆಗಳಿಗೆಲ್ಲಾ ಅಧಿಪತಿಯಾದ ಶಿವನು ಹೀಗೆ ಸರ್ವದೇವತಾತ್ಮಕವಾದ ರಥವನ್ನು ಸಿದ್ಧಪಡಿಸಿಕೊಂಡು ಸಾವಿರ ವರ್ಷಗಳ ಕಾಲ ಗುರಿ ಮಾಡುತ್ತಾ ನಿಶ್ಚಲನಾಗಿ ನಿಂತನು.

೯. ಆ ಮೂರು ಪಟ್ಟಣಗಳು ಒಟ್ಟಿಗೆ ಸೇರುವ ಕಾಲವನ್ನು ಹೀಗೆ ನಿರೀಕ್ಷಿಸುತ್ತಿದ್ದು ಸೇರಿದೊಡನೆಯೇ ಶೂಲದಿಂದ ಇರಿದನು.

೧೦. ಮತ್ತು ಸಿದ್ಧವಾದ ಆ ಬಾಣವನ್ನು ತ್ರಿಪುರದಮೇಲೆ ಪ್ರಯೋಗಿಸಿದನು. ತಕ್ಷಣವೇ ಸ್ತ್ರೀಯರ ತೇಜಸ್ಸೆಲ್ಲಾ ನಷ್ಟವಾಯಿತು. ಬಲವು ಕುಂದಿತು.

ಉತ್ಪಾತಾಶ್ಚ ಪುರೇ ತಸ್ಮಿನ್ಪ್ರಾದುರ್ಭೂತಾಃ ಸಹಸ್ರಶಃ ।
ತ್ರಿಪುರಸ್ಯ ವಿನಾಶಾಯ ಕಾಲರೂಪೋಽಭವತ್ತದಾ ॥೧೧॥

ಅಟ್ಟಹಾಸಂ ಪ್ರಮುಞ್ಚನ್ತಿ ಭೀತಾಃ ಕಷ್ಟಮುಯಾಸ್ತಥಾ ।
ನಿಮೇಷೋನ್ಮೇಷಣಂ ಚೈವ ಕುರ್ವನ್ತಿ ಚಿತ್ರಕರ್ಮಣಾ ॥೧೨॥

ಸ್ವಪ್ನೇ ಪಶ್ಯನ್ತಿ ಚಾತ್ಮಾನಂ ರಕ್ತಾಮ್ಬರವಿಭೂಷಿತಮ್ ।
ಸ್ವಪ್ನೇ ಪಶ್ಯನ್ತಿ ತೇ ಚೈವಂ ವಿಪರೀತಾನಿ ಯಾನಿ ತು ॥೧೩॥

ಏತಾನ್ಪಶ್ಯನ್ತಿ ಉತ್ಪಾತಾಂಸ್ತತ್ರ ಸ್ಥಾನೇ ತು ಯೇ ಜನಾಃ ।
ತೇಷಾಂ ಬಲಂ ಚ ಬುದ್ಧಿಂ ಚ ಹರಃ ಕ್ರೋಧಾದನಾಶಯತ್ ॥೧೪॥

ಸಂವರ್ತಕೋ ನಾಮ ವಾಯುರ್ಯುಗಾನ್ತಪ್ರತಿಮೋ ಮಹಾನ್ ।
ಸಮೀರಿತೋಽನಲಶ್ರೇಷ್ಠ ಉತ್ತಮಾಙ್ಗೇಷು ಬಾಧತಿ ॥೧೫॥

---

೧೧-೧೨. ಆ ಪಟ್ಟಣದಲ್ಲಿ ಸಾವಿರಾರು ಉತ್ಪಾತಗಳು ತಲೆದೋರಿದುವು. ಆ ಪರಶಿವನು ತ್ರಿಪುರವಿನಾಶಕ್ಕಾಗಿ ಮೃತ್ಯುಸ್ವರೂಪವನ್ನು ತಾಳಿದನು. ಅಲ್ಲಿರುವ ಜನರು ಕಷ್ಟಗಳನ್ನು ಹೊಂದಿ, ಹೆದರಿದವರಾಗಿ ನಗುವುದನ್ನೇ ಬಿಟ್ಟುಬಿಟ್ಟರು. ಚಿತ್ರದಲ್ಲಿ ಬರೆದ ಬೊಂಬೆಗಳಂತಿದ್ದು ರೆಪ್ಪೆಯನ್ನು ತೆಗೆಯುವುದು ಮುಚ್ಚುವುದನ್ನು ಮಾತ್ರ ಮಾಡುತ್ತಿದ್ದರು.

೧೩-೧೪. ಹೀಗೆ ಉತ್ಪಾತಗಳನ್ನು ಕಾಣುತ್ತಿರುವ ಜನರ ಬಲವನ್ನೂ, ಬುದ್ಧಿಯನ್ನೂ ಹರನು ಕೋಪದಿಂದ ನಾಶಮಾಡಿದನು. ಸ್ವಪ್ನದಲ್ಲಿ ಕೆಂಪು ಬಟ್ಟೆಗಳನ್ನು ಧರಿಸಿದ ತಮ್ಮನ್ನೇ ನೋಡಿದರು. ಮತ್ತು ಯಾವುದು ಸ್ವಪ್ನದಲ್ಲಿ ಕಂಡರೆ ಕೆಟ್ಟದ್ದೆಂದು ಹೇಳಲ್ಪಟ್ಟಿದೆಯೋ ಅಂತಹ ಸಮಸ್ತ ಸ್ವಪ್ನಗಳನ್ನೂ ನೋಡಿದರು.

೧೫. ಯುಗಾಂತ ಸಮಯದಲ್ಲಿ ಬೀಸುವ ವಾಯುವಿಗೆ ಸಮನಾದ, ಸಂವರ್ತಕವೆಂಬ ವಾಯುವಿನಿಂದ ಪ್ರೇರಿತವಾದ ಅಗ್ನಿಯು ಮೇಲಿನ ಭಾಗಗಳಲ್ಲಿ ಹತ್ತಿಕೊಂಡಿತು.

ಜ್ವಲನ್ತಿ ಪಾದಪಾಸ್ತತ್ರ ಪತನ್ತಿ ಶಿಖರಾಣಿ ಚ ।
ಸಂವರ್ತವ್ಯಾಕುಲೀಭೂತಂ ಹಾಹಾಕಾರಮಚೇತನಮ್ ॥೧೬॥

ಭಗ್ನೋದ್ಯಾನಾನಿ ಸರ್ವಾಣಿ ಕ್ಷಿಪ್ರಂ ತು ಪ್ರಜ್ವಲನ್ತಿ ಚ ।
ತೇನೈವ ದೀಪಿತಂ ಸರ್ವಂ ಜ್ವಲತೇ ವಿಶಿಖೈಃ ಶಿಖೈಃ ॥೧೭॥

ದ್ರುಮಾ ಆರಾಮುಗನ್ಧಾನಿ ಗೃಹಾಣಿ ವಿವಿಧಾನಿ ಚ ।
ದಶದಿಕ್ಷು ಪ್ರವೃತ್ತೋಽಯಂ ಸಮಿದ್ಧೋ ಹವ್ಯವಾಹನಃ ॥೧೮॥

ಮನಃಶಿಲಾಃ ಪ್ರಭಾಯನ್ತೇ ದಿಶೋ ದಶ ವಿಭಾಗಶಃ ।
ಶಿಖಾಸಹಸ್ರೈರತ್ಯುಗ್ರೈಃ ಪ್ರಜ್ವಲನ್ತಿ ಹುತಾಶನೈಃ ॥೧೯॥

ಸರ್ವಂ ಕಿಂಶುಕಸಂಪ್ರಖ್ಯಂ ಜ್ವಲಿತಂ ದೃಶ್ಯತೇ ಪುರಮ್ ।
ಗೃಹಾದ್ಗೃಹಾನ್ತರಂ ನೈವ ಗನ್ತುಂ ಧೂಮೈರ್ನ ಶಕ್ಯತೇ ॥೨೦॥

---

೧೬. ಅಲ್ಲಿರುವ ಮರಗಳೆಲ್ಲವೂ ಹತ್ತಿಕೊಂಡು ಉರಿಯಲಾರಂಭಿಸಿದವು. ಮನೆಯ ಮೇಲುಭಾಗಗಳೆಲ್ಲಾ ಉರಿಯುತ್ತಾ ಬೀಳಲಾರಂಭಿಸಿದುವು. ಆ ಸಮಯದಲ್ಲಿ ಜನರು ದಿಕ್ಕುತೋಚದೆ, ಹಾಹಾಕಾರ ಮಾಡಲಾರಂಭಿಸಿದರು.

೧೭–೧೮. ಆ ಬಾಣಗಳ ಜ್ವಾಲೆಗಳಿಂದ ಹತ್ತಿಕೊಂಡು ಉರಿಯುತ್ತಾ ಉದ್ಯಾನಗಳೆಲ್ಲವೂ ಬೂದಿಯಾದುವು. ಮರಗಳೂ, ಉದ್ಯಾನದ ಭಾಗಗಳೂ, ನಾನಾವಿಧವಾದ ಮನೆಗಳೂ, ಇವುಗಳೆಲ್ಲವೂ ಸುಟ್ಟು ಬೂದಿಯಾದುವು. ಅಗ್ನಿಯು ಹತ್ತು ದಿಕ್ಕುಗಳಲ್ಲಿಯೂ ಪ್ರಸರಿಸಿತು.

೧೯–೨೦. ಪಟ್ಟಣದ ನಾನಾಭಾಗಗಳಲ್ಲಿ ಸಾವಿರಾರು ಜ್ವಾಲೆಗಳು ಹೊರಟವು. ಹೀಗೆ ಹತ್ತು ದಿಕ್ಕುಗಳಲ್ಲೂ ಪ್ರಸರಿಸಿರುವ ಜ್ವಾಲೆಗಳನ್ನು ನೋಡಿ, ಮನಃಶಿಲೆಗಳಿಂದಲೇನಾದರೂ ಈ ಭಾಗಗಳೆಲ್ಲಾ ತುಂಬಿರುವುವೋ ಎಂದು ಊಹಿಸುವಂತಿತ್ತು. ಈ ಪಟ್ಟಣಗಳೆಲ್ಲವೂ ಅರಳಿರುವ ಹೂಗಳಿಂದ ತುಂಬಿರುವ, ಮುತ್ತುಗದ ಮರಗಳಿಂದ ತುಂಬಿರುವುವೋ ಎಂಬಂತೆ ತೋರುತ್ತಿತ್ತು. ಪಟ್ಟಣವೆಲ್ಲಾ ಹೊಗೆಯು ತುಂಬಿಕೊಂಡು, ಒಂದು ಮನೆಯಲ್ಲಿರುವವರು ಮತ್ತೊಂದು ಮನೆಗೆ ಹೋಗಲು ಸಾಧ್ಯವಾಗಲಿಲ್ಲ.

ಹರಕೋಪಾನಲಾದ್ದಗ್ಧಂ ಕ್ರನ್ದಮಾನಂ ಸುದುಃಖಿತಮ್ ।
ಪ್ರದೀಪ್ತಂ ಸರ್ವತೋ ದಿಕ್ಷು ದಹ್ಯತೇ ತ್ರಿಪುರಂ ಪುರಮ್ ॥೨೧॥

ಪ್ರಾಸಾದಶಿಖರಾಗ್ರಾಣಿ ವಿಶೀರ್ಯನ್ತಿ ಸಹಸ್ರಶಃ ।
ನಾನಾಮಾಲ್ಯವಿಚಿತ್ರಾಣಿ ವಿಮಾನಾನ್ಯಪ್ಯನೇಕಧಾ ॥೨೨॥

ಗೃಹಾಣಿ ಚೈವ ರಮ್ಯಾಣಿ ದಹ್ಯನ್ತೇ ದೀಪ್ತವಹ್ನಿನಾ ।
ಬಾಹ್ಯತೋ ದ್ರುಮಖಣ್ಡೇಷು ಜನಸ್ಥಾನೇ ತಥೈವ ಚ ॥೨೩॥

ದೇವಾಗಾರೇಷು ಸರ್ವೇಷು ಪ್ರಜ್ವಲನ್ತೇ ಜ್ವಲನ್ತ್ಯಪಿ ।
ರುದನ್ತಿ ಚಾನಲಸ್ಪೃಷ್ಟಾಃ ಕ್ರನ್ದನ್ತಿ ವಿವಿಧೈಃ ಸ್ವರೈಃ ॥೨೪॥

ಗಿರಿಕೂಟನಿಭಾಸ್ತತ್ರ ದೃಶ್ಯನ್ತೇಽಙ್ಗಾರರಾಶಯಃ ।
ಸ್ತುವನ್ತಿ ದೇವದೇವೇಶಂ ಪರಿತ್ರಾಯಸ್ವ ಮಾಂ ಪ್ರಭೋ ॥೨೫॥

---

೨೧–೨೪. ಆ ತ್ರಿಪುರವೆಂಬ ಪಟ್ಟಣವು ಹರಕೋಪಾಗ್ನಿಯಿಂದ ಸುಡಲ್ಪಟ್ಟು ಎಲ್ಲಾ ಕಡೆಯಲ್ಲೂ ರೋದನದಿಂದಲೂ, ದುಃಖಪರಂಪರೆಯಿಂದಲೂ, ಕೂಡಿ ಹತ್ತಿಕೊಂಡು ಉರಿಯುತ್ತಿತ್ತು. ಸಾವಿರಾರು ಅರಮನೆಯ ಶಿಖರಗಳು ಉರಿದು ದಡದಡನೆ ಬೀಳುತ್ತಿದ್ದುವು. ಏಳು ಅಂತಸ್ತಿನಿಂದ ಕೂಡಿರುವ, ನಾನಾರತ್ನಗಳಿಂದ ಶೋಭಿಸುತ್ತಲಿರುವ ಎಷ್ಟೋ ಮನೆಗಳು ಕ್ಷಣಕಾಲದಲ್ಲೇ ಹತ್ತಿ ಉರಿಯುತ್ತಿದ್ದುವು. ಹೊರಗಿರುವ ಮರಗಳೂ, ಜನಗಳು ವಾಸಿಸುವ ಜಾಗಗಳೂ, ದೇವಾಲಯಗಳೂ ಹತ್ತಿ ಉರಿಯಲಾರಂಭಿಸಿದುವು. ಅವುಗಳ ಜ್ವಾಲೆಗಳು ಮತ್ತೊಂದಕ್ಕೆ ತಗಲಿ ಅವುಗಳೂ ಕೂಡ ಉರಿಯಲಾರಂಭಿಸಿದುವು. ಅಗ್ನಿಗೆ ಸಿಕ್ಕಿದ ಜನಗಳು ನಾನಾಕೂಗುಗಳಿಂದ ಕೂಗುತ್ತಾ ಅಳಲಾರಂಭಿಸಿದರು.

೨೫–೨೬ ಅಲ್ಲಿ ಬಿದ್ದಿರುವ ಬೆಂಕಿಯ ಕೆಂಡದ ರಾಶಿಗಳು ಬೆಟ್ಟಗಳ ಸಮುದಾಯದಂತಿದ್ದುವು. ಪಟ್ಟಣದಲ್ಲಿರುವ ಜನಗಳೆಲ್ಲರೂ ದೇವದೇವನಾದ ಶಿವನನ್ನು "ಪ್ರಭೋ! ನನ್ನನ್ನು ಕಾಪಾಡು" ಎಂಬುದಾಗಿ ಕೂಗಿಕೊಳ್ಳುತ್ತಿದ್ದರು. ಆ ಪಟ್ಟಣದಲ್ಲಿರುವ ದಾನವರು ಒಬ್ಬರು

ಅನ್ಯೋಽನ್ಯಂ ಚ ಪರಿಷ್ವಜ್ಯ ಹುತಾಶನಪ್ರಪೀಡಿತಾಃ ।
ದಹ್ಯನ್ತೇ ದಾನವಾಸ್ತತ್ರ ಶತಶೋಽಥ ಸಹಸ್ರಶಃ ॥೨೬॥

ಹಂಸಕಾರಣ್ಡವಾಕೀರ್ಣಾ ನಲಿನೀ ಸಹಪಙ್ಕಜಾ ।
ದಹ್ಯನ್ತೇಽನಲದಗ್ಧಾನಿ ಪುರೋದ್ಯಾನಾನಿ ದೀರ್ಘಿಕಾಃ ॥೨೭॥

ಅಮ್ಲಾನೈಃ ಪಙ್ಕಜೈಶ್ಛನ್ನಾ ವಿಸ್ತೀರ್ಣಾ ಯೋಜನೈಃ ಶತೈಃ ।
ಗಿರಿಕೂಟನಿಭಾಸ್ತತ್ರ ಪ್ರಾಸಾದಾ ರತ್ನಭೂಷಿತಾಃ ॥೨೮॥

ಪತನ್ತ್ಯನಲನಿರ್ದಗ್ಧಾ ನಿಸ್ತೋಯಾ ಜಲದಾ ಇವ ।
ಸ ಹ ಸ್ತ್ರೀಬಾಲವೃದ್ಧೇಷು ಗೋಷು ಪಕ್ಷಿಷು ವಾಜಿಷು ॥೨೯॥

ನಿರ್ದಯೋ ದಹತೇ ವಹ್ನಿರ್ಹರಕೋಪೇನ ಪ್ರೇರಿತಃ ।
ಸಪತ್ನಾಶ್ಚೈವ ಸುಪ್ತಾಶ್ಚ ಸಂಸುಪ್ತಾ ಬಹವೋ ಜನಾಃ ॥೩೦॥

---

ಮತ್ತೊಬ್ಬರನ್ನು ಅಪ್ಪಿಕೊಂಡು, ಜ್ವಾಲೆಗೆ ಸಿಲುಕಿ, ಸಾವಿರಾರು ಮಂದಿಗಳು ಒಟ್ಟೊಟ್ಟಿಗೆ ಅಗ್ನಿಗೆ ಆಹುತಿಯಾದರು. ರತ್ನಗಳಿಂದಲಂಕೃತವಾದ ಅರಮನೆಗಳೆಲ್ಲವೂ ಉರಿಯುತ್ತಿದ್ದುವು.

೨೭–೨೮. ಹಂಸವಿಶೇಷಗಳಿಂದಲೂ, ಕಮಲಗಳಿಂದಲೂ, ಕೂಡಿರುವ ಕೊಳಗಳೂ, ಪುರೋದ್ಯಾನಗಳೂ, ಬಾವಿಗಳೂ, ಇವೆಲ್ಲವೂ ಅಗ್ನಿಗೆ ಸಿಲುಕಿ ಹಾಳಾದುವು. ಈ ಭಾವಿಗಳಾದರೋ ಯಾವಾಗಲೂ, ಬಾಡದಿರುವ ಕಮಲಗಳಿಂದ ಕೂಡಿ ನೂರಾರುಗಾವುದ ಪ್ರದೇಶಗಳನ್ನು ವ್ಯಾಪಿಸಿಕೊಂಡಿದ್ದುವು. ಮತ್ತು ರತ್ನಾಲಂಕೃತವಾದ ಬೆಟ್ಟದ ಶಿಖರಗಳಂತಿರುವ ಪ್ರಾಸಾದಗಳೆಲ್ಲವೂ, ಅಗ್ನಿಗೆ ತುತ್ತಾದವು.

೨೯–೩೦. ಅಗ್ನಿಗೆ ಸಿಲುಕಿದ ಇವುಗಳೆಲ್ಲವೂ ಬೂದಿಯಾಗಿ ನೀರಿಲ್ಲದ ಮೇಘಗಳಂತೆ ಮಾಯವಾದುವು. ಆ ಅಗ್ನಿಯಾದರೋ ಹರನ ಕ್ರೋಧದ ಸಹಾಯವನ್ನು ಹೊಂದಿ ಹೆಂಗಸರು, ಮಕ್ಕಳು, ಮುದುಕರು, ದನಗಳು, ಪಕ್ಷಿಗಳು, ಕುದುರೆಗಳು, ಎಂಬ ವಿವೇಕವಿಲ್ಲದೆ ಅಪರಾಧಗಳ ಕಡೆ ದೃಷ್ಟಿಯಿಡದೇ, ಎಲ್ಲವನ್ನೂ ಸುಟ್ಟು ಬೂದಿಮಾಡಿತು. ಶತ್ರುಗಳೂ, ಮಲಗಿದ್ದವರೂ, ನಿದ್ರಿಸುತ್ತಿದ್ದವರೂ ಎಷ್ಟೋ ಮಂದಿಗಳು ಅಗ್ನಿಯಲ್ಲಿ ಬೆರತು ಹೋದರು.

ಪುತ್ರಮಾಲಿಙ್ಗ್ಯ ತೇ ಗಾಢಂ ದಹ್ಯನ್ತೇ ತ್ರಿಪುರಾರಿಣಾ ।
ಅಥ ತಸ್ಮಿನ್ಪುರೇ ದೀಪ್ತೇ ಸ್ತ್ರಿಯಶ್ಚಾಪ್ಸರಸೋಪಮಾಃ ॥೩೧॥

ಅಗ್ನಿಜ್ವಾಲಾಹತಾಸ್ತತ್ರ ಪತನ್ತಿ ಧರಣೀತಲೇ ।
ಕಾಚಿಚ್ಛ್ಯಾಮಾ ವಿಶಾಲಾಕ್ಷೀ ಮುಕ್ತಾವಲಿವಿಭೂಷಿತಾ ॥೩೨॥

ಧೂಮೇನಾಕುಲಿತಾ ಸಾ ತು ಪ್ರತಿಬುದ್ಧಾ ಶಿಖಾರ್ದಿತಾ ।
ಸುತಂ ವಿಚಿನ್ತ್ಯಮಾನಾ ಸಾ ಪತಿತಾ ಧರಣೀ ತಲೇ ॥೩೩॥

ಕಾಚಿತ್ಸುವರ್ಣವರ್ಣಾಭಾ ನೀಲರತ್ನೈರ್ವಿಭೂಷಿತಾ ।
ಧೂಮೇನಾಕುಲಿತಾ ಸಾ ತು ಪತಿತಾ ಧರಣೀತಲೇ ॥೩೪॥

ಅನ್ಯಾ ಗೃಹೀತಹಸ್ತಾ ತು ಸಖೀ ದಹತಿ ಪಾವಕೇ ।
ಅನೇಕದಿವ್ಯರೂಪಾಣ್ಯಾದೃಷ್ಟ್ವಾ ಮದವಿಮೋಹಿತಾ ॥೩೫॥

ಶಿರಸಾ ಪ್ರಾಞ್ಜಲಿಂ ಕೃತ್ವಾ ವಿಜ್ಞಾಪಯತಿ ಪಾವಕಂ ।
ಯದಿ ತ್ವಮಿಚ್ಛಸೇ ವೈರಂ ಪುರುಷೇಷ್ವಪಕಾರಿಷು ॥೩೬॥

---

೩೧–೩೩. ಎಷ್ಟೋ ಮಂದಿಗಳು ಮಕ್ಕಳನ್ನು ತಬ್ಬಿ ನಿದ್ರಿಸುತ್ತಾ, ಹಾಗೆಯೇ ಅಗ್ನಿಗೆ ತುತ್ತಾದರು. ಹೀಗೆ ಆ ಪಟ್ಟಣವು ಜ್ವಲಿಸುತ್ತಿರಲಾಗಿ, ಅಪ್ಸರಸ್ತ್ರೀಯರಿಗೆ ಸಮಾನರಾದ ಸ್ತ್ರೀಯರು, ಅಗ್ನಿಗೆ ತಮ್ಮ ದೇಹವನ್ನು ಒಪ್ಪಿಸಿ ಕೆಳಗೆ ಬೀಳುತ್ತಿದ್ದರು. ಮುತ್ತಿನ ಹಾರವನ್ನು ಧರಿಸಿ ಮಲಗಿ ನಿದ್ರಿಸುತ್ತಿದ್ದ ಮಧ್ಯಯೌವನದಿಂದ ಕೂಡಿರುವ ಅಂಗನೆಯೊಬ್ಬಳು, ಹೊಗೆಯ ಬಾಧೆಯಿಂದ ಎಚ್ಚತ್ತು ಅಗ್ನಿಜ್ವಾಲೆಗೆ ಗುರಿಯಾಗಿ, ಮಗನನ್ನು ನೆನೆಸಿಕೊಂಡು ಭೂಮಿಯ ಮೇಲೆ ಬಿದ್ದಳು.

೩೪. ಸುವರ್ಣದ ಮೈಬಣ್ಣವುಳ್ಳ ಮತ್ತೋರ್ವಳು, ಇಂದ್ರನೀಲ ಮಣಿಗಳ ಆಭರಣಗಳಿಂದ ಯುಕ್ತಳಾಗಿ, ಹೊಗೆಯಿಂದ ದಿಕ್ಕುತೋಚದೆ, ಭೂಮಿಯಲ್ಲಿ ಬಿದ್ದುಬಿಟ್ಟಳು.

೩೫–೩೬. ಬೆಂಕಿಯು ಸುಡುತ್ತಿರಲು, ಒಬ್ಬ ಸಖಿಯು ತನ್ನ ಒಡತಿಯ ಕೈಯನ್ನು ಹಿಡಿದು, ಆ ಬೆಂಕಿಯ ಉತ್ತಮವಾದ ರೂಪವನ್ನು ನೋಡಿ ತಾನೇ ಮೋಹಿತಳಾಗಿ, ಆ ಮದದಿಂದ ಶಿರಸ್ಸಿನಲ್ಲಿ ಅಂಜಲಿಯನ್ನುಧರಿಸಿ

ಸ್ತ್ರಿಯಃ ಕಿಮಪರಾಧ್ಯನ್ತೇ ಗೃಹಪಞ್ಜರಕೋಕಿಲಾಃ ।
ಪಾಪ ನಿರ್ದಯ ನಿರ್ಲಜ್ಜ ಕಸ್ತೇ ಕೋಪಃ ಸ್ತ್ರಿಯೋಪರಿ ॥೩೭॥

ನ ದಾಕ್ಷಿಣ್ಯಂ ನ ತೇ ಲಜ್ಜಾ ನ ಸತ್ಯಂ ಶೌಚವರ್ತಿತಾ ।
ಅನೇಕರೂಪವರ್ಣಾಢ್ಯಾ ಉಪಾಲಭ್ಯೋ ವದಸ್ವ ಹ ॥೩೮॥

ಕಿಂ ತ್ವಯಾ ನ ಶ್ರುತಂ ಲೋಕೇ ಅವಧ್ಯಾಃ ಸಂತಿ ಯೋಷಿತಃ ।
ಕಿಂ ತು ತುಭ್ಯಂ ಗುಣಾ ಹ್ಯೇತೇ ದಹನ ಸ್ತ್ರ್ಯರ್ದನಂ ಪ್ರತಿ ॥೩೯॥

ನ ಕಾರುಣ್ಯಂ ದಯಾ ವಾಪಿ ದಾಕ್ಷಿಣ್ಯಂ ವಾ ಸ್ತ್ರಿಯೋಪರಿ ।
ದಯಾಂ ಕುರ್ವನ್ತಿ ಮ್ಲೇಚ್ಛಾಶ್ಚ ದಹನ ಪ್ರೇಕ್ಷ್ಯ ಯೋಷಿತಃ ॥೪೦॥

ಮ್ಲೇಚ್ಛಾನಾಮಪಿ ಕಷ್ಟೋಽಸಿ ದುರ್ನಿವಾರ್ಯೋ ಹ್ಯಚೇತನಃ ।
ಏತೇ ಚೈವ ಗುಣಾಸ್ತುಭ್ಯಂ ದಹನೋತ್ಸಾದನಂ ಪ್ರತಿ ॥೪೧॥

---

ಆ ಅಗ್ನಿಯನ್ನು ಕುರಿತು ಮುಂದೆ ಹೇಳುವಂತೆ ಹೇಳಿದಳು. ಅಪಕಾರವನ್ನು ಮಾಡುವ ಪುರಷರಲ್ಲಿ ವೈರವನ್ನು ತೋರಿಸಲು ಇಚ್ಛಿಸುವುದಾದರೆ ಹಾಗೆ ಮಾಡು, ಮನೆಯೆಂಬ ಪಂಜರದಲ್ಲಿ ಸಿಕ್ಕಿಕೊಂಡು ಕೋಗಿಲೆಗಳಂತೆ ಇರುವ ಸ್ತ್ರೀಯರು ಯಾವ ಅಪರಾಧವನ್ನು ತಾನೇ ಮಾಡುವರು? ಪಾಪಿಯೇ! ನಾಚಿಗೆಯಿಲ್ಲದವನೇ! ಹೆಂಗಸಿನಮೇಲೆ ನಿನ್ನ ಕೋಪವೆಂಥಾದ್ದು? ಎಲೈ ಅಗ್ನಿಯೇ, ನಿನಗೆ ದಾಕ್ಷಿಣ್ಯವಿಲ್ಲ, ನಾಚಿಗೆಯಿಲ್ಲ, ಸತ್ಯವಿಲ್ಲ, ಶುಚಿತ್ವವಿಲ್ಲ, ಎಲೈ ಬಹು ಬಣ್ಣದಿಂದ ಕೂಡಿದ ಅಗ್ನಿಯೇ! ನಾನು ನಿನ್ನನ್ನು ನಿಂದಿಸುತ್ತೇನೆ, ಉತ್ತರವನ್ನು ಕೊಡು.

೩೯–೪೦. ಸ್ತ್ರೀಯರು ವಧ್ಯರಲ್ಲ ಎಂಬ ಶಾಸ್ತ್ರವು ನಿನ್ನ ಕಿವಿಗೆ ಬಿದ್ದಿಲ್ಲವೇ? ಎಲೈ ಅಗ್ನಿಯೇ ನಿನ್ನ ಗುಣಗಳು ಇಷ್ಟೇಯೇನು? ಸ್ತ್ರೀಯರನ್ನು ತೊಂದರೆಪಡಿಸುವದರಲ್ಲಿ ಕರುಣೆಯಾಗಲಿ, ದಯೆಯಾಗಲಿ, ದಾಕ್ಷಿಣ್ಯವಾಗಲಿ ಇಲ್ಲವಲ್ಲ! ಎಲೈ ಅಗ್ನಿಯೇ, ಹೆಂಗಸರನ್ನು ನೋಡಿ ಮ್ಲೇಚ್ಛರೂ ಕೂಡಾ ದಯೆಯನ್ನು ತೋರಿಸುವರು.

೪೧–೪೨. ನೀನು ಮ್ಲೇಚ್ಛರಿಗಿಂತಲೂ ಕೆಟ್ಟವನಾಗಿರುವೆಯಲ್ಲ! ನಿನ್ನನ್ನು ತಡೆಯುವುದಕ್ಕಾಗುವುದಿಲ್ಲವಲ್ಲ, ಸ್ವಲ್ಪವೂ ಬುದ್ಧಿಯಿಲ್ಲವಲ್ಲ, ಸುಡುವುದು, ನಾಶಮಾಡುವುದು,ಇವುಗಳಲ್ಲಿಯೇ ನಿನ್ನ ಗುಣಗಳು ತುಂಬಿ

ಅಸಾಮಪಿ ದುರಾಚಾರಃ ಸ್ತ್ರೀಣಾಂ ಕಿಂಚ ನಿಪಾತನೇ ।
ದುಷ್ಟ ನಿರ್ಘೃಣ ನಿರ್ಲಜ್ಜ ಹುತಾಶ ಮನ್ದಭಾಗ್ಯಕ ॥೪೨॥
ನಿರಾಶ ತ್ವಂ ದುರಾಚಾರ ಬಾಲಾನ್ದಹಸಿ ನಿರ್ದಯ ।
ಏವಂ ವಿಲಪಮಾನಾಂ ತಾಂ ಜಲ್ಪಮಾನಾಂ ಬಹುಸ್ವರಮ್ ॥೪೩॥
ಅನ್ಯಾಃ ಕ್ರೋಶನ್ತಿ ಸಂಕ್ರುದ್ಧಾ ಬಾಲಶೋಕೇನ ಮೋಹಿತಾಃ ।
ದಹತೇ ನಿರ್ದಯೋ ವಹ್ನಿಃ ಸಂಕ್ರುದ್ಧಃ ಸರ್ವಶತ್ರುವತ್ ॥೪೪॥
ಪುಷ್ಕರಿಣ್ಯಾ ಜಲೇ ಜ್ವಾಲಾ ಕೂಪೇಷ್ವಪಿ ತಥೈವ ಚ ।
ಅಸ್ಮಾನ್ದಹಸ್ವ ಮ್ಲೇಚ್ಛ ತ್ವಂ ಕಾಂ ಗತಿಂ ಪ್ರಾಪಯಿಷ್ಯಸಿ ।
ಏವಂ ಪ್ರಲಪತಾಂ ತಾಸಾಂ ವಹ್ನಿರ್ವಚನಮಬ್ರವೀತ್ ॥೪೫॥

॥ ವೈಶ್ವಾನರ ಉವಾಚ ॥

ಸ್ವವಶೋ ನೈವ ಯುಷ್ಮಾಕಂ ವಿನಾಶಂ ತು ಕರೋಮ್ಯಹಮ್ ।
ಅಹಮಾದೇಶಕರ್ತಾ ವೈ ನಾಹಂ ಕರ್ತಾಸ್ಮ್ಯನುಗ್ರಹಮ್ ॥೪೬॥

---

ದೆಯಲ್ಲ! ಈ ಹೆಂಗಸರನ್ನು ಹಾಳುಮಾಡುವುದರಲ್ಲಿಯೇ ನಿನ್ನ ದುರಾಚಾರವು ತುಂಬಿದೆ. ನೀನು ದುಷ್ಟ, ದಯೆಯಿಲ್ಲದವನು. ಲಜ್ಜೆಯಿಲ್ಲದವನು, ಹಾಕಿದ್ದೆಲ್ಲವನ್ನು ತಿನ್ನುವವನು, ಅಯೋಗ್ಯ.

೪೩–೪೫. ಆಶೆಯಿಲ್ಲದವನೇ, ದುರಾಚಾರಿಯೇ, ನಿರ್ದಯನೇ, ನೀನು, ಆ ಅರಿಯದ ಮಕ್ಕಳನ್ನೂ ಕೂಡಾ ಸುಡುತ್ತಿರುವೆಯಲ್ಲ, ಅಯ್ಯೋ ಪಾಪಿಯೇ, ಎಂದು ಬಾಯಿಗೆ ಬಂದಹಾಗೆ ಕೂಗಿಕೊಂಡು ಅಳುತ್ತಿದ್ದಳು. ಹೀಗೆ ಅಳುತ್ತಿರುವ ಆಕೆಯನ್ನು ನೋಡಿ, ಅಗ್ನಿಯ ಮೇಲೆ ಕೋಪಗೊಂಡು ಬಯ್ಯುತ್ತಾ, ಇತರರು ಪುತ್ರಶೋಕದಿಂದ ಅಳಲಾರಂಭಿಸಿದರು. ಮತ್ತೊಬ್ಬಳು ಅಯ್ಯೋ! ಶತ್ರುವಿನಂತೆ ಕೋಪಗೊಂಡು, ದಯಾಶೂನ್ಯನಾಗಿ ಬೆಂಕಿಯು ಸುಡುತ್ತಿರುವುದಲ್ಲಾ. ಅಯ್ಯೋ! ಕೊಳಗಳಲ್ಲೂ, ಬಾವಿಗಳಲ್ಲೂ, ಸರೋವರಗಳಲ್ಲೂ, ಕೂಡ ಜ್ವಾಲೆಯು ಏಳುತ್ತಿರುವುದಲ್ಲಾ! ಎಲೈ ಮ್ಲೇಚ್ಛನೇ! ನಮ್ಮನ್ನು ಸುಡು, ಸುಟ್ಟು ನೀನಾವಗತಿಯನ್ನು ಹೊಂದುವೆ ಬಲ್ಲೆಯಾ? ಎಂಬುದಾಗಿ ಹೇಳುತ್ತಿರುವ ಈ ಸ್ತ್ರೀಯರನ್ನು ಕುರಿತು ವಹ್ನಿಯು ಹೇಳಿದನು.

೪೬–೪೭. ವಹ್ನಿಯು ಹೇಳಿದನು: ನನ್ನ ಅಧೀನದಲ್ಲಿದ್ದುಕೊಂಡು ನಿಮ್ಮನ್ನು ನಾನು ಹಾಳುಮಾಡುತ್ತಿಲ್ಲ, ನಾನು ಇನ್ನೊಬ್ಬರ ಅಪ್ಪಣೆಯಂತೆ

ಅತ್ರ ಕ್ರೋಧಸಮಾವಿಷ್ಟೋ ವಿಚರಾಮಿ ಯಥೇಚ್ಛಯಾ ।
ತತೋ ಬಾಣೋ ಮಹಾತೇಜಾಸ್ತ್ರಿಪುರಂ ವೀಕ್ಷ್ಯ ದೀಪಿತಮ್॥೪೭॥
ಆಸನಸ್ಥೋಽಬ್ರವೀದೇವಮಹಂ ದೇವೈರ್ವಿನಾಶಿತಃ ।
ಅಲ್ಪಸಾರೈರ್ದುರಾಚಾರೈರೀಶ್ವರಸ್ಯ ನಿವೇದಿತಃ ॥೪೮॥
ಅಪರೀಕ್ಷ್ಯ ಹ್ಯಹಂ ದಗ್ಧಃ ಶಂಕರೇಣ ಮಹಾತ್ಮನಾ ।
ನಾನ್ಯಃ ಶಕ್ತಸ್ತು ಮಾಂ ಹನ್ತುಂ ವರ್ಜಯಿತ್ವಾ ಮಹೇಶ್ವರಮ್ ॥
ಉತ್ಥಿತಃ ಶಿರಸಾ ಕೃತ್ವಾ ಲಿಙ್ಗಂ ತ್ರಿಭುವನೇಶ್ವರಮ್ ।
ನಿರ್ಗತಃ ಸ ಪುರದ್ವಾರಾತ್ಪರಿತ್ಯಜ್ಯ ಸುಹೃತ್ಸ್ವಯಮ್ ॥೫೦॥
ರತ್ನಾನಿ ತು ವಿಚಿತ್ರಾಣಿ ಸ್ತ್ರಿಯೋ ನಾನಾವಿಧಾಸ್ತಥಾ ।
ಗೃಹೀತ್ವಾ ಶಿರಸಾ ಲಿಙ್ಗಂ ನ್ಯಸ್ಯ ನಗರಮಣ್ಡಲೇ ॥೫೧॥

---

ನಡೆದುಕೊಳ್ಳುವವನು. ಆದುದರಿಂದ ನಾನು ಅನುಗ್ರಹವನ್ನು ತೋರಿಸುವಂತಿಲ್ಲ, ಈ ವಿಷಯದಲ್ಲಿ ಕಾರಣವಿಲ್ಲದೇ, ಕೋಪಗೊಂಡು ನಡೆದುಕೊಳ್ಳುತ್ತಿರುವೆನು ಎಂದನು. ಹೀಗಿರುವಾಗ ಶೂರನಾದ ಆ ಬಾಣಾಸುರನು ತ್ರಿಪುರದಾಹವನ್ನು ನೋಡಿ, ಆಸನದಲ್ಲಿ ಕುಳಿತಂತೆಯೇ ಹೇಳಿದನು. ಅಲ್ಪ ಬಲದಿಂದ ಕೂಡಿರುವ ದೇವತೆಗಳು, ನನ್ನ ಮೇಲೆ ಈಶ್ವರನಲ್ಲಿ ದೂರು ಹೇಳಿ ನನ್ನನ್ನು ಹಾಳುಮಾಡಿದರು.

೪೯–೫೦. ಮಹಾತ್ಮನಾದ ಶಂಕರನು ನನ್ನ ಮೇಲೆ ಹೇಳಿರುವ ದೋಷಗಳನ್ನೆಲ್ಲಾ ನಂಬಿ, ನನ್ನನ್ನು ಪರೀಕ್ಷಿಸದೆ, ಸುಟ್ಟನು. ಈಶ್ವರನು ಹೊರತು ಬೇರೆ ಯಾರೂ ನನ್ನನ್ನು ಕೊಲ್ಲಲಾರರು. ಹೀಗೆ ಹೇಳಿ, ಮೂರು ಲೋಕಕ್ಕೂ ಅಧಿಪತಿಯಾದ ಶಿವಲಿಂಗವನ್ನು ಎತ್ತಿ ತಲೆಯಲ್ಲಿ ಧರಿಸಿ, ಮಿತ್ರವರ್ಗವನ್ನು ಬಿಟ್ಟು, ತಾನೊಬ್ಬನೇ ಪಟ್ಟಣದ್ವಾರದಿಂದ ಹೊರಟನು.

೫೧–೫೨. ಹಾಗೆಯೇ ನಾನಾವಿಧವಾದ ರತ್ನಗಳನ್ನೂ, ಸೌಂದರ್ಯದಿಂದ ಕಂಗೊಳಿಸುತ್ತಿರುವ ಸ್ತ್ರೀಯರನ್ನೂ ಬಿಟ್ಟು, ಲಿಂಗವನ್ನು ಮಾತ್ರ ತಲೆಯಲ್ಲಿ ಧರಿಸಿ ಹೊರಟು, ಆ ಲಿಂಗವನ್ನು ಪಟ್ಟಣದ ಚಾವಡಿಯಲ್ಲಿ ಇಟ್ಟು,

**ಸ್ತುವತೇ ದೇವದೇವೇಶಂ ತ್ರೈಲೋಕ್ಯಾಧಿಪತಿಂ ಶಿವಮ್ ।**
**ಹರ ತ್ವಯಾಹಂ ನಿರ್ದಗ್ಧೋ ಯದಿ ವಧ್ಯೋಽಸ್ಮಿ ಶಂಕರ ॥೫೨॥**

**ತ್ವತ್ಪ್ರಸಾದಾನ್ಮಹಾದೇವ ಮಾ ಮೇ ಲಿಙ್ಗಂ ವಿನಶ್ಯತು ।**
**ಅರ್ಚಿತಂ ಹಿ ಮಹಾದೇವ ಭಕ್ತ್ಯಾ ಪರಮಯಾ ಸದಾ ॥೫೩॥**

**ತ್ವಯಾ ಯದ್ಯಪಿ ವಧ್ಯೋಽಹಂ ಮಾ ಮೇ ಲಿಙ್ಗಂ ವಿನಶ್ಯತು ।**
**ಪ್ರಾಪ್ಯಮೇತನ್ಮಹಾದೇವ ತ್ವತ್ಪಾದಗ್ರಹಣಂ ಮಮ ॥೫೪॥**

**ಜನ್ಮ ಜನ್ಮ ಮಹಾದೇವ ತ್ವತ್ಪಾದನಿರತೋಽಹ್ಯಹಮ್ ।**
**ತೋಟಕಚ್ಛನ್ದಸಾ ದೇವಂ ಸ್ತುತ್ವಾ ತು ಪರಮೇಶ್ವರಮ್ ॥೫೫॥**

---

ಆ ಬಾಣಾಸುರನು, ದೇವದೇವನೂ, ತ್ರಿಲೋಕಾಧಿಪತಿಯೂ, ಆದ ಶಿವನನ್ನು ಸ್ತೋತ್ರ ಮಾಡಲು ಆರಂಭಿಸಿದನು. ಎಲೈ ಶಂಕರನೇ! ನಾನು ವಧೆಗೆ ಅರ್ಹನಾಗಿದ್ದು, ನನ್ನನ್ನು ನೀನು ಸುಡುವುದಾದರೆ ಸುಡು. ಎಲೈ ಮಹಾದೇವ! ಅತಿಭಕ್ತಿಯಿಂದಲೂ, ಅತಿಸಂತೋಷದಿಂದಲೂ, ಯಾವಾಗಲೂ ಪೂಜಿಸಲ್ಪಟ್ಟಿರುವ ನನ್ನ ಈ ಶಿವಲಿಂಗವು, ನಿನ್ನ ಅನುಗ್ರಹದಿಂದ, ನಾಶವಾಗದಿರಲಿ.

೫೪—೫೫. ನೀನಂತೂ ನನ್ನನ್ನು ಕೊಂದೇ ಕೊಲ್ಲುತ್ತೀಯೆ! ನನ್ನ ಈ ಶಿವಲಿಂಗವು ಮಾತ್ರ ಹಾಳಾಗದಿರಲಿ. ನಿನ್ನ ಪಾದವನ್ನು ಮಾತ್ರ ನಾನು ಹೊಂದಬೇಕು. ಎಲೈ ಮಹಾದೇವನೇ ಜನ್ಮ ಜನ್ಮದಲ್ಲಿಯೂ ನಿನ್ನ ಪಾದದಲ್ಲಿಯೇ ಆಸಕ್ತನಾಗಿದ್ದೇನೆ. ನನ್ನನ್ನು ಅನುಗ್ರಹಿಸು. ಹೀಗೆ ಹೇಳಿ ಆ ಬಾಣನು ತೋಟಕವೆಂಬ ವೃತ್ತವಿಶೇಷದಿಂದ ಈಶ್ವರನನ್ನು ಸ್ತೋತ್ರ ಮಾಡಿದನು.

ಶಿವ ಶಂಕರ ಸರ್ವಕರಾಯ ನಮೋ
ಭವಭೀಮ ಮಹೇಶ್ವರ ಭೀಮ ನಮಃ ।
ಕುಸುಮಾಯುಧದೇಹವಿನಾಶಕರ
ತ್ರಿಪುರಾನ್ತಕರಾನ್ಧಕಚೂರ್ಣಕರ ॥೫೬॥
ಪ್ರಮದಾಪ್ರಿಯ ಕಾಮವಿಭಕ್ತ ನಮೋ
ಽಸ್ತು ನಮಃ ಸುರಸಿದ್ಧಗಣೈರ್ನಮಿತಃ ।
ಹಯವಾನರಸಿಂಹಗಜೇನ್ದ್ರಮುಖೈ
ರತಿಹ್ರಸ್ವಸುದೀರ್ಘಮುಖೈಶ್ಚ ಗಣೈಃ ॥೫೭॥
ಉಪಲಬ್ಧುಮಶಕ್ಯತರೈರಸುರೈ
ರ್ವ್ಯಥಿತೋ ನ ಶರೀರಶತೈರ್ಬಹುಭಿಃ ।
ಪ್ರಣತೋ ಭಗವನ್ಬಹುಭಕ್ತಿಮತಾ ।
ಚಲಚನ್ದ್ರಕಲಾಧರ ದೇವ ನಮಃ ॥೫೮॥

---

೫೬. ಮಂಗಳದಿಂದ ಕೂಡಿ ಮಂಗಳವನ್ನುಂಟುಮಾಡುತ್ತಾ ಸರ್ವಕ್ಕೂ ಕಾರಣನಾದ ನಿನಗೆ ನಮಸ್ಕಾರವು, ಸಂಸಾರಕ್ಕೆ ಭಯಂಕರನಾದವನಾಗಿಯೂ, ಈಶ್ವರರೆಲ್ಲರಿಗೂ ಮೇಲಾದವನಾಗಿಯೂ, ಭೀಮೇಶ್ವರನೆಂದು ಪ್ರಸಿದ್ಧನಾದ ಶಿವನೇ! ನಿನಗೆ ನಮಸ್ಕಾರವು. ಮನ್ಮಥನ ದೇಹವನ್ನು ದಹಿಸಿದ, ಅಂಧಕಾಸುರನನ್ನು ಧೂಳೀಪಟ ಮಾಡಿದ, ತ್ರಿಪುರವನ್ನು ಕೊನೆಗಾಣಿಸಿದ ಮಹಾದೇವನೇ, ನಿನಗೆ ನಮಸ್ಕಾರವು.

೫೭. ಹೆಂಗಸರಿಗೆ ಪ್ರಿಯನಾದ, ಕಾಮನ ಭಕ್ತಿಗೆ ವಿಷಯನಾದ, ಎಲೈ ಈಶನೇ, ಪುನಃ ಪುನಃ ನಮಸ್ಕಾರವು. ನಿನ್ನನ್ನು, ಸುರಗಣಗಳೂ, ಸಿದ್ಧಗಣಗಳೂ, ಅಲ್ಲದೇ, ಅಶ್ವಮುಖಗಳಿಂದಲೂ, ವಾನರಮುಖಗಳಿಂದಲೂ, ಸಿಂಹಮುಖಗಳಿಂದಲೂ, ಗಜಮುಖಗಳಿಂದಲೂ ಕೂಡಿದವುಗಳಾಗಿ ಹ್ರಸ್ವಮುಖಗಳುಳ್ಳವುಗಳಾಗಿಯೂ, ದೀರ್ಘಮುಖಗಳುಳ್ಳವುಗಳಾಗಿಯೂ, ಇರುವ ಗಣಗಳೂ, ನಿನ್ನನ್ನು ಯಾವಾಗಲೂ, ನಮಸ್ಕರಿಸುತ್ತಲಿರುವುವು. ಅಂತಹ ನಿನಗೆ ನಮಸ್ಕಾರವು.

೫೮. ಸ್ಥಿರವಾದ ಚಂದ್ರಕಲೆಯನ್ನು ಧರಿಸಿ ಸದಾ ಪ್ರಕಾಶಿಸುತ್ತಲಿರುವ ಶಿವನೇ, ದರ್ಶನ ಮಾಡುವುದಕ್ಕೆ ಅಲಭ್ಯರಾದ ಅನೇಕ ರಾಕ್ಷಸರು ಬಹಳ ಜನ್ಮಗಳು ಹೊಂದಿ ಬಂದರೂ ನಾನು ದುಃಖಗೊಳ್ಳಲಿಲ್ಲ. ಅಂತಹ ನಾನು ಈಗ ಬಹು ಭಕ್ತಿಯಿಂದ ನಿನ್ನನ್ನು ನಮಸ್ಕರಿಸುತ್ತೇನೆ.

ಸಹ ಪುತ್ರಕಲತ್ರಕಲಾಪಧನೈಃ
ಸತತಂ ಜಯ ದೇವ ಅನುಸ್ಮರಣಮ್ ।
ವ್ಯಥಿತೋಽಸ್ಮಿ ಶರೀರಶತೈರ್ಬಹುಭಿ
ರ್ಗಮಿತಾದ್ಯ ಮಹಾನರಕಸ್ಯ ಗತಿಃ ॥೫೯॥

ನ ನಿವರ್ತತಿ ಯನ್ಮಮ ಪಾಪಗತಿಃ
ಶುಚಿಕರ್ಮವಿಶುದ್ಧಮಪಿ ತ್ಯಜತಿ ।
ಅನುಕಮ್ಪತಿ ದಿಗ್ಭ್ರಮತಿ ಭ್ರಮತಿ
ಭ್ರಮತ್ಯೇಷ ಕುಬುದ್ಧಿಂ ನಿವಾರಯತಿ ॥೬೦॥

ಯಃ ಪಠೇತ್ತೋಟಕಂ ದಿವ್ಯಂ ಪ್ರಯತಃ ಶುಚಿಮಾನಸಃ ।
ಬಾಣಸ್ಯೈವ ಯಥಾ ರುದ್ರಸ್ತಸ್ಯೈವ ವರದೋ ಭವೇತ್ ॥೬೧॥

ಇಮಂ ಸ್ತವಂ ಮಹಾದಿವ್ಯಂ ಶ್ರುತ್ವಾ ದೇವೋ ಮಹೇಶ್ವರಃ ।
ಪ್ರಸನ್ನಸ್ತು ತದಾ ತಸ್ಯ ಸ್ವಯಂ ದೇವೋ ಮಹೇಶ್ವರಃ ॥೬೨॥

---

೫೯. ಹೇ ದೇವ! ಪುತ್ರ, ಕಳತ್ರ ಭೂಷಣ, ದ್ರವ್ಯಗಳೊಂದಿಗೆ ನನ್ನ ಸ್ಮೃತಿಯಲ್ಲಿ ಸರ್ವೋತ್ತಮನಾಗಿ ವಿಷಯನಾಗು. ಸಾವಿರಾರು ಶರೀಗಳನ್ನು ಹೊಂದಿ ಬಹುವಾಗಿ ವ್ಯಥೆಪಟ್ಟಿರುವೆನು. ನರಕದ ಮಾರ್ಗವನ್ನು ಸಂಪಾದಿಸಿಕೊಂಡೆನು.

೬೦. ಅಯ್ಯೋ! ನನ್ನ ಪೂರ್ವಪಾಪಕರ್ಮಗಳು ನನ್ನ ಬೆನ್ನನ್ನಂಟಿರುವುವು. ಇಷ್ಟು ಪರಿಶುದ್ಧವಾದ ಕರ್ಮವನ್ನಾಚರಿಸಿದರೂ ಇನ್ನೂ ನನ್ನನ್ನು ಬಿಡುವಂತಿಲ್ಲವೇ? ಅಯ್ಯೋ! ದಿಕ್ಕು ನಡುಗುವಂತೆ ಕಾಣುತ್ತಿರುವುದು. ತಿರುಗುವಂತೆ ಕಾಣಿಸುವುದು. ನಾನು ಇನ್ನೆಂದಿಗೂ ಕುಬುದ್ಧಿಯನ್ನು ಹೊಂದಲಾರೆನು. ನನ್ನ ಕುಬುದ್ಧಿಯು ನಷ್ಟವಾಯಿತು.

೬೧. ಇಂದ್ರಿಯಗಳನ್ನು ಜಯಿಸಿ, ಶುದ್ಧವಾದ ಮನಸ್ಸಿನಿಂದ ಈ ತೋಟಕವೃತ್ತವನ್ನು, ಪಠಿಸುವವನು, ಬಾಣನು ಹೇಗೆ ರುದ್ರನ ವರಕ್ಕೆ ಪಾತ್ರನಾದನೋ ಹಾಗೆ ತಾನೂ ಪಾತ್ರನಾಗುವನು.

೬೨. ಮಹೇಶ್ವರನು ಈ ಸ್ತೋತ್ರವನ್ನು ಕೇಳಿ ಪ್ರಸನ್ನನಾದನು.

॥ ಈಶ್ವರ ಉವಾಚ ॥

ನ ಭೇತವ್ಯಂ ತ್ವಯಾ ವತ್ಸ ಸೌವರ್ಣೇ ತಿಷ್ಠ ದಾನವ।
ಪುತ್ರಪೌತ್ರೈಃ ಸಪತ್ನೀಕೈರ್ಭಾರ್ಯಾಭಿಃ ಸ್ವಜನೈಃ ಸಹ ॥೬೩॥

ಅದ್ಯಪ್ರಭೃತಿ ಬಾಣ ತ್ವಮವಧ್ಯಸ್ತ್ರಿದಶೈರಪಿ ।
ಭೂಯಸ್ತಸ್ಯ ಪರೋ ದತ್ತೋ ದೇವದೇವೇನ ಪಾಣ್ಡವ ॥೬೪॥

ಅಕ್ಷಯಶ್ಚಾವ್ಯಯೋ ಲೋಕೇ ವಿಚಚಾರ ಹ ನಿರ್ಭಯಃ ।
ತತೋ ನಿವಾರಯಾಮಾಸ ರುದ್ರಃ ಸಪ್ತಶಿಖಂ ತಥಾ ॥೬೫॥

ತೃತೀಯಂ ರಕ್ಷಿತಂ ತಸ್ಯ ಶಂಕರೇಣ ಮಹಾತ್ಮನಾ ।
ಭ್ರಮತೇ ಗಗನೇ ನಿತ್ಯಂ ರುದ್ರತೇಜಃಪ್ರಭಾವತಃ ॥೬೬॥

ಏವಂ ತು ತ್ರಿಪುರಂ ದಗ್ಧಂ ಶಂಕರೇಣ ಮಹಾತ್ಮನಾ ।
ಜ್ವಾಲಾಮಾಲಾಪ್ರದೀಪ್ತಂ ತು ಪತಿತಂ ಧರಣೀತಲೇ ॥೬೭॥

---

೬೩. ಈಶ್ವರನು ಹೇಳಿದನು: ಎಲೈ ವತ್ಸನೇ! ನೀನು ಹೆದರ ಬೇಕಾಗಿಲ್ಲ. ಸಪತ್ನೀಕರಾದ, ಪುತ್ರಪೌತ್ರರಿಂದಲೂ, ಪತ್ನಿಯರಿಂದಲೂ, ಸ್ವಜನಗಳಿಂದಲೂ, ಕೂಡಿ ಅಗ್ನಿಯಿಂದ ವರ್ಣ ಹೀನನಾಗದೆ ಇರು.

೬೪. ಎಲೈ ಬಾಣಾಸುರನೇ! ಇನ್ನು ಮುಂದೆ ದೇವತೆಗಳು ನಿನ್ನನ್ನು ವಧಿಸಲಾರರು ಎಲೈ ಯುಧಿಷ್ಠಿರನೇ, ದೇವದೇವನಾದ ಈಶ್ವರನು ಹೀಗೆ ಬಾಣಾಸುರನಿಗೆ ಮತ್ತೂ ವರವನ್ನುಕೊಟ್ಟನು.

೬೫. ಹೀಗೆ ವರವನ್ನು ಹೊಂದಿದ ಬಾಣಾಸುರನು ಕ್ಷೀಣತೆಯನ್ನು ಬಿಟ್ಟು, ನಾಶವಿಲ್ಲದೆ ಭಯಶೂನ್ಯನಾಗಿ ಇಚ್ಛೆಬಂದಂತೆ ಲೋಕದಲ್ಲೆಲ್ಲಾ ಸಂಚರಿಸಿದನು. ಅನಂತರ ರುದ್ರದೇವನು ಬೆಂಕಿಯನ್ನು ಉಪ ಸಂಹರಿಸಿದನು.

೬೬. ಮಹಾಮಹಿಮನಾದ ಶಂಕರನು ಮೂರನೆಯ ಪಟ್ಟಣವನ್ನು ನಾಶಮಾಡದೇ ಅಂತರಿಕ್ಷದಲ್ಲಿ, ಅದು ಎಲ್ಲಿಬೇಕಾದರೂ, ಅಲ್ಲಿ ಸಂಚರಿ ಸುವಂತೆ ಬಿಟ್ಟುಬಿಟ್ಟನು. ಅದು ರುದ್ರನ ಪ್ರಭಾವದಿಂದ ಸಂಚರಿಸುತ್ತದೆ.

೬೭. ಮಹಾತ್ಮನಾದ ಶಂಕರನಿಂದ ದಾಹವನ್ನು ಹೊಂದಿದ ಆ ತ್ರಿಪುರವು ನೂರಾರು ಜ್ವಾಲೆಗಳಿಂದ ಕೂಡಿ ಉರಿಯುತ್ತಾ ಭೂಮಿಯ ಮೇಲೆ ಬಿದ್ದಿತು.

ಏಕಂ ನಿಪಾತಿತಂ ತಸ್ಯ ಶ್ರೀಶೈಲೇ ತ್ರಿಪುರಾನ್ತಕೇ ।
ದ್ವಿತೀಯಂ ಪಾತಿತಂ ತತ್ರ ಪರ್ವತೇಽಮರಕಣ್ಟಕೇ ॥೬೮॥

ದಗ್ಧೇ ತು ತ್ರಿಪುರೇ ರಾಜನ್ ರುದ್ರಕೋಟಿಃ ಪ್ರತಿಷ್ಠಿತಾ ।
ಜ್ವಲನ್ತಂ ಪಾತಿತಂ ತತ್ರ ತೇನ ಜ್ವಾಲೇಶ್ವರಃ ಸ್ಮೃತಃ ॥೬೯॥

ಊರ್ಧ್ವಂ ತು ಪ್ರಸ್ಥಿತಾ ದಿವ್ಯಾ ಜ್ವಾಲಾ ತಸ್ಯ ದಿವಂ ಗತಾ ।
ಹಾಹಾಕಾರಸ್ತದಾ ಜಾತೋ ದೇವಾಸುರಸಕಿನ್ನರಾನ್ ॥೭೦॥

ತಂ ಶರಂ ಸ್ತಮ್ಭಯೇದ್ರುದ್ರೋ ಮಾಹೇಶ್ವರೇ ಪುರೋತ್ತಮೇ ।
ಏವಂ ವ್ರಜೇತ ಯಸ್ತಸ್ಮಿನ್ಪರ್ವತೇಽಮರಕಣ್ಟಕೇ ॥೭೧॥

ಚತುರ್ದಶ ಭುವನಾನಿ ಸ ಭುಕ್ತ್ವಾ ಪಾಣ್ಡುನನ್ದನ ।
ವರ್ಷಕೋಟಿಸಹಸ್ರಂ ತು ತ್ರಿಂಶತ್ಕೋಟ್ಯಸ್ತಥಾಪರಾಃ ॥೭೨॥

---

೬೮. ಅವುಗಳಲ್ಲಿ ಒಂದು ಪಟ್ಟಣವು ತ್ರಿಪುರದಾಹಾನಂತರ ಶ್ರೀಶೈಲದಲ್ಲಿ ಬಿದ್ದಿತು. ಎರಡನೆಯದು ಅಮರಕಂಟಕಪರ್ವತದಲ್ಲಿ ಬಿದ್ದಿತು.

೬೯. ಈಶ್ವರನು ತ್ರಿಪುರವನ್ನು ಸುಟ್ಟನಂತರ ಕೋಟಿ ರುದ್ರರನ್ನು ಪ್ರತಿಷ್ಠಿಸಿದರು. ಉರಿಯುತ್ತಿರುವ ಹಾಗೆ ಪಟ್ಟಣವನ್ನು ಕೆಡವಿದ ಜಾಗ ದಲ್ಲಿ ಪ್ರತಿಷ್ಠಿತನಾದವನು ಜ್ವಾಲೇಶ್ವರನೆಂದು ಪ್ರಸಿದ್ಧನಾದನು.

೭೦. ಮೇಲಕ್ಕೆದ್ದ ಉರಿಯು ಸ್ವರ್ಗವನ್ನು ಮುಟ್ಟಿತು. ದೇವತೆ ಗಳೂ, ಅಸುರರೂ, ಕಿನ್ನರರೂ, ಇವರೆಲ್ಲರೂ, ಒಟ್ಟಿಗೆ ಹಾಹಾ ಎಂದು ಕೂಗಿಕೊಂಡರು.

೭೧. ಪ್ರಸರಿಸಿದ ಆ ಜ್ವಾಲೆಯನ್ನು ರುದ್ರದೇವನು, ಮಹೇಶ್ವರ ಪುರವಾದ ಅಮರಕಂಟಕದಲ್ಲಿ ಸ್ತಂಭನಮಾಡಿದನು. ಈರೀತಿಯಾಗಿ ಅಮರಕಂಟಕವೆಂಬ ಪರ್ವತದಲ್ಲಿ ಯಾತ್ರೆ ಮಾಡಿದವನು ಮುಂದೆ ಹೇಳುವ ಫಲಕ್ಕೆ ಭಾಗಿಯಾಗುವನು.

೭೨. ಮೂವತ್ತೊಂದುಕೋಟಿಸಾವಿರ ವರ್ಷಗಳಲ್ಲಿ ಹದಿನಾಲ್ಕು ಲೋಕಗಳನ್ನು ಅನುಭವಿಸುವನು, ಎಂಬುದಾಗಿ ಎಲೈ ಯುಧಿಷ್ಠಿರನೇ? ತಿಳಿಯುವವನಾಗು.

ತತೋ ಮಹೀತಲಂ ಪ್ರಾಪ್ಯ ರಾಜಾ ಭವತಿ ಧಾರ್ಮಿಕಃ ।
ಪೃಥಿವೀಮೇಕಛತ್ರೇಣ ಭುಙ್ಕ್ತೇ ನಾಸ್ತ್ಯತ್ರ ಸಂಶಯಃ ॥೭೩॥

ಏಷ ಪುಣ್ಯೋ ಮಹಾರಾಜ ಸರ್ವತೋಽ ಮರಕಣ್ಟಕಃ ।
ಚನ್ದ್ರಸೂರ್ಯೋಪರಾಗೇಷು ಗಚ್ಛೇದ್ಯೋಽಮರಕಣ್ಟಕಮ್ ॥೭೪॥

ಅಶ್ವಮೇಧಾದ್ದಶಗುಣಂ ಪ್ರವದನ್ತಿ ಮನೀಷಿಣಃ ।
ಸ್ವರ್ಗಲೋಕಮವಾಪ್ನೋತಿ ದೃಷ್ಟ್ವಾ ತತ್ರ ಮಹೇಶ್ವರಮ್ ॥೭೫॥

ಸನ್ನಿಹತ್ಯಾಽಽಗಮಿಷ್ಯನ್ತಿ ರಾಹುಗ್ರಸ್ತೇ ದಿವಾಕರೇ ।
ತದೇವ ನಿಖಿಲಂ ಪುಣ್ಯಂ ಪರ್ವತೇಽ ಮರಕಣ್ಟಕೇ ॥೭೬॥

ಪುಣ್ಡರೀಕಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ
ತತ್ರ ಜ್ವಾಲೇಶ್ವರೋ ನಾಮ ಪರ್ವತೇಽ ಮರಕಣ್ಟಕೇ
ತತ್ರಸ್ನಾತ್ವಾ ದಿವಂ ಯಾನ್ತಿ ಯೇ ಮೃತಾಸ್ತೇಽಪುನರ್ಭವಾಃ ॥೭೭॥

---

೭೩–೭೫. ಅನಂತರ ಭೂಲೋಕವನ್ನು ಹೊಂದಿ, ಧಾರ್ಮಿಕನಾದ ರಾಜನಾಗಿ ಏಕಚ್ಛತ್ರಾಧಿಪತ್ಯದಿಂದ, ಅಖಂಡವಾದ ಪೃಥಿವೀಸಾಮ್ರಾಜ್ಯವನ್ನು ಅನುಭವಿಸುವನು. ಇದರಲ್ಲಿ ಯಾವ ಸಂಶಯವೂ ಇಲ್ಲ. ಎಲೈ ಮಹಾರಾಜನೇ! ಈ ಅಮರಕಂಟಕಪರ್ವತವು, ಎಲ್ಲಾ ಕಡೆಯಲ್ಲಿಯೂ ಪುಣ್ಯತಮವಾದುದು. ಚಂದ್ರ ಸೂರ್ಯರ ಗ್ರಹಣಗಳಲ್ಲಿ ಅಮರಕಂಟಕವನ್ನು ಹೊಂದುವವನು ಮುಂದೆ ಹೇಳುವ ಫಲವನ್ನು ಹೊಂದುವನು. ಅಶ್ವಮೇಧಯಾಗಕ್ಕಿಂತಲೂ, ಹತ್ತರಷ್ಟು ಫಲವನ್ನು ಹೊಂದುವನು. ಈ ಅಮರಕಂಟಕ ಪರ್ವತದಲ್ಲಿ ಮಹೇಶ್ವರನ ದರ್ಶನವನ್ನು ಮಾಡಿದರೆ ಸ್ವರ್ಗಲೋಕವನ್ನು ಹೊಂದುವನು.

೭೬. ಸೂರ್ಯನಿಗೆ ರಾಹುಗ್ರಹಣವುಂಟಾದ ಸಮಯದಲ್ಲಿ ಸರ್ವತೀರ್ಥಗಳೂ, ಸರ್ವದೇವತೆಗಳೂ, ಇಲ್ಲಿ ಸೇರುವರು. ಆದುದರಿಂದಲೇ ಈ ಅಮರಕಂಟಕಪರ್ವತದಲ್ಲಿ ನಿಖಿಲಪುಣ್ಯಗಳೂ, ದೊರೆಯುವುವು.

೭೭. ಇಂತಹ ಸಮಯದಲ್ಲಿ ಇಲ್ಲಿ ಸೇರುವವನು, ಪುಂಡರೀಕ ಯಜ್ಞದ ಫಲವನ್ನು ಹೊಂದುವನು. ಆ ಅಮರಕಂಟಕಪರ್ವತದಲ್ಲಿ ಜ್ವಾಲೇಶ್ವರಕ್ಷೇತ್ರವಿರುವುದು. ಅಲ್ಲಿ ಸ್ನಾನ ಮಾಡಿದ ಮಾತ್ರಕ್ಕೆ ಸ್ವರ್ಗಸುಖವನ್ನು ಅನುಭವಿಸುವನು. ಇಲ್ಲಿ ಮರಣಹೊಂದುವವರ ಪುನರ್ಜನ್ಮವನ್ನು ಹೊಂದಲಾರರು.

ಜ್ವಾಲೇಶ್ವರೇ ಮಹಾರಾಜ ಯಸ್ತು ಪ್ರಾಣಾನ್ಪರಿತ್ಯಜೇತ್ ।
ಚನ್ದ್ರಸೂರ್ಯೋರ್ಪರಾಗೇಷು ಭಕ್ತ್ಯಾಪಿ ಶೃಣು ತತ್ಫಲಮ್ ॥೭೮॥
ಅಮರಾ ನಾಮ ದೇವಾಸ್ತೇ ಪರ್ವತೇಽಮರಕಣ್ಟಕೇ ।
ರುದ್ರಲೋಕಮವಾಪ್ನೋತಿ ಯಾವದಾಭೂತಸಂಪ್ಲವಮ್ ॥೭೯॥
ಅಮರೇಶ್ವರಸ್ಯ ದೇವಸ್ಯ ಪರ್ವತಸ್ಯ ತಟೇ ಜಲೇ ।
ಕೋಟೀಶ ಋಷಿಮುಖ್ಯಾಸ್ತೇ ತಪಸ್ತಪ್ಯನ್ತಿ ಸುವ್ರತಾಃ ।
ಸಮನ್ತಾದ್ಯೋಜನಂ ರಾಜನ್ ಕ್ಷೇತ್ರಂ ಚಾಮರಕಣ್ಟಕಮ್॥೮೦॥
ಅಕಾಮೋ ವಾ ಸಕಾಮೋ ವಾ ನರ್ಮದಾಯಾಃ ಶುಭೇ ಜಲೇ ।
ಸ್ನಾತ್ವಾ ಮುಚ್ಯೇತ ಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥೮೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಪಞ್ಚದಶೋಽಧ್ಯಾಯಃ

---

೭೮–೭೯. ಚಂದ್ರಸೂರ್ಯರ ಗ್ರಹಣಕಾಲಗಳಲ್ಲಿ ಪ್ರಾಣತ್ಯಾಗ ಮಾಡುವವನ ಫಲ ವಿಶೇಷವನ್ನು ಹೇಳುವೆನು. ಭಕ್ತಿಯಿಂದ ಕೇಳು. ಅಮರರೆಂದು ಪ್ರಸಿದ್ಧರಾದ ದೇವತೆಗಳಿಂದ ಕೂಡಿರುವ ಅಮರಕಂಟಕ ಪರ್ವತದಲ್ಲಿ ಪ್ರಾಣತ್ಯಾಗ ಮಾಡುವವನು ಪ್ರಳಯಪರ್ಯಂತವಾಗಿ ರುದ್ರ ಲೋಕದಲ್ಲಿ ವಾಸಿಸುವನು.

೮೦–೮೧. ಅಮರೇಶ್ವರನೆಂಬ ಈಶ್ವರನಿಗೆ ನಿವಾಸಸ್ಥಾನವಾದ ಅಮರಕಂಟಕಪರ್ವತದ ಜಲವನ್ನಾಶ್ರಯಿಸಿ ಅನೇಕ ಋಷಿಶ್ರೇಷ್ಠರು ತಪಸ್ಸನ್ನು ಮಾಡುತ್ತಿದ್ದಾರೆ. ಅಮರಕಂಟಕಕ್ಷೇತ್ರದ ಸುತ್ತಲೂ, ಒಂದು ಯೋಜನ ಪರಿಮಿತಿಯುಳ್ಳದ್ದಾಗಿ ಈ ಕ್ಷೇತ್ರವಿರುವುದು, ಭಕ್ತಿಯಿಂದ ಕೂಡಿದ್ದರೂ ಸರಿಯೆ, ಇಲ್ಲದಿದ್ದರೂ ಸರಿಯೆ, ನರ್ಮದಾ ನದಿಯಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಸರ್ವಪಾಪಗಳಿಂದಲೂ, ಮುಕ್ತನಾಗಿ ರುದ್ರಲೋಕವನ್ನು ಸೇರುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಷೋಡಶೋಽಧ್ಯಾಯಃ

॥ ಸೂತ ಉವಾಚ ॥

**ಪೃಚ್ಛನ್ತಿ ತೇ ಮಹಾತ್ಮಾನೋ ನಾರದಂ ಹಿ ಮಹಾಜನಾಃ ।**
**ಯುಧಿಷ್ಠಿರಪರಾಃ ಸರ್ವೆ ಋಷಯಶ್ಚ ತಪೋಧನಾಃ ॥ ೧ ॥**

**ಆಖ್ಯಾಹಿ ಭಗವಂಸ್ತ್ವತ್ಥ್ಯಂ ಕಾವೇರೀಸಂಗಮಂ ಮಹತ್ ।**
**ಲೋಕಾನಾಂ ಚ ಹಿತಾರ್ಥಾಯ ಅಸ್ಮಾಕಂ ಚ ವಿವೃದ್ಧಯೇ ॥ ೨ ॥**

**ಸದಾ ಪಾಪರತಾ ಯೇ ತು ನರಾ ದುಷ್ಕೃತಿಕಾರಿಣಃ ।**
**ಮುಚ್ಯನ್ತೇ ಸರ್ವಪಾಪೇಭ್ಯೋ ಗಚ್ಛನ್ತಿ ಪರಮಂ ಪದಮ್ ।**
**ಏತದಿಚ್ಛಾಮ ವಿಜ್ಞಾತುಂ ಭಗವನ್ವಕ್ತುಮರ್ಹಸಿ ॥ ೩ ॥**

---

ಪದ್ಮಪುರಾಣದ ಆದಿಖಂಡದ ಹದಿನಾರನೆಯ ಅಧ್ಯಾಯವು.

೧. ಸೂತನು ಹೇಳಿದನು: ಎಲೈ ಮಹಾಜನರೇ! ಅಲ್ಲಿರುವ ಮಹಾತ್ಮರಾದ ಋಷಿಮುಖ್ಯರು ಯುಧಿಷ್ಠಿರನನ್ನು ಮುಂದು ಮಾಡಿಕೊಂಡು, ನಾರದ ಮಹರ್ಷಿಯನ್ನು ಪ್ರಶ್ನೆ ಮಾಡಿದರು.

೨. ಎಲೈ ಪೂಜ್ಯನಾದ ನಾರದನೇ! ಲೋಕದ ಹಿತಕ್ಕಾಗಿಯೂ ನಿಮ್ಮಗಳ ತೇಜೋಅಭಿವೃದ್ಧಿಗಾಗಿಯೂ, ಮಹಿಮೆಯುಳ್ಳ ಕಾವೇರಿ ಸಂಗಮದ ವಿಷಯವನ್ನು ಹೇಳು.

೩. ಸರ್ವದಾ ಪಾಪಾಸಕ್ತರಾಗಿ ದುಷ್ಕಾರ್ಯಗಳನ್ನು ಮಾಡುತ್ತಿರುವ ಮನುಷ್ಯರು ಸರ್ವಪಾಪಗಳಿಂದಲೂ, ಮುಕ್ತರಾಗುವ, ಮುಕ್ತಿಯನ್ನು ಹೊಂದುವ ಬಗೆಯನ್ನು ಕೇಳಲಪೇಕ್ಷಿಸುವೆವು. ಪೂಜ್ಯನಾದ ನಾರದನೇ! ದಯುವಿಟ್ಟು ತಿಳಿಸು.

॥ ನಾರದ ಉವಾಚ ॥

ಶೃಣುಧ್ವಂ ಸಹಿತಾಃ ಸರ್ವೇ ಯುಧಿಷ್ಠಿರಪುರೋಗಮಾಃ ।
ಅತ್ರ ಕೃತ್ವಾ ಮಹಾಯಜ್ಞಂ ಕುಬೇರಃ ಸತ್ಯವಿಕ್ರಮಃ ॥ ೪ ॥
ಇದಂ ತೀರ್ಥಮನುಪ್ರಾಪ್ಯ ಸಾಮ್ರಾಜ್ಯಾದಧಿಕೋಽಭವತ್ ।
ಸಿದ್ಧಿಂ ಪ್ರಾಪ್ತೋ ಮಹಾರಾಜ ತನ್ಮೇ ನಿಗದತಃ ಶೃಣು ॥ ೫ ॥
ಕಾವೇರೀ ನರ್ಮದಾಂ ಯತ್ರ ಸಙ್ಗತಾ ಲೋಕವಿಶ್ರುತಾ ।
ತತ್ರ ಸ್ಥಿತ್ವಾ ಶುಚಿರ್ಭೂತ್ವಾ ಕುಬೇರಃ ಸತ್ಯವಿಕ್ರಮಃ ॥ ೬ ॥
ತಪಸ್ತೃಪ್ಯತಿ ಯಕ್ಷೇನ್ದ್ರೋ ದಿವ್ಯಂ ವರ್ಷಶತಂ ಮಹತ್ ।
ತಸ್ಯ ತುಷ್ಟೋ ಮಹಾದೇವಃ ಪ್ರದದ್ಯಾದ್ವರಮುತ್ತಮಮ್ ॥ ೭ ॥
ಭೋ ಭೋ ಯಕ್ಷ ಮಹಾಸತ್ತ್ವ ವರಂ ಬ್ರೂಹಿ ಯಥೇಪ್ಸಿತಮ್ ।
ಬ್ರೂಹಿ ಕಾರ್ಯಂ ಯಥೇಷ್ಟಂ ತು ಯದ್ವಾ ಮನಸಿ ವರ್ತತೇ॥ ೮ ॥

---

೪-೫. ಎಲೈ ಯುಧಿಷ್ಠಿರ ಮುಂತಾದ ಮಹಾತ್ಮರೇ! ಕೇಳಿರಿ. ಪರಾಕ್ರಮಶಾಲಿಯಾದ ಕುಬೇರನು ಈ ಸ್ಥಳದಲ್ಲಿ ಮಹಾಯಜ್ಞವನ್ನು ನಡೆಸಿದನು. ಈ ತೀರ್ಥವನ್ನು ಹೊಂದಿ ಯಜ್ಞವನ್ನು ಮಾಡಿದನಂತರ ಅಧಿಕ ಸಾಮ್ರಾಜ್ಯವನ್ನು ಹೊಂದಿ, ಸಿದ್ಧಪುರುಷನಾದನು. ಈ ವಿಚಾರ ವಾಗಿ ಹೇಳುವುದನ್ನು ಕೇಳಿರಿ.

೬-೭. ಪರಾಕ್ರಮಶಾಲಿಯಾದ ಕುಬೇರನು, ಕಾವೇರಿಯು ನರ್ಮದಾ ನದಿಯನ್ನು ಸೇರುವ ಸಂಗಮದಲ್ಲಿ ಸ್ನಾನವನ್ನು ಮಾಡುತ್ತಾ ಶುಚಿಯಾಗಿದ್ದು, ದೇವಮಾನದಿಂದ ನೂರುವರ್ಷಗಳ ಕಾಲ ತಪಸ್ಸು ಮಾಡಿದನು. ಹೀಗೆ ತಪಸ್ಸುಮಾಡುತ್ತಿರುವ ಕುಬೇರನ ವಿಷಯದಲ್ಲಿ ತುಷ್ಟನಾದ ಈಶ್ವರನು ಉತ್ತಮವಾದ ವರವನ್ನು ಕೊಟ್ಟನು.

೮. "ಎಲೈ ಮಹಾಪರಾಕ್ರಮಶಾಲಿಯಾದ ಯಕ್ಷನೇ! ನಿನಗಿಷ್ಟ ವಾದ ವರವನ್ನು ಕೇಳಿಕೋ. ಅಥವಾ ನಿನ್ನ ಮನಸ್ಸಿನಲ್ಲಿರುವ ಕಾರ್ಯ ವನ್ನಾದರೂ ತಿಳಿಸು" ಎಂದು ಈಶ್ವರನು ಕೇಳಿದನು.

॥ ಕುಬೇರ ಉವಾಚ ॥

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ಆದಿಕೃಚ್ಚೈವ ಸರ್ವೇಷಾಂ ಯಕ್ಷಾಣಾಮಧಿಪೋ ಭವೇತ್ ॥ ೯ ॥

ಕುಬೇರಸ್ಯ ವಚಃ ಶ್ರುತ್ವಾ ತುಷ್ಟೋ ದೇವೋ ಮಹೇಶ್ವರಃ ।
ಏವಮಸ್ತು ತತಶ್ಚೋಕ್ತ್ವಾ ತತ್ರೈವಾನ್ತರಧೀಯತ ॥೧೦॥

ಸೋಽಪಿ ಲಬ್ಧವರೋ ಯಕ್ಷಃ ಶೀಘ್ರಂ ಯಕ್ಷಕುಲಂ ಗತಃ ।
ಪೂಜಿತಃ ಸರ್ವಯಕ್ಷೇನ್ದ್ರೈರಭಿಷಿಕ್ತಸ್ತು ಪಾರ್ಥಿವಃ ॥೧೧॥

ಕಾವೇರೀಸಂಗಮಂ ತತ್ರ ಸರ್ವಪಾಪಪ್ರಣಾಶನಮ್ ।
ಯೇ ನರಾ ನಾಭಿಜಾನನ್ತಿ ವಞ್ಚಿತಾಸ್ತೇ ನ ಸಂಶಯಃ ।
ತಸ್ಮಾತ್ಸರ್ವಪ್ರಯತ್ನೇನ ತತ್ರ ಸ್ನಾಯೀತ ಮಾನವಾಃ ॥೧೨॥

---

೯. ಕುಬೇರನು ಹೇಳಿದನು: ದೇವೇಶನಾದ ಮಹಾದೇವನೇ! ನನ್ನಲ್ಲಿ ನೀನು ಸಂತುಷ್ಟನಾಗಿ ವರವನ್ನು ಕೊಡುವುದಾದರೆ, ನಾನು ಎಲ್ಲರಿಗೂ ಮೊದಲನೆಯವನಾಗಿರುವಂತೆಯೂ, ಯಕ್ಷರಿಗೆ ಯಜಮಾನನಾಗಿರುವಂತೆಯೂ ಮಾಡು.

೧೦–೧೧. ಕುಬೇರನ ಮಾತನ್ನು ಕೇಳಿ ಸಂತೋಷಗೊಂಡ ಮಹೇಶ್ವರನು, ಹಾಗೆಯೇ ಆಗಲೆಂದು ಹೇಳಿ, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆ ಕುಬೇರನೆಂಬ ಯಕ್ಷನು ಶೀಘ್ರವಾಗಿ ಯಕ್ಷರನ್ನು ಸೇರಿ, ಅವರಿಂದ ಪೂಜೆಗೊಂಡು, ಸರ್ವ ಯಕ್ಷರಿಗೂ ಅಧಿಪತಿಯಾಗಿ ಅಭಿಷಿಕ್ತನಾದನು.

೧೨. ಸರ್ವ ಪಾಪವನ್ನೂ ಪರಿಹರಿಸುವ ಕಾವೇರೀ ಸಂಗಮವನ್ನು ತಿಳಿಯದ ಮನುಷ್ಯರು ಖಂಡಿತವಾಗಿಯೂ ಮೋಸಹೋದವರೇ ಸರಿ. ಆದುದರಿಂದ ಸರ್ವ ಪ್ರಯತ್ನದಿಂದಲೂ ಕಾವೇರೀಸಂಗಮದಲ್ಲಿ ಸ್ನಾನ ಮಾಡಲೇಬೇಕು.

ಕಾವೇರೀ ಚ ಮಹಾಪುಣ್ಯಾ ನರ್ಮದಾ ಚ ಮಹಾನದೀ ।
ತತ್ರ ಸ್ನಾತ್ವಾ ತು ರಾಜೇನ್ದ್ರ ಅರ್ಚಯೇದ್ವೃಷಭಧ್ವಜಮ್ ॥೧೩॥
ಅಶ್ವಮೇಧಫಲಂ ಪ್ರಾಪ್ಯ ರುದ್ರಲೋಕೇ ಮಹೀಯತೇ ।
ಅಗ್ನಿಪ್ರವೇಶಂ ಯಃ ಕುರ್ಯಾದ್ಯಶ್ಚ ಕುರ್ಯಾದನಾಶನಮ್ ॥೧೪॥
ಅನಿವರ್ತಿಕಾ ಗತಿಸ್ತಸ್ಯ ಯಥಾ ಮೇ ಶಙ್ಕರೋಽಬ್ರವೀತ್ ।
ಸೇವ್ಯಮಾನೋ ವರಸ್ತ್ರೀಭಿರ್ಮೋದತೇ ದಿವಿ ರುದ್ರವತ್ ॥೧೫॥
ಷಷ್ಟಿವರ್ಷಸಹಸ್ರಾಣಿ ಷಷ್ಟಿಕೋಟ್ಯಸ್ತಥಾಪರೇ ।
ಮೋದತೇ ರುದ್ರಲೋಕಸ್ಥೋ ಯತ್ರ ಯತ್ರೈವ ಗಚ್ಛತಿ ॥೧೬॥
ಪುಣ್ಯಕ್ಷಯಾತ್ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ।
ಭೋಗವಾನ್ಧರ್ಮಶೀಲಶ್ಚ ಮಹಾಂಶ್ಚೈವ ಕುಲೋದ್ಭವಃ ॥೧೭॥

---

೧೩–೧೫. ಮಹಾನದಿಯಾಗಿಯೂ, ಮಹಾಪುಣ್ಯತಮವಾಗಿಯೂ ಇರುವ, ಕಾವೇರೀನರ್ಮದಾಸಂಗಮದಲ್ಲಿ ಸ್ನಾನ ಮಾಡಿ ಈಶ್ವರನನ್ನು ಪೂಜಿಸಬೇಕು. ಹೀಗೆ ಮಾಡುವವನು ಅಶ್ವಮೇಧದ ಫಲವನ್ನು ಹೊಂದಿ ರುದ್ರಲೋಕದಲ್ಲಿ ಪೂಜ್ಯನಾಗುವನು. ಮತ್ತು ಅಲ್ಲಿ ಅಗ್ನಿಪ್ರವೇಶ ಮಾಡುವವನೂ, ಅನಶನವ್ರತವನ್ನು ಮಾಡುವವನೂ, ಉತ್ತಮಸ್ತ್ರೀಯ ರಿಂದ ಸೇವೆ ಕೈಗೊಳ್ಳುವವನಾಗಿ, ಸ್ವರ್ಗದಲ್ಲಿ ರುದ್ರನಂತೆ ಶಾಶ್ವತವಾದ ಗತಿಯನ್ನು ಹೊಂದಿ ವಾಸಿಸುವನು, ಎಂದು ನನಗೆ ಶಂಕರನು ಹೇಳಿದನು.

೧೬. ಅಂತಹ ಪುಣ್ಯಶಾಲಿಯು ಅರವತ್ತುಕೋಟಿ ಅರವತ್ತು ಸಾವಿರ ವರ್ಷಗಳ ಕಾಲ, ರುದ್ರಲೋಕದಲ್ಲಿ ಹೋದ ಜಾಗದಲ್ಲೆಲ್ಲಾ ತೃಪ್ತನಾಗಿ ವಾಸಿಸುವನು.

೧೭–೧೮. ಹೀಗೆ ಅನುಭವಿಸಿದನಂತರ, ಪುಣ್ಯ ಮುಗಿದಮೇಲೆ ಭೂಲೋಕದಲ್ಲಿ ಉತ್ತಮ ಕುಲದಲ್ಲಿ ಹುಟ್ಟಿ ಸಕಲ ಭೋಗಗಳನ್ನನುಭವಿ ಸುತ್ತಾ, ಧರ್ಮಪರಾಯಣನಾದ ರಾಜನಾಗಿ ಬಾಳುವನು. ಈ ನದಿಯ

ತತ್ರ ಪೀತ್ವಾ ಜಲಂ ಸಮ್ಯಕ್ಚಾನ್ದ್ರಾಯಣಫಲಂ ಲಭೇತ್ ।
ಸ್ವರ್ಗಂ ಗಚ್ಛನ್ತಿ ತೇ ಮರ್ತ್ಯಾ ಯೇ ಪಿಬನ್ತಿ ಜಲಂ ಶುಭಮ್ ॥೧೮॥
ಗಙ್ಗಾಯಮುನಯೋರ್ಮಧ್ಯೇ ಯತ್ಫಲಂ ಯಾತಿ ಮಾನವಃ ।
ಕಾವೇರೀಸಙ್ಗಮೇ ಸ್ನಾತ್ವಾ ತತ್ಫಲಂ ತಸ್ಯ ಜಾಯತೇ ॥೧೯॥
ಏವಂ ತು ತಸ್ಯ ರಾಜೇನ್ದ್ರ ಕಾವೇರೀಸಙ್ಗಮಂ ಮಹತ್ ।
ಪುಣ್ಯಂ ಮಹತ್ಫಲಂ ತತ್ರ ಸರ್ವಪಾಪಪ್ರಣಾಶನಮ್ ॥೨೦॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಷೋಡಶೋಽಧ್ಯಾಯಃ

---

ಜಲವನ್ನು ಪಾನಮಾಡುವವರು ಚಾಂದ್ರಾಯಣವ್ರತದ ಫಲವನ್ನು ಹೊಂದುವರು. ಮತ್ತು ಈ ಸಂಗಮಜಲವನ್ನು ಪಾನಮಾಡುವವರು ಸ್ವರ್ಗವನ್ನನುಭವಿಸುವರು.

೧೯. ಗಂಗಾಯಮುನಾಸಂಗಮದಲ್ಲಿ ಸ್ನಾನಮಾಡಿದ ಫಲವನ್ನು ಕಾವೇರೀಸಂಗಮದಲ್ಲಿ ಸ್ನಾನಮಾಡಿದ ಮಾನವನು ಪಡೆಯುವನು.

೨೦. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಈ ರೀತಿಯಾಗಿ ಕಾವೇರೀಸಂಗಮವು ಮಹಾಪುಣ್ಯಜನಕವಾಗಿಯೂ, ಸರ್ವಪಾಪಗಳನ್ನು ನಾಶಮಾಡತಕ್ಕದ್ದಾಗಿಯೂ, ಪ್ರಸಿದ್ಧವಾಗಿರುವುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಸಪ್ತದಶೋಽಧ್ಯಾಯಃ

॥ ನಾರದ ಉವಾಚ ॥

ಉತ್ತರೇ ನರ್ಮದಾಕೂಲೇ ತೀರ್ಥಂ ಯೋಜನವಿಸ್ತೃತಮ್ ।
ಪತ್ರೇಶ್ವರೇತಿ ವಿಖ್ಯಾತಂ ಸರ್ವಪಾಪಹರಂ ಪರಮ್ ॥ ೧ ॥

ತತ್ರ ಸ್ನಾತ್ವಾ ನರೋ ರಾಜನ್ದೈವತೈಃ ಸಹ ಮೋದತೇ ।
ಪಞ್ಚ ವರ್ಷಸಹಸ್ರಾಣಿ ಕ್ರೀಡತೇ ಕಾಮರೂಪಧೃಕ್ ॥ ೨ ॥

ಗರ್ಜನಂ ತು ತತೋ ಗಚ್ಛೇದ್ಯತ್ರ ಮೇಘ ಉಪಸ್ಥಿತಃ ।
ಇನ್ದ್ರಜಿನ್ನಾಮ ಸಂಪ್ರಾಪ್ತಂ ತಸ್ಯ ತೀರ್ಥಪ್ರಭಾವತಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಹದಿನೇಳನೆಯ ಅಧ್ಯಾಯವು

೧. ನಾರದನು ಹೇಳಿದನು: ನರ್ಮದಾ ನದಿಯ ಉತ್ತರ ದಡದಲ್ಲಿ ಪತ್ರೇಶ್ವರವೆಂದು ಪ್ರಸಿದ್ಧವಾದ ತೀರ್ಥವು ಇರುವುದು. ಅದು ಒಂದು ಯೋಜನ ಪ್ರದೇಶದಲ್ಲಿ ಸ್ನಾನಾದಿಗಳನ್ನು ಮಾಡುವವರ ಸರ್ವಪಾಪಗಳನ್ನೂ ಪರಿಹರಿಸಿ ಶ್ರೇಷ್ಠವೆನಿಸಿಕೊಂಡಿರುವುದು.

೨. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಆ ತೀರ್ಥದಲ್ಲಿ ಸ್ನಾನ ಮಾಡುವವನು ದೇವತೆಗಳೊಡನೆ ಸಂತೋಷವಾಗಿ ವಾಸಿಸುವನು. ಮತ್ತು ಐದುಸಾವಿರ ವರ್ಷಗಳ ಕಾಲ ತನ್ನ ಇಚ್ಛೆಯಂತೆ ರೂಪಗಳನ್ನು ಧರಿಸಿ ಕ್ರೀಡಿಸುವನು.

೩. ಅಲ್ಲಿಂದ ಮುಂದೆ ಗರ್ಜನವೆಂಬ ಕ್ಷೇತ್ರವನ್ನು ಹೊಂದಬೇಕು. ಈ ತೀರ್ಥದಲ್ಲಿ ಮೋಡವು ಸಂಚರಿಸುತ್ತಿರುವುದು. ಈ ತೀರ್ಥದ ಮಹಿಮೆಯಿಂದಲೇ ಅದಕ್ಕೆ 'ಇಂದ್ರಜಿತ್ ಎಂಬ, ಹೆಸರು ಬಂದಿತು.

ಮೇಘರಾವಂ ತತೋ ಗಚ್ಛೇದ್ಯತ್ರ ಮೇಘಾಭಿಗರ್ಜನಮ್ ।
ಮೇಘನಾದೋ ಗಣಸ್ತತ್ರ ವರಸಂಪನ್ನತಾಂ ಗತಃ ॥ ೪ ॥

ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಾವರ್ತಮಿತಿ ಸ್ಮೃತಮ್ ।
ತತ್ರ ಸನ್ನಿಹಿತೋ ಬ್ರಹ್ಮಾ ನಿತ್ಯಮೇವ ಯುಧಿಷ್ಠಿರ ।
ತತ್ರ ಸ್ನಾನಾತ್ತು ರಾಜೇನ್ದ್ರ ಬ್ರಹ್ಮಲೋಕೇ ಮಹೀಯತೇ ॥ ೫ ॥

ತತೋಽಙ್ಗಾರೇಶ್ವರೇ ತೀರ್ಥೇ ನಿಯತೋ ನಿಯತಾಶನಃ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ಸ ಗಚ್ಛತಿ ॥ ೬ ॥

ತತೋ ಗಚ್ಛೇತ ವಿಪ್ರೇನ್ದ್ರ ಕಪಿಲಾತೀರ್ಥಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ಗೋಪ್ರದಾನಫಲಂ ಲಭೇತ್ ॥ ೭ ॥

ಕಾಞ್ಚೀತೀರ್ಥಂ ತತೋ ಗಚ್ಛೇದ್ದೇವರ್ಷಿಗಣಸೇವಿತಮ್ ।
ತತ್ರ ಸ್ನಾತ್ವಾ ನರೋ ರಾಜನ್ಗೋಲೋಕಂ ಸಮವಾಪ್ನುಯಾತ್

---

೪. ಅಲ್ಲಿಂದ ಮುಂದೆ 'ಮೇಘರಾವ' ಎಂಬ ತೀರ್ಥವನ್ನು ಪ್ರವೇಶಿಸಬೇಕು. ಇಲ್ಲಿ ವಿಶೇಷವಾಗಿ ಮೇಘಗಳ ಗರ್ಜನೆಯಾಗುತ್ತಿರುವುದು. ಇಲ್ಲಿ ಮೇಘನಾದನೆಂಬ ಗಣನು ವರವನ್ನು ಪಡೆದನು.

೫. ಎಲೈ ಯುಧಿಷ್ಠಿರನೇ! ಅಲ್ಲಿಂದ ಮುಂದೆ ಬ್ರಹ್ಮನು ಸರ್ವದಾ ವಾಸಿಸುವ ಬ್ರಹ್ಮಾವರ್ತವೆಂಬ ತೀರ್ಥವನ್ನು ಹೊಂದಬೇಕು. ಅಲ್ಲಿ ಸ್ನಾನ ಮಾಡುವುದರಿಂದ ನರನು ಬ್ರಹ್ಮಲೋಕದಲ್ಲಿ ಪೂಜೆಗೊಳ್ಳುವನು.

೬. ಅನಂತರ ಆಹಾರನಿಯಮವನ್ನು ಹೊಂದಿ ಶೌಚಾದಿಸಂಪನ್ನನಾಗಿ, ಅಂಗಾರವೆಂಬ ತೀರ್ಥದಲ್ಲಿ ಸ್ನಾನಾದಿಗಳನ್ನು ಆಚರಿಸುವವನು, ಸರ್ವಪಾಪಗಳನ್ನೂ ಕಳೆದುಕೊಂಡು ರುದ್ರಲೋಕವನ್ನು ಸೇರುವನು.

೭. ಮುಂದೆ ಕಪಿಲಾತೀರ್ಥವು ಸಿಗುವುದು. ಅಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಮಾನವನು ಗೋದಾನದ ಫಲವನ್ನು ಹೊಂದುವನು.

೮. ಮುಂದೆ ಹೋಗಿ ದೇವತೆಗಳಿಂದಲೂ, ಋಷಿಗಳಿಂದಲೂ, ಪೂರ್ಣವಾಗಿರುವ ಕಾಂಚೀತೀರ್ಥವನ್ನು ಹೊಂದಿ, ಸ್ನಾನಮಾಡಿದ ಮಾತ್ರದಿಂದಲೇ ನರನು ಗೋಲೋಕವನ್ನು ಹೊಂದುವನು.

**ತತೋ ಗಚ್ಛೇತ್ತು ರಾಜೇನ್ದ್ರ ಕುಣ್ಡಲೇಶ್ವರಮುತ್ತಮಮ್ ।**
**ತತ್ರ ಸನ್ನಿಹಿತೋ ರುದ್ರಸ್ತಿಷ್ಠತೇ ಉಮಯಾ ಸಹ ।**
**ತತ್ರ ಸ್ಥಿತ್ವಾ ತು ರಾಜೇನ್ದ್ರ ಅವಧ್ಯಸ್ತ್ರಿದಶೈರಪಿ ॥ ೯ ॥**
**ಪಿಪ್ಪಲೇಶಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಮ್ ।**
**ತತ್ರ ಗತ್ವಾ ತು ರಾಜೇನ್ದ್ರ ರುದ್ರಲೋಕೇ ಮಹೀಯತೇ ॥೧೦॥**
**ತತೋ ಗಚ್ಛೇತ ರಾಜೇನ್ದ್ರ ವಿಮಲಂ ವಿಮಲೇಶ್ವರಮ್ ।**
**ತತ್ರ ದೇವಶಿಖಾ ರಮ್ಯಾ ಈಶ್ವರೇಣ ನಿಪಾತಿತಾ ।**
**ತತ್ರ ಪ್ರಾಣಾನ್ಪರಿತ್ಯಜ್ಯ ರುದ್ರಲೋಕಮವಾಪ್ನುಯಾತ್ ॥೧೧॥**
**ತತಃ ಪುಷ್ಕರಿಣೀಂ ಗಚ್ಛೇತ್ತತ್ರ ಸ್ನಾನಂ ಸಮಾಚರೇತ್ ।**
**ಸ್ನಾನಮಾತ್ರೇ ನರಸ್ತತ್ರ ಇನ್ದ್ರಸ್ಯಾರ್ಧಾಸನಂ ಲಭೇತ್ ॥೧೨॥**
**ನರ್ಮದಾ ಸರಿತಾಂ ಶ್ರೇಷ್ಠಾ ರುದ್ರದೇಹಾದ್ವಿನಿಃಸೃತಾ ।**
**ತಾರಯೇತ್ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ॥೧೩॥**

---

೯–೧೦. ಅಲ್ಲಿಂದ ಮುಂದೆ ಪಾರ್ವತಿಯೊಡನೆ ವಾಸಿಸುವ ಶಿವನಿಗೆ ನಿವಾಸಸ್ಥಾನವಾದ ಕುಂಡಲತೀರ್ಥವನ್ನು ಹೊಂದಿ ಸ್ನಾನಮಾಡುವವನು, ದೇವತೆಗಳಿಂದಲೂ ಕೂಡ ವಧ್ಯನಾಗಲಾರನು. ಹೀಗೆ ಮುಂದುವರಿಯಲಾಗಿ ಸರ್ವಪಾಪಗಳನ್ನೂ ನಾಶಮಾಡುವ ಪಿಪ್ಪಲೇಶ್ವರ ತೀರ್ಥವನ್ನು ಹೊಂದುವನು. ಅಲ್ಲಿ ಸ್ನಾನಾದಿಗಳನ್ನು ಮಾಡುವವನು ರುದ್ರಲೋಕದಲ್ಲಿ ಪೂಜಾರ್ಹನಾಗುವನು.

೧೧. ಅಲ್ಲಿಂದ ಮುಂದೆ ಈಶ್ವರನು ದೇವಶಿಖೆಯನ್ನು ಕೆಡವಿದ ನಿರ್ಮಲವಾದ ವಿಮಲೇಶ್ವರತೀರ್ಥವನ್ನು ಹೊಂದಿ, ಆ ತೀರ್ಥದಲ್ಲಿ ಪ್ರಾಣತ್ಯಾಗ ಮಾಡಿದ ಮಾತ್ರಕ್ಕೆ ನರನು ರುದ್ರಲೋಕವನ್ನು ಹೊಂದುವನು.

೧೨–೧೩. ಅನಂತರ ಪುಷ್ಕರಣೀಕ್ಷೇತ್ರವನ್ನು ಹೊಂದಿ, ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ, ನರನು ಇಂದ್ರನ ಅರ್ಧಾಸನಕ್ಕೆ ಭಾಗಿಯಾಗುವನು. ನದಿಗಳಲ್ಲೆಲ್ಲಾ ಮೇಲಾದ ನರ್ಮದಾನದಿಯು ಈಶ್ವರನ ದೇಹದಿಂದ ಹೊರಟು, ಸ್ಥಿರವಾದ ಮತ್ತು ಸಂಚರಿಸುವ ಪ್ರಾಣಿಸಾಮಾನ್ಯವನ್ನೂ ಮೋಕ್ಷಕ್ಕೆ ಅರ್ಹವಾಗಿ ಮಾಡುವುದು.

ಸರ್ವದೇವಾತಿದೇವೇನ ಈಶ್ವರೇಣ ಮಹಾತ್ಮನಾ ।
ಕಥಿತಾ ಋಷಿಸಂಘೇಭ್ಯೋ ಅಸ್ಮಾಕಂ ಚ ವಿಶೇಷತಃ ॥೧೪॥

ಮುನಿಭಿಃ ಸಂಸ್ತುತಾ ಹ್ಯೇಷಾ ನರ್ಮದಾ ಪ್ರವರಾ ನದೀ ।
ರುದ್ರದೇಹಾದ್ವಿನಿಷ್ಕ್ರಾನ್ತಾ ಲೋಕಾನಾಂ ಹಿತಕಾಮ್ಯಯಾ ॥೧೫॥

ಸರ್ವಪಾಪಹರಾ ನಿತ್ಯಂ ಸರ್ವಲೋಕನಮಸ್ಕೃತಾ ।
ಸಂಸ್ತುತಾ ದೇವಗನ್ಧರ್ವೈರಪ್ಸರೋಭಿಸ್ತಥೈವ ಚ ॥೧೬॥

ನಮಃ ಪುಣ್ಯಜಲೇ ಆದ್ಯೇ ನಮಃ ಸಾಗರಗಾಮಿನಿ ।
ನಮೋಽಸ್ತು ತೇ ಋಷಿಗಣೈಃ ಶಂಕರದೇಹ ನಿಃಸೃ ತೇ ॥೧೭॥

---

೧೪–೧೫. ಸಮಸ್ತ ದೇವತೆಗಳಿಗೂ ದೇವನಾದ, ಮಹಾತ್ಮನಾದ ಈಶ್ವರನೇ ಮುನಿಸಮುದಾಯಕ್ಕೂ, ಅತಿಶಯವಾಗಿ ನಮಗೂ, ಹೇಳಿರುವನು. ಶ್ರೇಷ್ಠವಾದ ಈ ನರ್ಮದಾ ನದಿಯು ಸರ್ವಮುನಿಗಳ ಪ್ರಶಂಸೆಗೆ ಪಾತ್ರವಾಗಿರುವುದು. ಲೋಕದ ಕ್ಷೇಮಕ್ಕಾಗಿಯೇ ಇದು ಈಶ್ವರನ ದೇಹದಿಂದ ಹೊರಟಿರುವುದು.

೧೬. ಸರ್ವ ಪಾಪವನ್ನು ಪರಿಹರಿಸುವ, ಸರ್ವಲೋಕವಂದ್ಯನಾದ, ಈ ನರ್ಮದೆಯನ್ನು ದೇವತೆಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಸಹ ಹೊಗಳಿರುವರು.

೧೭. ಪುಣ್ಯಜಲದಿಂದ ಕೂಡಿ ಸರ್ವ ನದಿಗಳಿಗಿಂತಲೂ, ಮೊದಲನೆಯವಳೂ, ಪ್ರಸಿದ್ಧಳೂ ಆದ, ಸಮುದ್ರವನ್ನು ಸೇರುವ, ಎಲೈ ನರ್ಮದೆಯೇ! ಈಶ್ವರನ ದೇಹದಿಂದ ಹೊರಟು ಋಷಿಗಳ ಪ್ರಶಂಸೆಗೆ ಪಾತ್ರಳಾದ ನಿನಗೆ ನಮಸ್ಕಾರವು.

ನಮೋಽಸ್ತು ತೇ ಧರ್ಮಭೃತೇ ವರಾನನೇ
ನಮೋಽಸ್ತು ತೇ ದೇವಗಣೈಕವನ್ದಿತೇ ।
ನಮೋಽಸ್ತು ತೇ ಸರ್ವಪವಿತ್ರಪಾವನೇ
ನಮೋಽಸ್ತು ತೇ ಸರ್ವಜಗತ್ಸು ಪೂಜಿತೇ ॥೧೮॥

ಯಶ್ಚೇದಂ ಪಠತೇ ಸ್ತೋತ್ರಂ ನಿತ್ಯಂ ಶುದ್ಧೇನ ಮಾನವಃ ।
ಬ್ರಾಹ್ಮಣೋ ವೇದಮಾಪ್ನೋತಿ ಕ್ಷತ್ರಿಯೋ ವಿಜಯೀ ಭವೇತ್ ॥
ವೈಶ್ಯಸ್ತು ಲಭತೇ ಲಾಭಂ ಶೂದ್ರಶ್ಚೈವ ಶುಭಾಂ ಗತಿಮ್ ।
ಅನ್ನಾರ್ಥೀ ಲಭತೇ ಹ್ಯನ್ನಂ ಸ್ಮರಣಾದೇವ ನಿತ್ಯಶಃ ॥೨೦॥

ನರ್ಮದಾಂ ಸೇವತೇ ನಿತ್ಯಂ ಸ್ವಯಂದೇವೋ ಮಹೇಶ್ವರಃ ।
ತೇನ ಪುಣ್ಯಾ ನದೀ ಜ್ಞೇಯಾ ಬ್ರಹ್ಮಹತ್ಯಾಪಹಾರಿಣೀ ॥೨೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಸಪ್ತದಶೋಽಧ್ಯಾಯಃ

---

೧೮. ಎಲೈ ಧರ್ಮಗಳಿಂದ ಕೂಡಿ ಶ್ರೇಷ್ಠವಾದ ಮುಖಭಾಗವನ್ನು ಧರಿಸಿರುವ ನರ್ಮದೆಯೇ! ನಿನಗೆ ನಮಸ್ಕಾರವು. ದೇವಗಣಗಳಿಂದ ವಂದಿತಳಾದ ಎಲೈ ನರ್ಮದೆಯೇ! ಮತ್ತೂ ನಿನಗೆ ನಮಸ್ಕಾರವು. ಪವಿತ್ರವಾದ ವಸ್ತುಗಳಿಗಿಂತಲೂ ಪರಿಶುದ್ಧಳಾದ ನರ್ಮದೆಯೇ! ಪುನಃ ನಿನಗೆ ನಮಸ್ಕಾರವು. ಸರ್ವ ಜಗತ್ಪೂಜ್ಯಳಾದ ನರ್ಮದೆಯೇ! ಮತ್ತೆ ಮತ್ತೆ ನಿನಗೆ ನಮಸ್ಕಾರವಿರಲಿ.

೧೯–೨೦. ಬ್ರಾಹ್ಮಣನು ಈ ಸ್ತೋತ್ರವನ್ನು ಶುದ್ಧವಾದ ಮನಸ್ಸುಳ್ಳವನಾಗಿ ನಿತ್ಯವೂ ಪಠಿಸುತ್ತಲಿದ್ದರೆ ವೇದವನ್ನು ಹೊಂದುವನು, ಕ್ಷತ್ರಿಯನು ಜಯಶಾಲಿಯಾಗುವನು, ವೈಶ್ಯನು ವ್ಯಾಪಾರದಲ್ಲಿ ಲಾಭವನ್ನು ಹೊಂದುವನು. ಹೀಗೆ ಪಠಿಸುವ ಶೂದ್ರನಿಗೆ ಶುಭಗತಿಯುಂಟಾಗುವುದು. ಅನ್ನವನ್ನು ಅಪೇಕ್ಷಿಸುವವನು ನಿತ್ಯವೂ ಸ್ಮರಣೆಮಾಡಿದ ಮಾತ್ರಕ್ಕೆ ಅನ್ನವನ್ನು ಹೊಂದುವನು.

೨೧. ಸಾಕ್ಷಾನ್ಮಹೇಶ್ವರನೇ ಈ ನದಿಯನ್ನು ನಿತ್ಯವೂ ಸೇವಿಸುತ್ತಿರುವನು. ಆದುದರಿಂದಲೇ ಬ್ರಹ್ಮಹತ್ಯೆಯನ್ನು ಕೂಡ ಪರಿಹರಿಸುವ ಈ ನದಿಯು ಪುಣ್ಯತಮವೆಂಬುದಾಗಿ ಪ್ರಸಿದ್ಧವಾಗಿರುವುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿನೇಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಅಷ್ಟಾದಶೋಽಧ್ಯಾಯಃ

॥ ನಾರದ ಉವಾಚ ॥

ತದಾಪ್ರಭೃತಿ ಬ್ರಹ್ಮಾದ್ಯಾ ಋಷಯಶ್ಚ ತಪೋಧನಾಃ ।
ಸೇವನ್ತೇ ನರ್ಮದಾಂ ರಾಜನ್ ಕಾಮಕ್ರೋಧವಿವರ್ಜಿತಾಃ ॥ ೧ ॥

ತಸ್ಮಿನ್ನಿಪತಿತಂ ದೃಷ್ಟ್ವಾ ಶೂಲಂ ದೇವಸ್ಯ ಭೂತಲೇ ।
ತಸ್ಯ ಪುಣ್ಯಂ ಸಮಾಖ್ಯಾತಂ ಶಙ್ಕರೇಣ ಮಹಾತ್ಮನಾ ॥ ೨ ॥

ಶೂಲಭೇದೇತಿ ವಿಖ್ಯಾತಂ ತೀರ್ಥಂ ಪುಣ್ಯತಮಂ ಮಹತ್ ।
ತತ್ರ ಸ್ನಾತ್ವಾರ್ಚಯೇದ್ದೇವಂ ಗೋಸಹಸ್ರಫಲಂ ಲಭೇತ್ ॥ ೩ ॥

---

ಪದ್ಮಪುರಾಣದ ಆದಿಖಂಡದ ಹದಿನೆಂಟನೆಯ ಅಧ್ಯಾಯವು

೧–೩. ನಾರದನು ಹೇಳಿದನು: ಎಲೈ ಯುಧಿಷ್ಠಿರನೇ ! ಆ ಕಾಲ ಮೊದಲುಗೊಂಡು ಬ್ರಹ್ಮಾದಿಗಳೂ, ತಪಃಪರರಾದ ಮುನಿಗಳೂ, ಕಾಮಕ್ರೋಧಾದಿ ಮಾನಸಿಕದೋಷಗಳನ್ನು ಬಿಟ್ಟು ನರ್ಮದಾ ನದಿಯನ್ನು ಸೇವಿಸುತ್ತಲಿರುವರು. ಮಹಾಮಹಿಮನಾದ ಶಂಕರನೇ ತನ್ನ ಶೂಲ ಬಿದ್ದ ಜಾಗವನ್ನು ನೋಡಿ, ಆ ಭೂತಲವು ಅತಿ ಪುಣ್ಯವಾದುದೆಂದು ಹೇಳಿದನು. ಮತ್ತು ಅಲ್ಲಿರುವ ತೀರ್ಥವು ಶೂಲಭೇದವೆಂದು ಪ್ರಸಿದ್ಧಿಗೊಂಡು ಮಹಾಪುಣ್ಯತಮವಾಗಿರವುದು. ಅಲ್ಲಿ ಸ್ನಾನಮಾಡಿ ಈಶ್ವರನನ್ನು ಅರ್ಚಿಸುವವನು ಗೋಸಹಸ್ರದಾನಮಾಡಿದ ಫಲವನ್ನು ಹೊಂದುವನು.

ತ್ರಿರಾತ್ರಂ ಕಾರಯೇದ್ಯಸ್ತು ತಸ್ಮಿನ್ ತೀರ್ಥೇ ನರಾಧಿಪ ।
ಅರ್ಚಯಿತ್ವಾ ಮಹಾದೇವಂ ಪುನರ್ಜನ್ಮ ನ ವಿದ್ಯತೇ ॥ ೪ ॥
ಭೀಮೇಶ್ವರಂ ತತೋ ಗಚ್ಛೇನ್ನರ್ಮದೇಶ್ವರಮುತ್ತಮಮ್ ।
ಆದಿತ್ಯೇಶ್ವರಂ ಮಹಾಪುಣ್ಯಂ ತಥಾಜ್ಯಮಧುನಾ ಸಮಮ್ ॥ ೫ ॥
ಮಲ್ಲಿಕೇಶ್ವರಮಭ್ಯರ್ಚ್ಯ ಪರ್ಯಾಪ್ತಂ ಜನ್ಮನಃ ಫಲಮ್ ।
ವರುಣೇಶ್ವರಂ ತತಃ ಪಾರ್ಶ್ವೇ ನೀರಾಜೇಶ್ವರಮುತ್ತಮಮ್ ॥ ೬ ॥
ಸರ್ವತೀರ್ಥಫಲಂ ತಸ್ಯ ಪಞ್ಚಾಯತನದರ್ಶನಾತ್ ।
ತತೋ ಗಚ್ಛೇತ ರಾಜೇನ್ದ್ರ ಯುದ್ಧಂ ವೈ ಯತ್ರ ಸಾಧಿತಮ್ ॥ ೭ ॥
ಕೋಟಿತೀರ್ಥಂ ತು ವಿಖ್ಯಾತಂ ಅಸುರಾ ಯತ್ರ ಯೋಧಿತಾಃ ।
ಯತ್ರ ತೇ ನಿಹತಾ ರಾಜನ್ ದಾನವಾ ಬಲದರ್ಪಿತಾಃ ॥ ೮ ॥

---

೪–೬. ಆ ತೀರ್ಥದಲ್ಲಿ ಮೂರು ರಾತ್ರಿ ವಾಸಮಾಡಿ, ಯೋಗ್ಯವಾದ ಉಪವಾಸಾದಿ ಧರ್ಮವಿಶೇಷವನ್ನು ಕೈಗೊಂಡು ಈಶ್ವರನನ್ನು ಪೂಜಿಸುವವನು ಮುಕ್ತಿಹೊಂದುವನು. ಅನಂತರ ಕ್ರಮವಾಗಿ ಭೀಮೇಶ್ವರನನ್ನೂ, ಶ್ರೇಷ್ಠನಾದ ನರ್ಮದೇಶ್ವರನನ್ನೂ, ಮಹಾಪುಣ್ಯವನ್ನು ಕೊಡುವ ಆದಿತ್ಯೇಶ್ವರನನ್ನೂ, ತುಪ್ಪದಿಂದಲೂ, ಜೇನಿನಿಂದಲೂ, ಕೂಡಿ ಪೂಜಿಸಿದರೆ, ಜನ್ಮಪಡೆದುದದು ಸಾರ್ಥಕವಾಗುವುದು. ಅಲ್ಲಿಂದ ಮುಂದೆ ಹೀಗೆಯೇ ಮಲ್ಲಿಕೇಶ್ವರನನ್ನು ಪೂಜೆಮಾಡಿದರೆ, ಜನ್ಮ ಸಫಲವಾಗುವುದು. ಮುಂದೆ ವರುಣೇಶ್ವರನನ್ನು ದರ್ಶನಮಾಡಿ ನೀರಾಜೇಶ್ವರನನ್ನೂ ದರ್ಶನ ಮಾಡಬೇಕು.

೭–೮. ಹಿಂದೆ ಹೇಳಿದ ಐದು ದೇವಾಲಯಗಳನ್ನು ನೋಡಿದ ಮಾತ್ರಕ್ಕೆ, ಸರ್ವತೀರ್ಥಗಳ ಫಲವೂ ಸಿಗುವುದು. ಅಲ್ಲಿಂದ ಮುಂದೆ ಯುದ್ಧವು ನಡೆದ ಪ್ರದೇಶಕ್ಕೆ ಹೋಗಬೇಕು. ಅಸುರರೊಡನೆ ಯುದ್ಧ ಮಾಡಿ ಅವರ ಬಲವನ್ನು ಕುಗ್ಗಿಸಿ ನಾಶಮಾಡಿದ ಸ್ಥಳದಲ್ಲಿ ಕೋಟಿತೀರ್ಥವೆಂಬ ತೀರ್ಥವು ಪ್ರಸಿದ್ಧವಾಗಿರುವುದು. ಹೀಗೆ ಕೊಲ್ಲಲ್ಪಟ್ಟ ಆ

ತೇಷಾಂ ಶಿರಾಂಸಿ ಗೃಹ್ಯನ್ತೇ ನಿಹತಾಸ್ತೇ ಸಮಾಗತಾಃ ।
ತೈಸ್ತು ಸಂಸ್ಥಾಪಿತೋ ದೇವಃ ಶೂಲಪಾಣಿರ್ಮಹೇಶ್ವರಃ ॥ ೯ ॥

ಕೋಟಿರ್ವಿನಿಹತಾ ತತ್ರ ತೇನ ಕೋಟೀಶ್ವರಃ ಸ್ಮೃತಃ ।
ದರ್ಶನಾತ್ತಸ್ಯ ತೀರ್ಥಸ್ಯ ಸದೇಹಃ ಸ್ವರ್ಗಮಾಪ್ನುಯಾತ್ ॥೧೦॥

ತದಾ ಇಂದ್ರೇಣ ಕ್ಷುದ್ರತ್ವಾದ್ವಜ್ರಕೀಲೇನ ಯನ್ತ್ರಿತಃ ।
ತದಾ ಪ್ರಭೃತಿ ಲೋಕಾನಾಂ ಸ್ವರ್ಗಮತ್ವಂ ನಿವಾರಿತಮ್ ॥೧೧॥

ಸಘೃತಂ ಶ್ರೀಫಲಂ ದತ್ವಾ ಗತ್ವಾ ಚಾನ್ತೇ ಪ್ರದಕ್ಷಿಣಮ್ ।
ಸರ್ವತಃ ಸಹದೇವೇನ ಶಿರಸಾದಾಯ ಧಾರಯೇತ್ ॥೧೨॥

ಸರ್ವಕಾಮೇನ ಸಂಪೂರ್ಣೋ ರಾಜಾ ಭವತಿ ಪಾಣ್ಡವ।
ಮೃತೋ ರುದ್ರತ್ವಮಾಪ್ನೋತಿ ನ ಚೇಹ ಜಾಯತೇ ಪುನಃ ॥೧೩॥

---

ರಾಕ್ಷಸರ ಶಿರಸ್ಸುಗಳೆಲ್ಲವೂ ಅಲ್ಲಿ ಕಾಣಲ್ಪಡುವುವು. ಹೀಗೆ ಕೊಲ್ಲಲ್ಪಟ್ಟ ಆ ದಾನವರು ಶೂಲಪಾಣೀಶ್ವರನನ್ನು ಪ್ರತಿಷ್ಠೆಮಾಡಿದರು.

೧೦. ಇಲ್ಲಿ ಒಂದು ಕೋಟಿ ರಾಕ್ಷಸರು ಕೊಲ್ಲಲ್ಪಟ್ಟರು. ಆದುದರಿಂದಲೇ ಈ ಈಶ್ವರನಿಗೆ ಕೋಟೀಶ್ವರನೆಂದು ಪ್ರಸಿದ್ಧಿಯು. ಈ ತೀರ್ಥದ ದರ್ಶನಮಾಡುವವನು ಈ ದೇಹದೊಂದಿಗೇ ಸ್ವರ್ಗವನ್ನು ಸೇರುವನು.

೧೧. ಆಗ ಇಂದ್ರನು ಇದನ್ನು ಸಹಿಸದೇ ತನ್ನ ಅಲ್ಪಹೃದಯತೆಯನ್ನು ಪ್ರಕಾಶಪಡಿಸುತ್ತಾ, ವಜ್ರಕೀಲವೆಂಬ ಯಂತ್ರದಿಂದ ಬಂಧನ ಮಾಡಿದನು. ಅಲ್ಲಿಂದ ಮುಂದೆ ಜನಗಳಿಗೆ ಸಶರೀರ ಸ್ವರ್ಗಗಮನವು ನಿಲ್ಲಿಸಲ್ಪಟ್ಟಿತು.

೧೨. ಅಲ್ಲಿ ತುಪ್ಪದೊಂದಿಗೆ ಬಿಲ್ವಫಲವನ್ನು ಸಮರ್ಪಣೆಮಾಡಿ ಕೊನೆಯಲ್ಲಿ ಪ್ರದಕ್ಷಿಣೆಮಾಡಿ ಈಶ್ವರನೊಂದಿಗೆ ಅದನ್ನು ತಲೆಯಲ್ಲಿ ಧರಿಸಬೇಕು.

೧೩. ಎಲೈ ಯುಧಿಷ್ಠಿರನೇ! ಹೀಗೆ ಮಾಡುವವನು ಇಷ್ಟಾರ್ಥಗಳನ್ನೆಲ್ಲಾ ಹೊಂದಿ ರಾಜನಾಗುವನು. ಮೃತಿಯನ್ನೈದಿದವನು ರುದ್ರಸಾಯುಜ್ಯವನ್ನು ಹೊಂದಿ ಪುನರುತ್ಪತ್ತಿಯನ್ನು ಹೊಂದುವುದಿಲ್ಲ.

ಸ್ವರ್ಗಂ ಗತ್ವಾ ತತೋ ರಾಜ್ಯಂ ಕೃತ್ವಾಗತ್ಯ ತತೋ ದಿವಮ್ ।
ಮಹಾದೇವಂ ತತೋಪಾಸ್ಯ ತ್ರಯೋದಶ್ಯಾಂ ಹಿ ಮಾನವಃ ॥೧೪॥
ಸ್ನಾತಮಾತ್ರೋ ನರಸ್ತತ್ರ ಸರ್ವಯಜ್ಞಫಲಂ ಲಭೇತ್ ।
ತತೋ ಗಚ್ಛೇತ ರಾಜೇನ್ದ್ರ ತೀರ್ಥಂ ಪರಮಶೋಭನಮ್ ॥೧೫॥
ನರಾಣಾಂ ಪಾಪನಾಶಾಯ ಅಗಸ್ತ್ಯೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ಮುಚ್ಯತೇ ಬ್ರಹ್ಮಹತ್ಯಯಾ ॥೧೬॥
ಕಾರ್ತಿಕಸ್ಯ ತು ಮಾಸಸ್ಯ ಕೃಷ್ಣಪಕ್ಷೆ ಚತುರ್ದಶೀಮ್ ।
ಘೃತೇನ ಸ್ನಾಪಯೇದ್ದೇವಂ ಸಮಾಧಿಸ್ಥೋ ಜಿತೇನ್ದ್ರಿಯಃ ॥೧೭॥
ಏಕವಿಂಶಕುಲೋಪೇತೋ ನ ಮುಚ್ಯೇದೈಶ್ವರಾತ್ಪದಾತ್ ।
ಯಾನಂ ಚೋಪಾನಹೌ ಛತ್ರಂ ದದ್ಯಾಚ್ಚ ಘೃತಕಾಞ್ಚನಮ್ ।
ಭೋಜನಂ ಚೈವ ವಿಪ್ರಾಣಾಂ ಸರ್ವಂ ಕೋಟಿಗುಣಂ ಭವೇತ್ ॥

---

೧೪-೧೬. ಹೀಗೆ ಸೇವೆ ಮಾಡುವವನು ಸ್ವರ್ಗದಲ್ಲಿ ರಾಜ್ಯಭಾರವನ್ನೂ ಮಾಡುವನು. ತ್ರಯೋದಶೀದಿನ ಈಶ್ವರೋಪಾಸನೆ ಮಾಡಿ ಹಿಂದೆ ಹೇಳಿದ ಕೋಟೀಶ್ವರ ತೀರ್ಥದಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಮಾನವನು ಸರ್ವಯಜ್ಞಗಳಫಲವನ್ನೂಹೊಂದುವನು. ಅಲ್ಲಿಂದ ಮುಂದೆ ಅಗಸ್ತ್ಯೇಶ್ವರ ತೀರ್ಥವು ಸಿಗುವುದು. ಮನುಷ್ಯರ ಪಾಪವನ್ನೆಲ್ಲಾ ನಾಶಮಾಡುವುದಕ್ಕಾಗಿಯೇ ಸಿದ್ಧವಾಗಿರುವ ಈ ಅಗಸ್ತ್ಯೇಶ್ವರತೀರ್ಥದಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಮನುಷ್ಯನು ಬ್ರಹ್ಮಹತ್ಯಾದೋಷದಿಂದಲೂ ಮುಕ್ತನಾಗುವನು.

೧೭. ಕಾರ್ತಿಕ ಮಾಸದ ಕೃಷ್ಣಪಕ್ಷದ ಚತುರ್ದಶೀದಿವಸ ಈಶ್ವರನಲ್ಲಿ ಸ್ಥಿರಮನಸ್ಸಿಟ್ಟು, ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಈಶ್ವರನನ್ನು ಘೃತದಿಂದ ಸ್ನಾನಮಾಡಿಸಬೇಕು.

೧೮. ಹೀಗೆ ಸ್ನಾನಮಾಡಿದವನು ತನ್ನ ವಂಶದಲ್ಲಿ ಉತ್ಪನ್ನರಾದ ಇಪ್ಪತ್ತೊಂದು ಮಂದಿಗಳೊಂದಿಗೆ ಕೈಲಾಸದಲ್ಲಿ ವಾಸಿಸುವನು. ಮತ್ತು ಈ ದಿವಸ ವಾಹನವನ್ನೂ, ಪಾದರಕ್ಷೆಗಳನ್ನೂ, ಛತ್ರಿಯನ್ನೂ, ತುಪ್ಪವನ್ನೂ, ಸುವರ್ಣವನ್ನೂ, ಬ್ರಾಹ್ಮಣರಿಗೆ ಭೋಜನವನ್ನೂ, ಕೊಡುವವನು ಒಂದಕ್ಕೆ ಕೋಟಿಫಲವನ್ನು ಹೊಂದುವನು.

ತತೋ ಗಚ್ಛೇತ ರಾಜೇನ್ದ್ರ ರವಿಸ್ತವನಮುನುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ಸಿಂಹಾಸನಗತಿರ್ಭವೇತ್ ॥೧೯॥
ನರ್ಮದಾದಕ್ಷಿಣೇ ಕೂಲೇ ತೀರ್ಥಂ ಶಕ್ರಸ್ಯ ವಿಶ್ರುತಮ್ ।
ಉಪೋಷ್ಯ ರಜನೀಮೇಕಾಂ ಸ್ನಾನಂ ತತ್ರ ಸಮಾಚರೇತ್ ॥೨೦॥
ಸ್ನಾನಂ ಕೃತ್ವಾ ಯಥಾನ್ಯಾಯಮರ್ಚಯೇತ್ತು ಜನಾರ್ದನಮ್ ।
ಗೋಸಹಸ್ರಫಲಂ ತಸ್ಯ ವಿಷ್ಣುಲೋಕಂ ಸ ಗಚ್ಛತಿ ॥೨೧॥
ಋಷಿತೀರ್ಥಂ ತತೋ ಗಚ್ಛೇತ್ಸರ್ವಪಾಪಹರಂ ನೃಣಾಮ್ ।
ಸ್ನಾತಮಾತ್ರೋ ನರಸ್ತತ್ರ ಶಿವಲೋಕೇ ಮಹೀಯತೇ ॥೨೨॥
ನಾರದಸ್ಯ ಚ ತತ್ರೈವ ತೀರ್ಥಂ ಪರಮಶೋಭನಮ್ ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥೨೩॥
ದೇವತೀರ್ಥಂ ತತೋ ಗಚ್ಛೇದ್ಬ್ರಹ್ಮಣಾ ನಿರ್ಮಿತಂ ಪುರಾ ।
ತತ್ರ ಸ್ನಾತ್ವಾ ನರೋ ರಾಜನ್ಬ್ರಹ್ಮಲೋಕೇ ಮಹೀಯತೇ ॥೨೪॥

---

೧೯. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ ! ಅಲ್ಲಿಂದ ಮುಂದೆ ಶ್ರೇಷ್ಠವಾದ ರವಿಸ್ತವವನ್ನು ಹೊಂದಿ ಸ್ನಾನ ಮಾಡುವವನು ರಾಜನಾಗುವನು.

೨೦–೨೧. ನರ್ಮದಾನದಿಯ ದಕ್ಷಿಣತೀರದಲ್ಲಿ ಶಕ್ರತೀರ್ಥವಿರುವುದು. ಆಲ್ಲಿ ಒಂದು ರಾತ್ರಿ ಉಪವಾಸಮಾಡಿ ಸ್ನಾನಮಾಡಬೇಕು. ನಿಯಮಪೂರ್ವಕವಾಗಿ ಸ್ನಾನಮಾಡಿ ಜನಾರ್ದನ ದೇವರನ್ನು ಪೂಜಿಸುವವನು ಗೋಸಹಸ್ರದಾನದ ಫಲಭಾಗಿಯಾಗಿ ವಿಷ್ಣುಲೋಕವನ್ನು ಹೊಂದುವನು.

೨೨–೨೪. ಅನಂತರ ಮನುಷ್ಯರ ಸರ್ವವಿಧವಾದ ಪಾಪಗಳನ್ನೂ ಪರಿಹರಿಸುವ ಋಷಿತೀರ್ಥದಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ಶಿವಲೋಕದಲ್ಲಿ ಪೂಜಾರ್ಹನಾಗುವನು. ಅಲ್ಲಿಯೇ ಶ್ರೇಷ್ಠವಾದ ನಾರದತೀರ್ಥವಿರುವುದು. ಅದರಲ್ಲಿ ಸ್ನಾನಮಾಡುವವನು ಸಹಸ್ರಗೋದಾನದ ಫಲವನ್ನು ಹೊಂದುವನು. ಅನಂತರ ಬ್ರಹ್ಮನಿಂದ ಪೂರ್ವದಲ್ಲಿ ಸೃಷ್ಟವಾದ ದೇವತೀರ್ಥವನ್ನು ಹೊಂದಿ ಸ್ನಾನಮಾಡುವವನು ಬ್ರಹ್ಮಲೋಕದಲ್ಲಿ ಪೂಜಿತನಾಗುವನು.

ಅಮರಕಣ್ಟಕಂ ತತೋ ಗಚ್ಛೇದಮರಸ್ಥಾಪಿತಂ ಪುರಾ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥೨೫॥
ತತೋ ಗಚ್ಛೇತ ರಾಜೇನ್ದ್ರ ವಾಮನೇಶ್ವರಮುತ್ತಮಮ್।
ತತ್ರ ಚಾಯತನಂ ದೃಷ್ಟ್ವಾ ಮುಚ್ಯತೇ ಬ್ರಹ್ಮಹತ್ಯಯಾ ॥೨೬॥
ಋಷಿತೀರ್ಥಂ ತತೋ ಗಚ್ಛೇತ್ತ್ವೀಶಾನೇಶಂ ಪುಮಾನ್ಧ್ರುವಮ್ ।
ವಟೇಶ್ವರಂ ತತೋ ದೃಷ್ಟ್ವಾ ಪರ್ಯಾಪ್ತಂ ಜನ್ಮನಃ ಫಲಮ್ ॥
ಭೀಮೇಶ್ವರಂ ತತೋ ಗಚ್ಛೇತ್ಸರ್ವವ್ಯಾಧಿವಿನಾಶನಮ್।
ಸ್ನಾತಮಾತ್ರೋ ನರೋ ರಾಜನ್ಸರ್ವದುಃಖಾತ್ಪ್ರಮುಚ್ಯತೇ ॥೨೮॥
ತತೋ ಗಚ್ಛೇತ ರಾಜೇನ್ದ್ರ ವಾರಣೇಶ್ವರಮುತ್ತಮಮ್।
ತತ್ರ ಸ್ನಾತ್ವಾ ನರೋ ರಾಜನ್ಸರ್ವದುಃಖಾತ್ಪ್ರಮುಚ್ಯತೇ ॥೨೯॥

---

೨೫–೨೬. ಮುಂದೆ ಅಮರರಿಂದ ಸ್ಥಾಪಿತವಾದ ಅಮರಕಂಟಕ ವೆಂಬ ತೀರ್ಥವನ್ನು ಹೊಂದಬೇಕು. ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಸಹಸ್ರಗೋದಾನಫಲವನ್ನು ಹೊಂದುವನು. ಅಲ್ಲಿಂದ ಮುಂದೆ ಶ್ರೇಷ್ಠ ವಾದ ವಾಮನೇಶ್ವರ ಕ್ಷೇತ್ರವನ್ನು ಸೇರಬೇಕು. ಅಲ್ಲಿ ವಾಮನೇಶ್ವರನ ದೇವಸ್ಥಾನವನ್ನು ನೋಡಿದಮಾತ್ರಕ್ಕೆ ನರನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು.

೨೭–೨೮. ಅನಂತರ ಋಷಿತೀರ್ಥವನ್ನು ಹೊಂದಿ ಅಲ್ಲಿ ಈಶಾನೇ ಶನನ್ನೂ ವಟೇಶ್ವರನನ್ನೂ ದರ್ಶನಮಾಡುವವನು ಜನ್ಮಸಾಫಲ್ಯವನ್ನು ಹೊಂದುವನು. ಅನಂತರ ಭೀಮೇಶ್ವರಕ್ಷೇತ್ರವನ್ನುಹೊಂದಿ ಸ್ನಾನಮಾಡಿದ ಮಾತ್ರದಿಂದ ಸರ್ವವ್ಯಾಧಿಗಳನ್ನೂ ನೀಗಿ ಸರ್ವದುಃಖಗಳಿಂದಲೂ ಬಿಡುಗಡೆಹೊಂದುವನು.

೨೯–೩೧. ಅಲ್ಲಿಂದ ವಾರಣೇಶ್ವರ ಕ್ಷೇತ್ರವನ್ನು ಹೊಂದಿ ಅಲ್ಲಿ ಸ್ನಾನಮಾಡುವವನು ಸರ್ವದುಃಖಗಳನ್ನೂ ದೂರಮಾಡುವನು. ಮುಂದೆ ಸೋಮತೀರ್ಥವನ್ನು ಹೊಂದಿ ಶ್ರೇಷ್ಠನಾದ ಚಂದ್ರನ ದರ್ಶನಮಾಡ

**ಸೋಮತೀರ್ಥಂ ತತೋ ಗಚ್ಛೇತ್ಪಶ್ಯೇಚ್ಚನ್ದ್ರಮನುತ್ತಮಮ್ ।**
**ತತ್ರ ಸ್ನಾತ್ವಾ ನರೋ ರಾಜನ್ ಭಕ್ತ್ಯಾ ಪರಮಯಾ ಯುತಃ ॥**
**ತತ್ಕ್ಷಣಾದ್ದಿವ್ಯದೇಹಸ್ಥಃ ಶಿವವನ್ಮೋದತೇ ಚಿರಮ್ ।**
**ಷಷ್ಟಿವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೩೦॥**
**ತತೋ ಗಚ್ಛೇತ ರಾಜೇನ್ದ್ರ ಪಿಙ್ಗಲೇಶ್ವರಮುತ್ತಮಮ್ ।**
**ಅಹೋರಾತ್ರೋಪವಾಸೇನ ತ್ರಿರಾತ್ರಫಲಮಾಪ್ನುಯಾತ್ ॥೩೨॥**
**ತಸ್ಮಿಂಸ್ತೀರ್ಥೇತು ರಾಜೇನ್ದ್ರ ಕಪಿಲಾಂ ಯಃ ಪ್ರಯಚ್ಛತಿ।**
**ಯಾವನ್ತಿ ತಸ್ಯ ರೋಮಾಣಿ ತತ್ಪ್ರಸೂತಕುಲಸ್ಯ ಚ।**
**ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥೩೩॥**
**ಯಸ್ತು ಪ್ರಾಣಪರಿತ್ಯಾಗಂ ತತ್ರಕುರ್ಯಾನ್ನರಾಧಿಪ।**
**ಅಕ್ಷಯಂ ಮೋದತೇ ಕಾಲಂ ಯಾವಚ್ಚನ್ದ್ರದಿವಾಕರೌ ॥೩೪॥**

---

ಬೇಕು. ಅನಂತರ ಆ ತೀರ್ಥದಲ್ಲಿ ಬಹುಭಕ್ತಿಯಿಂದ ಸ್ನಾನಮಾಡ ಬೇಕು. ಹೀಗೆ ಸ್ನಾನಮಾಡಿದವನು ಒಡನೆಯೇ ಜಡವಾದ ಈ ಪಾರ್ಥಿವ ದೇಹವನ್ನು ಬಿಟ್ಟು ದಿವ್ಯದೇಹವನ್ನು ಹೊಂದಿ ಅರುವತ್ತು ಸಹಸ್ರ ವರ್ಷ ಗಳಕಾಲ ಶಿವಲೋಕದಲ್ಲಿ ಶಿವನಂತೆಯೇ ಸುಖಿಯಾಗಿರುವನು.

೩೨–೩೩. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ ! ಮುಂದೆ ಪಿಂಗಲೇಶ್ವರನನ್ನು ಹೊಂದಬೇಕು. ಅಲ್ಲಿ ಒಂದು ಹಗಲೂ ಮತ್ತು ಒಂದು ರಾತ್ರಿಯೂ ಉಪವಾಸಮಾಡಬೇಕು. ಹೀಗೆ ಮಾಡುವವನು ತ್ರಿರಾತ್ರವೆಂಬ ಯಾಗದ ಫಲವನ್ನು ಹೊಂದುವನು. ಎಲೈ ರಾಜ ಶ್ರೇಷ್ಠನೇ ! ಆ ತೀರ್ಥದಲ್ಲಿ ಕಪಿಲಾಗೋವನ್ನು ದಾನಮಾಡುವವನು ಆ ಗೋವಿಗೂ ಅದರ ಕರುಗಳಿಗೂ ಎಷ್ಟು ರೋಮಗಳಿವೆಯೋ ಅಷ್ಟು ಸಾವಿರ ವರ್ಷಗಳಕಾಲ ರುದ್ರಲೋಕದಲ್ಲಿ ವಿರಾಜಿಸುವನು.

೩೪–೩೬. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ ! ಆ ಪಿಂಗಲ ಕ್ಷೇತ್ರದಲ್ಲಿ ಪ್ರಾಣತ್ಯಾಗಮಾಡುವವನು ಸೂರ್ಯಚಂದ್ರರು ಇರುವ ವರೆಗೂ, ಸ್ವರ್ಗದಲ್ಲಿ ಅನಂತವಾಗಿ ಸುಖಪಡುವನು. ನರ್ಮದಾನದಿಯ ದಡದಲ್ಲಿ ವಾಸಿಸುವ ಮನುಷ್ಯರು ಮೃತಿಯನ್ನು ಹೊಂದಿದನಂತರ,

**ನರ್ಮದಾತಟಮಾಶ್ರಿತ್ಯ ತಿಷ್ಠನ್ತಿ ಯೇ ತು ಮಾನವಾಃ ।**
**ತೇ ಮೃತಾಃ ಸ್ವರ್ಗಮಾಯಾನ್ತಿ ತಥಾ ಸುಕೃತಿನೋ ಯಥಾ ॥೩೫॥**

**ಸುರಭಿಕೇಶ್ವರಂ ತತೋ ಗಚ್ಛೇನ್ನಾರಕಂ ಕೋಟಿಕೇಶ್ವರಮ್ ।**
**ಗಙ್ಗಾವತರಣೇ ತತ್ರ ದಿನೇ ಪುಣ್ಯೋ ನ ಸಂಶಯಃ ॥೩೬॥**

**ನನ್ದಿತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।**
**ತುಷ್ಯತೇ ತಸ್ಯ ನನ್ದೀಶಃ ಸೋಮಲೋಕೇ ಮಹೀಯತೇ ॥೩೭॥**

**ತತೋ ದ್ವೀಪೇಶ್ವರಂ ಗಚ್ಛೇದ್ವ್ಯಾಸತೀರ್ಥಂ ತಪೋವನಮ್ ।**
**ನಿವರ್ತಿತಾ ಪುರಾ ತತ್ರ ವ್ಯಾಸಭೀತಾ ಮಹಾನದೀ ।**
**ಹುಙ್ಕಾರಿತಾ ತು ವ್ಯಾಸೇನ ದಕ್ಷಿಣೇನ ತತೋ ಗತಾ ॥೩೮॥**

**ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।**
**ವ್ಯಾಸಸ್ತತ್ರ ಭವೇತ್ಪ್ರೀತೋ ವಾಞ್ಛಿತಂ ಲಭತೇ ಫಲಮ್ ॥೩೯॥**

---

ಅನೇಕ ಸುಕೃತಗಳನ್ನು ಮಾಡಿದ ಜನರು ಹೊಂದುವ ಸ್ವರ್ಗವನ್ನು ಹೊಂದುವರು. ಅಲ್ಲಿಂದ ಮುಂದೆ ಹೋಗಿ ಸುರಭಿಕೇಶ್ವರನನ್ನೂ, ನಾರಕೇಶ್ವರನನ್ನೂ, ಕೋಟಿಕೇಶ್ವರನನ್ನೂ ದರ್ಶನಮಾಡಬೇಕು. ಅಲ್ಲಿಯೇ ಗಂಗಾವತರಣತೀರ್ಥವಿರುವುದು. ಅಲ್ಲಿ ಒಂದು ದಿವಸಮಾತ್ರ ಉಪವಾಸ ಮಾಡುವುದರಿಂದ ಬೇಕಾದಷ್ಟು ಪುಣ್ಯವು ಸುಲಭವು.

೩೭–೩೮. ಮುಂದೆ ನಂದಿತೀರ್ಥವೆಂಬ ತೀರ್ಥದಲ್ಲಿ ಸ್ನಾನಮಾಡಿದವನಿಗೆ ನಂದೀಶನು ತುಷ್ಟನಾಗಿ ಸೋಮಲೋಕವನ್ನು ಕೊಡುವನು. ಅನಂತರ ವ್ಯಾಸತೀರ್ಥದಿಂದ ಕೂಡಿರುವ ತಪೋವನದಲ್ಲಿ ಪ್ರಸಿದ್ಧನಾದ ದ್ವೀಪೇಶ್ವರವನ್ನು ಹೊಂದಬೇಕು. ಆ ಸ್ಥಳದಲ್ಲಿ ಪೂರ್ವದಲ್ಲಿ ವ್ಯಾಸನ ಹುಂಕಾರಕ್ಕೆ ಹೆದರಿ ಮಹಾನದಿಯು ದಕ್ಷಿಣದಿಕ್ಕಿಗೆ ಪ್ರಯಾಣಮಾಡಿತು.

೩೯–೪೦. ಆ ವ್ಯಾಸತೀರ್ಥದಲ್ಲಿ ಪ್ರದಕ್ಷಿಣೆ ಮಾಡುವವನು ವ್ಯಾಸನ ಪ್ರೀತಿಗೆ ಪಾತ್ರನಾಗಿ ತನಗೆ ಇಷ್ಟವಾದ ಫಲವನ್ನು ಹೊಂದುವನು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ದೀಪ್ತನಾದ ಆ ದ್ವೀಪೇ

ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುನ್ಧರಾ ॥೪೫॥

ತತಃ ಸುವರ್ಣತಿಲಕೇ ಸ್ನಾತ್ವಾ ದತ್ವಾ ಚ ಕಾಞ್ಚನಮ್ ।
ಕಾಞ್ಚನೇನ ವಿಮಾನೇನ ರುದ್ರಲೋಕೇ ಮಹೀಯತೇ ॥೪೬॥

ತತಃ ಸ್ವರ್ಗಚ್ಯುತಃ ಕಾಲಾದ್ರಾಜಾ ಭವತಿ ವೀರ್ಯವಾನ್ ।
ತತೋ ಗಚ್ಛೇತ ರಾಜೇನ್ದ್ರ ಇಕ್ಷುನದ್ಯಾಸ್ತು ಸಂಗಮಮ್ ॥೪೭॥

ತ್ರೈಲೋಕ್ಯೇ ವಿಶ್ರುತಂ ದಿವ್ಯಂ ತತ್ರ ಸನ್ನಿಹಿತಃ ಶಿವಃ ।
ತತ್ರ ಸ್ನಾತ್ವಾ ನರೋ ರಾಜನ್ಗಾಣಾಪತ್ಯಮವಾಪ್ನುಯಾತ್ ॥೪೮॥

ಸ್ಕನ್ದತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಮ್ ।
ಆ ಜನ್ಮನಃ ಕೃತಂ ಪಾಪಂ ಸ್ನಾನಮಾತ್ರಾದ್ವ್ಯಪೋಹತಿ ॥೪೯॥

---

೪೫–೪೭. ಆ ಏರಂಡತೀರ್ಥದಲ್ಲಿ ಪ್ರದಕ್ಷಿಣೆ ಮಾಡುವವನು ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನೇ ಪ್ರದಕ್ಷಿಣೆ ಮಾಡಿದವನಾಗುವನು. ಅನಂತರ ಸುವರ್ಣತಿಲಕತೀರ್ಥದಲ್ಲಿ ಸ್ನಾನಮಾಡಿ ಸುವರ್ಣವನ್ನು ದಾನಮಾಡುವವನು ಸುವರ್ಣವಿಮಾನವನ್ನು ಹೊಂದಿ ರುದ್ರಲೋಕದಲ್ಲಿ ಪೂಜ್ಯನಾಗುವನು. ಹೀಗೆ ಬಹುಕಾಲ ರುದ್ರಲೋಕದಲ್ಲಿ ವಾಸಿಸಿ ಕಾಲಕ್ರಮವಾಗಿ ಭೂಮಿಯಲ್ಲಿ ಪರಾಕ್ರಮಶಾಲಿಯಾದ ರಾಜನಾಗುವನು. ಮುಂದೆ ಇಕ್ಷುನದೀ ಸಂಗಮವನ್ನು ಸೇರಬೇಕು.

೪೮–೫೦. ಮೂರು ಲೋಕಗಳಲ್ಲೂ ಪ್ರಸಿದ್ಧವಾದ ದಿವ್ಯವಾದ ಇಕ್ಷುನದೀಸಂಗಮದಲ್ಲಿ ಯಾವಾಗಲೂ ಈಶ್ವರನು ವಾಸಿಸುವನು. ಅಲ್ಲಿ ಸ್ನಾನಮಾಡಿದ ಮನುಷ್ಯನು ಗಣಗಳಿಗೆ ಅಧಿಪತಿಯಾಗುವನು. ಸರ್ವಪಾಪಗಳನ್ನೂ ಪರಿಹರಿಸುವ ಸ್ಕಂದತೀರ್ಥವನ್ನು ಹೊಂದಿ ಸ್ನಾನಮಾಡಿದ ಮಾತ್ರದಿಂದಲೇ ಹುಟ್ಟಿದ ಮೊದಲುಗೊಂಡು ಮಾಡಿದ ಪಾಪಸಮುದಾ

ಪ್ರದಕ್ಷಿಣಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುನ್ಧರಾ ॥೪೫॥

ತತಃ ಸುವರ್ಣತಿಲಕೇ ಸ್ನಾತ್ವಾ ದತ್ವಾ ಚ ಕಾಞ್ಚನಮ್ ।
ಕಾಞ್ಚನೇನ ವಿಮಾನೇನ ರುದ್ರಲೋಕೇ ಮಹೀಯತೇ ॥೪೬॥

ತತಃ ಸ್ವರ್ಗಚ್ಯುತಃ ಕಾಲಾದ್ರಾಜಾ ಭವತಿ ವೀರ್ಯವಾನ್ ।
ತತೋ ಗಚ್ಛೇತ ರಾಜೇನ್ದ್ರ ಇಕ್ಷುನದ್ಯಾಸ್ತು ಸಂಗಮಮ್ ॥೪೭॥

ತ್ರೈಲೋಕ್ಯೇ ವಿಶ್ರುತಂ ದಿವ್ಯಂ ತತ್ರ ಸನ್ನಿಹಿತಃ ಶಿವಃ ।
ತತ್ರ ಸ್ನಾತ್ವಾ ನರೋ ರಾಜನ್ಗಾಣಾಪತ್ಯಮವಾಪ್ನುಯಾತ್ ॥೪೮॥

ಸ್ಕನ್ದತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಮ್ ।
ಆ ಜನ್ಮನಃ ಕೃತಂ ಪಾಪಂ ಸ್ನಾನಮಾತ್ರಾದ್ವ್ಯಪೋಹತಿ ॥೪೯॥

---

೪೫–೪೭. ಆ ಏರಂಡತೀರ್ಥದಲ್ಲಿ ಪ್ರದಕ್ಷಿಣೆ ಮಾಡುವವನು ಸಪ್ತದ್ವೀಪಗಳಿಂದ ಕೂಡಿದ ಭೂಮಿಯನ್ನೇ ಪ್ರದಕ್ಷಿಣೆ ಮಾಡಿದವನಾಗುವನು. ಅನಂತರ ಸುವರ್ಣತಿಲಕತೀರ್ಥದಲ್ಲಿ ಸ್ನಾನಮಾಡಿ ಸುವರ್ಣವನ್ನು ದಾನಮಾಡುವವನು ಸುವರ್ಣವಿಮಾನವನ್ನು ಹೊಂದಿ ರುದ್ರಲೋಕದಲ್ಲಿ ಪೂಜ್ಯನಾಗುವನು. ಹೀಗೆ ಬಹುಕಾಲ ರುದ್ರಲೋಕದಲ್ಲಿ ವಾಸಿಸಿ ಕಾಲಕ್ರಮವಾಗಿ ಭೂಮಿಯಲ್ಲಿ ಪರಾಕ್ರಮಶಾಲಿಯಾದ ರಾಜನಾಗುವನು. ಮುಂದೆ ಇಕ್ಷುನದೀ ಸಂಗಮವನ್ನು ಸೇರಬೇಕು.

೪೮–೫೦. ಮೂರು ಲೋಕಗಳಲ್ಲೂ ಪ್ರಸಿದ್ಧವಾದ ದಿವ್ಯವಾದ ಇಕ್ಷುನದೀಸಂಗಮದಲ್ಲಿ ಯಾವಾಗಲೂ ಈಶ್ವರನು ವಾಸಿಸುವನು. ಅಲ್ಲಿ ಸ್ನಾನಮಾಡಿದ ಮನುಷ್ಯನು ಗಣಗಳಿಗೆ ಅಧಿಪತಿಯಾಗುವನು. ಸರ್ವಪಾಪಗಳನ್ನೂ ಪರಿಹರಿಸುವ ಸ್ಕಂದತೀರ್ಥವನ್ನು ಹೊಂದಿ ಸ್ನಾನಮಾಡಿದ ಮಾತ್ರದಿಂದಲೇ ಹುಟ್ಟಿದ ಮೊದಲುಗೊಂಡು ಮಾಡಿದ ಪಾಪಸಮುದಾ

**ಆಙ್ಗಿರಸಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।**
**ಗೋಸಹಸ್ರಫಲಂ ತಸ್ಯ ರುದ್ರಲೋಕೇ ಮಹೀಯತೇ ॥೫೦॥**

**ಲಾಙ್ಗಲತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಮ್ ।**
**ತತ್ರ ಗತ್ವಾ ತು ರಾಜೇಂದ್ರ ಸ್ನಾನಂ ತತ್ರ ಸಮಾಚರೇತ್ ।**
**ಸಪ್ತಜನ್ಮಕೃತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೫೧॥**

**ವಟೇಶ್ವರಂ ತತೋ ಗಚ್ಛೇತ್ಸರ್ವತೀರ್ಥಮನುತ್ತಮಮ್ ।**
**ತತ್ರ ಸ್ನಾತ್ವಾ ನರೋ ರಾಜನ್ಗೋಸಹಸ್ರಫಲಂ ಲಭೇತ್ ॥೫೨॥**

**ಸಂಗಮೇಶ್ವರಂ ತತೋ ಗಚ್ಛೇತ್ಸರ್ವಪಾಪಹರಂ ಪರಮ್ ।**
**ತತ್ರಸ್ನಾತ್ವಾ ನರೋ ರಾಜ್ಯಂ ಲಭತೇ ನಾತ್ರ ಸಂಶಯಃ ॥೫೩॥**

**ಭದ್ರತೀರ್ಥಂ ಸಮಾಸಾದ್ಯ ದಾನಂ ದದ್ಯಾತ್ತು ಯೋ ನರಃ ।**
**ತಸ್ಯ ತೀರ್ಥಪ್ರಭಾವೇಣ ಸರ್ವಂ ಕೋಟಿಗುಣಂ ಭವೇತ್ ॥೫೪॥**

---

ಯವು ನಷ್ಟವಾಗುವುದು. ಮುಂದೆ ಆಂಗಿರಸತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರಗೋದಾನದ ಫಲಕ್ಕೆ ಭಾಗಿಯಾಗಿ ರುದ್ರಲೋಕದಲ್ಲಿ ಪೂಜಾರ್ಹನಾಗುವನು.

೫೧. ಅನಂತರ ಸರ್ವಪಾಪಗಳನ್ನೂ ಪರಿಹರಿಸುವ ಲಾಂಗಲತೀರ್ಥವನ್ನು ಹೊಂದಿ ಸ್ನಾನಮಾಡುವವನು ಏಳುಜನ್ಮಗಳಿಂದ ಸಂಪಾದಿಸಿದ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ.

೫೨–೫೪. ಸರ್ವಶ್ರೇಷ್ಠವಾದ ಸರ್ವತೀರ್ಥರೂಪವಾದ ವಟೇಶ್ವರತೀರ್ಥವನ್ನು ಹೊಂದಿ ಸ್ನಾನಮಾಡುವನು ಸಹಸ್ರಗೋದಾನದ ಫಲವನ್ನು ಹೊಂದುವನು. ಮುಂದೆ ಸರ್ವಪಾಪವನ್ನೂ ಪರಿಹರಿಸುವ ಸಂಗಮೇಶ್ವರತೀರ್ಥವನ್ನು ಹೊಂದಿ ಸ್ನಾನಮಾಡುವವನು ಖಂಡಿತವಾಗಿಯೂ ರಾಜ್ಯವನ್ನು ಅನುಭವಿಸುವನು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಮುಂದೆ ಭದ್ರತೀರ್ಥದಲ್ಲಿ ಮಾಡಿದ ದಾನವು ತೀರ್ಥದ ಮಹಿಮಾತಿಶಯದಿಂದ ದಾನಮಾಡುವವನಿಗೆ ಒಂದಕ್ಕೆ ಒಂದು ಕೋಟಿಫಲವನ್ನು ಕೊಡುವುದು.

ಅಥ ನಾರೀ ಭವೇತ್ಕಾಲೀ ತತ್ರಸ್ನಾನಂ ಸಮಾಚರೇತ್ ।
ಗೌರೀತುಲ್ಯಾ ಭವೇತ್ಸಾ ತು ರುದ್ರಪತ್ನೀ ನ ಸಂಶಯಃ ॥೫೫॥

ಅಙ್ಗಾರೇಶ್ವರಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥೫೬॥

ಅಙ್ಗಾರಕಚತುರ್ಥ್ಯಾಂ ತು ಸ್ನಾನಂ ತತ್ರ ಸಮಾಚರೇತ್ ।
ಅಕ್ಷಯಂ ಮೋದತೇ ಕಾಲಂ ಮುರಾರಿಕೃತಶಾಸನಃ ॥೫೭॥

ಅಯೋನಿಸಂಗಮೇ ಸ್ನಾತ್ವಾ ನ ಪಶ್ಯೇದ್ಯೋನಿಮನ್ದಿರಮ್ ।
ಪಾಣ್ಡವೇಶ್ವರಕಂ ಗತ್ವಾ ಸ್ನಾನಂ ತತ್ರ ಸಮಾಚರೇತ್ ।
ಅಕ್ಷಯಂ ಮೋದತೇ ಕಾಲಮವಧ್ಯಸ್ತು ಸುರಾಸುರೈಃ ॥೫೮॥

ವಿಷ್ಣುಲೋಕಂ ತತೋ ಗತ್ವಾ ಕ್ರೀಡಾಭೋಗಸಮನ್ವಿತಃ ।
ತತ್ರ ಭುಕ್ತ್ವಾ ಮಹಾಭೋಗಾನ್ಮರ್ತ್ಯೇ ರಾಜಾಭಿಜಾಯತೇ ॥೫೯॥

---

೫೫–೫೭. ಎಂತಹ ಕಪ್ಪಾದ ಹೆಂಗಸಾದರೂ, ಆ ಭದ್ರತೀರ್ಥದಲ್ಲಿ ಸ್ನಾನಮಾಡಿದರೆ, ಈಶ್ವರನ ಪತ್ನಿಯಾದ ಪಾರ್ವತಿಗೆ ಸಮಾನಳಾಗುವಳು. ಅನಂತರ ಅಂಗಾರೇಶ್ವರಕ್ಷೇತ್ರವನ್ನು ಹೊಂದಿ ಅಲ್ಲಿ ಸ್ನಾನ ಮಾಡುವವನು ರುದ್ರಲೋಕದಲ್ಲಿ ಪೂಜಾರ್ಹನಾಗುವನು. ಮಂಗಳ ವಾರದಿಂದ ಕೂಡಿದ ಚತುರ್ಥೀ ತಿಥಿಯಲ್ಲಿ ಸ್ನಾನಮಾಡುವವನು ನಾರಾಯಣನಿಂದ ಅನುಗೃಹಿತನಾಗಿ ಅವನ ಆಜ್ಞೆಯಂತೆ ಅನಂತಕಾಲ ಸುಖಪಡುವನು.

೫೮–೫೯. ಅಯೋನಿಸಂಗಮವೆಂಬ ತೀರ್ಥದಲ್ಲಿ ಸ್ನಾನಮಾಡುವವನು ಪುನರ್ಜನ್ಮವನ್ನು ಹೊಂದುವುದಿಲ್ಲ. ಮುಂದೆ ಪಾಂಡವೇಶ್ವರ ಕ್ಷೇತ್ರಕ್ಕೆ ಹೋಗಿ ಸ್ನಾನಮಾಡಬೇಕು. ಹೀಗೆ ಅಲ್ಲಿ ಸ್ನಾನಮಾಡುವವನು ದೇವಾಸುರರಿಂದಲೂ ಅವಧ್ಯನಾಗಿ ಅನಂತಕಾಲ ಸುಖಪಡುವನು. ಮುಂದೆ ವಿಷ್ಣುಲೋಕವನ್ನು ಹೊಂದಿ ಸಕಲಭೋಗಗಳನ್ನೂ ಅನುಭವಿಸಿ ಅವನು ಭೂಮಿಯಲ್ಲಿ ರಾಜನಾಗಿ ಹುಟ್ಟುವನು.

ಕಮ್ಬೋತಿಕೇಶ್ವರಂ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಉತ್ತರಾಯಣೇ ತು ಸಂಪ್ರಾಪ್ತೇ ಯದಿಚ್ಛೇತ್ತಸ್ಯ ತದ್ಭವೇತ್ ॥
ಚನ್ದ್ರಭಾಗಾಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸೋಮಲೋಕೇ ಮಹೀಯತೇ ॥೬೧॥
ತತೋ ಗಚ್ಛೇತ್ತು ರಾಜೇನ್ದ್ರ ತೀರ್ಥಂ ಶಕ್ರಸ್ಯ ವಿಶ್ರುತಮ್ ।
ಪೂಜಿತಂ ದೇವರಾಜೇನ ದೇವೈರಪಿ ನಮಸ್ಕೃತಮ್ ॥೬೨॥
ತತ್ರ ಸ್ನಾತ್ವಾ ನರೋ ರಾಜಸ್ದಾನಂ ದದ್ಯಾಚ್ಚ ಕಾಞ್ಚನಮ್ ।
ಅಥವಾ ನೀಲವರ್ಣಾಭಂ ವೃಷಭಂ ಯಃ ಸಮುತ್ಸೃಜೇತ್ ॥೬೩॥
ವೃಷಭಸ್ಯ ತು ರೋಮಾಣಿ ತತ್ಪ್ರಸೂತಿಕುಲೇಷು ಚ ।
ತಾವದ್ವರ್ಷಸಹಸ್ರಾಣಿ ನರೋ ಹರಪುರೇ ವಸೇತ್ ॥೬೪॥
ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ವೀರ್ಯವಾನ್ ।
ಅಶ್ವಾನಾಂ ಶ್ವೇತವರ್ಣಾನಾಂ ಸಹಸ್ರೇಷು ನರಾಧಿಪ ।
ಸ್ವಾಮೀ ಭವತಿ ಮರ್ತ್ಯೇಷು ತಸ್ಯ ತೀರ್ಥಪ್ರಭಾವತಃ ॥೬೫॥

---

೬೦. ಮುಂದೆ ಕಂಬೋತಿಕ್ಷೇತ್ರದಲ್ಲಿ ಸ್ನಾನಮಾಡಬೇಕು. ಅದರಲ್ಲಿಯೂ ಉತ್ತರಾಯಣದಲ್ಲಿ ಸ್ನಾನಮಾಡುವವನು ಉದ್ದಿಷ್ಟವಾದ ಫಲವನ್ನೇ ಅನುಭವಿಸುವನು.

೬೧–೬೪. ಅನಂತರ ಚಂದ್ರಭಾಗಾನದಿಯನ್ನು ಹೊಂದಿ ಸ್ನಾನ ಮಾಡುವವನು ಚಂದ್ರಲೋಕದಲ್ಲಿ ಪೂಜಿತನಾಗುವನು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ ! ದೇವೇಂದ್ರನಿಂದ ಪೂಜಿತವಾಗಿ ದೇವತೆಗಳಿಂದ ಪೂಜಿಸಲ್ಪಟ್ಟ ಶಕ್ರತೀರ್ಥವನ್ನು ಹೊಂದಬೇಕು. ಅಲ್ಲಿ ಸ್ನಾನಮಾಡಿ ಸುವರ್ಣದಾನ ಮಾಡುವವನು ಅಥವಾ ನೀಲವರ್ಣದ ಎತ್ತನ್ನು ದಾನಮಾಡುವವನು ಆ ವೃಷಭದ ಮತ್ತು ಅದರ ವಂಶದಲ್ಲಿ ಹುಟ್ಟಿದ ಗೋವುಗಳ ರೋಮಗಳು ಎಷ್ಟಿರುವುವೋ ಅಷ್ಟುಸಾವಿರವರ್ಷಗಳ ಕಾಲ ಕೈಲಾಸದಲ್ಲಿ ವಾಸಿಸುವನು.

೬೫. ಕಾಲಕ್ರಮದಲ್ಲಿ ಸ್ವರ್ಗಚ್ಯುತನಾಗಿ ಭೂಲೋಕವನ್ನು ಹೊಂದಿ ಆ ತೀರ್ಥದ ಮಹಿಮೆಯಿಂದ ಸಾವಿರಾರು ಶ್ವೇತವರ್ಣದ ಕುದುರೆಗಳಿಗೆ ಸ್ವಾಮಿಯಾದ ಉತ್ತಮರಾಜನಾಗಿ ಬಾಳುವನು.

ತತೋ ಗಚ್ಛೇತ ರಾಜೇನ್ದ್ರ ಬ್ರಹ್ಮಾವರ್ತಮನುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ಸನ್ತರ್ಪಯೇತ್ಪಿತೃದೇವತಾಃ ॥೬೬॥

ಉಪೋಷ್ಯ ರಜನೀಮೇಕಾಂ ಪಿಣ್ಡಂ ದತ್ವಾ ಯಥಾವಿಧಿ ।
ಕನ್ಯಾಗತೇ ಯಥಾದಿತ್ಯೇ ಅಕ್ಷಯಂ ಸಂಚಿತಂ ಭವೇತ್ ॥೬೭॥

ತತೋ ಗಚ್ಛೇತ ರಾಜೇನ್ದ್ರ ಕಪಿಲಾತೀರ್ಥಮನುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ಕಪಿಲಾಂ ಯಃ ಪ್ರಯಚ್ಛತಿ ॥೬೮॥

ಸಂಪೂರ್ಣಾಂ ಪೃಥಿವೀಂ ದತ್ವಾ ಯತ್ಫಲಂ ತದವಾಪ್ನುಯಾತ್ ।
ನರ್ಮದೇಶ್ವರಂ ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ॥೬೯॥

ತತ್ರ ಸ್ನಾತ್ವಾ ನರೋ ರಾಜನ್ನಶ್ವಮೇಧಫಲಂ ಲಭೇತ್ ।
ತತ್ರ ಸರ್ವಗತೋ ರಾಜಾ ಪೃಥಿವ್ಯಾಮಭಿಜಾಯತೇ ॥೭೦॥

---

೬೬–೬೭. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ ! ಮುಂದೆ ಶ್ರೇಷ್ಠವಾದ ಬ್ರಹ್ಮಾವರ್ತತೀರ್ಥವನ ಹೊಂದಿ ಅಲ್ಲಿ ಸ್ನಾನಮಾಡಿ ಪಿತೃದೇವತೆಗಳನ್ನು ತರ್ಪಿಸಬೇಕು. ಅದರಲ್ಲಿಯೂ ಸೂರ್ಯನು ಕನ್ಯಾ ರಾಶಿಯಲ್ಲಿರುವಾಗ ನಿಯಮಪರನಾಗಿ ಒಂದುರಾತ್ರಿ ಉಪವಾಸಮಾಡಿ ಪಿತೃಗಳಿಗೆ ಕೊಟ್ಟ ಪಿಂಡವು ಅನಂತಕಾಲ ತೃಪ್ತಿಯನ್ನುಂಟು ಮಾಡುವುದು.

೬೮–೬೯. ಮುಂದೆ ಕಪಿಲಾತೀರ್ಥವನ್ನು ಹೊಂದಿ ಸ್ನಾನವನ್ನು ಮಾಡಿ ಕಪಿಲಾಗೋವನ್ನು ದಾನಮಾಡುವವನು ಭೂಮಿಯನ್ನೆಲ್ಲಾ ದಾನ ಮಾಡಿದ ಫಲವನ್ನು ಹೊಂದುವನು. ಮುಂದೆ ನರ್ಮದೇಶ್ವರ ತೀರ್ಥವು ಇರುವುದು. ಅಂತಹ ತೀರ್ಥವು ಮುಂದೆ ಹುಟ್ಟುವುದೂ ಇಲ್ಲ, ಹಿಂದೆ ಹುಟ್ಟಿಯೂ ಇಲ್ಲ.

೭೦–೭೧. ಅಲ್ಲಿ ಸ್ನಾನಮಾಡುವವನು ಅಶ್ವಮೇಧಯಾಗಫಲವನ್ನು ಹೊಂದುವನು. ಆ ತೀರ್ಥದಲ್ಲಿ ಸರ್ವತ್ರ ಸ್ನಾನಾದಿಗಳನ್ನಾಚರಿಸುವವನು ಭೂಮಿಯಲ್ಲಿ ರಾಜನಾಗಿ ಹುಟ್ಟುವನು; ಮತ್ತು ಸರ್ವಲಕ್ಷಣಗಳಿಂದ

**ಸರ್ವಲಕ್ಷಣಸಂಪೂರ್ಣಃ ಸರ್ವವ್ಯಾಧಿವಿವರ್ಜಿತಃ ।**
**ನರ್ಮದೀಯೋತ್ತರೇ ಕೂಲೇ ತೀರ್ಥಂ ಪರಮಶೋಭನಮ್॥೭೧॥**

**ಆದಿತ್ಯಾಯತನಂ ರಮ್ಯಮೀಶ್ವರೇಣ ತು ಭಾವಿತಮ್ ।**
**ತತ್ರ ಸ್ನಾತ್ವಾ ತು ರಾಜೇನ್ದ್ರ ದಾನಂ ದತ್ವಾ ಚ ಶಕ್ತಿತಃ ॥೭೨॥**

**ತಸ್ಯ ತೀರ್ಥಪ್ರಭಾವೇಣ ದತ್ತಂ ಭವತಿ ಚಾಕ್ಷಯಮ್ ।**
**ದರಿದ್ರಾ ವ್ಯಾಧಿತಾ ಯೇ ತು ಯೇ ಚ ದುಷ್ಕೃತಕರ್ಮಣಃ।**
**ಮುಚ್ಯನ್ತೇ ಸರ್ವಪಾಪೇಭ್ಯಃ ಸೂರ್ಯಲೋಕಂ ಪ್ರಯಾನ್ತಿ ಚ ॥**

**ಮಾಘಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷಸ್ಯ ಸಪ್ತಮೀಮ್ ।**
**ವಸೇದಾಯತನೇ ಯಸ್ತು ನಿರನ್ನೋ ಯೋ ಜಿತೇನ್ದ್ರಿಯಃ ॥೭೪॥**

**ನ ಜಾಯತೇ ವ್ಯಾಧಿತಶ್ಚ ಕಾಲೇಽನ್ಧೋ ಬಧಿರಸ್ತಥಾ ।**
**ಸುಭಗೋ ರೂಪಸಂಪನ್ನಃ ಸ್ತ್ರೀಣಾಂ ಭವತಿ ವಲ್ಲಭಃ ॥೭೫॥**

---

ಕೂಡಿ ಸರ್ವರೋಗಶೂನ್ಯನಾಗಿ ಬಾಳುವನು. ನರ್ಮದಾನದಿಯ ಉತ್ತರ ದಡದಲ್ಲಿ ಶ್ರೇಷ್ಠವಾದ ಆದಿತ್ಯಾಯತನವೆಂಬ ತೀರ್ಥವು ಇರುವುದು. ಅದು ಈಶ್ವರನಿಂದ ಗೌರವಿಸಲ್ಪಟ್ಟಿರುವುದು. ಎಲೈ ಯುಧಿಷ್ಠಿರನೇ! ಅಲ್ಲಿ ಸ್ನಾನಮಾಡಿ ಶಕ್ತ್ಯಾನುಸಾರ ದಕ್ಷಿಣೆ ಕೊಡಬೇಕು. ಹೀಗೆ ಮಾಡಿದ ದಾನವು ಆ ತೀರ್ಥದ ಮಹಿಮೆಯಿಂದ ಅಪರಿಮಿತವಾಗುವುದು. ದರಿದ್ರರೇ ಆಗಲೀ, ವ್ಯಾಧಿಗ್ರಸ್ತರೇ ಆಗಲೀ, ದುಷ್ಕೃತನಿರತರೇ ಆಗಲೀ, ಎಲ್ಲರೂ ಸರ್ವಪಾಪವನ್ನೂ ಕಳೆದು ಸೂರ್ಯಲೋಕವನ್ನು ಸೇರುವರು.

೭೪-೭೫. ಮಾಘ ಶುಕ್ಲ ಸಪ್ತಮಿಯ ದಿವಸ ಆ ಕ್ಷೇತ್ರದಲ್ಲಿ ಎಲ್ಲಿಯಾದರೂ ಆಹಾರತ್ಯಾಗಮಾಡಿ ಇಂದ್ರಿಯವ್ಯಾಪಾರಗಳನ್ನು ತಡೆದು ವಾಸಮಾಡಿದರೆ, ಯಾವಕಾಲದಲ್ಲೂ ವ್ಯಾಧಿಯನ್ನೇ ನೋಡಲಾರನು. ವಿಶೇಷತಃ ಅವನು ಕುರುಡನೂ, ಕಿವುಡನೂ, ಎಂದಿಗೂ ಆಗುವುದೇ ಇಲ್ಲವು. ಐಶ್ವರ್ಯಶಾಲಿಯಾಗಿ ಸೌಂದರ್ಯದಿಂದ ಕೂಡಿ ಸ್ತ್ರೀಯರ ಪ್ರೀತಿಯನ್ನು ಗಳಿಸುವನು.

ಇದಂ ತೀರ್ಥಂ ಮಹಾಪುಣ್ಯಂ ಮಾರ್ಕಂಡೇಯೇನ ಭಾಷಿತಮ್ ।
ಯೇ ನ ಯಾನ್ತಿ ಚ ರಾಜೇನ್ದ್ರ ವಞ್ಚಿತಾಸ್ತೇ ನ ಸಂಶಯಃ ॥

ಮಾಸೇಶ್ವರಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸ್ವರ್ಗಲೋಕಮವಾಪ್ನುಯಾತ್ ॥೭೭॥

ಮೋದತೇ ಸ್ವರ್ಗಲೋಕಸ್ಥೋ ಯಾವದಿನ್ದ್ರಾಶ್ಚತುರ್ದಶ ।
ತತಃ ಸಮೀಪತಃ ಸ್ಥಿತ್ವಾ ನಾಗೇಶ್ವರಂ ತಪೋವನಮ್ ॥೭೮॥

ತತ್ರ ಸ್ನಾತ್ವಾ ತು ರಾಜೇನ್ದ್ರ ಶುಚಿರ್ಭೂತ್ವಾ ಸಮಾಹಿತಃ ।
ಬಹುಭಿರ್ನಾಗಕನ್ಯಾಭಿಃ ಕ್ರೀಡತೇ ಕಾಲಮಕ್ಷಯಮ್ ॥೭೯॥

ಕುಬೇರಭವನಂ ಗಚ್ಛೇತ್ಕುಬೇರೋ ಯತ್ರ ಸಂಸ್ಥಿತಃ ।
ಕಾಲೇಶ್ವರಂ ಪರಂ ತೀರ್ಥಂ ಕುಬೇರೋ ಯತ್ರ ತೋಷಿತಃ ।
ಯತ್ರ ಸ್ನಾತ್ವಾ ತು ರಾಜೇನ್ದ್ರ ಸರ್ವಸಂಪದಮಾಪ್ನುಯಾತ್ ॥

---

೭೬. ಮಾರ್ಕಂಡೇಯ ಮುನಿಯು ಈ ಆದಿತ್ಯಾಯತನತೀರ್ಥವನ್ನು ಮಹಾಪುಣ್ಯವೆಂಬುದಾಗಿ ಹೇಳಿರುವನು. ಈ ತೀರ್ಥಯಾತ್ರೆ ಮಾಡದವರು ಸಂಶಯವಿಲ್ಲದೇ ಮೋಸಹೋದವರೆಂದೇ ತಿಳಿಯಬೇಕು.

೭೭. ಅನಂತರ ಮಾಸೇಶ್ವರ ಕ್ಷೇತ್ರವನ್ನು ಹೊಂದಿ ಅಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ನರನು ಸ್ವರ್ಗವಾಸವನ್ನು ಅನುಭವಿಸುವನು.

೭೮–೮೦. ಅಲ್ಲದೇ ಹದಿನಾಲ್ಕು ಇಂದ್ರರು ರಾಜ್ಯಭಾರಮಾಡುವವರೆವಿಗೂ ಇವನು ಸುಖಪಡುವನು. ತರುವಾಯ ಸಮೀಪದಲ್ಲಿ ನಾಗೇಶ್ವರ ತಪೋವನವನ್ನು ಹೊಂದಬೇಕು. ಎಲೈ ರಾಜೇಂದ್ರನೇ ! ಅಲ್ಲಿ ಭಕ್ತಿ ಭಾವದಿಂದ ಸ್ನಾನಮಾಡಿ ಶುಚಿಯಾಗಿರುವವನು ಅನೇಕ ನಾಗಕನ್ನಿಕೆಯರೊಂದಿಗೆ ಅನಂತಕಾಲ ಭೋಗಪಡುವನು. ಮುಂದೆ ಕುಬೇರನ ನಿವಾಸವಾದ ಕುಬೇರ ಭವನವೆಂಬ ಕ್ಷೇತ್ರವನ್ನು ಸೇರಬೇಕು. ಅಲ್ಲಿ ಕಾಲೇಶ್ವರವೆಂಬ ಮತ್ತೊಂದು ತೀರ್ಥವಿರುವುದು. ಅಲ್ಲಿ ಕುಬೇರನು ಇಷ್ಟಾರ್ಥವನ್ನು ಹೊಂದಿ ಸಂತೋಷಗೊಂಡನು. ಆ ತೀರ್ಥದಲ್ಲಿ ಸ್ನಾನ ಮಾಡಿದವನು ಸರ್ವಸಂಪತ್ತನ್ನೂ ಅನುಭವಿಸುವನು.

ತತಃ ಪಶ್ಚಿಮತೋ ಗಚ್ಛೇನ್ಮರುತಾಲಯಮುತ್ತಮಮ್।
ತತ್ರ ಸ್ನಾತ್ವಾ ತು ರಾಜೇನ್ದ್ರ ಶುಚಿರ್ಭೂತ್ವಾ ಸಮಾಹಿತಃ ॥೮೧॥
ಕಾಞ್ಚನಂ ತು ತತೋ ದದ್ಯಾದನ್ನಂ ಶಕ್ತ್ಯಾತು ಬುದ್ಧಿಮಾನ್।
ಪುಷ್ಪಕೇಣ ವಿಮಾನೇನ ವಾಯುಲೋಕಂ ಸ ಗಚ್ಛತಿ ॥೮೨॥
ಯಮತೀರ್ಥಂ ತತೋ ಗಚ್ಛೇನ್ಮಾಘಮಾಸೇ ಯುಧಿಷ್ಠಿರ।
ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾನಂ ತತ್ರ ಸಮಾಚರೇತ್ ॥೮೩॥
ನಕ್ತಂ ಭೋಜ್ಯಂ ತತಃ ಕುರ್ಯಾನ್ನಗಚ್ಛೇದ್ಯೋನಿಸಙ್ಕಟಮ್।
ಅಹಲ್ಯಾತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ॥
ಸ್ನಾತಮಾತ್ರೋ ನರಸ್ತತ್ರ ಅಪ್ಸರೈಃ ಸಹ ಮೋದತೇ।
ಪಾರಮೇಶ್ವರೇ ತಪಸ್ತಪ್ತ್ವಾ ಅಹಲ್ಯಾ ಮುಕ್ತಿಮಾಗಮತ್ ॥೮೫॥
ಚೈತ್ರಮಾಸೇ ತು ಸಂಪ್ರಾಪ್ತೇ ಶುಕ್ಲಪಕ್ಷೇ ತ್ರಯೋದಶೀ।
ಕಾಮದೇವದಿನೇ ತಸ್ಮಿನ್ನಹಲ್ಯಾಂ ತು ಪ್ರಪೂಜಯೇತ್ ॥೮೬॥

---

೮೧–೮೨. ಅಲ್ಲಿಂದ ಮುಂದೆ ಪಶ್ಚಿಮದಿಕ್ಕಿಗೆ ಪ್ರಯಾಣ ಮಾಡಿ ಮರುತಾಲಯಕ್ಷೇತ್ರವನ್ನು ಹೊಂದಬೇಕು. ಅಲ್ಲಿ ಭಕ್ತಿಯಿಂದೊಡಗೂಡಿ ಶುಚಿಯಾಗಿ ಸ್ನಾನಮಾಡಿ ಅಲ್ಲಿಯೇ ಶಕ್ತ್ಯಾನುಸಾರವಾಗಿ ಸುವರ್ಣದಾನ ವನ್ನೂ ಅನ್ನದಾನವನ್ನೂ ಮಾಡುವ ಪಂಡಿತನು ಪುಷ್ಪಕವಿಮಾನದ ಸಹಾ ಯದಿಂದ ವಾಯುಲೋಕವನ್ನು ಸೇರುವನು.

೮೩–೮೫. ಎಲೈ ಯುಧಿಷ್ಠಿರನೇ! ಮುಂದೆ ಯಮತೀರ್ಥವು ಸಿಗುವುದು. ಅದರಲ್ಲಿ ಮಾಘ ಕೃಷ್ಣ ಚತುರ್ದಶಿಯಲ್ಲಿ ಸ್ನಾನಮಾಡಬೇಕು ಮತ್ತು ರಾತ್ರಿಯಲ್ಲಿ ಮಾತ್ರ ಭೋಜನಮಾಡಬೇಕು. ಹೀಗೆ ಮಾಡು ವವನು ಗರ್ಭವಾಸವನ್ನು ಅರಿಯನು. ಅಲ್ಲಿಂದ ಮುಂದೆ ಅಹಲ್ಯಾತೀರ್ಥಕ್ಕೆ ಹೋಗಿ ಸ್ನಾನಮಾಡಬೇಕು. ಇಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ನರನು ಅಪ್ಸರಸ್ತ್ರೀಯರೊಡನೆ ಮೆರೆಯುವನು. ಪಾರಮೇಶ್ವರ ಕ್ಷೇತ್ರದಲ್ಲಿ ಅಹಲ್ಯೆಯು ತಪಸ್ಸನ್ನು ಮಾಡಿ ಮುಕ್ತಳಾದಳು.

೮೬–೮೭. ಚೈತ್ರ ಶುಕ್ಲ ತ್ರಯೋದಶೀ ತಿಥಿಯು ಕಾಮದಿನವೆಂದು ಪ್ರಸಿದ್ಧಿಯಿರುವುದು. ಈ ದಿವಸದಲ್ಲಿ ಆ ಪಾರಮೇಶ್ವರ ತೀರ್ಥದಲ್ಲಿ

ಯತ್ರ ತತ್ರ ಸಮುತ್ಪನ್ನೋ ನರಸ್ತತ್ರ ಪ್ರಿಯೋ ಭವೇತ್ ।
ಸ್ತ್ರೀವಲ್ಲಭೋ ಭವೇಚ್ಛ್ರೀಮಾನ್ಕಾಮದೇವ ಇವಾಪರಃ ॥೮೭॥
ಅಯೋಧ್ಯಾಂ ತು ಸಮಾಸಾದ್ಯ ತೀರ್ಥಂ ಶಕ್ರಸ್ಯ ವಿಶ್ರುತಮ್ ।
ಸ್ನಾತಮಾತ್ರೋ ನರಸ್ತತ್ರ ಗೋಸಹಸ್ರಫಲಂ ಲಭೇತ್ ॥೮೮॥
ಸೋಮತೀರ್ಥಂ ತತೋ ಗಚ್ಛೇತ್ಸ್ನಾನಮಾತ್ರಂ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸರ್ವಪಾಪೈಃ ಪ್ರಮುಚ್ಯತೇ ॥೮೯॥
ಸೋಮಗ್ರಹೇ ತು ರಾಜೇನ್ದ್ರ ಪಾಪಕ್ಷಯಕರಂ ಭವೇತ್ ।
ತ್ರೈಲೋಕ್ಯವಿಶ್ರುತಂ ರಾಜನ್ಸೋಮತೀರ್ಥಂ ಮಹಾಫಲಮ್ ॥೯೦॥
ಯಸ್ತು ಚಾನ್ದ್ರಾಯಣಂ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ಸ ಗಚ್ಛತಿ ॥೯೧॥
ಅಗ್ನಿಪ್ರವೇಶೇ ತು ಜಲೇಽಪ್ಯಥವಾಪಿ ಅನಾಶನೇ ।
ಸೋಮತೀರ್ಥೇ ಮೃತೋ ಯಸ್ತು ನಾಸೌ ಮರ್ತ್ಯೇಽಭಿಜಾಯತೇ ॥

---

ಅಹಲ್ಯೆಯನ್ನು ಪೂಜಿಸಬೇಕು. ಹೀಗೆ ಪೂಜಿಸುವವನು ಎಲ್ಲಿ ಹುಟ್ಟಿದ್ದರೂ ಸರ್ವರಪ್ರೀತಿಗೂ ಪಾತ್ರನಾಗುವನು; ಮತ್ತು ಬೇರೊಬ್ಬ ಮನ್ಮಥನಂತೆ ಶೋಭಿಸುತ್ತಾ ಸ್ತ್ರೀಯರಿಗೆ ಅತಿಪ್ರಿಯನಾಗುವನು.

೮೮–೯೦. ಅಯೋಧ್ಯೆಗೆ ಹೋಗಿ ಶಕ್ರತೀರ್ಥದಲ್ಲಿ ಸ್ನಾನಮಾಡುವವನು ಗೋಸಹಸ್ರದಾನದ ಫಲವನ್ನು ಹೊಂದುವನು. ಅನಂತರ ಸೋಮತೀರ್ಥದಲ್ಲಿ ಸ್ನಾನಮಾತ್ರದಿಂದಲೇ ಮಾನವನು ಸರ್ವಪಾಪಗಳಿಂದಲೂ ಮುಕ್ತನಾಗುವನು. ಚಂದ್ರಗ್ರಹಣದ ಸಮಯದಲ್ಲಿ ಸೋಮತೀರ್ಥವು ಸರ್ವಪಾಪವನ್ನೂ ಪರಿಹರಿಸಿ ಬಹುಫಲಗಳನ್ನು ಕೊಡುವುದಾಗಿ ಮೂರುಲೋಕಗಳಲ್ಲಿಯೂ ಪ್ರಸಿದ್ಧಿ ಇರುವುದು.

೯೧–೯೨. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಈ ಸೋಮತೀರ್ಥದಲ್ಲಿ ಚಾಂದ್ರಾಯಣವ್ರತವನ್ನಾಚರಿಸುವವನು ಸರ್ವಪಾಪಗಳನ್ನೂ ನೀಗಿ ಸೋಮಲೋಕಕ್ಕೆ ಹೋಗುವನು. ಅಗ್ನಿಯನ್ನು ಪ್ರವೇಶಿಸಿಯಾಗಲೀ, ಜಲದಲ್ಲಿ ಬಿದ್ದಾಗಲೀ, ಆಹಾರ ಬಿಟ್ಟಾಗಲೀ, ಸೋಮತೀರ್ಥದಲ್ಲಿ ಮೃತಿಯನ್ನು ಹೊಂದುವವನು ಮರ್ತ್ಯಲೋಕದಲ್ಲಿ ತಿರುಗಿ ಹುಟ್ಟುವುದೇ ಇಲ್ಲವು.

ಸ್ತಂಭತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸ್ನಾತಮಾತ್ರೋ ನರಸ್ತತ್ರ ಸೋಮಲೋಕೇ ಮಹೀಯತೇ ॥೯೩॥

ತತೋ ಗಚ್ಛೇತ ರಾಜೇನ್ದ್ರ ವಿಷ್ಣುತೀರ್ಥಮನುತ್ತಮಮ್ ।
ಯೋಧನೀಪುರವಿಖ್ಯಾತಂ ವಿಷ್ಣುತೀರ್ಥಮನುತ್ತಮಮ್ ॥೯೩॥

ಅಸುರಾ ಯೋಧಿತಾಸ್ತತ್ರ ವಾಸುದೇವೇನ ಕೋಟಿಶಃ ।
ತತ್ರ ತೀರ್ಥಂ ಸಮುತ್ಪನ್ನಂ ವಿಷ್ಣುಃ ಪ್ರೀತೋ ಭವೇದಿಹ ॥೯೫॥

ಅಹೋರಾತ್ರೋಪವಾಸೇನ ಬ್ರಹ್ಮಹತ್ಯಾಂ ವ್ಯಪೋಹತಿ ।
ತತೋ ಗಚ್ಛೇತ ರಾಜೇನ್ದ್ರ ತಾಪಸೇಶ್ವರಮುತ್ತಮಮ್ ॥೯೬॥

ಅಮೋಹಕಮಿತಿ ಖ್ಯಾತಂ ಪಿತೄಂಸ್ತತ್ರ ತು ತರ್ಪಯೇತ್ ।
ಪೌರ್ಣಮಾಸ್ಯಾಮಮಾವಾಸ್ಯಾಶ್ರಾದ್ಧಂ ಕುರ್ಯಾದ್ಯಥಾವಿಧಿ ॥

---

೯೩–೯೪. ಮುಂದೆ ಸ್ತಂಭತೀರ್ಥದಲ್ಲಿ ಸ್ನಾನಮಾಡಬೇಕು. ಅಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಸೋಮಲೋಕದಲ್ಲಿ ಪೂಜಾರ್ಹನಾಗುವನು. ಎಲೈ ರಾಜಶ್ರೇಷ್ಠನೇ! ಮುಂದೆ ಯೋಧನೀಪಟ್ಟಣದಲ್ಲಿ ಪ್ರಸಿದ್ಧವಾದ ಸರ್ವಶ್ರೇಷ್ಠವಾದ ವಿಷ್ಣುತೀರ್ಥವನ್ನು ಹೊಂದಬೇಕು.

೯೫–೯೬. ಇಲ್ಲಿ ವಿಷ್ಣುವು ಕೋಟಿಗಟ್ಟಲೆ ಸೇರಿದ ಅಸುರರೊಂದಿಗೆ ಯುದ್ಧಮಾಡಿದನು. ಆದುದರಿಂದ ಇಲ್ಲಿ ವಿಷ್ಣುತೀರ್ಥವು ಉತ್ಪನ್ನವಾಯಿತು. ಇಲ್ಲಿ ಸ್ನಾನಮಾಡುವುದರಿಂದ ವಿಷ್ಣುವು ತುಷ್ಟನಾಗುವನು. ಇಲ್ಲಿ ಒಂದು ಹಗಲೂ ಮತ್ತು ಒಂದು ರಾತ್ರಿಯೂ ಉಪವಾಸಮಾಡುವುದರಿಂದ ಬ್ರಹ್ಮಹತ್ಯಾದೋಷವು ಕೂಡ ನಿವೃತ್ತಿಯಾಗುವುದು. ಇಲ್ಲಿಂದ ಮುಂದೆ ಶ್ರೇಷ್ಠವಾದ ತಾಪಸೇಶ್ವರಕ್ಷೇತ್ರವನ್ನು ಹೊಂದಬೇಕು.

೯೭–೯೮. ಈ ಕ್ಷೇತ್ರಕ್ಕೆ ಅಮೋಹಕವೆಂದು ಪ್ರಸಿದ್ಧಿಯಿರುವುದು. ಇಲ್ಲಿ ಪಿತೃಗಳಿಗೆ ತರ್ಪಣಾದಿಗಳನ್ನಾಚರಿಸಬೇಕು ; ಮತ್ತು ಹುಣ್ಣಿಮೆಯಲ್ಲಿಯೂ, ಅಮಾವಾಸ್ಯೆ ತಿಥಿಯಲ್ಲಿಯೂ, ಶಾಸ್ತ್ರಾನುಸಾರವಾಗಿ

ತತ್ರ ಸ್ನಾತ್ವಾ ನರೋ ರಾಜನ್ ಪಿತೃಪಿಣ್ಡಂ ತು ದಾಪಯೇತ್।
ಗಜರೂಪಾಃ ಶಿಲಾಸ್ತತ್ರ ತೋಯಮಧ್ಯೇ ಪ್ರತಿಷ್ಠಿತಾಃ ॥೯೮॥

ತಸ್ಮಿಂಸ್ತು ದಾಪಯೇತ್ಪಿಣ್ಡಂ ವೈಶಾಖೇ ತು ವಿಶೇಷತಃ।
ತೃಪ್ಯನ್ತಿ ಪಿತರಸ್ತಾವದ್ಯಾವತ್ತಿಷ್ಠತಿ ಮೇದಿನೀ ॥೯೯॥

ತತೋ ಗಚ್ಛೇತ ರಾಜೇನ್ದ್ರ ಸಿದ್ಧೇಶ್ವರಮನುತ್ತಮಮ್।
ತತ್ರ ಸ್ನಾತ್ವಾ ತು ರಾಜೇನ್ದ್ರ ಗಣಪತ್ಯನ್ತಿಕಂ ವ್ರಜೇತ್ ॥೧೦೦॥

ತತೋ ಗಚ್ಛೇತ ರಾಜೇನ್ದ್ರ ಲಿಙ್ಗೋ ಯತ್ರ ಜನಾರ್ದನಃ।
ತತ್ರ ಸ್ನಾತ್ವಾ ತು ರಾಜೇನ್ದ್ರ ವಿಷ್ಣುಲೋಕೇ ಮಹೀಯತೇ॥೧೦೧॥

ನರ್ಮದಾದಕ್ಷಿಣೇ ಕೂಲೇ ತೀರ್ಥಂ ಪರಮಶೋಭನಮ್।
ಕಾಮದೇವಃ ಸ್ವಯಂ ತತ್ರ ತಪಸ್ತಪ್ಯತ್ಯಸೌ ಮಹಾನ್ ॥೧೦೨॥

---

ಶ್ರಾದ್ಧಮಾಡಬೇಕು. ಇಲ್ಲಿ ಸ್ನಾನಮಾಡಿ ಜಲಮಧ್ಯದಲ್ಲಿ ಆನೆಯಂತಿರುವ ಬಂಡೆಗಳ ಮೇಲೆ ಪಿಂಡವನ್ನು ಕೊಡಬೇಕು.

೯೯–೧೦೦. ವೈಶಾಖಮಾಸದಲ್ಲಿ ಪಿತೃಗಳಿಗೆ ಪಿಂಡದಾನಮಾಡಿದರೆ ಭೂಮಿ ಇರುವವರೆಗೂ ಪಿತೃಗಳು ವಿಶೇಷವಾಗಿ ತೃಪ್ತರಾಗುವರು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಮುಂದೆ ಅತ್ಯುತ್ತಮವಾದ ಸಿದ್ಧೇಶ್ವರಕ್ಷೇತ್ರಕ್ಕೆ ಹೋಗಿ ಅಲ್ಲಿ ಸ್ನಾನಮಾಡುವವನು ಗಣಪತಿಯ ಸನ್ನಿಧಿಯನ್ನು ಸೇರುವನು.

೧೦೧–೧೦೩. ಅಲ್ಲಿಂದ ಮುಂದೆ ವಿಷ್ಣುವು ಲಿಂಗರೂಪವನ್ನು ಧಾರಣೆ ಮಾಡಿ ವಾಸಿಸುವ ಜನಾರ್ದನಕ್ಷೇತ್ರವು ಸಿಗುವುದು. ಅಲ್ಲಿ ಸ್ನಾನ ಮಾಡುವವನು ವಿಷ್ಣುಲೋಕದಲ್ಲಿ ಪೂಜೆಗೊಳ್ಳುವನು. ನರ್ಮದಾನದಿಯ ದಕ್ಷಿಣದಡದಲ್ಲಿ ಶ್ರೇಷ್ಠವಾದ ತೀರ್ಥ ಒಂದಿರುವುದು. ಅಲ್ಲಿ ಮನ್ಮಥನು ಘೋರವಾಗಿ ತಪಸ್ಸನ್ನು ಮಾಡಿದನು. ಸಮಾಧ್ಯವಸ್ಥೆಯಲ್ಲಿರುವ

ದಿವ್ಯಂ ವರ್ಷಸಹಸ್ರಂ ತು ಶಂಕರಂ ಪರ್ಯುಪಾಸತೇ ।
ಸಮಾಧಿಪರ್ವದಗ್ಧಸ್ತು ಶಂಕರೇಣ ಮಹಾತ್ಮನಾ ॥೧೦೩॥

ಶ್ವೇತಪರ್ವೋಪಮಶ್ಚೈವ ಹುತಾಶಃ ಶುಕ್ಲಪರ್ವಣಿ ।
ಏತೇ ದಗ್ಧಾಸ್ತು ತೇ ಸರ್ವೇ ಕುಸುಮೇಶ್ವರಸಂಸ್ಥಿತಾಃ ॥೧೦೪॥

ದಿವ್ಯವರ್ಷಸಹಸ್ರೇಣ ತುಷ್ಟಸ್ತೇಷಾಂ ಮಹೇಶ್ವರಃ
ಉಮಯಾ ಸಹಿತೋ ರುದ್ರಸ್ತೇಷಾಂ ತುಷ್ಟೋ ವರಪ್ರದಃ॥೧೦೫॥

ವಿಮೋಕ್ಷಯಿತ್ವಾ ತಾನ್ಸರ್ವಾನ್ನರ್ಮದಾತಟಮಾಶ್ರಿತಾನ್ ।
ತಸ್ಯ ತೀರ್ಥಪ್ರಭಾವೇಣ ಪುನರ್ದೇವತ್ವಮಾಗತಃ ॥೧೦೬॥

ತ್ವತ್ಪ್ರಸಾದಾನ್ಮಹಾದೇವ ತೀರ್ಥಂ ಚ ಭವತೂತ್ತಮಮ್ ।
ಅರ್ಧಯೋಜನವಿಸ್ತೀರ್ಣಂ ತೀರ್ಥಂ ದಿಕ್ಷು ಸಮನ್ತತಃ ॥೧೦೭॥

---

ಮಹಾತ್ಮನಾದ ಶಂಕರನ ಹಣೆಯ ಕಣ್ಣಿನಿಂದ ಹೊರಟ ಅಗ್ನಿಯಿಂದ ದಗ್ಧನಾಗಿ ಒಂದುಸಾವಿರ ವರ್ಷಗಳ ಕಾಲ ಈಶ್ವರನನ್ನು ಉಪಾಸನೆ ಮಾಡಿದನು.

೧೦೪. ಈಶ್ವರನು ಮನ್ಮಥನನ್ನು ಸುಡಲು ಆಗ ಹುಟ್ಟಿದ ಬೆಂಕಿಯು ಹಿಮವತ್ಪರ್ವತದಲ್ಲಿ ಮತ್ತೊಂದು ಹಿಮವಂತನಂತೆಯೇ ದೊಡ್ಡದಾಗಿ ಕಾಣುವುದು. ಆಗ ಸುಟ್ಟವುಗಳೆಲ್ಲವೂ ಕುಸುಮೇಶ್ವರನಲ್ಲಿ ಐಕ್ಯ ವಾಗಿವೆ.

೧೦೫–೧೦೬ ಸಾವಿರ ದಿವ್ಯವರ್ಷಗಳು ಕಳೆದನಂತರ ಪಾರ್ವತೀ ಸಹಿತನಾದ ಈಶ್ವರನು ಇವರ ತಪಸ್ಸಿಗೆ ಮೆಚ್ಚಿ ವರಪ್ರದಾನಮಾಡಿದನು. ಅನುಗ್ರಹಕ್ಕೆ ಪಾತ್ರರಾದ ಇವರೆಲ್ಲರೂ ನರ್ಮದಾನದಿಯ ತಟವನ್ನಾಶ್ರಯಿಸಿ ದುಃಖದಿಂದ ಮುಕ್ತರಾದರು. ಮನ್ಮಥನು ಈ ತೀರ್ಥದ ಮಹಿಮೆಯಿಂದಲೇ ಅಮರನಾದನು.

೧೦೭–೧೦೮. ಪ್ರಸಾದಪಾತ್ರನಾದ ಮನ್ಮಥನು ಈಶ್ವರನನ್ನು ಕುರಿತು 'ಎಲೈ ಮಹಾದೇವನೇ! ನಿನ್ನ ಅನುಗ್ರಹದಿಂದ ಈ ತೀರ್ಥವು ಎಲ್ಲಾ ದಿಕ್ಕುಗಳಲ್ಲಿಯೂ ಅರ್ಧಯೋಜನ ಪ್ರದೇಶದಲ್ಲಿ ಉತ್ತಮ

ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಉಪವಾಸಪರಾಯಣಃ ।
ಕುಸುಮಾಯುಧರೂಪೇಣ ರುದ್ರಲೋಕೇ ಮಹೀಯತೇ ॥೧೦೮॥

ವೈಶ್ವಾನರೇ ಯಮೋನ್ವೈವ ಕಾಮದೇವೇನ ವಾಯುನೇ ।
ತಪಸ್ತಪ್ತಂ ತು ರಾಜೇನ್ದ್ರ ತತ್ರೈವ ಚ ಪುರಾಗತೈಃ ॥೧೦೯॥

ಅನ್ಧೋನಸ್ಯ ಸಮೀಪೇ ತು ನಾತಿದೂರೇ ತು ತಸ್ಯ ವೈ ।
ಸ್ನಾನಂ ದಾನಂ ಚ ತತ್ರೈವ ಭೋಜನಂ ಪಿಣ್ಡಪಾತನಮ್ ॥೧೧೦॥

ಅಗ್ನಿವೇಶೇ ಜಲೇ ವಾಪಿ ಅಥವಾಪಿ ಅನಾಶನೇ ।
ಅನಿವರ್ತಿಕಾ ಗತಿಸ್ತಸ್ಯ ಮೃತಸ್ಯಾಪ್ಯರ್ಧಯೋಜನೇ ॥೧೧೧॥

ತ್ರೈಯಮ್ಬಕೇನ ತೋಯೇನ ಸ್ನಾಪಯೇನ್ನರಪುಙ್ಗವಃ ।
ಅನ್ಧೋನಮೂಲೇ ದತ್ವಾ ತು ಪಿಣ್ಡಂ ಚೈವ ಯಥಾವಿಧಿ ।
ಪಿತರಸ್ತಸ್ಯ ತೃಪ್ಯನ್ತಿ ಯಾವಚ್ಚನ್ದ್ರದಿವಾಕರೌ ॥೧೧೨॥

---

ತೀರ್ಥವಾಗಲೀ' ಎಂದು ಪ್ರಾರ್ಥಿಸಿಕೊಂಡನು. ಆ ತೀರ್ಥದಲ್ಲಿ ಉಪವಾಸಪರನಾಗಿ ಸ್ನಾನಮಾಡುವವನು ಮನ್ಮಥನಂತೆ ದಿವ್ಯದೇಹವನ್ನು ಧರಿಸಿ ರುದ್ರಲೋಕದಲ್ಲಿ ಪೂಜ್ಯನಾಗುವನು.

೧೦೯. ವೈಶ್ವಾನರತೀರ್ಥದಲ್ಲಿ ಯಮನೂ, ವಾಯುತೀರ್ಥದಲ್ಲಿ ಕಾಮದೇವನೂ ಹಿಂದೆ ಇಲ್ಲಿ ತಪಸ್ಸು ಮಾಡಿದರು.

೧೧೦. ಅಲ್ಲಿ ಅಂಧೋನವೆಂಬ ಸ್ಥಳವಿದೆ. ಅದರ ಹತ್ತಿರ ಸ್ನಾನ, ದಾನ, ಸಮಾರಾಧನ, ಪಿಂಡದಾನ, ಇವುಗಳು ಉತ್ತಮವಾದುವು.

೧೧೧. ಈ ಅಂಧೋನದಲ್ಲಿ ಅಗ್ನಿಪ್ರವೇಶ, ಜಲಪ್ರವೇಶಮಾಡಿದರಾಗಲೀ, ಅನಶನಗಳಿಂದ ಪ್ರಾಣಬಿಟ್ಟರಾಗಲಿ, ಅಥವಾ ಅದರ ಸುತ್ತಲೂ ಅರ್ಧಯೋಜನದಲ್ಲಿ ದೇಹತ್ಯಾಗ ಮಾಡಿದರಾಗಲಿ, ಪುನರಾವೃತ್ತಿ ಇಲ್ಲದ ಗತಿಯು ಬರುವುದು.

೧೧೨. ತ್ರ್ಯಂಬಕತೀರ್ಥದಲ್ಲಿ ಸ್ನಾನಮಾಡಿ ಅಂಧೋನಮೂಲದಲ್ಲಿ ವಿಧಿವತ್ತಾಗಿ ಪಿತೃಗಳಿಗೆ ಪಿಂಡಕೊಟ್ಟರೆ, ಸೂರ್ಯಚಂದ್ರರು ಇರುವವರೆಗೂ ಪಿತೃಗಳು ತೃಪ್ತರಾಗುತ್ತಾರೆ.

ಉತ್ತರಾಯಣೇ ತು ಸಂಪ್ರಾಪ್ತೇ ತತ್ರ ಸ್ನಾನಂ ಕರೋತಿ ಯಃ ।
ಪುರುಷೋ ವಾಙ್ಗನಾ ವಾಪಿ ವಸೇದಾಯತನೇ ಶುಚಿಃ ॥೧೧೩॥
ಸಿದ್ಧೇಶ್ವರಸ್ಯ ದೇವಸ್ಯ ಪ್ರಭಾತೇ ಪೂಜಯೇನ್ನರಃ ।
ಸತಾಂ ಗತಿಮವಾಪ್ನೋತಿ ನ ತಾಂ ಸರ್ವೈರ್ಮಹಾಮಖೈಃ ॥೧೧೪॥
ಯದಾ ಚ ತೀರ್ಥಕಾಲೇನ ರೂಪವಾನ್ಸುಭಗೋ ಭವೇತ್ ।
ಮರ್ತ್ಯೇ ಭವತಿ ರಾಜಾಸಾವಾಸಮುದ್ರಾನ್ತಗೋಚರೇ ॥೧೧೫॥
ಕ್ಷೇತ್ರಪಾಲಂ ನ ಪಶ್ಯೇಚ್ಚ ದಣ್ಡಪಾಲಂ ಮಹಾಬಲಮ್ ।
ವೃಥಾ ತಸ್ಯ ಭವೇದ್ಯಾತ್ರಾ ಅದೃಷ್ಟ್ವಾ ಕರ್ಣಕುಣ್ಡಲಮ್ ॥೧೧೬॥
ಏತತ್ತೀರ್ಥಫಲಂ ಜ್ಞಾತ್ವಾ ಸರ್ವೇ ದೇವಾಃ ಸಮಾಗತಾಃ ।
ಮುಞ್ಚನ್ತಿ ಪುಷ್ಪವೃಷ್ಟಿಂ ತು ಸ್ತುವನ್ತಿ ಕುಸುಮೇಶ್ವರಮ್ ॥೧೧೭॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಅಷ್ಟಾದಶೋಽಧ್ಯಾಯಃ

---

೧೧೩–೧೧೫. ಪುರುಷನಾಗಲೀ, ಸ್ತ್ರೀಯಾಗಲೀ, ಉತ್ತರಾಯಣ ಬಂದನಂತರ ಈ ಕುಸುಮೇಶ್ವರಕ್ಷೇತ್ರದಲ್ಲಿ ಶುಚಿಯಾಗಿರಬೇಕು. ಹೀಗೆ ಸಿದ್ಧೇಶ್ವರನ ದೇವಾಲಯದಲ್ಲಿ ಇದ್ದು, ಮಾರನೆಯದಿನ ಬೆಳಿಗ್ಗೆ ಆ ಸಿದ್ಧೇಶ್ವರನನ್ನು ಪೂಜಿಸುವವನು ಸರ್ವಯಜ್ಞಗಳಿಂದಲೂ ಸಿದ್ಧಿಸುವ ಫಲವನ್ನು ಹೊಂದುವನು. ತೀರ್ಥಯಾತ್ರೆಯ ಪ್ರದೇಶದಲ್ಲಿ ಫಲಕೊಡುವ ಸಮಯವೊದಗಿದಾಗ ಈ ಸಿದ್ಧೇಶ್ವರನ ಯಾತ್ರೆಮಾಡಿದವನು ಭೂಲೋಕದಲ್ಲಿ ಐಶ್ವರ್ಯದಿಂದಲೂ ಸೌಂದ್ಯರ್ಯದಿಂದಲೂ ಕೂಡಿದವನಾಗಿ ರಾಜನಾಗಿ ಸಮುದ್ರಮಧ್ಯದಲ್ಲಿರುವ ಭೂಮಿಯೆಲ್ಲವನ್ನೂ ಆಳುವನು.

೧೧೬–೧೧೭. ಕ್ಷೇತ್ರಪಾಲ, ದಂಡಪಾಲ, ಮಹಾಬಲ, ಕರ್ಣಕುಂಡಲ ಇವುಗಳ ದರ್ಶನಮಾಡದೇ, ಮಾಡುವ ಯಾತ್ರೆಯು ನಿರರ್ಥಕವು. ಎಲ್ಲಾ ದೇವತೆಗಳೂ ಈ ತೀರ್ಥಗಳ ಫಲವನ್ನು ಕೇಳಿ ಕುಸುಮೇಶ್ವರ ಕ್ಷೇತ್ರಕ್ಕೆ ಬಂದು, ಕುಸುಮೇಶ್ವರನನ್ನು ಸ್ತೋತ್ರಮಾಡುತ್ತಾ, ಪುಷ್ಪವೃಷ್ಟಿಯನ್ನು ಉಂಟುಮಾಡುವರು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹದಿನೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕೋನವಿಂಶೋಽಧ್ಯಾಯಃ

### ॥ ನಾರದ ಉವಾಚ ॥

ಭಾರ್ಗವೇಶಂ ತತೋ ಗಚ್ಛೇದ್ಭಕ್ತ್ಯಾ ಯತ್ರ ಚ ವಿಷ್ಣುನಾ ।
ಹುಙ್ಕಾರಿತಾಸ್ತು ದೇವೇನ ದಾನವಾಃ ಪ್ರಲಯಂ ಗತಾಃ ॥ ೧ ॥

ತತ್ರ ಸ್ನಾತ್ವಾ ತು ರಾಜೇನ್ದ್ರ ಸರ್ವಪಾಪೈಃ ಪ್ರಮುಚ್ಯತೇ ।
ಶುಕ್ಲತೀರ್ಥಸ್ಯ ಚೋತ್ಪತ್ತಿಂ ಶೃಣು ತ್ವಂ ಪಾಣ್ಡುನನ್ದನ ॥ ೨ ॥

ಹಿಮವಚ್ಛಿಖರೇ ರಮ್ಯೇ ನಾನಾಧಾತುವಿಚಿತ್ರಿತೇ ।
ತರುಣಾದಿತ್ಯಸಂಕಾಶೇ ತಪ್ತಕಾಞ್ಚನಸನ್ನಿಭೇ ॥ ೩ ॥

---

ಪದ್ಮಪುರಾಣದ ಆದಿಖಂಡದ ಹತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಹೇಳಿದನು: ವಿಷ್ಣುವಿನ ಹುಂಕಾರದ ಮಾತ್ರದಿಂದಲೇ ದಾನವರು ಯಾವ ಸ್ಥಳದಲ್ಲಿ ನಾಶಹೊಂದಿದರೋ, ಅಂತಹ ಭಾರ್ಗವೇಶಕ್ಷೇತ್ರವನ್ನು ಅನಂತರ ಹೊಂದಬೇಕು.

೨. ಅಲ್ಲಿ ಸ್ನಾನಮಾಡುವುದರಿಂದ ಸರ್ವಪಾಪಗಳೂ ತೊಲಗುವುವು. ಎಲೈ ಯುಧಿಷ್ಠಿರನೇ! ಇನ್ನುಮುಂದೆ ಶುಕ್ಲತೀರ್ಥದ ಉತ್ಪತ್ತಿಯನ್ನು ಹೇಳುವೆನು ಕೇಳು.

೩–೪. ನಾನಾಧಾತುಗಳಿಂದ ಕೂಡಿ ವಿಚಿತ್ರವಾಗಿರುವ, ಬೆಳಗಿನ ಸೂರ್ಯನಂತೆ ಪ್ರಕಾಶಿಸುತ್ತಲಿರುವ, ಕರಗಿಸಿದ ಚಿನ್ನದಂತೆ ಜ್ವಲಿಸುತ್ತಲಿರುವ, ಮನೋಹರವಾದ ಹಿಮವತ್ಪರ್ವತದ ಶಿಖರವು ಮುಂದೆಇರುವುದು.

ವಜ್ರಸ್ಫಟಿಕಸೋಪಾನೇ ಚಿತ್ರಪಟ್ಟಶಿಲಾತಲೇ ।
ಜಾಂಬೂನದಮಯೇ ದಿವ್ಯೇ ನಾನಾಪುಷ್ಪೋಪಶೋಭಿತೇ ॥ ೪ ॥

ತತ್ರಾಸೀನಂ ಮಹಾದೇವಂ ಸರ್ವಜ್ಞಂ ಪ್ರಭುಮವ್ಯಯಮ್ ।
ಲೋಕಾನುಗ್ರಾಹಕಂ ಶಾನ್ತಂ ಗಣವೃನ್ದೈಃ ಸಮಾವೃತಮ್ ॥ ೫ ॥

ಸ್ಕನ್ದನನ್ದಿಮಹಾಕಾಲೈರ್ವೀರಭದ್ರಗಣಾದಿಭಿಃ ।
ಉಮಾಯಾ ಸಹಿತಂ ದೇವಂ ಮಾರ್ಕಣ್ಡಃ ಪರಿಪೃಚ್ಛತಿ ॥ ೬ ॥

ದೇವದೇವ ಮಹಾದೇವ ಬ್ರಹ್ಮವಿಷ್ಣ್ವಿನ್ದ್ರಸಂಸ್ತುತ ।
ಸಂಸಾರಭಯಭೀತೋಽಹಂ ಸುಖೋಪಾಯಂ ಬ್ರವೀಹಿ ಮೇ ॥ ೭ ॥

ಭಗವನ್ಭೂತಭೂತಭವ್ಯೇಶ ಸರ್ವಪಾಪಪ್ರಣಾಶನಮ್ ।
ತೀರ್ಥಾನಾಂ ಪರಮಂ ತೀರ್ಥಂ ತದ್ವದಸ್ವ ಮಹೇಶ್ವರ ॥ ೮ ॥

---

ಆ ಶಿಖರವು ವಜ್ರಮಣಿಗಳಿಂದಲೂ, ಸ್ಫಟಿಕಮಣಿಗಳಿಂದಲೂ, ಕಟ್ಟಿರುವ ಮೆಟ್ಟಲುಗಳಿಂದಲೂ, ವಿಕಾರವಾದ ಸುವರ್ಣ ವಸ್ತುಗಳಿಂದಲೂ ಕೂಡಿ, ನಾನಾವಿಧವಾದ ಪುಷ್ಪಗಳಿಂದ ಶೋಭಿಸುವುದು.

೫–೬. ಈ ಶಿಖರದಲ್ಲಿ ಸರ್ವಜ್ಞನಾದ, ಸರ್ವಪ್ರಪಂಚಕ್ಕೂ ಒಡೆಯನಾದ, ನಿತ್ಯನಾದ, ಲೋಕಾನುಗ್ರಹವೇ ತನ್ನ ಕರ್ತವ್ಯವನ್ನಾಗಿ ಮಾಡಿಕೊಂಡಿರುವ, ಶಾಂತನಾದ, ಈಶ್ವರನು ಗಣಸಮೂಹದೊಡನೆ ಕುಳಿತಿರುವನು. ಸ್ಕಂದ, ನಂದಿ, ಮಹಾಕಾಲ ಇವರೊಂದಿಗೂ, ವೀರಭದ್ರ ಗಣಗಳೊಂದಿಗೂ, ಪಾರ್ವತಿಯೊಡನೆಯೂ, ಕೂಡಿರುವ ಈಶ್ವರನನ್ನು ಮಾರ್ಕಂಡೇಯ ಮುನಿಯು ಪ್ರಶ್ನೆಮಾಡಿದನು.

೭. ಬ್ರಹ್ಮ, ವಿಷ್ಣು, ಶಚೀಪತಿಗಳಿಂದ ಸಂಸ್ತುತನಾದ ದೇವದೇವನಾದ ಮಹಾದೇವನೇ! ಸಂಸಾರದುಃಖದಿಂದ ಭೀತನಾದ ನನಗೆ ಸುಖೋಪಾಯವನ್ನು ತಿಳಿಸು.

೮. ತ್ರಿಕಾಲಜ್ಞನಾದ, ಮತ್ತು ಸರ್ವಜಗತ್ತಿಗೂ ಅಧಿಪತಿಯಾದ ಮಹೇಶನೇ! ಸರ್ವಪಾಪಗಳನ್ನೂ ಪರಿಹರಿಸುವ, ತೀರ್ಥಗಳಲ್ಲೆಲ್ಲಾ ಉತ್ತಮವಾದ ತೀರ್ಥವನ್ನು ನನಗೆ ಹೇಳು.

ಶೃಣು ವಿಪ್ರ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ ।
ಸ್ನಾನಾದಿ ಕುರು ಗಚ್ಛತ್ವಮೃಷಿಸಂಘೈಃ ಸಮಾವೃತಃ ॥ ೯ ॥
ಮನ್ವತ್ರಿಯಾಜ್ಞವಲ್ಕ್ಯಾಶ್ಚ ಕಾಶ್ಯಪಶ್ಚೈವ ಅಂಗಿರಾಃ ।
ಯಮಾಪಸ್ತಮ್ಬಸಂವರ್ತಾಃ ಕಾತ್ಯಾಯನಬೃಹಸ್ಪತೀ ।
ನಾರದೋ ಗೌತಮಶ್ಚೈವ ಪೃಚ್ಛನ್ತೇ ಧರ್ಮಕಾಂಕ್ಷಿಣಃ ॥೧೦॥
ಗಙ್ಗಾ ಕನಖಲೇ ಪುಣ್ಯಾ ಪ್ರಯಾಗಂ ಪುಷ್ಕರಂ ಗಯಾ ।
ಕುರುಕ್ಷೇತ್ರಂ ತಥಾಪುಣ್ಯಂ ರಾಹುಗ್ರಸ್ತೇ ದಿವಾಕರೇ ॥೧೧॥
ದಿವಾ ವಾ ಯದಿ ವಾ ರಾತ್ರೌ ಶುಕ್ಲತೀರ್ಥಂ ಮಹಾಫಲಮ್ ।
ದರ್ಶನಾತ್ಸ್ಪರ್ಶನಾಚ್ಚೈವ ಸ್ನಾನಾದ್ಧ್ಯಾನಾತ್ತಪೋರ್ಜನಾತ್ ॥೧೨॥

---

೯. ಈಶ್ವರನು ಹೇಳಿದನು: ಎಲೈ, ಸರ್ವಶಾಸ್ತ್ರಗಳನ್ನೂ ತಿಳಿದ ಪ್ರಾಜ್ಞಶಾಲಿಯಾದ ಬ್ರಾಹ್ಮಣನೇ ! ಕೇಳು: ಋಷಿಸಮೂಹಗಳೊಂದಿಗೆ ಹೋಗು, ಅಲ್ಲಿ ಸ್ನಾನಮಾಡು.

೧೦. ಧರ್ಮಶಾಲಿಗಳಾದ ಮನು, ಅತ್ರಿ, ಯಾಜ್ಞವಲ್ಕ್ಯ, ಕಾಶ್ಯಪ, ಅಂಗಿರಸ್ಸು, ಯಮ, ಆಪಸ್ತಂಬ, ಸಂವರ್ತ, ಕಾತ್ಯಾಯನ, ಬೃಹಸ್ಪತಿ, ನಾರದ, ಗೌತಮ, ಇವರುಗಳನ್ನು ಕೇಳು.

೧೧–೧೨. ಕನಖಲ ಕ್ಷೇತ್ರದಲ್ಲಿ ಗಂಗೆಯು ಅತಿ ಪುಣ್ಯಳು. ಸೂರ್ಯನಿಗೆ ರಾಹುಗ್ರಹಣ ಸಂಭವಿಸಿದಾಗ, ಪ್ರಯಾಗ, ಪುಷ್ಕರ, ಗಯಾ, ಕುರಕ್ಷೇತ್ರ, ಇವುಗಳು ಮಹಾಪುಣ್ಯತಮಗಳಾಗಿ ಪ್ರಸಿದ್ಧಿಯನ್ನು ಹೊಂದಿರುವುವು. ಆದರೆ ಶುಕ್ಲತೀರ್ಥವೆಂಬ ಪ್ರಸಿದ್ಧವಾದ ತೀರ್ಥವು ಹಗಲಲ್ಲೂ, ರಾತ್ರಿಯಲ್ಲಿಯೂ, ನೋಡುವುದರಿಂದಲೂ, ಮುಟ್ಟುವುದರಿಂದಲೂ, ಸ್ನಾನದಿಂದಾಗಲೀ, ಧ್ಯಾನದಿಂದಾಗಲಿ, ತಪಸ್ಸಿನಿಂದಾಗಲಿ, ಮಹಾ ಫಲವನ್ನು ಕೊಡುವುದು.

ಹೋಮಾಚ್ಚೈವೋಪವಾಸಾಚ್ಚ ಶುಕ್ಲತೀರ್ಥಫಲಂ ಮಹತ್ ।
ಶುಕ್ಲತೀರ್ಥಂ ಮಹಾಪುಣ್ಯಂ ನದ್ಯಾಂ ತು ಸಂವ್ಯವಸ್ಥಿತಮ್ ॥೧೩॥
ಚಾಣಕ್ಯೋ ನಾಮ ರಾಜರ್ಷಿಃ ಸಿದ್ಧಿಂ ತತ್ರ ಸಮಾಗತಃ ।
ಏತತ್ಕ್ಷೇತ್ರಂ ಸಮುತ್ಪನ್ನಂ ಯೋಜನಾವೃತ್ತಿಸಂಸ್ಥಿತಮ್ ॥೧೪॥
ಶುಕ್ಲತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಮ್ ॥
ಪಾದಪಾಗ್ರೇಣ ದೃಷ್ಟೇನ ಬ್ರಹ್ಮಹತ್ಯಾಂ ವ್ಯಪೋಹತಿ ॥೧೫॥
ಅಹಮತ್ರ ಋಷಿಶ್ರೇಷ್ಠ ತಿಷ್ಠಾಮ್ಯುಮಯಾ ಸಹ ।
ವೈಶಾಖೇ ವಿಮಲೇ ಮಾಸಿ ಕೃಷ್ಣಪಕ್ಷೇ ಚತುರ್ದಶೀ ॥೧೬॥
ಕೈಲಾಸಾಚ್ಚಾಪಿ ನಿರ್ಗಮ್ಯ ತತ್ರ ಸನ್ನಿಹಿತೋ ಹ್ಯಹಮ್ ।
ದೇವಕಿನ್ನರಗನ್ಧರ್ವಾಃ ಸಿದ್ಧವಿದ್ಯಾಧರಾಸ್ತಥಾ ॥೧೭॥

---

೧೩. ಇಲ್ಲಿ ಮಾಡಿದ ಹೋಮವೂ, ಉಪವಾಸವೂ, ತೀರ್ಥದ ಮಹಿಮೆಯಿಂದ ಅಧಿಕಫಲವನ್ನು ಕೊಡುವುವು. ಶುಕ್ಲತೀರ್ಥವು ನದಿಯಲ್ಲಿ ಮಹಾಪುಣ್ಯತಮವೆಂದು ಪ್ರಸಿದ್ಧವಾಗಿರುವುದು.

೧೪. ಚಾಣಕ್ಯನೆಂಬ ರಾಜರ್ಷಿಯು ಈ ಕ್ಷೇತ್ರದಲ್ಲಿ ಸಿದ್ಧಿಯನ್ನು ಹೊಂದಿದನು. ಈ ಕ್ಷೇತ್ರವು ಒಂದು ಯೋಜನ ಪರಿಮಾಣದಿಂದ ಕೂಡಿರುವುದು.

೧೫–೧೭. ಶುಕ್ಲತೀರ್ಥವು ಸರ್ವಪಾಪವನ್ನೂ ಪರಿಹರಿಸಿ ಮಹಾಪುಣ್ಯವನ್ನುಂಟುಮಾಡುವುದು. ಈ ತೀರ್ಥದ ಸಮೀಪದಲ್ಲಿರುವ ಮರದ ತುದಿಯನ್ನು ನೋಡಿದರೂ, ಬ್ರಹ್ಮಹತ್ಯಾದೋಷವು ಕೂಡ ದೂರವಾಗವುದು. ಎಲೈ ಮಾರ್ಕಂಡೇಯ ಮುನಿವರ್ಯನೇ! ಶ್ರೇಷ್ಠವಾದ ವೈಶಾಖ ಮಾಸದ ಕೃಷ್ಣ ಚತುರ್ದಶಿಯಲ್ಲಿ ನಾನು ಇಲ್ಲಿ ಪಾರ್ವತಿಯೊಡನೆ ಇರುವೆನು. ಆ ದಿವಸ ನಾನು ಕೈಲಾಸವನ್ನೂ ಸಹ ಬಿಟ್ಟು, ಈ ಕ್ಷೇತ್ರದಲ್ಲಿ ವಾಸಿಸುವೆನು; ಮತ್ತು ದೇವತೆಗಳೂ, ಕಿನ್ನರರೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ ಇಲ್ಲೇ ವಾಸಿಸುವರು.

ಗಣಾಶ್ಚಾಪ್ಸರಸೋ ನಾಗಾಃ ಸರ್ವದೇವಾಃ ಸಮಾಗತಾಃ ।
ಗಗನಸ್ಥಾಸ್ತು ತಿಷ್ಠನ್ತಿ ವಿಮಾನೈಃ ಸರ್ವಕಾಮಕೈಃ ॥೧೮॥

ಶುಕ್ಲತೀರ್ಥೇಷು ರಾಜೇನ್ದ್ರ ಆಗತಾ ಧರ್ಮಕಾಂಕ್ಷಿಣಃ ।
ರಜಕೇನ ಯಥಾ ವಸ್ತ್ರಂ ಶುಕ್ಲಂ ಭವತಿ ವಾರಿಣಾ ॥೧೯॥

ಆಜನ್ಮಸಂಚಿತಂ ಪಾಪಂ ಶುಕ್ಲತೀರ್ಥಂ ವ್ಯಪೋಹತಿ ।
ಸ್ನಾನಂ ದಾನಂ ಮಹಾಪುಣ್ಯಂ ಮಾರ್ಕಣ್ಡಮುನಿಸತ್ತಮ ॥೨೦॥

ಶುಕ್ಲತೀರ್ಥಾತ್ಪರಂ ತೀರ್ಥಂ ನಭೂತಂ ನ ಭವಿಷ್ಯತಿ ।
ಪೂರ್ವೇ ವಯಸಿ ಕರ್ಮಾಣಿ ಕೃತ್ವಾ ಪಾಪಾನಿ ಮಾನವಃ ॥೨೧॥

ಅಹೋರಾತ್ರೋಪವಾಸೇನ ಶುಕ್ಲತೀರ್ಥೇ ವ್ಯಪೋಹತಿ ।
ತಪಸಾ ಬ್ರಹ್ಮಚರ್ಯೇಣ ಯಜ್ಞೈರ್ದಾನೇನ ವಾ ಪುನಃ ॥೨೨॥

---

೧೮–೨೦. ಆಯಾಯ ಗಣಗಳೂ, ಅಪ್ಸರಸ್ತ್ರೀಯರೂ, ನಾಗರೂ, ದೇವತೆಗಳೂ, ಇಷ್ಟಾರ್ಥವನ್ನೆಲ್ಲಾ ಕೊಡುವಂತಹ ವಿಮಾನಗಳಲ್ಲಿ ಕುಳಿತು ಈ ತೀರ್ಥದ ಮೇಲುಗಡೆ ಅಂತರಿಕ್ಷದಲ್ಲಿ ವಾಸಿಸುವರು. ಎಲೈ ಯುಧಿಷ್ಠಿರನೇ ! ಈ ಶುಕ್ಲತೀರ್ಥಕ್ಕೆ ಅವರೆಲ್ಲರೂ ಧರ್ಮಾಪೇಕ್ಷೆಯಿಂದಲೇ ಬಂದುದು. ಅಗಸನು ನೀರಿನಿಂದ ಬಟ್ಟೆಗಳನ್ನು ಶುದ್ಧಿಮಾಡುವಂತೆ, ಈ ತೀರ್ಥವೂ ಹುಟ್ಟಿದ ಮೊದಲುಗೊಂಡು ಕೂಡಿಹಾಕಿದ ಪಾಪರಾಶಿಯನ್ನೇ ತೊಳೆಯುವುದು ; ಮತ್ತು ಸ್ನಾನಮಾಡುವವನನ್ನೂ ಶುದ್ಧಿಗೊಳಿಸುವುದು. ಎಲೈ ಮಾರ್ಕಂಡೇಯ ಮುನಿಯೇ ! ಇಲ್ಲಿ ಮಾಡಿದ ಸ್ನಾನದಾನಗಳು ಮಹಾಪುಣ್ಯವನ್ನು ಉಂಟುಮಾಡುವುವು.

೨೧–೨೨. ಶುಕ್ಲತೀರ್ಥಕ್ಕಿಂತಲೂ ಮೇಲಾದ ತೀರ್ಥವು ಹಿಂದೆ ಉಂಟಾಗಲೂ ಇಲ್ಲ ; ಮುಂದೆ ಉಂಟಾಗುವುದೂ ಇಲ್ಲ. ಪೂರ್ವವಯಸ್ಸಿನಲ್ಲಿ ಮನುಷ್ಯನು ಪಾಪಕರ್ಮಗಳನ್ನು ಮಾಡುವುದುಂಟಷ್ಟೇ. ಅಂತಹ ಮನುಷ್ಯನು ಶುಕ್ಲತೀರ್ಥದಲ್ಲಿ ಒಂದು ಹಗಲೂ, ಒಂದು ರಾತ್ರಿಯೂ, ಉಪವಾಸಮಾಡಿದ ಮಾತ್ರದಿಂದಲೇ ಆ ಪಾಪಗಳನ್ನೆಲ್ಲಾ ಕಳೆಯುವನು. ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ದೇವರ ಪೂಜೆಯಿಂದಲೂ, ಬಹಳ ಪುಣ್ಯವನ್ನು ಸಂಪಾದಿಸುವನು.

ದೇವದಾನೇನ ಯಾ ತುಷ್ಟಿರ್ನಸಾ ಕ್ರತುಶತೈರಪಿ ।
ಕಾರ್ತಿಕಸ್ಯ ಚ ಮಾಸಸ್ಯ ಕೃಷ್ಣಪಕ್ಷೇ ಚತುರ್ದಶೀ ॥೨೩॥

ಘೃತೇನ ಸ್ನಾಪಯೇದ್ದೇವಮುಪೋಷ್ಯ ಪರಮೇಶ್ವರಮ್ ।
ಏಕವಿಂಶಕುಲೋಪೇತೋ ನ ಚ್ಯವೇಚ್ಛೈಶ್ಪರಾತ್ಪದಾತ್ ॥೨೪॥

ಶುಕ್ಲತೀರ್ಥಂ ಪರಂ ತೀರ್ಥಮೃಷಿಸಿದ್ಧನಿಷೇವಿತಮ್ ।
ತತ್ರ ಸ್ನಾತ್ವಾ ನರೋ ರಾಜನ್ಪುನರ್ಜನ್ಮ ನ ವಿದ್ಯತೇ ॥೨೫॥

ಸ್ನಾತ್ವಾ ವೈ ಶುಕ್ಲತೀರ್ಥೇಽಪಿ ಅರ್ಚಯೇದ್ವೃಷಭಧ್ವಜಮ್ ।
ಜಾಗರಂ ಕಾರಯೇತ್ತತ್ರ ನೃತ್ತಗೀತಾದಿಮಙ್ಗಲೈಃ ॥೨೬॥

ಪ್ರಭಾತೇ ಶುಕ್ಲತೀರ್ಥೇ ತು ಸ್ನಾನಂ ವೈ ದೇವತಾರ್ಚನಮ್ ।
ಆಚಾರ್ಯಂ ಭೋಜಯೇತ್ಪಶ್ಚಾಚ್ಛಿವವ್ರತಪರಃ ಶುಚಿಃ ॥೨೭॥

---

೨೩–೨೫. ಹಾಗೆಯೇ ಇಲ್ಲಿ ಮಾಡುವ ದೇವತೋದ್ದೇಶಕವಾದ ದ್ರವ್ಯದಾನದಿಂದ ಬರುವ ಪುಣ್ಯವು, ನೂರಾರು ದೀರ್ಘಕ್ರತುಗಳ ನ್ನಾಚರಿಸುವುದರಿಂದ ಎಂದಿಗೂ ಬರುವುದಿಲ್ಲ. ಕಾರ್ತಿಕ ಕೃಷ್ಣ ಚತುರ್ದಶಿ ಯಲ್ಲಿ ಉಪವಾಸ ಮಾಡಿ ಪರಮೇಶ್ವರನಿಗೆ ಆಜ್ಯಸ್ನಾನ ಮಾಡಿಸುವವನು ಇಪ್ಪತ್ತೊಂದು ಸಂತತಿಯೊಂದಿಗೆ ಕೈಲಾಸದಲ್ಲಿ ವಾಸಮಾಡುವನು. ಋಷಿ ಗಳಿಂದಲೂ, ಸಿದ್ಧರಿಂದಲೂ ಆಶ್ರಿತವಾದ ಈ ತೀರ್ಥವು ಬಹು ಮೇಲಾದ ತೀರ್ಥವಾಗಿರುವುದು. ಎಲೈ ರಾಜನೇ ! ಇಲ್ಲಿ ಸ್ನಾನಮಾಡುವವನು ಪುನಃ ಗರ್ಭವಾಸವನ್ನೇ ಅರಿಯಲಾರನು.

೨೬. ಶುಕ್ಲತೀರ್ಥದಲ್ಲಿ ಸ್ನಾನಮಾಡಿ, ಈಶ್ವರನನ್ನು ಪೂಜಿಸಿ, ನೃತ್ಯ ಗೀತಾದಿಗಳೊಂದಿಗೆ ಜಾಗರಣೆಯನ್ನು ಆಚರಿಸಬೇಕು.

೨೭–೩೧. ಹೀಗೆ ರಾತ್ರಿಯಲ್ಲಿ ಜಾಗರಣೆ ಮಾಡಿ, ಮಾರನೆಯದಿನ ಬೆಳಗ್ಗೆ ಶುಕ್ಲತೀರ್ಥದಲ್ಲಿ ಸ್ನಾನಮಾಡಿ, ಈಶ್ವರನನ್ನು ಪೂಜಿಸಿ, ಶಿವವ್ರತ ವನ್ನು ಧರಿಸಿದವನಾಗಿ, ಆಚಾರ್ಯನಿಗೆ ಭೋಜನ ಮಾಡಿಸಬೇಕು. ಈ ಬ್ರಾಹ್ಮಣಸಮಾರಾಧನ ವಿಷಯದಲ್ಲಿ, ಶಕ್ತ್ಯನುಸಾರವಾಗಿ ದ್ರವ್ಯ

ಭೋಜನಂ ತು ಯಥಾ ಶಕ್ತ್ಯಾ ವಿತ್ತಶಾಠ್ಯಂ ನ ಕಾರಯೇತ್ ।
ಪ್ರದಕ್ಷಿಣಂ ತತಃ ಕೃತ್ವಾ ಶನೈರ್ದೇವಾನ್ತಿಕಂ ವ್ರಜೇತ್ ॥೨೮॥
ಏವಂ ವೈ ಕುರುತೇ ಯಸ್ತು ತಸ್ಯ ಪುಣ್ಯಫಲಂ ಶೃಣು ।
ದಿವ್ಯಯಾನಸಮಾರೂಢಃ ಸ್ತೂಯಮಾನೋಽಪ್ಸರೋಗಣೈಃ ॥೨೯॥
ಶಿವತುಲ್ಯಬಲೋಪೇತಸ್ತಿಷ್ಠತ್ಯಾಭೂತಸಂಪ್ಲವಮ್ ।
ಶುಕ್ಲತೀರ್ಥೇ ತು ಯಾ ನಾರೀ ದದಾತಿ ಕನಕಂ ಶುಭಮ್ ॥೩೦॥
ಘೃತೇನ ಸ್ನಾಪಯೇದ್ದೇವಂ ಕುಮಾರಂ ಚಾಭಿಪೂಜಯೇತ್ ।
ಏವಂ ಯಾ ಕುರುತೇ ಭಕ್ತ್ಯಾ ತಸ್ಯಾಃ ಪುಣ್ಯಫಲಂ ಶೃಣು ॥೩೧॥
ಮೋದತೇ ದೇವಲೋಕಸ್ಥಾ ಯಾವದಿನ್ದ್ರಾಶ್ಚತುರ್ದಶ ।
ಅಯನೇ ವಾ ಚತುರ್ದಶ್ಯಾಂ ಸಂಕ್ರಾನ್ತೌ ವಿಷುವೇ ತಥಾ ॥೩೨॥

---

ಲೋಭವಿಲ್ಲದೇ ಮಾಡಬೇಕು. ಇಂತಹ ಭೋಜನವನ್ನೇ ಮಾಡಿಸಬೇಕೆಂಬ ನಿಯಮವಿಲ್ಲ. ಅನಂತರ ಪ್ರದಕ್ಷಿಣೆ ಮಾಡಿ ದೇವರ ಸಮೀಪಕ್ಕೆ ಹೋಗಬೇಕು. ಹೀಗೆ ಮಾಡುವವನು ಅನುಭವಿಸುವ ಫಲವನ್ನು ಕೇಳು. ದಿವ್ಯ ವಾಹನವನ್ನೇರಿ ಅಪ್ಸರಸ್ತ್ರೀಯರಿಂದ ಸಂಸ್ತೂಯಮಾನನಾಗಿ, ಶಿವಲೋಕವನ್ನು ಹೊಂದುವನು; ಮತ್ತು ಶಿವನಿಗೆ ಸಮನಾಗಿ ಪ್ರಳಯಕಾಲಪರ್ಯಂತವಾಗಿ ಸುಖಪಡುವನು. ಈ ಶುಕ್ಲತೀರ್ಥದಲ್ಲಿ ಸುವರ್ಣ ದಾನಮಾಡಿದ ಸ್ತ್ರೀಯು ಈಶ್ವರನಿಗೆ ತುಪ್ಪದ ಅಭಿಷೇಕವನ್ನು ಮಾಡಬೇಕು; ಮತ್ತು ಕುಮಾರಸ್ವಾಮಿಯನ್ನು ಪೂಜಿಸಬೇಕು. ಹೀಗೆ ಭಕ್ತಿಯಿಂದ ಪೂಜಿಸುವವಳು ಪಡೆಯುವ ಪುಣ್ಯಫಲವನ್ನು ಹೇಳುವೆನು, ಕೇಳು.

೩೨–೩೩. ಇಂತಹ ನಾರಿಯು ಹದಿನಾಲ್ಕು ಇಂದ್ರರ ಅಧಿಕಾರವಿರುವ ಪರ್ಯಂತ ದೇವಲೋಕದಲ್ಲಿ ವಾಸಿಸುವಳು. ಉತ್ತರಾಯಣ ದಕ್ಷಿಣಾಯನ, ಚತುರ್ದಶೀ, ವಿಷುಸಂಕ್ರಮಣ, ಇಂತಹ ದಿವಸಗಳಲ್ಲಿ ಇಲ್ಲಿ ಸ್ನಾನಮಾಡಿ, ಉಪವಾಸಪರನಾಗಿ, ಇಂದ್ರಿಯ ನಿಗ್ರಹದಿಂದ ಕೂಡಿ, ಏಕಾಗ್ರಚಿತ್ತದಿಂದ ದಾನಮಾಡಿದರೆ, ಹರಿಹರರು ಸುಪ್ರಸನ್ನರಾಗುವರು.

ಸ್ನಾತ್ವಾ ತು ಸೋಽಪವಾಸಃ ಸ ನಿರ್ಜಿತಾತ್ಮಾ ಸಮಾಹಿತಃ ।
ದಾನಂ ದದ್ಯಾದ್ಯಥಾ ಶಕ್ತ್ಯಾ ಪ್ರೀಯೇತಾಂ ಹರಿಶಙ್ಕರೌ ॥೩೩॥
ಶುಕ್ಲತೀರ್ಥಪ್ರಭಾವೇಣ ಸರ್ವಂ ಭವತಿ ಚಾಕ್ಷಯಮ್ ।
ಅನಾಥಂ ದುರ್ಗತಂ ವಿಪ್ರಂ ನಾಥವನ್ತಮಥಾಪಿ ವಾ ।
ಉದ್ವಾಹಯತಿ ಯಸ್ತೀರ್ಥೇ ತಸ್ಯ ಪುಣ್ಯಫಲಂ ಶೃಣು ॥೩೪॥
ಯಾವತ್ತದ್ರೋಮಸಂಖ್ಯಾ ತು ತತ್ಪ್ರಸೂತಿಕುಲೇಷು ಚ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೩೫॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕೋನವಿಂಶೋಽಧ್ಯಾಯಃ

---

೩೪. ಶುಕ್ಲತೀರ್ಥದ ಮಹಿಮೆಯಿಂದ ಸರ್ವವೂ ಅಕ್ಷಯವಾದ ಫಲವನ್ನು ಕೊಡುವುವು. ಈ ತೀರ್ಥದಲ್ಲಿ ದಿಕ್ಕಿಲ್ಲದ ಬಡವನಾದ ಬ್ರಾಹ್ಮಣನನ್ನಾಗಲೀ, ಅಥವಾ ದಿಕ್ಕಿರುವ ಬ್ರಾಹ್ಮಣನನ್ನೇ ಆಗಲೀ, ವಿವಾಹ ಮಾಡಿಸುವವನು ಹೊಂದುವ ಫಲವನ್ನು ಹೇಳುವೆನು ಕೇಳು.

೩೫. ಉದ್ವಾಹಿತನಾದ ಮನುಷ್ಯನ ಮತ್ತು ಅವನ ಪುತ್ರಪರಂಪರೆಯ ರೋಮಗಳು ಎಷ್ಟಿರುವುವೋ, ಅಷ್ಟು ಸಾವಿರವರ್ಷಗಳಕಾಲ ಅವನು ಶಿವಲೋಕದಲ್ಲಿ ಪೂಜ್ಯನಾಗಿ ಮೆರೆಯುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ವಿಂಶೋಽಧ್ಯಾಯಃ

**॥ ನಾರದ ಉವಾಚ ॥**

**ತತಸ್ತು ನರಕಂ ಗಚ್ಛೇತ್ ಸ್ನಾನಂ ತತ್ರ ಸಮಾಚರೇತ್ ।**
**ಸ್ನಾತಮಾತ್ರೋ ನರಸ್ತತ್ರ ನರಕಂ ಚ ನ ಪಶ್ಯತೀ ॥ ೧ ॥**
**ಅಸ್ಯ ತೀರ್ಥಸ್ಯ ಮಾಹಾತ್ಮ್ಯಂ ಶ್ರೃಣು ತ್ವಂ ಪಾಂಡುನಂದನ ।**
**ತಸ್ಮಿಂಸ್ತೀರ್ಥೇ ತು ರಾಜೇಂದ್ರ ಯಾನ್ಯಸ್ಥೀನಿ ವಿನಿಕ್ಷಿಪೇತ್ ॥ ೨ ॥**
**ವಿಲಯಂ ಯಾಂತಿ ಸರ್ವಾಣಿ ರೂಪವಾನ್ ಜಾಯತೇ ನರಃ ।**
**ಗೋತೀರ್ಥಂ ತು ತತೋ ಗಚ್ಛೇದ್ದೃಷ್ಟ್ವಾ ಪಾಪಾತ್ಪ್ರಮುಚ್ಯತೇ ॥**

---

### ಪದ್ಮಪುರಾಣದ ಆದಿಖಂಡದ ಇಪ್ಪತ್ತನೆಯ ಅಧ್ಯಾಯವು

೧. ನಾರದನು ಹೇಳಿದನು: ಮುಂದೆ ನರಕತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದ ಮಾತ್ರದಿಂದಲೇ ನರಕವನ್ನು ಕಣ್ಣಿನಿಂದ ಸಹಾ ನೋಡಲಾರನು.

೨-೩. ಎಲೈ ಯುಧಿಷ್ಠಿರನೇ? ಈ ತೀರ್ಥದ ಮಾಹಾತ್ಮ್ಯೆಯನ್ನು ಹೇಳುವೆನು ಕೇಳು. ಈ ತೀರ್ಥದಲ್ಲಿ ಹಾಕಿದ ಮೂಳೆಗಳು ಮಾಯವಾಗಿ ಹೋಗುವುವು. ಮತ್ತು ಮೃತನಾದ ಮನುಷ್ಯನಿಗೆ ಘೋರ ರೂಪವು ಹೋಗಿ ಉತ್ತಮ ಆಕಾರವು ಉಂಟಾಗುವುದು. ಮುಂದೆ ಗೋತೀರ್ಥವು ಸಿಗುವುದು. ಅದನ್ನು ನೋಡಿದ ಮಾತ್ರಕ್ಕೆ ಸರ್ವ ಪಾಪಗಳೂ ನಾಶವಾಗುವುವು.

ತತೋ ಗಚ್ಛೇತ ರಾಜೇಂದ್ರ ಕಪಿಲಾ ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥ ೪ ॥
ಜ್ಯೇಷ್ಠ ಮಾಸೇ ತು ಸಂಪ್ರಾಪ್ತೇ ಚತುರ್ದಶ್ಯಾಂ ವಿಶೇಷತಃ ।
ತತ್ರೋಪೋಷ್ಯ ನರೋ ಭಕ್ತ್ಯಾ ಕಪಿಲಾಂ ಯಃ ಪ್ರಯಚ್ಛತಿ ॥ ೫ ॥
ಘೃತೇನ ದೀಪಂ ಪ್ರಜ್ವಾಲ್ಯ ಘೃತೇನ ಸ್ನಾಪಯೇಚ್ಛಿವಂ ।
ಸಘೃತಂ ಶ್ರೀಫಲಂ ದತ್ವಾ ಕೃತ್ವಾ ಚಾಂತೇ ಪ್ರದಕ್ಷಿಣಂ ॥ ೬ ॥
ಘಂಟಾಭರಣಸಂಯುಕ್ತಾಂ ಕಪಿಲಾಂ ಯಃ ಪ್ರಯಚ್ಛತಿ ।
ಶಿವತುಲ್ಯೋ ನರೋ ಭೂತ್ವಾ ನ ಚೇಹ ಜಾಯತೇ ಪುನಃ ॥ ೭ ॥
ಅಙ್ಗಾರಕದಿನೇ ಪ್ರಾಪ್ತೇ ಚತುರ್ಥ್ಯಾಂ ತು ವಿಶೇಷತಃ ।
ಸ್ನಾಪಯಿತ್ವಾ ಶಿವಂ ಭಕ್ತ್ಯಾ ಬ್ರಾಹ್ಮಣೇಭ್ಯಸ್ತು ಭೋಜನಮ್ ॥ ೮ ॥

---

೪. ಮುಂದೆ ಕಪಿಲಾತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರ ಗೋದಾನದ ಫಲವನ್ನು ಹೊಂದುವನು.

೫-೭. ಅದರಲ್ಲೂ ಜ್ಯೇಷ್ಠಮಾಸದ ಚತುರ್ದಶೀಯಲ್ಲಿ ಉಪವಾಸ ಮಾಡಿ ಭಕ್ತಿಯಿಂದ ಕಪಿಲಾಗೋವನ್ನು ದಾನಕೊಡಬೇಕು. ಮತ್ತು ತುಪ್ಪದ ದೀಪವನ್ನು ಹಚ್ಚಿ ಈಶ್ವರನಿಗೆ ಘೃತಾಭಿಷೇಕವನ್ನು ಮಾಡಿಸಿ ಘೃತ ಸಹಿತವಾದ ಬಿಲ್ವಫಲವನ್ನು ಸಮರ್ಪಣೆ ಮಾಡಿ ಕೊನೆಯಲ್ಲಿ ಪ್ರದಕ್ಷಿಣೆ ಮಾಡಬೇಕು. ಘಂಟೆಯ ಸರದಿಂದ ಅಲಂಕೃತವಾದ ಕಪಿಲಾ ಗೋವನ್ನು ದಾನ ಮಾಡಬೇಕು. ಹೀಗೆ ಮಾಡುವವನು ಶಿವನಿಗೆ ಸಮಾನನಾಗುವನು. ತಿರುಗಿ ಹುಟ್ಟುವುದೇ ಇಲ್ಲ.

೮-೯. ಅದರಲ್ಲೂ ಚತುರ್ಥೀ ಮಂಗಳವಾರದ ದಿವಸದಲ್ಲಿ ಶಿವನಿಗೆ ಅಭಿಷೇಕಮಾಡಿಸಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ನವಮಿಯಾಯುಕ್ತವಾದ ಮಂಗಳವಾರದಲ್ಲೂ ಅಮಾವಾಸ್ಯಾದಿವಸದಲ್ಲೂ ಸರ್ವ ಪ್ರಯತ್ನದಿಂದ ಈಶ್ವರನಿಗೆ ಅಭಿಷೇಕಮಾಡಿಸಬೇಕು. ಹೀಗೆ ಮಾಡು

ಅಙ್ಗಾರಕನವಮ್ಯಾಂ ತು ಅಮಾವಾಸ್ಯಾಂ ತಥೈವ ಚ ।
ಸ್ನಾಪಯೇತ್ತತ್ರ ಯತ್ನೇನ ರೂಪವಾನ್ಸುಭಗೋ ಭವೇತ್ ॥ ೯ ॥
ಘೃತೇನ ಸ್ನಾಪಯೇಲ್ಲಿಂಗಂ ಪೂಜಯೇದ್ಭಕ್ತಿತೋ ದ್ವಿಜಾನ್ ।
ಪುಷ್ಪಕೇಣ ವಿಮಾನೇನ ಸಹಸ್ರೈಃ ಪರಿವಾರಿತಃ ॥೧೦॥
ಶೈವಂ ಪದಮವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।
ಅಕ್ಷಯಂ ಮೋದತೇ ಕಾಲಂ ಯಥಾ ರುದ್ರಸ್ತಥೈವ ಚ ॥೧೧॥
ಯದಾ ತು ಕರ್ಮಸಂಯೋಗಾನ್ಮರ್ತ್ಯಲೋಕಮುಪಾಗತಃ ।
ರಾಜಾ ಭವತಿ ಧರ್ಮಿಷ್ಠೋ ರೂಪವಾಞ್ಜಾಯತೇ ಬಲೀ ॥೧೨॥
ತತೋ ಗಚ್ಛೇತ ರಾಜೇನ್ದ್ರ ಋಷಿತೀರ್ಥಮನುತ್ತಮಮ್ ।
ಘೃಣಬಿಂದುಋಷಿರ್ನಾಮ ಶಾಪದಗ್ಧೋ ವ್ಯವಸ್ಥಿತಃ ॥೧೩॥
ತಸ್ಯ ತೀರ್ಥಪ್ರಭಾವೇಣ ಪಾಪಮುಕ್ತೋ ಭವೇದ್ದ್ವಿಜಃ
ತತೋ ಗಚ್ಛೇತ ರಾಜೇನ್ದ್ರ ಗಣೇಶ್ವರಮನುತ್ತಮಮ್ ॥೧೪॥

---

ವವನು ಸೌಂದರ್ಯಶಾಲಿಯೂ, ಸಂಪತ್ತಿನಿಂದ ಕೂಡಿದವನಾಗಿಯೂ ಆಗುವನು.

೧೦–೧೨. ಲಿಂಗಕ್ಕೆ ಘೃತಾಭಿಷೇಕಮಾಡಿಸಿ ಬ್ರಾಹ್ಮಣರನ್ನು ಭಕ್ತಿಯಿಂದ ಪೂಜಿಸುವವನು ಸಹಸ್ರಾರು ಪರಿವಾರಗಳೊಂದಿಗೆ ಪುಷ್ಪಕ ವಿಮಾನವನ್ನೇರಿ ಶಿವಲೋಕವನ್ನು ಸೇರುವನು. ಹೀಗೆ ಶಿವಲೋಕವನ್ನು ಹೊಂದುವ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲ; ಮತ್ತು ಅಲ್ಲಿ ಶಿವನಂತೆಯೇ ಬಹಳ ಕಾಲ ಸುಖಪಡುವನು. ಪೂರ್ವಜನ್ಮಾರ್ಜಿತವಾದ ಕರ್ಮದ ಸಂಬಂಧದಿಂದ ಭೂಲೋಕದಲ್ಲಿ ಹುಟ್ಟಿ, ದಾನಧರ್ಮಿಷ್ಠನಾದ ರೂಪವುಳ್ಳ, ಮತ್ತು ಬಲಿಷ್ಠನಾದ ರಾಜನಾಗುವನು.

೧೩–೧೪. ಮುಂದೆ ಶಾಪದಗ್ಧನಾದ ಘೃಣಬಿಂದು ಮುನಿಗೆ ಮುಕ್ತಿಯನ್ನು ಕೊಟ್ಟ ಋಷಿತೀರ್ಥವನ್ನು ಹೊಂದಬೇಕು. ಈ ತೀರ್ಥದ ಮಹಿಮೆಯಿಂದ ಯಾತ್ರಿಕನ ಪಾಪವೆಲ್ಲವೂ ದೂರವಾಗುವುದು. ಮುಂದೆ ಶ್ರೇಷ್ಠವಾದ ಗಣೇಶ್ವರತೀರ್ಥವನ್ನು ಹೊಂದಬೇಕು.

ಶ್ರಾವಣೇ ಮಾಸಿ ಸಂಪ್ರಾಪ್ತೇ ಕೃಷ್ಣಪಕ್ಷೇ ಚತುರ್ದಶೀಮ್ ।
ಸ್ನಾತಮಾತ್ರೋ ನರಸ್ತತ್ರ ರುದ್ರಲೋಕೇ ಮಹೀಯತೇ ॥೧೫॥
ಪಿತೄಣಾಂ ತರ್ಪಣಂ ಕೃತ್ವಾ ಮುಚ್ಯತೇ ಚ ಋಣತ್ರಯಾತ್ ।
ಗಣೇಶ್ವರಸಮೀಪೇ ತು ಗಙ್ಗಾವದನಮುತ್ತಮಮ್ ॥೧೬॥
ಅಕಾಮೋ ವಾ ಸಕಾಮೋ ವಾ ತತ್ರ ಸ್ನಾತ್ವಾ ತು ಮಾನವಃ ।
ಆಜನ್ಮಜನಿತೈಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೧೭॥
ಸರ್ವದಾ ಪರ್ವದಿವಸೇ ಸ್ನಾನಂ ತತ್ರ ಸಮಾಚರೇತ್ ।
ಪಿತೄಣಾಂ ತರ್ಪಣಂ ಕೃತ್ವಾ ಮುಚ್ಯತೇ ಚ ಋಣತ್ರಯಾತ್ ॥೧೮॥
ಪ್ರಯಾಗೇ ಯತ್ಫಲಂ ದೃಷ್ಟಂ ಶಙ್ಕರೇಣ ಮಹಾತ್ಮನಾ ।
ತದೇವ ನಿಖಿಲಂ ಪುಣ್ಯಂ ಗಙ್ಗಾರಾಹ್ವರ್ಕಸಙ್ಗಮೇ ॥೧೯॥

---

೧೫-೧೬. ಈ ಗಣೇಶ್ವರತೀರ್ಥದಲ್ಲಿ ಶ್ರಾವಣ ಬಹುಳ ಚತುರ್ದಶೀ ತಿಥಿಯಲ್ಲಿ ಸ್ನಾನಮಾಡುವವನು ಶಿವಲೋಕದಲ್ಲಿ ಪೂಜಾರ್ಹನಾಗುವನು. ಆ ತೀರ್ಥದಲ್ಲಿ ತರ್ಪಣಮಾಡುವವನು ಪಿತೃ, ದೇವ, ಋಷಿ, ಇವರ ಸಂಬಂಧವಾದ ಮೂರು ಋಣಗಳಿಂದ ಮುಕ್ತನಾಗುವನು. ಅದೇ ಗಣೇಶ್ವರ ತೀರ್ಥದ ಹತ್ತಿರ ಶ್ರೇಷ್ಠವಾದ ಗಂಗಾವದನವೆಂಬ ತೀರ್ಥವಿರುವುದು.

೧೭-೧೮. ಈ ಗಂಗಾವದನತೀರ್ಥದಲ್ಲಿ ಫಲೋದ್ದೇಶದಿಂದಾಗಲೀ, ಫಲಾಕಾಂಕ್ಷೆ ಇಲ್ಲದೆಯಾಗಲೀ, ಸ್ನಾನಮಾಡಿದ ಮಾತ್ರದಿಂದಲೇ ಮಾನವನು ಜನ್ಮಾರಭ್ಯ ಸಂಚಿತವಾದ ಸರ್ವಪಾಪಗಳಿಂದಲೂ ಮುಕ್ತನಾಗುವನು; ಇದರಲ್ಲಿ ಸಂದೇಹವಿಲ್ಲ. ಯಾವಾಗಲೂ ಈ ತೀರ್ಥದಲ್ಲಿ ಪರ್ವತಿಥಿಯಲ್ಲೇ ಸ್ನಾನಮಾಡಿ ಪಿತೃಗಳಿಗೆ ತರ್ಪಣಮಾಡಬೇಕು. ಹೀಗೆ ಮಾಡುವವನು ಋಣತ್ರಯದಿಂದ ಮುಕ್ತನಾಗುವನು.

೧೯-೨೦. ಮಹಾತ್ಮನಾದ ಶಂಕರನು ಪ್ರಯಾಗಕ್ಷೇತ್ರಕ್ಕೆ ಹೇಳಿರುವ ಫಲವು ಸೂರ್ಯನಿಗೆ ರಾಹುಗ್ರಹಣ ಸಮಯದಲ್ಲಿ ಈ ತೀರ್ಥದಲ್ಲಿ ಸ್ನಾನಾದಿಗಳಿಂದುಂಟಾಗುವುದು. ಈ ಗಂಗಾವದನದ ಸಮೀಪದಲ್ಲಿ

ತಸ್ಯೈವ ಪಶ್ಚಿಮೇ ಸ್ಥಾನಂ ಸಮೀಪೇ ನಾತಿದೂರತಃ ।
ದಶಾಶ್ವಮೇಧಿಕಂ ನಾಮ ತ್ರಿಷು ಲೋಕೇಷು ವಿಶ್ರುತಮ್ ॥೨೦॥
ಉಪೋಷ್ಯ ರಜನೀಮೇಕಾಂ ಮಾಸಿ ಭಾದ್ರಪದೇ ತಥಾ ।
ಅಮಾವಾಸ್ಯಾಂ ನರಃ ಸ್ನಾತ್ವಾ ವ್ರಜತೇ ಯತ್ರ ಶಙ್ಕರಃ ॥೨೧॥
ಸರ್ವದಾ ಪರ್ವದಿವಸೇ ಸ್ನಾನಂ ತತ್ರ ಸಮಾಚರೇತ್ ।
ಪಿತೄಣಾಂ ತರ್ಪಣಂ ಕೃತ್ವಾ ಅಶ್ವಮೇಧಫಲಂ ಲಭೇತ್ ॥೨೨॥
ದಶಾಶ್ವಮೇಧಾತ್ಪಶ್ಚಿಮತೋ ಭೃಗುಬ್ರಾಹ್ಮಣಸತ್ತಮಃ ।
ದಿವ್ಯಂ ವರ್ಷಸಹಸ್ರಂ ತು ಈಶ್ವರಂ ಪರ್ಯುಪಾಸತೇ ॥೨೩॥
ವಲ್ಮೀಕಾವಸ್ಥಿತಶ್ಚಾಸೌ ದಕ್ಷಿಣಂ ಚ ನಿಕೇತನಮ್ ।
ಆಶ್ಚರ್ಯಂ ತು ಮಹಜ್ಜಾತಮುಮಾಯಾಃ ಶಙ್ಕರಸ್ಯ ಚ ॥೨೪॥

---

ಸ್ವಲ್ಪದೂರದಲ್ಲಿ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ದಶಾಶ್ವಮೇಧಿಕವೆಂಬ ಕ್ಷೇತ್ರವು ಇರುವುದು.

೨೧–೨೨. ಭಾದ್ರಪದ ಮಾಸದ ಅಮಾವಾಸ್ಯೆಯಲ್ಲಿ ಒಂದು ರಾತ್ರಿ ಉಪವಾಸಮಾಡಿ ಅಲ್ಲಿ ಸ್ನಾನಮಾಡುವವನು ಶಂಕರನು ಇರುವಲ್ಲಿಗೆ ತೆರಳುವನು. ಯಾವಾಗಲೂ ದಶಾಶ್ವಮೇಧಿಕತೀರ್ಥದಲ್ಲಿ ಪರ್ವದಿವಸಗಳಲ್ಲಿಯೇ ಸ್ನಾನಮಾಡಬೇಕು; ಮತ್ತು ಪಿತೃಗಳಿಗೆ ತರ್ಪಣ ಮಾಡಬೇಕು. ಹೀಗೆ ಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೨೩–೨೫. ದಶಾಶ್ವಮೇಧಿಕಕ್ಷೇತ್ರದ ಪಶ್ಚಿಮಭಾಗದಲ್ಲಿ ಬ್ರಾಹ್ಮಣಶ್ರೇಷ್ಠನಾದ ಭೃಗುವು ದಿವ್ಯಸಹಸ್ರ ವರ್ಷಗಳ ಕಾಲ ಈಶ್ವರನನ್ನು ಕುರಿತು ಈಶ್ವರದೇವಾಲಯದ ಬಲಭಾಗದಲ್ಲಿದ್ದ ಹುತ್ತದಲ್ಲಿದ್ದುಕೊಂಡು ತಪಸ್ಸುಮಾಡುತ್ತಿದ್ದನು. ಇದನ್ನು ನೋಡಿ ಈಶ್ವರನಿಗೂ ಪಾರ್ವತಿಗೂ ಆಶ್ಚರ್ಯವುಂಟಾಯಿತು. ಆಗ ಪಾರ್ವತಿಯು ಶಂಕರನನ್ನು

ಗೌರಿ ತು ಪೃಚ್ಛತೇ ದೇವಂ ಕೋಽಯಮೇವ ತು ಸಂಸ್ಥಿತಃ ।
ದೇವೋ ವಾ ದಾನವಶ್ಚಾಥ ಕಥಯಸ್ವ ಮಹೇಶ್ವರ ॥೨೫॥

॥ ಈಶ್ವರ ಉವಾಚ ॥

ಭೃಗುರ್ನಾಮ ದ್ವಿಜಶ್ರೇಷ್ಠ ಋಷೀಣಾಂ ಪ್ರವರೋ ಮುನಿಃ ।
ಧ್ಯಾಯತೇ ಮಾಂ ಸಮಾಧಿಸ್ಥೋ ವರಂ ಪ್ರಾರ್ಥಯತೇ ಪ್ರಿಯೇ।
ತತ್ರ ಪ್ರಹಸಿತಾ ದೇವೀ ಈಶ್ವರಂ ಪ್ರತ್ಯಭಾಷತ ॥೨೬॥

ಧೂಮವತ್ತು ಶಿಖಾ ಜಾತಾ ತತೋಽದ್ಯಾಪಿ ನ ತುಷ್ಯಸಿ ।
ದುರಾರಾಧ್ಯೋಽಸಿ ತೇನ ತ್ವಂ ನಾತ್ರ ಕಾರ್ಯಾ ವಿಚಾರಣಾ ॥೨೭॥

॥ ದೇವ ಉವಾಚ ॥

ನ ಜ್ಞಾಯಸೇ ಮಹಾದೇವಿ ಅಯಂ ಕ್ರೋಧೇನ ಚೇಷ್ಟಿತಃ ।
ದರ್ಶಯಾಮಿ ಯಥಾ ತಥ್ಯಂ ಪ್ರಿಯಂ ತೇ ಚ ಕರೋಮ್ಯಹಮ್ ॥

---

ಕುರಿತು 'ಹೀಗೆ ಘೋರವಾಗಿ ತಪಸ್ಸನ್ನು ಮಾಡುತ್ತಿರುವವನು ದೇವತೆಯೋ, ಅಥವಾ ದಾನವನೋ, ಅವನಾರು ಹೇಳು' ಎಂಬುದಾಗಿ ಕೇಳಿದಳು.

೨೬. ಈಶ್ವರನು ಹೇಳಿದನು: 'ಎಲೈ ಪ್ರಿಯಳಾದ ಪಾರ್ವತಿಯೇ! ಋಷಿಶ್ರೇಷ್ಠನೂ ಬ್ರಾಹ್ಮಣಶ್ರೇಷ್ಠನೂ ಆದ, ಭೃಗುಋಷಿಯು ವರಕಾಮನಾಗಿ ಸಮಾಧಿಯಿಂದ ನನ್ನನ್ನು ಧ್ಯಾನಿಸುತ್ತಲಿರುವನು' ಎಂಬುದಾಗಿ ಹೇಳಿದ ಮಾತನ್ನು ಕೇಳಿ, ಪಾರ್ವತಿಯು ನಕ್ಕು, ಈಶ್ವರನನ್ನು ಕುರಿತು ಹೀಗೆ ಹೇಳಿದಳು.

೨೭. 'ಈತನ ಜಟೆಯು ಹೊಗೆಯಂತೆ ಕೆಂಪಾಗಿರುವುದು. ಆದರೆ ನೀನು ಮಾತ್ರ ಇನ್ನೂ ತುಷ್ಟನಾಗಿಲ್ಲ; ನಿನ್ನನ್ನು ಸೇವೆಮಾಡಿ ಮೆಚ್ಚಿಸುವುದು ಬಹಳ ಕಷ್ಟವು, ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ.'

೨೮-೩೦. ಈಶ್ವರನು ಹೇಳಿದನು: "ಎಲೈ ದೇವಿಯೇ! ನಿನಗೆ ತಿಳಿಯದು; ಇವನು ಅತಿಕೋಪದಿಂದ ಹಾರಾಡುವನು. ನಿನಗೆ ನಿಜವಾದ

ಸ್ಮಾರಿತೋ ದೇವ ದೇವೇನ ಧರ್ಮರೂಪೋ ವೃಷಸ್ತದಾ ।
ಸ್ಮರಣಾದ್ದೇವದೇವಸ್ಯ ವೃಷಃ ಶೀಘ್ರಮುಪಾಗತಃ ॥೨೯॥
ವದತೇ ಮಾನುಷೀಂ ವಾಚಮಾದೇಶೋ ದೀಯತಾಂ ಪ್ರಭೋ ।
ವಲ್ಮೀಕೈಶ್ಛಾದಿತೋ ವಿಪ್ರ ಏನಂ ಭೂಮೌ ನಿಪಾತಯ ॥೩೦॥
ಯೋಗಸ್ಥಸ್ತು ತತೋ ಧ್ಯಾಯಂಸ್ತತಸ್ತೇನ ನಿಪಾತಿತಃ ।
ತತ್ಕ್ಷಣಾತ್ಕ್ರೋಧಸಂತಪ್ತೋ ಹಸ್ತಮುತ್ಕ್ಷಿಪ್ತವಾನ್ವೃಷಮ್ ॥
ಏವಂ ಸಂಭಾಷಮಾಣಸ್ತು ಕುತ್ರ ಗಚ್ಛಸಿ ಭೋ ವೃಷ ।
ಅದ್ಯ ತ್ವಾಮಥ ಪಾಪಾತ್ಮಾನಂ ಪ್ರತ್ಯಕ್ಷಂ ಹನ್ಮ್ಯಹಂ ವೃಷ ॥೩೨॥
ಧರ್ಷಿತಸ್ತು ತದಾ ವಿಪ್ರೋ ಅನ್ತರಿಕ್ಷಗತಂ ವೃಷಮ್ ।
ಆಕಾಶೇ ಪ್ರೇಕ್ಷತೇ ವಿಪ್ರ ಏತದದ್ಭುತಮುತ್ತಮಮ್ ॥೩೩॥

---

ಸಂಗತಿಯನ್ನು ತೋರಿಸಿಕೊಡುವೆನು; ಅದನ್ನು ನೀನು ನೋಡಿ ಸಂತೋಷ ಪಡುವೆ.'' ಎಂದು ಹೇಳಿ ದೇವದೇವನಾದ ಶಂಕರನು ಸ್ಮರಿಸಿದ ಮಾತ್ರಕ್ಕೆ ಧರ್ಮರೂಪಿಯಾದ ವೃಷಭವು ಸನ್ನಿಹಿತವಾಯಿತು. ಆ ವೃಷಭವು 'ಎಲೈ ಪ್ರಭುವೇ! ಅಪ್ಪಣೆಯಾಗಬೇಕು' ಎಂಬುದಾಗಿ ಮನುಷ್ಯನ ವಾಕ್ಕಿನಿಂದ ಕೇಳಿತು. ಆಗ ಈಶ್ವರನು 'ಹುತ್ತದಿಂದ ಮುಚ್ಚಿಹೋದ ಈ ಋಷಿಯನ್ನು ಕೆಳಗೆ ಉರುಳಿಸು' ಎಂದು ಹೇಳಿದನು.

೩೧–೩೨. ಚಿತ್ತವೃತ್ತಿಗಳನ್ನೆಲ್ಲಾ ತಡೆದು ಧ್ಯಾನಮಾಡುತ್ತಲಿರುವ ಆ ಭೃಗುವನ್ನು ವೃಷಭವು ಕೆಡವಿತು. ಆಕ್ಷಣದಲ್ಲೇ, ಭೃಗುವು ಕೋಪದಿಂದ ಜ್ವಲಿಸುತ್ತಾ, ವೃಷಭದ ಮೇಲೆ ಕೈಯೆತ್ತಿ ''ಯೆಲೈ ವೃಷಭವೇ! ಎಲ್ಲಿಗೆ ಹೋಗುವೆ, ಪಾಪಿಯಾದ ನಿನ್ನನ್ನು ನಾನಿಗಲೇ ಕೊಲ್ಲುವೆನು'' ಎಂದು ಹೇಳಿದನು.

೩೩. ವೃಷಭವನ್ನು ಹೀಗೆ ನಿಂದಿಸುತ್ತಾ, ಅದು ಆಕಾಶಕ್ಕೆ ಹೋದುದನ್ನು ನೋಡಿ, ಆಕಾಶದ ಕಡೆಗೆ ನೋಡುತ್ತಾ, ಅಲ್ಲಿ ಈ ವಿಚಿತ್ರವನ್ನು ಕಂಡನು.

ತತಃ ಪ್ರಹಸಿತೇ ರುದ್ರ ಋಷಿರಗ್ರೇ ವ್ಯವಸ್ಥಿತಃ ।
ತೃತೀಯಂ ಲೋಚನಂ ದೃಷ್ಟ್ವಾ ವೈಲಕ್ಷ್ಯಾತ್ಪತಿತೋ ಭುವಿ ।
ಪ್ರಣಮ್ಯ ದಣ್ಡವದ್ಭೂಮೌ ಸ್ತುವತೇ ಪರಮೇಶ್ವರಮ್ ॥೩೪॥
ಪ್ರಣಿಪತ್ಯ ಜಗನ್ನಾಥಂ
ಭವೋದ್ಭವಂ ತ್ವಾಮಹಂ ದಿವ್ಯರೂಪಂ ।
ಭವಭೀತೋ ಭುವನಪತೇ
ಪ್ರಭೂತಂ ವಿಜ್ಞಾಪಯೇ ಕಿಂಚಿತ್ ॥೩೫॥
ತ್ವದ್ಗುಣನಿಕರಾನ್ ವಕ್ತುಂ
ಕಃ ಶಕ್ತೋ ಭವತಿ ಮಾನುಷೋ ನಾಥ ।
ವಾಸುಕಿರಯಂ ಹಿ ಕದಾಚಿತ್
ವದನಸಹಸ್ರಂ ಭವೇದ್ಯಸ್ಯ ॥೩೬॥
ಭಕ್ತ್ಯಾ ತಥಾಪಿ ಶಂಕರ
ಭುವನಪತೇ ತ್ವತ್ಸ್ತುತೌ ತು ಮುಖರಸ್ಯ ।

---

೩೪. ಹೀಗೆ ಭೃಗುವು ಅಂತರಿಕ್ಷವನ್ನು ನೋಡಲಾಗಿ, ಈಶ್ವರನು ಎದುರಿಗೆ ನಿಂತು ನಗುತ್ತಿದ್ದನು. ಈಶ್ವರನ ಮೂರನೆಯ ಕಣ್ಣನ್ನು ನೋಡಿ, ಆಶ್ಚರ್ಯಚಕಿತನಾದ ಭೃಗುವು ದಂಡದಂತೆ ನಮಸ್ಕಾರವನ್ನು ಮಾಡುತ್ತಾ, ಈಶ್ವರನನ್ನು ಸ್ತೋತ್ರಮಾಡಲಾರಂಭಿಸಿದನು.

೩೫. 'ಜಗದೀಶನಾದ, ಜಗತ್ಸ್ರಷ್ಟ್ರವಾದ ಮತ್ತು ದಿವ್ಯರೂಪಧಾರಿಯಾದ, ನಿನ್ನನ್ನು ಕುರಿತು ಸಂಸಾರದಿಂದ ಭಯಗೊಂಡ ನಾನು ಸ್ವಲ್ಪ ವಿಜ್ಞಾಪಿಸಿಕೊಳ್ಳುವೆನು.

೩೬. ಎಲೈ ಈಶ್ವರನೇ! ನಿನ್ನ ಗುಣಸಮುದಾಯವನ್ನು ವರ್ಣಿಸಲು ಯಾವನೂ ಶಕ್ತನಲ್ಲ. ಒಂದು ವೇಳೆ ವಾಸುಕಿಯು ವರ್ಣಿಸಿದರೆ ವರ್ಣಿಸಬಹುದು. ಏಕೆಂದರೆ ಅವನಿಗೆ ಸಹಸ್ರಮುಖಗಳಿರುವುವು.

೩೭. ಎಲೈ ಜಗದಧಿಪತಿಯಾದ ಈಶ್ವರನೇ! ನೀನಿದ್ದರೂ ಸಹ, ನಿನ್ನಲ್ಲಿರುವ ಭಕ್ತಿಯು ನಿನ್ನ ಸ್ತೋತ್ರದಲ್ಲೇ ನನ್ನನ್ನು ತಳ್ಳುತ್ತಿರುವುದು.

ವನ್ದ್ಯ ಕ್ಷಮಸ್ವ ಭಗವನ್
ಪ್ರಸೀದ ಮೇ ತವ ಚರಣಪತಿತಸ್ಯ ॥೩೭॥

ಸತ್ತ್ವಂ ರಜಸ್ತಮಸ್ತ್ವಂ
ಸ್ಥಿತ್ಯುತ್ಪತ್ತೌ ವಿನಾಶನೇ ದೇವ ।
ತ್ವಾಂ ಮುಕ್ತ್ವಾ ಭುವನಪತೇ
ಭುವನೇಶ್ವರ ನೈವ ದೈವತಂ ಕಿಂಚಿತ್ ॥೩೮॥

ಯಮನಿಯಮಯಜ್ಞದಾನೈಃ
ವೇದಾಭ್ಯಾಸಾವಧಾರಣೋದ್ಯೋಗಾತ್ ।
ತ್ವದ್ಭಕ್ತೇಃ ಸರ್ವಮಿದಂ
ನಾರ್ಹತಿ ಕಲಾಸಹಸ್ರಾಂಶೇನ ॥೩೯॥

ಉತ್ಕೃಷ್ಟರಸರಸಾಯನ
ಖಡ್ಗಾಞ್ಜನಪಾದುಕಾದಿಸಿದ್ಧಿರ್ವಾ ।

---

ಎಲೈ ವಂದ್ಯನೇ! ನಿನ್ನ ಕಾಲಿಗೆ ಬಿದ್ದು ಬೇಡುವೆನು. ನನ್ನ ಈ ಪ್ರವೃತ್ತಿಯನ್ನು ಕ್ಷಮಿಸು, ಪ್ರಸನ್ನನಾಗು.

೩೮. ಎಲೈ ದೇವನೇ! ನೀನು ಸತ್ವ, ರಜಸ್ತಮೋಗುಣಗಳನ್ನಾಶ್ರಯಿಸಿ, ಸೃಷ್ಟಿ, ಸ್ಥಿತಿ, ನಾಶಗಳನ್ನು ನಡೆಯಿಸುತ್ತಿರುವೆ. ಎಲೈ ಸಮಸ್ತಭುವನಾಧಿಪತಿಯೇ! ನಿನ್ನನ್ನು ಬಿಟ್ಟು ಇನ್ನೊಬ್ಬ ದೇವರು ಇಲ್ಲವೇ ಇಲ್ಲ.

೩೯. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ರೂಪವಾದ ಯಮವು, ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರಪ್ರಣಿಧಾನರೂಪವಾದ ನಿಯಮ, ಪಂಚಮಹಾಯಜ್ಞಗಳೂ, ಅನ್ನದಾನಗಳೂ, ವೇದಾಭ್ಯಾಸವೂ, ಚಿತ್ತಸ್ಥೈರ್ಯವೂ, ಧ್ಯಾನವೂ, ಇವೆಲ್ಲವೂ ಕೂಡ, ನಿನ್ನ ಭಕ್ತಿಯ ಕಲೆಯ (ಹದಿನಾರನೇ ಒಂದುಭಾಗದ) ಸಹಸ್ರದಲ್ಲಿ ಒಂದಂಶವನ್ನೂ ಕೂಡಾ ಸರಿತೂಗಲಾರವು.

೪೦. ರಸಸಿದ್ಧಿಯಾಗಲೀ, ರಸಾಯನಸಿದ್ಧಿಯಾಗಲೀ, ಖಡ್ಗಸಿದ್ಧಿಯಾಗಲೀ, ಅಂಜನಸಿದ್ಧಿಯಾಗಲೀ, ಪಾದುಕಾಸಿದ್ಧಿಯಾಗಲೀ,

ಚಿಹ್ನಾನಿ ಭವತ್ಪ್ರಣತಾನಾಂ
ದೃಶ್ಯಂತ ಇಹ ಜನ್ಮನಿ ಪ್ರಕಟಮ್ ॥೪೦॥
ಶಾಠ್ಯೇನ ನಮತಿ ಯದ್ಯಪಿ
ದದಾಸಿ ಧರ್ಮಮಿಚ್ಛತಾಂ ದೇವ ।
ಭಕ್ತಿರ್ಭವಚ್ಛೇದಕರೀ
ಮೋಕ್ಷಾಯ ವಿನಿರ್ಮಿತಾ ನಾಥ ॥೪೧॥
ಪರದಾರಪರಸ್ವರತಂ
ಪರಿಭವ ಪರಿದುಃಖಶೋಕಸಂತಪ್ತಮ್ ।
ಪರವದನವೀಕ್ಷಣಪರಂ
ಪರಮೇಶ್ವರ ಮಾಂ ಪರಿತ್ರಾಹಿ ॥೪೨॥
ಅಲೀಕಾಭಿಮಾನದಗ್ಧಂ
ಕ್ಷಣಭಙ್ಗುರವಿಭವವಿಲಸಿತಂ ದೇವ ।

---

ಪೂರ್ವಜನ್ಮದಲ್ಲಿ ನಿನಗೆ ನಮಸ್ಕಾರಮಾಡಿದವನಿಗೆ ವ್ಯಕ್ತವಾದ ಚಿಹ್ನೆಗಳಾಗಿ ಕಂಡುಬರುವುವು, ಎಂದರೆ ಅವನಿಗೆ ಅವು ಫಲಿಸುವುವು.

೪೧. ಹೇ ಈಶ್ವರನೇ! ಋಜುಮಾರ್ಗವನ್ನು ಬಿಟ್ಟು ನಮಸ್ಕರಿಸುವವನಿಗೂ ಕೂಡ ಪುಣ್ಯವನ್ನು ಕೊಡುವೆ. ನಿನ್ನಲ್ಲಿ ಭಕ್ತಿಯನ್ನಿಟ್ಟವನು ಸಂಸಾರವನ್ನು ನೀಗಿ ಮೋಕ್ಷವನ್ನೇ ಹೊಂದುವನು.

೪೨. ಹೇ ಪರಮೇಶ್ವರನೇ! ಪರನಾರಿಯರಲ್ಲಿಯೂ, ಪರದ್ರವ್ಯದಲ್ಲಿಯೂ ಆಸಕ್ತನಾಗಿ, ಇತರರು ಮಾಡುವ ತಿರಸ್ಕಾರದಿಂದಲೂ. ನಾನಾ ತೊಂದರೆಗಳಿಂದಲೂ ಉದ್ವಿಗ್ನನಾದ, ಇತರರ ಮುಖವನ್ನೇ ನೋಡುವುದರಲ್ಲಿ ಆಸಕ್ತನಾದ, ನನ್ನನ್ನು ಈ ದುಃಖಗಳಿಂದ ಕಾಪಾಡು.

೪೩. ಹೇ ದೇವ! ಅಸತ್ಯವಾದ ಮಾಹಾತ್ಮ್ಯವನ್ನು ವ್ಯರ್ಥವಾಗಿ ಕಲ್ಪಿಸಿಕೊಂಡು ಹಾಳಾದ, ಕ್ಷಣಕಾಲದಲ್ಲಿ ನಾಶಹೊಂದುವ ಐಶ್ವರ್ಯಕ್ಕೆ

ಕ್ರೂರಂ ಕುಪಥಾಭಿಮುಖಂ
ಪತಿತಂ ಮಾಂ ತ್ರಾಹಿ ದೇವೇಶ　　　　॥೪೩॥

ದೀನೇನ್ದ್ರಿಯಗಣಸಾರ್ಥೈಃ
ಬಂಧುಜನೈರೇವ ಪೂರಿತಾ ಆಶಾ ।
ತುಚ್ಛಾ ತಥಾಪಿ ಶಂಕರ
ಕಿಂ ಮೂಢಂ ಮಾಂ ವಿಡಮ್ಬಯಸಿ　　　　॥೪೪॥

ತೃಷ್ಣಾಂ ಹರಸ್ವ ಶೀಘ್ರಂ
ಲಕ್ಷ್ಮೀಂ ಮಾಂ ದೇಹಿ ಹೃದಯವಾಸಿನೀಂ ನಿತ್ಯಾಮ್ ।
ಛಿಂಧಿ ಮದಮೋಹಪಾಶಾನ್
ಉತ್ತಾರಯ ಮಾಂ ಮಹಾದೇವ　　　　॥೪೫॥

---

ಮನಸೋತಿರುವ, ಇತರರಿಗೆ ದುಃಖವನ್ನುಂಟುಮಾಡುವ ದುರ್ಮಾರ್ಗದಲ್ಲಿ ಪ್ರವೃತ್ತನಾದ, ಮತ್ತು ಪತಿತಕರ್ಮಗಳನ್ನಾಚರಿಸುತ್ತಲಿರುವ, ನನ್ನನ್ನು ಈ ದೋಷಗಳಿಂದ ಬಿಡಿಸಿ ಕಾಪಾಡು.

೪೪. ಎಲೈ ಶಂಕರನೇ! ಅಲ್ಪವಾದ ಇಂದ್ರಿಯಗಳ ಸಮುದಾಯವನ್ನೂ ಮತ್ತು ಬಂಧುಜನರನ್ನೂ ತೃಪ್ತಿಪಡಿಸಬೇಕು, ಎನ್ನುವುದರಲ್ಲೇ ಹೀನವಾದ ನನ್ನ ಕೋರಿಕೆಯೆಲ್ಲಾ ಬೆಳೆಯಿತು. ನಿನ್ನನ್ನು ತೃಪ್ತಿಪಡಿಸುವದರಲ್ಲಿ ಪ್ರಯತ್ನ ಮಾಡದೇ ಮೂಢನಾದ ನನ್ನನ್ನು ಯಾಕೆ ತಾನೇ ತಿರಸ್ಕರಿಸುವೆ.

೪೫. ಮಹಾದೇವನೇ! ವಿಷಯಾಭಿಲಾಷೆಗಳನ್ನು ಶೀಘ್ರವಾಗಿ ಪರಿಹರಿಸಿ, ಹೃದಯಸ್ಥೈರ್ಯರೂಪವಾದ ಸಂಪತ್ತನ್ನು ದಯಪಾಲಿಸು ; ಅಹಂಭಾವ, ಅಜ್ಞಾನಗಳೆಂಬ ಬಂಧನಗಳಿಂದ ಬಿಡಿಸಿ ಸಂಸಾರದುಃಖದಿಂದ ನನ್ನನ್ನು ದಾಟಿಸು.

ಕರುಣಾಭ್ಯುದಯಂ ನಾಮ
ಸ್ತೋತ್ರಮಿದಂ ಸಿದ್ಧಿದಂ ದಿವ್ಯಮ್ ।
ಯಃ ಪಠತಿ ಭಕ್ತಿಯುಕ್ತಃ
ತಸ್ಯ ತು ತುಷ್ಯೇದ್ಭೃಗೋರ್ಯಥಾ ಹಿ ಶಿವಃ ॥೪೬॥

॥ ಈಶ್ವರ ಉವಾಚ ॥

ಅಹಂ ತುಷ್ಟೋಽಸ್ಮಿ ತೇ ವಿಪ್ರ ಪ್ರಾರ್ಥಯಸ್ವೇಪ್ಸಿತಂ ವರಮ್ ।
ಉಮಯಾ ಸಹಿತೋ ದೇವೋ ವರಂ ತಸ್ಯ ಹಿ ದಾಪಯೇತ್ ॥೪೭॥

॥ ಭೃಗುರುವಾಚ ॥

ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।
ರುದ್ರವೇದೀ ಭವೇದೇವಮೇತತ್ಸಂಪಾದಯಸ್ವ ಮೇ ॥೪೮॥

॥ ಈಶ್ವರ ಉವಾಚ ॥

ಏವಂ ಭವತು ವಿಪ್ರೇನ್ದ್ರ ಕ್ರೋಧಸ್ಥಾನಂ ಭವಿಷ್ಯತಿ ।
ನ ಪಿತಾಪುತ್ರಯೋಶ್ಚೈವ ಏಕವಾಕ್ಯಂ ಭವಿಷ್ಯತಿ ॥೪೯॥

---

೪೬. ಕರುಣಾಭ್ಯುದಯವೆಂಬ, ಇಷ್ಟಾರ್ಥವನ್ನು ಕೊಡುವ, ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವ ಮನುಷ್ಯನ ವಿಷಯದಲ್ಲಿ ಶಿವನು ಭೃಗುವಿನಲ್ಲಿ ತೋರಿಸಿದಂತೆ ಅನುಗ್ರಹವನ್ನು ತೋರಿಸುವನು.

೪೭. ಈಶ್ವರನು ಹೇಳಿದನು : ' ಎಲೈ ಬ್ರಾಹ್ಮಣನೇ ! ನಿನ್ನ ವಿಷಯದಲ್ಲಿ ಸಂತುಷ್ಟನಾಗಿರುವೆನು ; ಬೇಕಾದ ವರವನ್ನು ಕೇಳಿಕೋ ; ಪಾರ್ವತಿಯೊಡಗೂಡಿದ ಶಿವನೇ ನಿನ್ನ ಇಷ್ಟಾರ್ಥವನ್ನು ಕೈಗೂಳಿಸಲು ಸಿದ್ಧನಾಗಿರುವನು.'

೪೮. ಭೃಗುವು ಹೇಳಿದನು : ಹೇ ದೇವೇಶ ! ನೀನು ನನ್ನ ವಿಷಯದಲ್ಲಿ ತುಷ್ಟನಾಗಿ ವರಕೊಡುವುದಾದರೆ, ' ಹೀಗೆಯೇ ಈ ಸ್ಥಾನವು ರುದ್ರವೇದಿಕೆಯಾಗಲೀ ' ಎಂದು ಅನುಗ್ರಹಿಸು.

೪೯. ಈಶ್ವರನು ಹೇಳಿದನು : ' ಎಲೈ ಬ್ರಾಹ್ಮಣನೇ ! ನಿನ್ನ ಕೋರಿಕೆಯಂತೆ ಈ ಸ್ಥಾನವು ತಂದೆಮಕ್ಕಳಿಗೂ ಕೂಡ ವಿರೋಧವನ್ನುಂಟುಮಾಡುವ ಕ್ರೋಧಸ್ಥಾನವಾಗುವುದು.'

ತದಾಪ್ರಭೃತಿ ಬ್ರಹ್ಮಾದ್ಯಾಃ ಸರ್ವೇ ದೇವಾಃ ಸಕಿಂನರಾಃ ।
ಉಪಾಸತೇ ಭೃಗೋಸ್ತೀರ್ಥಂ ತುಷ್ಟೋ ಯತ್ರ ಮಹೇಶ್ವರಃ ॥೫೦॥
ದರ್ಶನಾತ್ತಸ್ಯ ತೀರ್ಥಸ್ಯ ಸದ್ಯಃ ಪಾಪಾತ್ಪ್ರಮುಚ್ಯತೇ ।
ಅವಶಾಃ ಸ್ವವಶಾಶ್ಚಾಪಿ ಮ್ರಿಯನ್ತೇ ಯತ್ರ ಜನ್ತವಃ ॥೫೧॥
ಗುಹ್ಯಾತಿಗುಹ್ಯಸ್ಯ ಗತಿಸ್ತೇಷಾಂ ನಿಃಸಂಶಯಾ ಭವೇತ್ ।
ಏತತ್ಕ್ಷೇತ್ರಂ ಸುವಿಪುಲಂ ಸರ್ವಪಾಪಪ್ರಣಾಶನಮ್ ॥೫೨॥
ತತ್ರ ಸ್ನಾತ್ವಾ ದಿವಂ ಯಾನ್ತಿ ಯೇ ಮೃತಾಸ್ತೇಽಪುನರ್ಭವಾಃ ।
ಔಪಾನಹಂ ತದಾ ಯುಗ್ಮಂ ದೇಯಮನ್ನಂ ಚ ಕಾಞ್ಚನಮ್ ॥೫೩॥
ಭೋಜನಂ ಚ ಯಥಾಶಕ್ತ್ಯಾ ಅಕ್ಷಯಂ ತಸ್ಯ ತದ್ಭವೇತ್ ।
ಸೂರ್ಯೋಪರಾಗೇ ಯೋ ದದ್ಯಾದ್ದಾನಂ ಚೈವ ಯಥೇಚ್ಛಯಾ ॥

---

೫೦. ಆ ಕಾಲ ಮೊದಲುಗೊಂಡು ಮಹೇಶ್ವರನ ಸಂತೋಷ ಸ್ಥಾನವಾದ ಈ ಭೃಗುತೀರ್ಥವನ್ನು ಬ್ರಹ್ಮಾದಿ ಸಕಲದೇವತೆಗಳೂ, ಕಿನ್ನರರೂ, ಉಪಾಸಿಸುತ್ತಿರುವರು.

೫೧–೫೨. ಆ ತೀರ್ಥವನ್ನು ನೋಡಿದ ಮಾತ್ರಕ್ಕೆ ಮನುಷ್ಯನು ಪಾಪದಿಂದ ಮುಕ್ತನಾಗುವನು; ಮತ್ತು ಆ ಸ್ಥಳದಲ್ಲಿ ಮೃತಿ ಹೊಂದಬೇಕೆಂಬ ಕೊರಿಕೇ ಇರಲೀ ಅಥವಾ ಇಲ್ಲದೇ ಇರಲೀ, ಅಲ್ಲಿ ಮೃತಿಯನ್ನು ಹೊಂದಿದ ಮಾತ್ರದಿಂದ ಮಾನವನಿಗೆ ಮುಂದೆ ಹೇಳುವ ಉತ್ತಮಗತಿಯು ಉಂಟಾಗುವುದು. ಗುಹ್ಯಾತಿಗುಹ್ಯರ ಗತಿಯು ಖಂಡಿತವಾಗಿಯೂ ಅವನಿಗೆ ಬರುವುದು. ಈ ವಿಸ್ತೃತವಾದ ಕ್ಷೇತ್ರದಲ್ಲಿ ಎಲ್ಲಿಯಾದರೂ ಸ್ನಾನಾದಿಗಳನ್ನು ಮಾಡುವವನಿಗೆ ಸರ್ವಪಾಪವೂ ನಷ್ಟವಾಗುವುದು.

೫೩–೫೫. ಇಲ್ಲಿ ಸ್ನಾನಮಾಡುವವರಿಗೆ ಸ್ವರ್ಗವು ನಿಶ್ಚಿತವಾಗಿಯೂ ಸಿಗುವುದು. ಇಲ್ಲಿ ಸತ್ತವರಿಗೆ ಪುನರ್ಜನ್ಮವಿಲ್ಲ. ಪಾದುಕೆಗಳ ಜೊತೆಯನ್ನೂ, ಅನ್ನವನ್ನೂ, ಸುವರ್ಣವನ್ನೂ, ಇಲ್ಲಿ ದಾನಮಾಡಬೇಕು; ಮತ್ತು ತನ್ನ ಶಕ್ತ್ಯನುಗುಣವಾಗಿ ಭೋಜನಮಾಡಿಸಬೇಕು; ಹೀಗೆ ಇಲ್ಲಿ ಮಾಡಿದ ಒಂದೊಂದು ಕರ್ಮವೂ ಕೂಡ ಅನಂತವಾಗುವುದು. ಸೂರ್ಯ

ತೀರ್ಥಸ್ನಾನಂ ತು ಯದ್ದಾನಮಕ್ಷಯಂ ತಸ್ಯ ತದ್ಭವೇತ್ ।
ಚನ್ದ್ರಸೂರ್ಯೋಪರಾಗೇಷು ವೃಷೋತ್ಸರ್ಗಮನುತ್ತಮಮ್ ॥
ನ ಜಾನನ್ತಿ ನರಾ ಮೂಢಾ ವಿಷ್ಣುಮಾಯಾವಿಮೋಹಿತಾಃ ।
ನರ್ಮದಾಯಾಂ ಸ್ಥಿತಂ ದಿವ್ಯಂ ವೃಷತೀರ್ಥಂ ನರಾಧಿಪ ॥೫೬॥
ಭೃಗುತೀರ್ಥಸ್ಯ ಮಾಹಾತ್ಮ್ಯಂ ಯಃ ಶೃಣೋತಿ ನರಃ ಸಕೃತ್ ।
ವಿಮುಕ್ತಃ ಸರ್ವಪಾಪೇಭ್ಯೋ ರುದ್ರಲೋಕಂ ಸ ಗಚ್ಛತಿ ॥೫೭॥
ತತೋ ಗಚ್ಛೇತ ರಾಜೇನ್ದ್ರ ಗೌತಮೇಶ್ವರಮುತ್ತಮಮ್ ।
ತತ್ರ ಸ್ನಾತ್ವಾ ನರೋ ರಾಜನ್ನುಪವಾಸಪರಾಯಣಃ ॥೫೮॥
ಕಾಞ್ಚನೇನ ವಿಮಾನೇನ ಬ್ರಹ್ಮಲೋಕೇ ಮಹೀಯತೇ ।
ಧೌತಪಾಪಂ ತತೋ ಗಚ್ಛೇದ್ಧೌತಂ ಯತ್ರ ವೃಷೇಣ ತು ॥೫೯॥

---

ಗ್ರಹಣದ ಕಾಲದಲ್ಲಿ ಮಾಡಿದ ದಾನವು ಅಕ್ಷಯವಾಗುವುದು. ಈ ಗ್ರಹಣಕಾಲದಲ್ಲಿ ಮಾಡಿದ ದಾನವೂ ಮತ್ತು ಸ್ನಾನವೂ ಅನಂತ ಫಲವನ್ನು ಕೊಡುವುದು. ಸೂರ್ಯಗ್ರಹಣ ಮತ್ತು ಚಂದ್ರ ಗ್ರಹಣದ ಸಮಯದಲ್ಲಿ ವೃಷೋತ್ಸರ್ಗವೆಂಬ ವೃಷಭ ವಿಸರ್ಜನ ಕರ್ಮವು ಬಹಳ ಮೇಲಾದುದು.

೫೬. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ನರ್ಮದಾನದಿಯಲ್ಲಿರುವ ಶ್ರೇಷ್ಠವಾದ ವೃಷತೀರ್ಥವನ್ನು ವಿಷ್ಣುಮಾಯೆಗೊಳಗಾಗಿ ಮುಗ್ಧರಾದ ಮನುಷ್ಯರು ತಿಳಿಯಲಾರರು.

೫೭. ಭೃಗುತೀರ್ಥದ ಮಹಿಮೆಯನ್ನು ಒಂದಾವೃತ್ತಿ ಕೇಳಿದ ಮಾತ್ರದಿಂದಲೇ ಮನುಷ್ಯನು ಸರ್ವಪಾಪಗಳಿಂದ ಮುಕ್ತನಾಗಿ ರುದ್ರಲೋಕವನ್ನು ಹೊಂದುವನು.

೫೮–೬೦. ಮುಂದೆ ಗೌತಮಕ್ಷೇತ್ರಯಾತ್ರೆಯನ್ನು ಮಾಡಬೇಕು. ಅಲ್ಲಿ ಉಪವಾಸವಿದ್ದು ಸ್ನಾನಮಾಡಬೇಕು. ಹೀಗೆ ಮಾಡುವವನು ಸುವರ್ಣವಿಮಾನವನ್ನು ಹೊಂದಿ ಬ್ರಹ್ಮಲೋಕದಲ್ಲಿ ಪೂಜಿತನಾಗುವನು. ಮುಂದೆ ಧೌತಪಾಪಕ್ಷೇತ್ರವನ್ನು ಹೊಂದಬೇಕು. ಇಲ್ಲಿ ಧರ್ಮವು ಪಾಪವನ್ನು ನಾಶಮಾಡಿ ಕ್ಷೇತ್ರವನ್ನು ಶುದ್ಧಿಮಾಡಿರುವುದು. ಎಲೈ ಯುಧಿ

ನರ್ಮದಾಯಾಂ ಸ್ಥಿತಂ ರಾಜನ್ಸರ್ವಪಾತಕನಾಶನಮ್ ।
ತತ್ರ ತೀರ್ಥೇ ನರಃ ಸ್ನಾತ್ವಾ ಬ್ರಹ್ಮಹತ್ಯಾಂ ವ್ಯಪೋಹತಿ ॥೬೦॥

ತಸ್ಮಿಂಸ್ತೀರ್ಥೇ ತು ರಾಜೇನ್ದ್ರ ಪ್ರಾಣತ್ಯಾಗಂ ಕರೋತಿ ಯಃ ।
ಚತುರ್ಭುಜಸ್ತ್ರಿನೇತ್ರಸ್ತು ರುದ್ರತುಲ್ಯಬಲೋ ಭವೇತ್ ॥೬೧॥

ವಸೇತ್ಕಲ್ಪಾಯುತಂ ಸಾಗ್ರಂ ರುದ್ರತುಲ್ಯಪರಾಕ್ರಮಃ ।
ಕಾಲೇನ ಮಹತಾ ಪ್ರಾಪ್ತಃ ಪೃಥಿವ್ಯಾಮೇಕರಾಡ್ಭವೇತ್ ॥೬೨॥

ತತೋ ಗಚ್ಛೇತ ರಾಜೇನ್ದ್ರ ಏರಣ್ಡೀತೀರ್ಥಮುತ್ತಮಮ್ ।
ಪ್ರಯಾಗೇ ಯತ್ಫಲಂ ದೃಷ್ಟಂ ಮಾರ್ಕಣ್ಡೇಯೇನ ಭಾಷಿತಮ್ ॥

ತತ್ಫಲಂ ಲಭತೇ ರಾಜನ್ಸ್ನಾತ ಮಾತ್ರಸ್ತು ಮಾನವಃ ।
ಮಾಸಿ ಭಾದ್ರಪದೇ ಚೈವ ಶುಕ್ಲಪಕ್ಷಸ್ಯ ಚಾಷ್ಟಮಿಮಾಮ್ ॥೬೪॥

---

ಷ್ಠಿರ ಮಹಾರಾಜನೇ! ಈ ಧೌತತೀರ್ಥವು ನರ್ಮದಾನದಿಯಲ್ಲಿ ಇದ್ದು ಕೊಂಡು ಪಾಪವನ್ನು ಪರಿಹರಿಸುವುದಾಗಿರುವುದು. ಇಲ್ಲಿ ಸ್ನಾನಮಾಡಿ ದರೆ ಬ್ರಹ್ಮಹತ್ಯೆಯು ಕೂಡ ಹೋಗುವುದು.

೬೧–೬೨ ಎಲೈ ರಾಜೇಂದ್ರನೇ! ಆ ತೀರ್ಥದಲ್ಲಿ ಪ್ರಾಣತ್ಯಾಗ ಮಾಡುವವನು ನಾಲ್ಕುಭುಜಗಳಿಂದಲೂ, ಮೂರುಕಣ್ಣುಗಳಿಂದಲೂ ಕೂಡಿ, ರುದ್ರನಿಗೆ ಸಮಬಲನಾಗುವನು. ಹೀಗೆ ರುದ್ರಪಾರಾಕ್ರಮ ದಿಂದ ಕೂಡಿ ಹತ್ತುಸಾವಿರ ಕಲ್ಪಗಳಿಗಿಂತಲೂ ಮಿಗಿಲಾಗಿರುವನು. ಅನಂತರ ಬಹುಕಾಲದ ಮೇಲೆ, ಪೃಥ್ವಿಗೆಲ್ಲಾ ಒಬ್ಬನೇ ರಾಜನಾಗಿ ಹುಟ್ಟುವನು.

೬೩–೬೪ ಎಲೈ ಯುಧಿಷ್ಠಿರ ರಾಜೇಂದ್ರನೇ! ಮುಂದೆ ಸಿಗುವ ಏರಂಡೀತೀರ್ಥದ ಫಲವು ಪ್ರಯಾಗಕ್ಷೇತ್ರದ ಫಲಕ್ಕೆ ಸಮವಾದುದೆಂದು ಮಾರ್ಕಂಡೇಯ ಮುನಿಯು ಹೇಳಿರುವನು. ಇಲ್ಲಿ ಸ್ನಾನಮಾಡುವವನು ಪ್ರಯಾಗಕ್ಷೇತ್ರದಲ್ಲಿ ಸ್ನಾನಮಾಡಿದ ಫಲವನ್ನೇ ಹೊಂದುವನು. ಭಾದ್ರ ಪದ ಶುಕ್ಲ ಅಷ್ಟಮಿಯ ದಿವಸ ಒಂದು ರಾತ್ರಿ ಉಪವಾಸಪೂರ್ವಕವಾಗಿ

ಉಪೋಷ್ಯ ರಜನೀಮೇಕಾಂ ತತ್ರ ಸ್ನಾನಂ ಸಮಾಚರೇತ್ ।
ಯಮದೂತೈರ್ನ ಬಾಧ್ಯೇತ ಇನ್ದ್ರಲೋಕಂ ಸ ಗಚ್ಛತಿ ॥೬೫॥

ತತೋ ಗಚ್ಛೇತ ರಾಜೇನ್ದ್ರ ಸಿದ್ಧೋ ಯತ್ರ ಜನಾರ್ದನಃ ।
ಹಿರಣ್ಯದ್ವೀಪ ವಿಖ್ಯಾತಂ ಸರ್ವಪಾಪಪ್ರಣಾಶನಮ್ ।
ತತ್ರ ಸ್ನಾತ್ವಾ ನರೋ ರಾಜನ್ಧನವಾನ್ರೂಪವಾನ್ಭವೇತ್ ॥೬೬॥

ತತೋ ಗಚ್ಛೇತ ರಾಜೇನ್ದ್ರ ತೀರ್ಥಂ ಕನಖಲಂ ಮಹತ್ ।
ಗರುಡೇನ ತಪಸ್ತಪ್ತಂ ತಸ್ಮಿಂಸ್ತೀರ್ಥೇ ನರಾಧಿಪ ॥೬೭॥

ವಿಖ್ಯಾತಂ ಸರ್ವಲೋಕೇಷು ಯೋಗಿನೀ ತತ್ರ ತಿಷ್ಠತಿ
ಕ್ರೀಡತೇ ಯೋಗಿಭಿಃ ಸಾರ್ಧಂ ಶಿವೇನ ಸಹ ನೃತ್ಯತಿ ॥೬೮॥

ತತ್ರ ಸ್ನಾತ್ವಾ ನರೋ ರಾಜನ್ರುದ್ರಲೋಕೇ ಮಹೀಯತೇ ।
ತತೋ ಗಚ್ಛೇತ ರಾಜೇನ್ದ್ರ ಈಶತೀರ್ಥಮನುತ್ತಮಂ ॥೬೯॥

---

ಇಲ್ಲಿ ಸ್ನಾನಮಾಡುವವನು ಯಮದೂತರಿಂದ ಹಿಂಸೆಯನ್ನು ಹೊಂದು ವುದೇ ಇಲ್ಲ; ಆತನು ಇಂದ್ರಲೋಕವನ್ನೇ ಹೊಂದುವನು.

೬೬. ಮುಂದೆ ಜನಾರ್ದನನಿಗೆ ಸಿದ್ಧಿಪ್ರದವಾದ, ಸಮಸ್ತಪಾಪ ಗಳನ್ನೂ ಪರಿಹರಿಸುವ, ಹಿರಣ್ಯದ್ವೀಪ ತೀರ್ಥವನ್ನು ಹೊಂದಿ ಸ್ನಾನ ಮಾಡುವವನು ಐಶ್ವರ್ಯದಿಂದಲೂ ರೂಪದಿಂದಲೂ ಶೋಭಿಸುವನು.

೬೭–೬೯. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಮುಂದೆ ಗರುಡನಿಗೆ ತಪಃಸ್ಥಾನವಾದ ಖನಖಲ ತೀರ್ಥವನ್ನು ಹೊಂದಬೇಕು. ಈ ತೀರ್ಥವು ಸರ್ವಲೋಕಗಳಲ್ಲಿಯೂ ಪ್ರಸಿದ್ಧಿಯಾಗಿರುವುದು. ಇಲ್ಲಿ ಯೋಗಿನಿಯು ಯೋಗಿಗಳೊಂದಿಗೆ ಕ್ರೀಡಿಸುತ್ತಾ ಈಶ್ವರನೊಡನೆ ನೃತ್ಯ ಮಾಡುತ್ತಾ ಇರುವಳು. ಇಲ್ಲಿ ಸ್ನಾನಮಾಡುವವನು ರುದ್ರಲೋಕದಲ್ಲಿ ಪೂಜಾರ್ಹನಾಗುವನು. ಮುಂದೆ ಶ್ರೇಷ್ಠವಾದ ಈಶತೀರ್ಥವನ್ನು ಹೊಂದಬೇಕು.

ಈಶಸ್ತತ್ರ ವಿನಿರ್ಮುಕ್ತೋ ಗತ ಊರ್ಧ್ವಂ ನ ಸಂಶಯಃ ।
ತತೋ ಗಚ್ಛೇತ ರಾಜೇನ್ದ್ರ ಸಿದ್ಧೋ ಯತ್ರ ಜನಾರ್ದನಃ ॥೭೦॥

ವಾರಾಹಂ ರೂಪಮಾಸ್ಥಾಯ ಅರ್ಚಿತಃ ಪರಮೇಶ್ವರಃ ।
ವಾರಾಹತೀರ್ಥೇ ನರಃ ಸ್ನಾತ್ವಾ ದ್ವಾದಶ್ಯಾಂ ತು ವಿಶೇಷತಃ ॥೭೧॥

ವಿಷ್ಣುಲೋಕಮವಾಪ್ನೋತಿ ನರಕಂ ತು ನ ಗಚ್ಛತಿ ।
ತತೋ ಗಚ್ಛೇತ ರಾಜೇನ್ದ್ರ ಸೋಮತೀರ್ಥಮನುತ್ತಮಮ್ ॥೭೨॥

ಪೌರ್ಣಮಾಸ್ಯಾಂ ವಿಶೇಷೇಣ ತತ್ರ ಸ್ನಾನಂ ಸಮಾಚರೇತ್ ।
ಪ್ರಣಿಪತ್ಯ ಚ ಈಶಾನಂ ಬಲಿಸ್ತಸ್ಯ ಪ್ರಸೀದತಿ ॥೭೩॥

ಹರಿಶ್ಚನ್ದ್ರಪುರಂ ದಿವ್ಯಮನ್ತರಿಕ್ಷೇ ತು ದೃಶ್ಯತೇ ।
ಚಕ್ರಧ್ವಜೇ ಸಮಾಪ್ತೇ ಸುಪ್ತೇ ನಾಗಾರಿಕೇತನೇ ॥೭೪॥

---

೭೦–೭೨. ಇಲ್ಲಿ ಈಶನೂ ಕೂಡ ಮುಕ್ತನಾಗಿ ಉತ್ತಮ ಗತಿಯನ್ನು ಹೊಂದಿದನೆಂಬ ವಿಷಯದಲ್ಲಿ ಸಂದೇಹವಿಲ್ಲವು. ಮುಂದೆ ಜನಾರ್ದನನಿಗೆ ಸಿದ್ಧಿಪ್ರದವಾದ ವಾರಾಹತೀರ್ಥವನ್ನು ಹೊಂದಬೇಕು. ಇಲ್ಲಿ ವರಾಹ ರೂಪಿಯಾದ ವಿಷ್ಣುವು ಪೂಜಿಸಲ್ಪಟ್ಟನು. ಈ ತೀರ್ಥದಲ್ಲಿ ದ್ವಾದಶೀ ದಿವಸ ಸ್ನಾನಮಾಡಿದರೆ ಫಲವು ವಿಶೇಷವಾಗಿ ಲಭಿಸುವುದು. ಇಲ್ಲಿ ಸ್ನಾನಮಾಡುವವನು ವಿಷ್ಣುಲೋಕವನ್ನು ಸೇರುವನು ; ನರಕವನ್ನು ಕಾಣುವುದೇ ಇಲ್ಲ. ಮುಂದೆ ಶ್ರೇಷ್ಠವಾದ ಸೋಮತೀರ್ಥವನ್ನು ಹೊಂದಬೇಕು.

೭೩–೭೪. ಈ ಸೋಮತೀರ್ಥದಲ್ಲಿ ಹುಣ್ಣಿಮೆಯ ದಿವಸ ಸ್ನಾನವು ಅತಿ ಮೇಲಾದುದು. ಇಲ್ಲಿ ಸ್ನಾನಮಾಡಿ ಈಶ್ವರನ ನಮಸ್ಕಾರ ಮಾಡುವವನಿಗೆ ಬಲೀಂದ್ರನು ಪ್ರಸನ್ನನಾಗುವನು. ಗೋಪೂಜೆಯಾದ ನಂತರ, ವಿಷ್ಣುವು ಮಲಗಿದ ಮೇಲೆ (ಚಾತುರ್ಮಾಸದಲ್ಲಿ) ಈ ಸ್ಥಳದಿಂದ ನೋಡಿದರೆ, ಅಂತರಿಕ್ಷದಲ್ಲಿ ಹರಿಶ್ಚಂದ್ರಪುರವು ಕಾಣಿಸುತ್ತದೆ.

ನರ್ಮದಾತೋಯವೇಗೇನ ರುರುಕಚ್ಛೋಪಸೇವಿತೇ ।
ತಸ್ಮಿಂಸ್ತೀರ್ಥೇ ನಿವಾಸಂ ಚ ವಿಷ್ಣುಃ ಶಂಕರಮಬ್ರವೀತ್ ॥೭೫॥
ದ್ವೀಪೇಶ್ವರೇ ನರಃ ಸ್ನಾತ್ವಾ ಲಭೇದ್ಬಹುಸುವರ್ಣಕಮ್ ।
ತತೋ ಗಚ್ಛೇತ ರಾಜೇಂದ್ರ ರುದ್ರಕನ್ಯಾಸುಸಂಗಮಮ್ ॥೭೬॥
ಸ್ನಾತಮಾತ್ರೋ ನರಸ್ತತ್ರ ದೇವ್ಯಾಃ ಸ್ಥಾನಮವಾಪ್ನುಯಾತ್ ।
ದೇವತೀರ್ಥಂ ತತೋ ಗಚ್ಛೇತ್ಸರ್ವದೇವನಮಸ್ಕೃತಮ್ ॥೭೭॥
ತತ್ರ ಸ್ನಾತ್ವಾ ತು ರಾಜೇನ್ದ್ರ ದೈವತೈಃ ಸಹ ಮೋದತೇ ।
ತತೋ ಗಚ್ಛೇತ ರಾಜೇನ್ದ್ರ ಶಿಖಿತೀರ್ಥಮನುತ್ತಮಮ್ ॥೭೮॥
ತತ್ರ ಯೈ ದೀಯತೇ ದಾನಂ ಸರ್ವಂ ಕೋಟಿಗುಣಂ ಭವೇತ್ ।
ಅಪರಪಕ್ಷೇಽಮಾವಾಸ್ಯಾಂ ಸ್ನಾನಂ ತತ್ರ ಸಮಾಚರೇತ್ ॥೭೯॥
ಬ್ರಾಹ್ಮಣಂ ಭೋಜಯೇದೇಕಂ ಕೋಟಿರ್ಭವತಿ ಭೋಜಿತಾ ।
ಭೃಗುತೀರ್ಥೇ ತು ರಾಜೇನ್ದ್ರ ತೀರ್ಥಕೋಟಿರ್ವ್ಯವಸ್ಥಿತಾ ॥೮೦॥

---

೭೫. ವೇಗವಾದ ನರ್ಮದೆಯ ನೀರುಳ್ಳ, ಜಿಂಕೆಗಳು ವಾಸಮಾಡುವ ದಡವುಳ್ಳ, ಆ ತೀರ್ಥದಲ್ಲಿ ವಾಸಮಾಡುವುದು ಮಂಗಳಕರವೆಂದು ವಿಷ್ಣುವು ಹೇಳಿರುವನು.

೭೬–೭೮. ಮುಂದೆ ದ್ವೀಪೇಶ್ವರಕ್ಷೇತ್ರದಲ್ಲಿ ಸ್ನಾನಮಾಡುವವನು ಯಥೇಚ್ಛವಾಗಿ ಸುವರ್ಣವನ್ನು ಹೊಂದುವನು. ಮುಂದೆ ರುದ್ರಕನ್ಯಾಸಂಗಮವನ್ನು ಸೇರಬೇಕು. ಅಲ್ಲಿ ಸ್ನಾನಮಾಡುವವನು ಶ್ರೀದೇವಿಯ ಸ್ಥಾನವನ್ನು ಹೊಂದುವನು. ಮುಂದೆ ಸರ್ವದೇವತೆಗಳಿಗೂ ಪೂಜ್ಯವಾದ ದೇವತೀರ್ಥವನ್ನು ಹೊಂದಬೇಕು. ಎಲೈ ರಾಜೇಂದ್ರನೇ! ಅಲ್ಲಿ ಸ್ನಾನಮಾಡುವವನು ದೇವತೆಗಳೊಡನೆ ಸೇರಿ, ಸುಖವನ್ನನುಭವಿಸುವನು. ಮುಂದೆ ಶಿಖಿತೀರ್ಥವನ್ನು ಸೇರಬೇಕು.

೭೯–೮೨. ಅಲ್ಲಿ ಮಾಡಿದ ದಾನವು ಒಂದಕ್ಕೆ ಒಂದು ಕೋಟಿಯಾಗುವುದು. ಅಲ್ಲಿ ಪೂರ್ಣ ಅಮಾವಸ್ಯೆಯಲ್ಲಿ ಸ್ನಾನ ಮಾಡಬೇಕು. ಅಲ್ಲಿ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಕೋಟಿಬ್ರಾಹ್ಮಣರಿಗೆ

ಅಕಾಮೋವಾ ಸಕಾಮೋವಾ ತತ್ರ ಸ್ನಾಯೀತ ಮಾನವಃ ।
ಅಶ್ವಮೇಧಮವಾಪ್ನೋತಿ ದೈವತೈಃ ಸಹ ಮೋದತೇ ॥೮೧॥
ತತ್ರ ಸಿದ್ಧಿಮವಾಪ್ನೋತಿ ಭೃಗುಸ್ತು ಮುನಿಪುಙ್ಗವಃ ।
ಅವತಾರಃ ಕೃತಸ್ತೇನ ಶಂಕರೇಣ ಮಹಾತ್ಮನಾ ॥೮೨॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ವಿಂಶೋಽಧ್ಯಾಯಃ

---

ಭೋಜನಮಾಡಿಸಿದಂತಾಗುವುದು. ಭೃಗುತೀರ್ಥದಲ್ಲಿ ಒಂದು ಕೋಟಿ ತೀರ್ಥಗಳು ವಾಸಿಸಿರುವುವು. ಅವನಿಗೆ ಇಚ್ಛೆ ಇರಲಿ, ಇಲ್ಲದಿರಲಿ, ಅಲ್ಲಿ ಸ್ನಾನಮಾಡುವ ಮನುಷ್ಯನು ಅಶ್ವಮೇಧ ಫಲಭಾಗಿಯಾಗಿ, ದೇವತೆಗಳೊಂದಿಗೆ ಸುಖವಾಗಿರುವನು. ಅಲ್ಲಿಯೇ ಮುನಿಶ್ರೇಷ್ಠನಾದ ಭೃಗುವು ಸಿದ್ಧಿಯನ್ನು ಹೊಂದಿದನು. ಅಲ್ಲಿಯೇ ಈಶ್ವರನೂ ಅವತರಿಸಿದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕವಿಂಶತಿತಮೋಽಧ್ಯಾಯಃ

॥ ನಾರದ ಉವಾಚ ॥

ತತೋ ಗಚ್ಛೇತ ರಾಜೇಂದ್ರ ವಿಹಂಗೇಶ್ವರ ಮುತ್ತಮಂ ॥
ದರ್ಶನಾತ್ತಸ್ಯ ರಾಜೇಂದ್ರ ಮುಚ್ಯತೇ ಸರ್ವಪಾತಕೈಃ ॥ ೧ ॥
ತತೋ ಗಚ್ಛೇತ ರಾಜೇಂದ್ರ ನರ್ಮದೇಶ್ವರ ಮುತ್ತಮಂ ।
ತತ್ರ ಸ್ನಾತ್ವಾ ನರೋರಾಜನ್ ಸ್ವರ್ಗಲೋಕೇ ಮಹೀಯತೇ ॥ ೨ ॥
ಅಶ್ವತೀರ್ಥಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಸುಭಗೋ ದರ್ಶನೀಯಶ್ಚ ಭೋಗವಾನ್ ಜಾಯತೇ ನರಃ ॥ ೩ ॥
ಪಿತಾಮಹಂ ತತೋ ಗಚ್ಛೇದ್ಬ್ರಹ್ಮಣಾ ನಿರ್ಮಿತಂ ಪುರಾ ।
ತತ್ರ ಸ್ನಾತ್ವಾ ನರೋ ಭಕ್ತ್ಯಾ ಪಿತೃಪಿಂಡಂತು ದಾಪಯೇತ್ ॥ ೪ ॥

---

### ಪದ್ಮಪುರಾಣದ ಆದಿಖಂಡದ ಇಪ್ಪತ್ತೊಂದನೆಯ ಅಧ್ಯಾಯವು

೧–೩. ನಾರದಮುನಿಯು ಹೇಳಿದನು: ಎಲೈ ಯುಧಿಷ್ಠಿರ ನೃಪಶ್ರೇಷ್ಠನೇ? ಮುಂದೆ ವಿಹಂಗೇಶ್ವರ ಕ್ಷೇತ್ರವನ್ನು ನೋಡಿದ ಮಾತ್ರದಿಂದಲೇ ಮನುಷ್ಯನು ಸರ್ವಪಾಪಗಳಿಂದಲೂ, ಮುಕ್ತನಾಗುವನು. ಮುಂದೆ ನರ್ಮದೇಶ್ವರತೀರ್ಥದಲ್ಲಿ ಸ್ನಾನಮಾಡುವವನು ಸ್ವರ್ಗಲೋಕದಲ್ಲಿ ಪೂಜಾರ್ಹನಾಗುವನು. ಮುಂದೆ ಅಶ್ವತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನ ಮಾಡುವವನು ಕೀರ್ತಿಶಾಲಿಯೂ, ಸೌಂದರ್ಯಶಾಲಿಯೂ, ಸುಖಿಯೂ, ಆಗುವನು.

೪–೫. ಮುಂದೆ ಬ್ರಹ್ಮನಿಂದ ನಿರ್ಮಿತವಾದ ಪಿತಾಮಹಕ್ಷೇತ್ರದಲ್ಲಿ ಸ್ನಾನಮಾಡಿ ಭಕ್ತಿಯಿಂದ ಪಿತೃಗಳಿಗೆ ಪಿಂಡದಾನವನ್ನು ಮಾಡಬೇಕು

ತಿಲದರ್ಭವಿಮಿಶ್ರಂ ತು ಉದಕಂ ತು ಪ್ರದಾಪಯೇತ್ ।
ತಸ್ಯತೀರ್ಥಪ್ರಭಾವೇಣ ಸರ್ವಂ ಭವತಿ ಚಾಕ್ಷಯಂ ॥ ೫ ॥

ಸಾವಿತ್ರೀತೀರ್ಥಮಾಸಾದ್ಯ ಯಸ್ತು ಸ್ನಾನಂ ಸಮಾಚರೇತ್ ।
ವಿಧೂಯ ಸರ್ವಪಾಪಾನಿ ಬ್ರಹ್ಮಲೋಕೇ ಮಹೀಯತೇ ॥ ೬ ॥

ಮನೋಹರಂ ಚ ತತ್ರೈವ ತೀರ್ಥಂ ಪರಮಶೋಭನಂ ।
ತತ್ರ ಸ್ನಾತ್ವಾ ನರೋ ರಾಜನ್ ಪಿತೃಲೋಕೇ ಮಹೀಯತೇ ॥ ೭ ॥

ತತೋ ಗಚ್ಛೇತ ರಾಜೇಂದ್ರ ಮಾನಸಂ ತೀರ್ಥ ಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ರುದ್ರಲೋಕೇ ಮಹೀಯತೇ॥ ೮ ॥

ತತೋ ಗಚ್ಛೇತ ರಾಜೇಂದ್ರ ಕ್ರತುತೀರ್ಥಮನುತ್ತಮಂ ।
ವಿಖ್ಯಾತಂ ತ್ರಿಷು ಲೋಕೇಷು ಸರ್ವಪಾಪಪ್ರಣಾಶನಂ ॥ ೯ ॥

ಯಾನ್ಯಾನ್ ಪ್ರಾರ್ಥಯತೇ ಕಾಮಾನ್ ಪಶುಪುತ್ರಧನಾನಿ ಚ ।
ಪ್ರಾಪ್ನುಯಾತ್ತಾನಿ ಸರ್ವಾಣಿ ತತ್ರ ಸ್ನಾತ್ವಾ ನರಾಧಿಪ ॥೧೦॥

---

ಮತ್ತು ತಿಲ, ದರ್ಭ ಸಹಿತವಾದ ಜಲವನ್ನೂ ದಾನಮಾಡಬೇಕು ಇಲ್ಲಿ ಮಾಡಿದ ಪ್ರತಿಯೊಂದು ಕರ್ಮವೂ, ತೀರ್ಥದ ಮಹಿಮೆಯಿಂದ ಹೆಚ್ಚು ಕಾಲ ಫಲವನ್ನು ಕೊಡುವುದು.

೬–೮. ಮುಂದೆ ಸಾವಿತ್ರೀತೀರ್ಥದಲ್ಲಿ ಸ್ನಾನಮಾಡುವವನು ಸರ್ವ ಪಾಪಗಳನ್ನು ಕಳೆದು ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು. ಮುಂದೆ ಮನೋಹರತೀರ್ಥದಲ್ಲಿ ಸ್ನಾನ ಮಾಡುವವನು ಪಿತೃಲೋಕದಲ್ಲಿ ಪೂಜ್ಯ ನಾಗುವನು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ? ಮಾನಸ ತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡುವ ಮನುಷ್ಯನು ರುದ್ರಲೋಕ ದಲ್ಲಿ ಪೂಜ್ಯನಾಗುವನು.

೯–೧೦. ಮುಂದೆ ಮೂರು ಲೋಕದಲ್ಲೂ ಪ್ರಸಿದ್ಧವಾದ ಸರ್ವ ಪಾಪಗಳನ್ನೂ ಪರಿಹರಿಸುವ ಕ್ರತುತೀರ್ಥವು ಲಭಿಸುವುದು. ಆ ತೀರ್ಥದಲ್ಲಿ ಸ್ನಾನಮಾಡುವವನು ಪಶು ಪುತ್ರಾದಿ ಫಲಗಳನ್ನು ತನ್ನ ಇಷ್ಟಾನುಸಾರ ವಾಗಿ ಹೊಂದುವನು.

ತತೋ ಗಚ್ಛೇತ ರಾಜೇಂದ್ರ ತ್ರಿದಶದ್ಯೋತಿವಿಶ್ರುತಂ ।
ತತ್ರ ತಾ ಋಷಿಕನ್ಯಾಸ್ತು ತಪೋಽತಪ್ಯಂತ ಸುವ್ರತಾಃ ॥೧೧॥

ಭರ್ತಾ ಭವತು ಸರ್ವಾಸಾಮೀಶ್ವರಃ ಪ್ರಭುರವ್ಯಯಃ ।
ಪ್ರೀತಸ್ತಾಸಾಂ ಮಹಾದೇವೋ ದಂಡರೂಪಧರೋ ಹರಃ ॥೧೨॥

ವಿಕೃತಾನನಬೀಭತ್ಸಸ್ತ್ವಚ್ಚ ತೀರ್ಥಮುಪಾಗತಃ ।
ತತ್ರ ಕನ್ಯಾ ಮಹಾರಾಜ ವರಾಯ ಪರಮೇಶ್ವರಃ ॥೧೩॥

ಕನ್ಯಾ ಋದ್ಧಿಂ ಚ ಯಃ ಸೇವೇತ್ ಕನ್ಯಾದಾನಂ ಪ್ರಯಚ್ಛತಿ ।
ತೀರ್ಥಂ ತತ್ರ ಮಹಾರಾಜ ದಶಕನ್ಯೇತಿ ವಿಶ್ರುತಂ ।
ತತ್ರ ಸ್ನಾತ್ವಾರ್ಚಯೇದ್ದೇವಂ ಸರ್ವಪಾಪೈಃ ಪ್ರಮುಚ್ಯತೇ ॥೧೪॥

---

೧೧–೧೨. ಹೇ ರಾಜೇಂದ್ರನೇ? ಮುಂದೆ ತ್ರಿದಶದ್ಯೋತಿ ಎಂದು ಪ್ರಸಿದ್ಧವಾದ, ತೀರ್ಥವನ್ನು ಹೊಂದಬೇಕು. ಅಲ್ಲಿಯೇ ಆ ಪ್ರಸಿದ್ಧರಾದ ಋಷಿಕನ್ನಿಕೆಯರು ವ್ರತಗ್ರಹಣವನ್ನು ಮಾಡಿ ತಪಸ್ಸನ್ನಾಚರಿಸಿದರು. ಸರ್ವಜಗದೀಶ್ವರನಾದ, ನಿತ್ಯನಾದ ಶಿವನೇ ನಮಗೆಲ್ಲಾ ಪತಿಯಾಗಲೆಂದು ಉದ್ದೇಶಿಸಿ ಅವರೆಲ್ಲರೂ ತಪಸ್ಸು ಮಾಡುತ್ತಲಿದ್ದರು. ಹೀಗೆ ತಪಸ್ಸು ಮಾಡುತ್ತಿರುವ ಇವರ ತಪಸ್ಸಿಗೆ ಶಿವನು ಮೆಚ್ಚಿ ಕೋಲೂರಿಕೊಂಡು ಬಂದನು.

೧೩–೧೪. ಅಸಹ್ಯವಾದ ಮುಖವಿಕಾರವನ್ನು ಹೊಂದಿ ನೋಡಿದ ಮಾತ್ರಕ್ಕೆ ಜಿಗುಪ್ಸೆಯುಂಟಾಗುವ ಆಕಾರವನ್ನು ಧರಿಸಿ ಪರಮೇಶ್ವರನು ಆ ಕನ್ನಿಕೆಯರನ್ನು ವರಿಸಲು ಬಂದನು. ಯಾವನು ಬಹುಕನ್ನಿಕೆಯರನ್ನು ಪಡೆಯುವನೋ ಅವನು ಕನ್ಯಾದಾನಫಲವನ್ನು ಬಹುವಾಗಿಯೇ ಪಡೆಯುವನು. ಎಲೈ ಮಹಾರಾಜನೇ? ಆ ತ್ರಿದಶದ್ಯೋತಿ ತೀರ್ಥವೇ ಅಲ್ಲಿಂದೀಚೆಗೆ ದಶಕನ್ಯಾ ಎಂಬುದಾಗಿ ಪ್ರಸಿದ್ಧವಾಯಿತು. ಅಲ್ಲಿ ಸ್ನಾನಮಾಡಿ ಈಶ್ವರನನ್ನು ಪೂಜಿಸುವವನು ಸರ್ವಪಾಪಗಳಿಂದಲೂ ಮುಕ್ತನಾಗುವನು.

ತತೋ ಗಚ್ಛೇತ ರಾಜೇಂದ್ರ ಸ್ವರ್ಗಬಿಂದುರಿತಿ ಶ್ರುತಂ ।
ತತ್ರ ಸ್ನಾತ್ವಾ ನರೋ ರಾಜನ್ ದುರ್ಗತಿಂ ಚ ನ ಪಶ್ಯತಿ ॥೧೪॥
ಅಪ್ಸರೇಶಂ ತತೋ ಗಚ್ಛೇತ್ಸ್ನಾನಂ ತತ್ರ ಸಮಾಚರೇತ್ ।
ಕ್ರೀಡತೇ ನಾಗಲೋಕಸ್ಥೋಽಪ್ಸರೋಭಿಃ ಸಹ ಮೋದತೇ ॥೧೬॥
ತತೋ ಗಚ್ಛೇತ ರಾಜೇಂದ್ರ ನರಕಂ ತೀರ್ಥ ಮುತ್ತಮಂ ।
ತತ್ರ ಸ್ನಾತ್ವಾರ್ಚಯೇದ್ದೇವಂ ನರಕಂ ಚ ನ ಗಚ್ಛತಿ ॥೧೭॥
ಭಾರಭೂತಂ ತತೋ ಗಚ್ಛೇದುಪವಾಸಪರಾಯಣಃ ।
ಏತತ್ತೀರ್ಥಂ ಸಮಾಸಾದ್ಯ ಅವತಾರಂ ತು ಶಾಂಭವಂ ॥೧೮॥
ತಸ್ಮಿಂಸ್ತೀರ್ಥೇ ನರಃ ಸ್ನಾತ್ವಾ ಭಾರಭೂತೇ ಮಹಾತ್ಮನಃ ।
ಯತ್ರ ತತ್ರ ಮೃತಸ್ಯಾಪಿಧ್ರುವಂ ಗಾಣೇಶ್ವರೀ ಗತಿಃ ॥೧೯॥
ಕಾರ್ತಿಕಸ್ಯ ತು ಮಾಸಸ್ಯ ಅರ್ಚಯಿತ್ವಾ ಮಹೇಶ್ವರಂ ।
ಅಶ್ವಮೇಧಾಚ್ಛತಗುಣಂ ಪ್ರವದಂತಿ ಮನೀಷಿಣಃ ॥೨೦॥

---

೧೪–೧೬. ಮುಂದೆ ಸ್ವರ್ಗಬಿಂದು ತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡವವನು ಯಾವಾಗಲೂ, ದುರ್ಗತಿಯನ್ನು ನೋಡಲಾರನು. ಅನಂತರ ಅಪ್ಸರೇಶತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡುವವನು ನಾಗಲೋಕವನ್ನು ಸೇರಿ ಅಪ್ಸರಸ್ತ್ರೀಯರೊಂದಿಗೆ ಸಂತೋಷಪಡುವನು.

೧೭–೨೦. ಎಲ್ಲೈ ದೊರೆಯೇ ಅನಂತರ ಉತ್ತಮವಾದ ನರಕತೀರ್ಥ ವನ್ನು ಹೊಂದಬೇಕು. ಅಲ್ಲಿ ಸ್ನಾನಮಾಡಿ ನರಕೇಶ್ವರರನ್ನು ಪೂಜಿಸಿದರೆ ನರಕವನ್ನು ಹೊಂದುವುದಿಲ್ಲ. ಮುಂದೆ ಭಾರಭೂತತೀರ್ಥವನ್ನು ಸೇರಿ ಈಶ್ವರನ ಅವತಾರನಾದ ವಿರೂಪಾಕ್ಷನನ್ನು ಸೇವಿಸುವವನು ರುದ್ರಲೋಕ ದಲ್ಲಿ ಪೂಜಾರ್ಹನಾಗುವನು. ಆ ಭಾರಭೂತತೀರ್ಥದಲ್ಲಿ ಸ್ನಾನಮಾಡಿದ ಮಹಾತ್ಮನು ಎಲ್ಲಿ ಮೃತಿಯನ್ನು ಹೊಂದಿದರೂ ಸರಿಯೇ ಅವನು ಗಣ ಗಳಿಗೆ ಅಧಿಪತಿಯಾಗುವನು. ಕಾರ್ತಿಕಮಾಸದಲ್ಲಿ ಈಶ್ವರನನ್ನು ಪೂಜಿಸುವವನು ಅಶ್ವಮೇಧಯಾಗದ ನೂರರಷ್ಟು ಫಲವನ್ನು ಹೊಂದು ವನೆಂದು ವಿದ್ವಾಂಸರು ಹೇಳುವರು.

ದೀಪಿಕಾನಾಂ ಶತಂ ಕೃತ್ವಾ ಘೃತಪೂರ್ಣಂ ತು ದಾಪಯೇತ್ ।
ವಿಮಾನೈಃ ಸೂರ್ಯಸಂಕಾಶೈರ್ವ್ರಜತೇ ಯತ್ರ ಶಂಕರಃ ॥೨೧॥

ವೃಷಭಂ ಯಃ ಪ್ರಯಚ್ಛೇತ ಶಂಖಕುಂದೇಂದುಸನ್ನಿಭಂ ।
ವೃಷಯುಕ್ತೇನ ಯಾನೇನ ರುದ್ರಲೋಕಂ ಸ ಗಚ್ಛತಿ ॥೨೨॥

ಚರುಮೇಕಂ ತು ಯೋದದ್ಯಾತ್ ತಸ್ಮಿಂಸ್ತೀರ್ಥೇನರಾಧಿಪ ।
ಪಾಯಸಂ ಮಧುಸಂಯುಕ್ತಂ ಭಕ್ಷ್ಯಾಣಿವಿವಿಧಾನಿ ಚ ॥೨೩॥

ಯಥಾಶಕ್ತ್ಯಾ ತು ರಾಜೇಂದ್ರ ಭೋಜಯೇತ್ಸಹದಕ್ಷಿಣಂ ।
ತಸ್ಯ ತೀರ್ಥ ಪ್ರಭಾವೇಣ ಸರ್ವಂ ಕೋಟಿಗುಣಂ ಭವೇತ್ ॥೨೪॥

ನರ್ಮದಾಯಾ ಜಲಂ ಸಿಕ್ತ್ವಾ ಅರ್ಚಯಿತ್ವಾ ವೃಷಧ್ವಜಂ ।
ದುರ್ಗತಿಂ ಚ ನ ಪಶ್ಯಂತಿ ತಸ್ಯ ತೀರ್ಥಪ್ರಭಾವತಃ ॥೨೫॥

---

೨೧–೨೪. ಘೃತಪೂರ್ಣಗಳಾದ ನೂರುದೀಪಗಳನ್ನು ಸಮರ್ಪಿಸುವವನು ಸೂರ್ಯಸದೃಶಗಳಾದ ವಿಮಾನಗಳನ್ನೇರಿ ಈಶ್ವರನ ಸಮೀಪವನ್ನು ಸೇರುವನು. ಶಂಖದಂತೆಯೂ, ಕೋಲುಮಲ್ಲಿಗೆಯಂತೆಯೂ, ಚಂದ್ರನಂತೆಯೂ, ಬಿಳುಪಾದ ವೃಷಭವನ್ನು ದಾನಮಾಡುವವನು ವೃಷಭಯುಕ್ತವಾದ ಯಾನವನ್ನೇರಿ ರುದ್ರಲೋಕವನ್ನು ಸೇರುವನು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ? ಆ ತೀರ್ಥದಲ್ಲಿ ಚರುಪೂರ್ಣವಾದ ಪಾತ್ರೆಯನ್ನು ಒಂದನ್ನಾದರೂ ದಾನಮಾಡಬೇಕು. ಪಾಯಸವನ್ನೂ, ಮಧುವನ್ನೂ, ನಾನಾ ಭಕ್ಷ್ಯಗಳನ್ನೂ ಭೋಜನಮಾಡಿಸಬೇಕು. ಹೀಗೆ ತನ್ನ ಶಕ್ತಿಗನುಸಾರವಾಗಿ ಭೋಜನಮಾಡಿಸಿ ದಕ್ಷಿಣೆಯನ್ನು ಕೊಡಬೇಕು ಇಲ್ಲಿ ನಡೆಯಿಸಿದ ಒಂದೊಂದು ಕರ್ಮವೂ, ಆ ತೀರ್ಥದ ಮಹಿಮೆಯಿಂದ ಕೋಟಿಗುಣಯುಕ್ತವಾಗುವುದು.

೨೫. ನರ್ಮದಾನದಿಯಲ್ಲಿ ಸ್ನಾನಾದಿಗಳನ್ನಾಚರಿಸಿ ಶಿವಪೂಜೆಯನ್ನು ಮಾಡುವವನು ತೀರ್ಥದ ಮಹಿಮೆಯಿಂದ ಎಂದೆಂದಿಗೂ ದುರ್ಗತಿಯನ್ನು ಅರಿಯಲಾರನು.

ಏತತ್ತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ಪರಿತ್ಯಜೇತ್ ।
ಸರ್ವಪಾಪವಿಶುದ್ಧಾತ್ಮಾ ವ್ರಜತೇ ಯತ್ರ ಶಂಕರಃ ॥೨೬॥

ಜಲಪ್ರವೇಶಂ ಯಃ ಕುರ್ಯಾತ್ತಸ್ಮಿಂಸ್ತೀರ್ಥೇ ನರಾಧಿಪ ।
ಹಂಸಯುಕ್ತೇನ ಯಾನೇನ ರುದ್ರಲೋಕಂ ಸ ಗಚ್ಛತಿ ॥೨೭॥

ಯಾವಚ್ಚಂದ್ರಶ್ಚ ಸೂರ್ಯಶ್ಚ ಹಿಮವಾಂಶ್ಚ ಮಹೋದಧಿಃ ।
ಗಂಗಾದ್ಯಾಃ ಸರಿತೋ ಯಾವತ್ತಾವತ್ಸ್ವರ್ಗೇ ಮಹೀಯತೇ ॥೨೮॥

ಅನಾಶಕಂ ತು ಯಃ ಕುರ್ಯಾತ್ತಸ್ಮಿಂಸ್ತೀರ್ಥೆ ನರಾಧಿಪ ।
ಗರ್ಭವಾಸೇ ತು ರಾಜೇಂದ್ರ ನ ಪುನರ್ಜಾಯತೇ ನರಃ ॥೨೯॥

ತತೋ ಗಚ್ಛೇತ ರಾಜೇಂದ್ರ ಅಟವೀತೀರ್ಥ ಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಇಂದ್ರಸ್ಯಾರ್ಧಾಸನಂ ಲಭೇತ್ ॥೩೦॥

ಶೃಂಗತೀರ್ಥಂ ತತೋ ಗಚ್ಛೇತ್ಸರ್ವಪಾಪಪ್ರಣಾಶನಂ ।
ತತ್ರಾಪಿ ಸ್ನಾತಮಾತ್ರಸ್ಯ ಧ್ರುವಂ ಗಾಣೇಶ್ವರೀ ಗತಿಃ ॥೩೧॥

---

೨೬–೨೯. ಈ ತೀರ್ಥದಲ್ಲಿ ಪ್ರಾಣತ್ಯಾಗಮಾಡುವವನು ಸರ್ವ ಪಾಪಗಳನ್ನೂ ಕಳೆದು ಈಶ್ವರನಿರುವಲ್ಲಿಗೆ ಹೋಗಿ ಸೇರುವನು. ಮತ್ತು ಆ ತೀರ್ಥದಲ್ಲಿ ಜಲಪ್ರವೇಶಮಾಡಿ ಪ್ರಾಣವನ್ನು ಬಿಡುವವನು ಹಂಸ ದಿಂದ ಕೂಡಿದ ಯಾನವನ್ನೇರಿ ರುದ್ರಲೋಕವನ್ನು ಸೇರುವನು. ಚಂದ್ರನೂ, ಸೂರ್ಯನೂ, ಹಿಮವತ್ಪರ್ವತವೂ, ಸಮುದ್ರವೂ, ಗಂಗೆಯೇ ಮೊದಲಾದ ನದಿಗಳೂ, ಇರುವವರೆವಿಗೂ, ಇವನು ಸ್ವರ್ಗ ದಲ್ಲಿ ಪೂಜೆಗೊಳ್ಳುವನು. ಆ ತೀರ್ಥದಲ್ಲಿ ನಿರಶನ ವ್ರತವನ್ನು ಮಾಡುವ ವನು ಪುನಃ ಗರ್ಭವಾಸವನ್ನು ಅನುಭವಿಸುವುದೇ ಇಲ್ಲ.

೩೦. ಮುಂದೆ ಅಟವೀತೀರ್ಥವನ್ನು ಹೊಂದಿ ಅಲ್ಲಿ ಸ್ನಾನಮಾಡು ವವನು ದೇವೇಂದ್ರನೊಡನೆ ಅರ್ಧಾಸನವನ್ನು ಹೊಂದುವನು.

೩೧–೩೨. ಮುಂದೆ ಸರ್ವಪಾಪಗಳನ್ನೂ ಪರಿಹರಿಸುವ ಶೃಂಗ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡುವವನು ಖಂಡಿತವಾಗಿಯೂ

ಏರಂಡನರ್ಮದಾಯಾಶ್ಚ ಸಂಗಮಂ ಲೋಕವಿಶ್ರುತಂ ।
ತತ್ರ ತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ॥೩೨॥

ಉಪವಾಸಪರೋ ಭೂತ್ವಾ ನಿತ್ಯಂ ಬ್ರಹ್ಮಪರಾಯಣಃ ।
ತತ್ರ ಸ್ನಾತ್ವಾ ತು ರಾಜೇಂದ್ರ ಮುಚ್ಯತೇ ಬ್ರಹ್ಮಹತ್ಯಯಾ ॥೩೩॥

ತತೋ ಗಚ್ಛೇತ ರಾಜೇಂದ್ರ ನರ್ಮದೋದಧಿಸಂಗಮಂ ।
ಜಮದಗ್ನಿರಿತಿ ಖ್ಯಾತಂ ಸಿದ್ಧೋ ಯತ್ರ ಜನಾರ್ದನಃ ॥೩೪॥

ಯತ್ರೇಷ್ಟ್ವಾ ಬಹುಭಿರ್ಯಜ್ಞೈರಿಂದ್ರೋ ದೇವಾಧಿಪೋಽಭವತ್ ।
ತತ್ರ ಸ್ನಾತ್ವಾ ನರೋ ರಾಜನ್ ನರ್ಮದೋದಧಿಸಂಗಮೇ ॥೩೫॥

ತ್ರಿಗುಣಸ್ಯಾಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ ।
ಪಶ್ಚಿಮೋದಧಿಸಾಯುಜ್ಯಂ ಮುಕ್ತಿದ್ವಾರವಿಪಾಟನಂ ॥೩೬॥

---

ಗಣಾಧಿಪತ್ಯವನ್ನು ಹೊಂದುವನು. ಜಗತ್ತಿನಲ್ಲಿ ಪ್ರಸಿದ್ಧವಾದ ಏರಂಡೀ ನರ್ಮದಾಸಂಗಮವನ್ನು ಸೇರಿ ಸರ್ವಪಾಪಗಳನ್ನೂ ಪರಿಹರಿಸುವ ಮಹಾ ಪುಣ್ಯತಮವಾದ ಅಲ್ಲಿರುವ ತೀರ್ಥವನ್ನು ಸೇವಿಸಬೇಕು.

೩೩–೩೪. ಅಲ್ಲಿ ಉಪವಾಸವನ್ನು ಕೈಗೊಂಡು ಬ್ರಹ್ಮವಸ್ತುವನ್ನು ಸತ್ಯವೆಂದು ತಿಳಿದು ಸ್ನಾನಮಾಡುವವನು ಬ್ರಹ್ಮಹತ್ಯೆಯಿಂದ ಮುಕ್ತನಾಗುವನು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ? ಮುಂದೆ ನರ್ಮದಾಸಮುದ್ರಸಂಗಮವನ್ನು ಸೇರಿ ಹಿಂದೆ ವಿಷ್ಣುವಿಗೆ ಸಿದ್ಧಿಪ್ರದವಾದ ಜಮದಗ್ನಿ ಎಂಬ ಕ್ಷೇತ್ರವನ್ನು ಸೇವಿಸಬೇಕು.

೩೫–೩೬. ಆ ನರ್ಮದೋದಧಿಸಂಗಮದಲ್ಲಿ ಪೂರ್ವಕಾಲದಲ್ಲಿ ಇಂದ್ರನು ಅನೇಕ ಯಜ್ಞಗಳನ್ನು ನಡೆಯಿಸಿ ದೇವತೆಗಳಿಗೆ ರಾಜನಾದನು. ಇಂತಹ ಸ್ಥಳದಲ್ಲಿ ಸ್ನಾನಮಾಡಬೇಕು. ಹೀಗೆ ಸ್ನಾನಮಾಡುವ ಮನುಷ್ಯನು ಅಶ್ವಮೇಧ ಯಾಗದ ಮೂರರಷ್ಟು ಫಲವನ್ನು ಹೊಂದುವನು. ಅಲ್ಲಿಯೇ ಪಶ್ಚಿಮಸಮುದ್ರಕ್ಕೆ ಸೇರಿದ ಹಾಗೆ ಮುಕ್ತಿಯನ್ನು ಕೊಡುವ ಕ್ಷೇತ್ರವೊಂದಿರುವುದು.

ತತ್ರ ದೇವಾಃ ಸಗಂಧರ್ವಾ ಋಷಯಃ ಸಿದ್ಧಚಾರಣಾಃ ।
ಆರಾಧಯಂತಿ ದೇವೇಶಂ ತ್ರಿಸಂಧ್ಯಂ ವಿಮಲೇಶ್ವರಂ ॥೩೭॥

ಸರ್ವಪಾಪವಿಶುದ್ಧಾತ್ಮಾ ರುದ್ರಲೋಕೇ ಮಹೀಯತೇ ।
ವಿಮಲೇಶ್ವರಂಪರಂ ತೀರ್ಥಂ ನಭೂತಂ ನಭವಿಷ್ಯತಿ ॥೩೮॥

ತತ್ರೋಪವಾಸಂ ಕೃತ್ವಾ ಯೇ ಪಶ್ಯಂತಿ ವಿಮಲೇಶ್ವರಂ ।
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ವ್ರಜಂತಿ ತೇ ॥೩೯॥

ತತೋ ಗಚ್ಛೇತ ರಾಜೇಂದ್ರ ಕೇಶಿನೀತೀರ್ಥ ಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಉಪವಾಸಪರಾಯಣಃ ॥೪೦॥

ಉಪೋಷ್ಯ ರಜನೀಮೇಕಾಂ ನಿಯತೋ ನಿಯತಾಶನಃ ।
ತತ್ರ ತೀರ್ಥಪ್ರಭಾವೇಣ ಮುಚ್ಯತೇ ಬ್ರಹ್ಮಹತ್ಯಯಾ ॥೪೧॥

---

೩೭. ಅಲ್ಲಿರುವ ವಿಮಲೇಶ್ವರನನ್ನು ದೇವತೆಗಳೂ, ಗಂಧರ್ವರೂ, ಋಷಿಗಳೂ, ಸಿದ್ಧರೂ, ಚಾರಣರೂ, ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಈ ಮೂರು ಕಾಲಗಳಲ್ಲಿಯೂ, ಪೂಜಿಸುವರು.

೩೮–೪೧. ಇಲ್ಲಿರುವ ವಿಮಲೇಶ್ವರತೀರ್ಥದಲ್ಲಿ ಸ್ನಾನಾದಿಗಳನ್ನು ಆಚರಿಸುವವನು ಸರ್ವಪಾಪಗಳಿಂದ ಮುಕ್ತವಾದ, ಅಂತಃಕರಣವುಳ್ಳವನಾಗಿ ರುದ್ರಲೋಕದಲ್ಲಿ ಪೂಜ್ಯನಾಗುವನು. ಈ ವಿಮಲೇಶ್ವರ ತೀರ್ಥಕ್ಕಿಂತಲೂ, ಶ್ರೇಷ್ಠವಾದ ತೀರ್ಥವು ಹಿಂದೆ ಹುಟ್ಟಲೂ ಇಲ್ಲ, ಮುಂದೆ ಹುಟ್ಟುವುದೂ ಇಲ್ಲ, ಅಲ್ಲಿ ಉಪವಾಸಪರರಾಗಿ ವಿಮಲೇಶ್ವರನ ದರ್ಶನ ಮಾಡುವವರು, ಸರ್ವಪಾಪಗಳಿಂದ ಬಿಡಲ್ಪಟ್ಟವರಾಗಿ ರುದ್ರಲೋಕದಲ್ಲಿ ಪೂಜೆಗೊಳ್ಳುವರು. ಮುಂದೆ ಕೇಶಿನೀತೀರ್ಥವನ್ನು ಸೇರಿ ಉಪವಾಸದಿಂದ ಕೂಡಿ ಸ್ನಾನವನ್ನು ಮಾಡಬೇಕು. ಅಲ್ಲಿ ಒಂದುರಾತ್ರಿ ಉಪವಾಸಮಾಡಿ ಶೌಚಾದಿನಿಯಮಗಳಿಂದಲೂ, ಆಹಾರ ನಿಯಮಗಳಿಂದಲೂ ಕೂಡಿ, ವಾಸಿಸುವವನು ಆ ತೀರ್ಥದಮಹಿಮೆಯಿಂದ ಬ್ರಹ್ಮಹತ್ಯಾ ದೋಷದಿಂದ ಮುಕ್ತನಾಗುವನು.

ಸರ್ವತೀರ್ಥಾಭಿಷೇಕಂ ಚ ಯಃ ಪಶ್ಯೇತ್ಸಾಗರೇಶ್ವರಂ ।
ಯೋಜನಾಭ್ಯಂತರೇ ತಿಷ್ಠದಾವರ್ತೇ ಸಂಸ್ಥಿತಃ ಶಿವಃ ॥೪೨॥

ತಂ ದೃಷ್ಟ್ವಾ ಸರ್ವತೀರ್ಥಾನಿ ದೃಷ್ಟಾನಿ ಸ್ಯುರ್ನಸಂಶಯಃ ।
ಸರ್ವಪಾಪವಿನಿರ್ಮುಕ್ತೋ ಯತ್ರ ರುದ್ರಃ ಸ ಗಚ್ಛತಿ ॥೪೩॥

ನರ್ಮದಾಸಂಗಮಂ ಯಾವದ್ಯಾವಚ್ಚಾಮರಕಂಟಕಂ ।
ತತ್ರಾಂತರೇ ಮಹಾರಾಜ ತೀರ್ಥಕೋಟ್ಯೋ ದಶಸ್ಥಿತಾಃ ॥೪೪॥

ತೀರ್ಥಾತ್ತೀರ್ಥಾಟನೇಚರ್ಯಾ ಋಷಿಕೋಟಿನಿಷೇವಿತಾಃ ।
ಸಾಗ್ನಿಹೋತ್ರೈಶ್ಚ ದಿವ್ಯಜ್ಞೈಃ ಸರ್ವೈರ್ಯಜ್ಞಪರಾಯಣೈಃ ॥೪೫॥

ಸೇವಿತಾಸ್ತೇನ ರಾಜೇಂದ್ರ ಈಪ್ಸಿತಾರ್ಥಪ್ರದಾಯಿಕಾಃ ।
ಯಶ್ಚೇದಂ ವೈ ಪಠೇನ್ನಿತ್ಯಂ ಶೃಣುಯಾದ್ವಾಪಿ ಭಕ್ತಿತಃ ।
ತೇ ತು ತೀರ್ಥಾನಿ ಸರ್ವಾಣಿ ಅಭಿಷಿಂಚಂತಿ ಪಾಂಡವ ॥೪೬॥

---

೪೨—೪೪. ಮುಂದೆ ಸರ್ವತೀರ್ಥಾಭಿಷೇಕವೆಂಬ ತೀರ್ಥವನ್ನು ಸಾಗರೇಶ್ವರನನ್ನು ನೋಡುವನು. ಅಲ್ಲಿ ಒಂದು ಯೋಜನಪ್ರದೇಶದಲ್ಲಿ ಸುಳಿಯ ಮಧ್ಯದಲ್ಲಿ ಈಶ್ವರನು ವಾಸಿಸುವನು. ಈ ಈಶ್ವರನ ದರ್ಶನಮಾಡಿದ ಮಾತ್ರದಿಂದಲೇ ಸರ್ವತೀಥಗಳ ಯಾತ್ರೆಯನ್ನು ಮಾಡಿದಂತಾಗುವುದು. ಮತ್ತು ಈ ತೀರ್ಥದ ದರ್ಶನದಿಂದ ಪಾಪಗಳನ್ನೆಲ್ಲಾ ಕಳೆದು ರುದ್ರಲೋಕವನ್ನು ಸೇರುವನು. ಅಮರಕಂಟಕವನ್ನು ಪ್ರಾರಂಭಿಸಿ ನರ್ಮದಾಸಂಗಮದ ವರೆವಿಗೆ ಹತ್ತು ಕೋಟಿ ತೀರ್ಥಗಳಿರವುವು.

೪೫—೪೬. ಅಗ್ನಿ ಹೋತ್ರವನ್ನಾಚರಿಸುತ್ತಾ, ಸರ್ವಯಜ್ಞಗಳನ್ನನುಷ್ಠಿಸುತ್ತಿರುವ, ದಿವ್ಯಜ್ಞಾನಿಗಳಾದ, ಕೋಟ್ಯಂತರ ಋಷಿಗಳು ಸ್ವಭಾವದಿಂದ ನಿತ್ಯವಾಗಿ ತೀರ್ಥದಿಂದ ತೀರ್ಥಾಂತರ ಯಾತ್ರೆಯನ್ನು ಮಾಡುತ್ತಾ ಇರುವರು. ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಆದುದರಿಂದಲೇ ಇಷ್ಟಾರ್ಥವನ್ನು ಕೊಡುವ ಈ ನದಿಗಳನ್ನು ಸರ್ವರೂ ಸೇವಿಸುತ್ತಲಿರುವರು. ಎಲೈ ಪಾಂಡುಪುತ್ರನೇ! ಈ ತೀರ್ಥಾಟನವನ್ನು ಪಠಿಸುವವರೂ ಮತ್ತೂ ಕೇಳುವವರೂ ಕೂಡ, ಭಕ್ತಿಯಿಂದ ಸರ್ವತೀರ್ಥಗಳಲ್ಲೂ ಸ್ನಾನಮಾಡಿದವರಾಗುವರು.

ನರ್ಮದಾ ಚ ಸದಾಪ್ರೀತಾ ಭವೇದ್ದೇವ್ಯೈ ನಾತ್ರ ಸಂಶಯಃ ।
ಪ್ರೀತಸ್ತತ್ರ ಭವೇದ್ರುದ್ರೋ ಮಾರ್ಕಂಡೇಯೋಮಹಾಮುನಿಃ ॥ ೪೭ ॥
ವಂಧ್ಯಾ ಚ ಲಭತೇ ಪುತ್ರಾನ್ ದುರ್ಭಗಾ ಸುಭಗಾ ಭವೇತ್ ।
ಕುಮಾರೀಂ ಲಭತೇ ಭರ್ತಾ ಯಚ್ಚ ಯೋ ವಾಂಛತೇ ಫಲಂ ॥ ೪೮ ॥
ತದೇವ ಲಭತೇ ನಿತ್ಯಂ ನಾತ್ರ ಕಾರ್ಯಾ ವಿಚಾರಣಾ ।
ಬ್ರಾಹ್ಮಣೋ ವೇದಮಾಪ್ನೋತಿ ಕ್ಷತ್ರಿಯೋ ವಿಜಯೀ ಭವೇತ್ ॥
ವೈಶ್ಯಸ್ತು ಲಭತೇ ಧಾನ್ಯಂ ಶೂದ್ರಃ ಪ್ರಾಪ್ನೋತಿ ಸದ್ಗತಿಂ ॥ ೫೦ ॥
ಮೂರ್ಖಸ್ತು ಲಭತೇ ವಿದ್ಯಾಂ ತ್ರಿಸಂಧ್ಯಂ ಯಃ ಪಠೇನ್ನರಃ ।
ನರಕಂ ಚ ನ ಪಶ್ಯೇತ ವಿಯೋನಿಂ ಚ ನ ಗಚ್ಛತಿ ॥ ೫೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕವಿಂಶತಿತಮೋಽಧ್ಯಾಯಃ

---

೪೭–೪೮. ಮತ್ತು ಹೀಗೆ ಮಾಡುವವನ ವಿಷಯದಲ್ಲಿ ನರ್ಮದೆಯು ಸಂತುಷ್ಟಳಾಗುವಳು. ಶಿವನು ತುಷ್ಟನಾಗುವನು. ಮಾರ್ಕಂಡೇಯ ಮಹಾಮುನಿಯೂ, ಸಂತುಷ್ಟನಾಗುವನು. ಮತ್ತು ಹೀಗೆ ಹೇಳಿ ಕೇಳುವ ಹೆಂಗಸು ಬಂಜೆಯಾಗಿದ್ದರೆ ಪುತ್ರರನ್ನು ಹೊಂದುವಳು. ದೌರ್ಭಾಗ್ಯಶಾಲಿನಿಯು ಸೌಭಾಗ್ಯವನ್ನು ಹೊಂದುವಳು. ವಿವಾಹವನ್ನು ಅಪೇಕ್ಷಿಸುವ ಪುರುಷನು ಅನೂಢಳಾದ ಕನ್ಯೆಯನ್ನು ಹೊಂದುವನು. ಪ್ರತಿಯೊಬ್ಬನೂ ತನ್ನ ತನ್ನ ಅಪೇಕ್ಷೆಯಂತೆ ಫಲವನ್ನು ಹೊಂದುವನು.

೪೯–೫೧. ಈ ವಿಷಯದಲ್ಲಿ ಚರ್ಚಿಸಬೇಕಾಗಿಲ್ಲ. ಮತ್ತು ಬ್ರಾಹ್ಮಣನಿಗೆ ವೇದಲಾಭ ಉಂಟಾಗುವುದು. ಕ್ಷತ್ರಿಯನು ಜಯಶಾಲಿಯಾಗುವನು. ವೈಶ್ಯನು ಧಾನ್ಯಸಮೃದ್ಧನಾಗುವನು. ಶೂದ್ರನು ಸದ್ಗತಿಯನ್ನು ಹೊಂದುವನು. ಮೂರ್ಖನು ವಿದ್ಯಾವಂತನಾಗುವನು. ಮೂರುಕಾಲಗಳಲ್ಲಿಯೂ ಪಠಿಸುವ ಮನುಷ್ಯನು ನರಕವನ್ನು ನೋಡಲಾರನು. ನೀಚ ಜನ್ಮವನ್ನು ಹೊಂದುವುದೇ ಇಲ್ಲವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದ್ವಾವಿಂಶೋಧ್ಯಾಯಃ

॥ ನಾರದ ಉವಾಚ ॥

ಏವಂ ತೇ ಕಥಿತಂ ರಾಜನ್ ನರ್ಮದಾತೀರ್ಥ ಮುತ್ತಮಂ ।
ಪುರಾ ಗಂಧರ್ವಕನ್ಯಾನಾಂ ಶಾಪಜಂ ಭಯಮುಲ್ಬಣಂ ॥ ೧ ॥

ನಾಶಿತಂ ತನ್ಮಹಾರಾಜ ರೇವಾಜಲಕಣಾಗ್ನಿನಾ ।
ರೇವಾಜಲಕಣಸ್ಪರ್ಶಾನ್ಮುಕ್ತೋ ಭವತಿ ಮಾನವಃ ॥ ೨ ॥

॥ ಯುಧಿಷ್ಠಿರ ಉವಾಚ ॥

ಭಗವನ್ ಬ್ರೂಹಿ ಕನ್ಯಾಭಿಃ ಶಾಪೋಽಲಂಭಿ ಕಥಂ ಕುತಃ ।
ಕಸ್ಯಾಪತ್ಯಾನಿ ತಾಸ್ತಾಸಾಂ ನಾಮ ಕಿಂ ಕೀದೃಶಂ ವಯಃ ॥ ೩ ॥

---

### ಪದ್ಮಪುರಾಣದ ಆದಿಖಂಡದ ಇಪ್ಪತ್ತೆರಡನೆಯ ಅಧ್ಯಾಯವು

೧–೨. ನಾರದನು ಹೇಳಿದನು : ಎಲೈ ಯುಧಿಷ್ಠಿರನೇ? ಈ ರೀತಿಯಾಗಿ ನರ್ಮದಾತೀರ್ಥದ ಗುಣವನ್ನು ತಿಳಿಸಿರುವೆನು. ಹಿಂದೆ ಗಂಧರ್ವ ಕನ್ಯೆಯರಿಗೆ ಘೋರವಾದ ಶಾಪವು ಉಂಟಾಯಿತು. ಅಂತಹ ಭಯವನ್ನು ರೇವಾನದಿಯ ಜಲ ಬಿಂದುವೆಂಬ ಅಗ್ನಿಯು ದಹಿಸಿತು. ರೇವಾನದಿಯ ಒಂದು ತೊಟ್ಟು ನೀರುಕೂಡ, ಮನುಷ್ಯನನ್ನು ಬಂಧನದಿಂದ ಬಿಡಿಸುವುದು.

೩–೪. ಎಲೈ ತ್ರಿಕಾಲ ಜ್ಞಾನಿಯಾದ ನಾರದ ಮಹರ್ಷಿಯೇ! ಆ ಕನ್ನಿಕೆಯರಿಗೆ ಯಾರಿಂದ ಹೇಗೆ ಶಾಪವುಂಟಾಯಿತು? ಅವರು ಯಾರ ಪುತ್ರಿಯರು? ಅವರ ಹೆಸರೇನು? ಅವರ ವಯಸ್ಸೆಷ್ಟು? ಆ ಕನ್ನಿಕೆ

ಕಥಂ ರೇವಾ ಜಲಸ್ಪರ್ಶಾದ್ವಿಕಾರಾಚ್ಛಾಪಸಂಭವಾತ್ ।
ವಿಮುಕ್ತಾಃ ಕುತ್ರ ತಾಃ ಸಸ್ನುಃ ಸರ್ವಂ ಮೇ ಕಥಯಪ್ರಭೋ ॥

ನರ್ಮದಾತೀರ್ಥಮಾಹಾತ್ಮ್ಯಂ ಚಮತ್ಕಾರಕರಂ ಭವೇತ್ ।
ಶ್ರವಣಾದಪಿ ಪಾಪಾನಾಂ ಮಲನಾಶನ ಮುಚ್ಯತೇ ॥ ೫ ॥

ನರ್ಮದಾ ನರ್ಮದಾ ಶಬ್ದೋ ಯೇನ ಕೇನಚಿದುಚ್ಯತೇ ।
ತಸ್ಯ ಸ್ಯಾಚ್ಛಾಶ್ವತೀ ಮುಕ್ತಿರ್ಯಾವದಾಚಂದ್ರತಾರಕಂ ॥ ೬ ॥

ವ್ಯಾಹೃತಂ ಭವತಾ ಪೂರ್ವಂ ರೇವಾಮಾಹಾತ್ಮ್ಯ ಮುತ್ತಮಂ ।
ತಥಾಪಿಖ ಚರಿತಂ ಸಾಧೋ ಯದೇತತ್ತನ್ನಿಗದ್ಯತಾಂ ॥ ೭ ॥

---

ಯರು ರೇವಾನದಿಯ ಜಲವನ್ನು ಸ್ಪರ್ಶಮಾಡಿ ಶಾಪದಿಂದುಂಟಾದ ವಿಕಾರದಿಂದ ಹೇಗೆ ಬಿಡುಗಡೆಯನ್ನು ಹೊಂದಿದರು? ಅವರೆಲ್ಲಿ ಸ್ನಾನ ಮಾಡಿದರು? ಅದೆಲ್ಲವನ್ನೂ ನನಗೆ ತಿಳಿಸು.

೫. ನರ್ಮದಾತೀರ್ಥದ ಮಾಹಾತ್ಮ್ಯವು ಅತಿ ಚಮತ್ಕಾರವಾಗಿರಬೇಕು. ಏಕೆಂದರೆ; ರೇವಾನದಿಯ ವೃತ್ತಾಂತವನ್ನು ಕೇಳಿದರೂ ಕೂಡ ಪಾಪಪರಿಹಾರವಾಗುವುದೆಂದು ಹೇಳಲ್ಪಟ್ಟಿರುವುದು.

೬. ನರ್ಮದಾ ನರ್ಮದಾ ಎಂದು ಯಾವನು ಹೇಳವನೋ ಅವನು ಸೂರ್ಯ ಚಂದ್ರರು ಇರುವವರೆಗೂ ಶಾಶ್ವತವಾದ ಮುಕ್ತಿ ಹೊಂದುವನು.

೭. ಹೀಗೆಂಬುದಾಗಿ ನೀನೇ ಪೂರ್ವದಲ್ಲಿ ರೇವಾಮಾಹಾತ್ಮ್ಯೆಯನ್ನು ಹೇಳಿರುವಿ. ಆದರೂ ಸಾಧುವರ್ಯನೇ? ಅದನ್ನು ವಿಸ್ತಾರವಾಗಿ ತಿಳಿಸು.

ಅಥ ಚೋತ್ತಮವಾರ್ತಾಯಾ ಸೇವಿತವ್ಯಾ ಮನೀಷಿಭಿಃ ।
ಅತಃ ಪೃಚ್ಛಾಮಿ ವಿಪ್ರೇಂದ್ರ ರೇವಾಮಾಹಾತ್ಮ್ಯ ಮುತ್ತಮಂ ।
ಇತಿಹಾಸಂ ವದ ವಿಭೋ ಕನ್ಯಾನಾಂ ಚರಿತೋಜ್ಜ್ವಲಂ ॥ ೮ ॥

॥ ನಾರದ ಉವಾಚ ॥

ಶ್ರೂಯತಾಂ ರಾಜಶಾರ್ದೂಲ ಧರ್ಮಗರ್ಭಾ ಪರಾ ಕಥಾ ।
ಯಥಾರಣಿರ್ವಹ್ನಿಗರ್ಭಾ ಧರ್ಮಸ್ತು ಬ್ರಹ್ಮಸೂರಿವ ॥ ೯ ॥

ಗಂಧರ್ವಃ ಶುಕಸಂಗೀತಿಸ್ತಸ್ಯ ಕನ್ಯಾ ಪ್ರಮೋಹಿನೀ ।
ಸುಶೀಲಸ್ಯ ಸುಶೀಲಾ ಚ ಸುಸ್ವರಾ ಸ್ವರವೇದಿನಃ ॥೧೦॥

---

೮. ವಿದ್ವಾಂಸರು ಯಾವಾಗಲೂ, ಉತ್ತಮ ಚರಿತ್ರೆಯನ್ನು ಕೇಳಲು ಕುತೂಹಲಪಡುತ್ತಿರಬೇಕು. ಆದುದರಿಂದ ರೇವಾಮಾಹಾತ್ಮ್ಯೆಯನ್ನು ಪ್ರಶ್ನೆಮಾಡುವೆನು. ಎಲೈ ಬ್ರಾಹ್ಮಣ ಶ್ರೇಷ್ಠನಾದ ನಾರದ ಮಹರ್ಷಿಯೇ! ಕನ್ನಿಕೆಯರ ಚರಿತ್ರೆಯಿಂದ ಕೂಡಿರುವ ಇತಿಹಾಸವನ್ನು ತಿಳಿಸು.

೯. ಎಲೈ ರಾಜಶ್ರೇಷ್ಠನೇ? ಧರ್ಮಯುಕ್ತವಾದ ಉತ್ತಮವಾದ ಕಥೆಯನ್ನು ಹೇಳುವೆನು ಕೇಳು. ಅರಣಿಯಲ್ಲಿ ಬೆಂಕಿಯೂ ಬ್ರಹ್ಮನಲ್ಲಿ ಧರ್ಮವೂ ಅಡಗಿರುವಂತೆ ಈ ಕಥೆಯಲ್ಲಿ ಧರ್ಮವು ತುಂಬಿರುವುದು.

೧೦. ಶುಕಸಂಗೀತಿಎಂಬ ಗಂಧರ್ವನಿಗೆ ''ಪ್ರಮೋಹಿನಿ'' ಎಂಬ ಕನ್ಯಕೆಯು ಇದ್ದಳು. ಹಾಗೆಯೇ ಸುಶೀಲನೆಂಬ ಗಂಧರ್ವನಿಗೆ ''ಸುಶೀಲಾ'' ಎಂಬ ಕನ್ನಿಕೆಯೂ, ಸ್ವರವೇದಿಎಂಬ ಗಂಧರ್ವನಿಗೆ ''ಸುಸ್ವರಾ'' ಎಂಬ ಕನ್ಯೆಯೂ ಇದ್ದರು.

ಸುತಾರಾ ಚಂದ್ರಕಾಂತಸ್ಯ ಚಂದ್ರಿಕಾ ಸುಪ್ರಭಸ್ಯ ಚ ।
ಇಮಾನಿ ವರನಾಮಾನಿ ತಾಸಾಮಪ್ಸರಸಾಂ ನೃಪ ॥೧೧॥

ಕುಮಾರ್ಯಃ ಪಂಚ ಸರ್ವಾಸ್ತಾ ವಯಸಾ ಸುಭಗಾಃ ಪುನಃ ।
ಭಾಷಂತೇ ಚ ಮಿಥಸ್ತಾಸ್ತು ಭಗಿನ್ಯ ಇವ ಸರ್ವದಾ ॥೧೨॥

ಚಂದ್ರಾದಿವ ವಿನಿಷ್ಕ್ರಾಂತಾಶ್ಚಂದ್ರಿಕಾ ಇವ ಸೋಜ್ಜ್ವಲಾಃ ।
ಚಂದ್ರಾನನಾಃ ಸುಕೇಶ್ಯಶ್ಚ ಚಂದ್ರಕಾಂತಾ ಇವೋಜ್ಜ್ವಲಾಃ ॥೧೩॥

ದೇವೇಷ್ವೇತಾ ವಿಲಾಸಿನ್ಯಃ ಕೌಮುದ್ಯಃ ಕೈರವೇಷ್ವಪಿ ।
ಲಾವಣ್ಯಪಿಂಡಸಂಭೂತಾ ಬಹುರೂಪಾ ಮನೋಹರಾಃ ॥೧೪॥

---

೧೧. ಚಂದ್ರಕಾಂತನೆಂಬ ಗಂಧರ್ವನಿಗೆ "ಸುತಾರ" ಎಂಬ ಕನ್ಯೆಯೂ ಸುಪ್ರಭನೆಂಬ ಗಂಧರ್ವನಿಗೆ, "ಚಂದ್ರಿಕಾ" ಎಂಬ ಕನ್ಯೆಯೂ ಇದ್ದರು ಇವುಗಳು ಆ ಕನ್ನಿಕೆಯರಿಗೆ ಶ್ರೇಷ್ಠನಾದ ಹೆಸರುಗಳು.

೧೨. ಆ ಕನ್ಯೆಯರು ಸುಕುಮಾರವಾದ ಯೌವನವನ್ನು ಹೊಂದಿದ್ದರು. ಅವರು ಯಾವಾಗಲೂ, ಸಹೋದರಿಯರಂತೆ ಒಬ್ಬರೊಡನೆ ಒಬ್ಬರು ಮಾತನಾಡುತ್ತಿದ್ದರು.

೧೩. ಆ ಕನ್ನಿಕೆಯರು ಚಂದ್ರನಿಂದ ಹೊರಟ ಚಂದ್ರಿಕೆಯಂತೆ ಪ್ರಕಾಶಿಸುತ್ತಿದ್ದರು. ಚಂದ್ರನಂತೆ ಹೊಳಪಾದ ಮುಖದಿಂದಲೂ, ಸೊಗಸಾದ ಕೇಶಗಳಿಂದಲೂ ಕೂಡಿ ಚಂದ್ರಕಾಂತ ಶಿಲೆಗಳಂತೆ ಮಿರುಗುಟ್ಟುತ್ತಿರುವ ಮೈ ಬಣ್ಣದಿಂದ ಕೂಡಿದ್ದರು.

೧೪. ಲಾವಣ್ಯದ ಮುದ್ದೆಯಿಂದ ಸೃಷ್ಟರಾದ ಸೌಂದರ್ಯದಿಂದ ಜನರ ಮನಸ್ಸನ್ನು ಸೆಳೆಯುತ್ತಿರುವ ಈ ವಿಲಾಸಿನಿಯರು ಬಿಳೀನೈದಿಲೆಗಳಲ್ಲಿ ಚಂದ್ರಿಕೆಗಳಂತೆ ದೇವತೆಗಳ ಮಧ್ಯದಲ್ಲಿ ಶೋಭಿಸುತ್ತಲಿದ್ದರು.

ಉದ್ಭಿನ್ನಕುಚಪದ್ಮಿನ್ಯಃ ಕೇತಕ್ಯ ಇವ ಮಾಧವೇ ।
ಉನ್ಮೀಲದ್ಯೌವನನ್ಯೈಃ ಕಾಂತಾ ವಲ್ಲೀವ ನವಪಲ್ಲವೈಃ ॥೧೫॥

ಹೇಮಗೌರಾಶ್ಚ ಹೇಮಾಭಾ ಹೇಮಾಭರಣಭೂಷಿತಾಃ ।
ಹೇಮಚಂಪಕಮಾಲಿನ್ಯೋ ಹೇಮಚ್ಛವಿಸುವಾಸಸಃ ॥೧೬॥

ಸ್ವರಗ್ರಾಮಾವಲೀಹಾಸು ವಿವಿಧಾಮೂರ್ಛನಾಸು ಚ ।
ತಾಲವಾದ್ಯವಿನೋದೇಷು ವೇಣುವೀಣಾಪ್ರವಾದನೇ ॥೧೭॥

ಮೃದಂಗನಾದಸಂಭಿನ್ನ ಲಾಸ್ಯಮಧ್ಯಲಯೇಷು ಚ ।
ಚಿತ್ರಾದಿಷು ವಿನೋದೇಷು ಕಲಾಸು ಚ ವಿಶಾರದಾಃ ॥೧೮॥

---

೧೫. ಹುಟ್ಟುತ್ತಿರುವ ಕುಚಯುಗ್ಮದಿಂದ ಶೋಭಿಸುತ್ತಲಿರುವ ಈ ಕನ್ನಿಕೆಯರು ಪದ್ಮಗಳಿಂದ ಶೋಭಿಸುತ್ತಲಿರುವ ಕಮಲಿನಿಯರಾಗಿದ್ದರು. ಮತ್ತೂ ವಸಂತಋತುವಿನಲ್ಲಿ ತಾಳೆಯ ಮೋತೆಗಳಿಂದ ಕೂಡಿರುವ ತಾಳೆಯ ಲತೆಗಳಂತೆ ಶೋಭಿಸುತ್ತಲಿದ್ದರು. ಮತ್ತೂ ಹೊಸದಾಗಿ ಉದ್ಭವಿಸಿದ ಯೌವನದಿಂದ ಕೂಡಿರುವರಾಗಿ ಆಗತಾನೆ ಹೊರಟಿರುವ ಚಿಗುರೆಲೆಗಳಿಂದ ಶೋಭಿಸುತ್ತಿರುವ ಲತೆಗಳಂತೆ ಶೋಭಿಸುತ್ತಲಿದ್ದರು.

೧೬. ಮತ್ತೂ ಚಿನ್ನದಂತೆ ಹೊಳೆಯುವ ಮೈ ಬಣ್ಣವುಳ್ಳವರಾಗಿಯೂ, ಚಿನ್ನದಂತೆ ಜ್ವಲಿಸುತ್ತಿರುವ ಕಾಂತಿಯುಳ್ಳವರಾಗಿಯೂ, ಸುವರ್ಣಾಭರಣಗಳಿಂದ ಕೂಡಿದವರಾಗಿಯೂ, ಕೆಂಡಸಂಪಿಗೆ ಹೂವುಗಳಿಂದ ಪೋಣಿಸಲ್ಪಟ್ಟ ಮಾಲಿಕೆಗಳನ್ನು ಧರಿಸಿದವರಾಗಿಯೂ, ಪೀತಾಂಬರವನ್ನು ಉಟ್ಟವರಾಗಿಯೂ ಪ್ರಕಾಶಿಸುತ್ತಲಿದ್ದರು.

೧೭. ಸ್ವರವಿನ್ಯಾಸವಿಶೇಷಗಳಲ್ಲಿಯೂ, ರಾಗವಿಸ್ತಾರೀಕಣರದಲ್ಲಿಯೂ, ವೇಣುವಾದ್ಯದಲ್ಲಿಯೂ, ವೀಣಾವಾದ್ಯದಲ್ಲಿಯೂ, ಈ ಕನ್ಯೆಯರು ನಿಪುಣರಾಗಿದ್ದರು.

೧೮. ಮೃದಂಗವಾದನಕ್ಕೆ ಹೊಂದುವ ಮೃದು ನರ್ತನದಲ್ಲಿಯೂ, ಚಿತ್ರಲೇಖನಾದಿಕಲೆಗಳಲ್ಲಿಯೂ, ಮತ್ತೂ ಇತರ ಕಲೆಗಳಲ್ಲಿಯೂ ನಿಪುಣರಾಗಿದ್ದರು.

ಏವಂ ಭೂತಾಶ್ಚ ತಾಃ ಕನ್ಯಾ ಮುಮುಹುಃ ಕ್ರೀಡನೈರ್ವರೈಃ ।
ಪಿತೃಭಿರ್ಲಾಲಿತಾ ಸ್ಸರ್ವಾ ಶ್ಚೇರು ಶ್ಚ ಧನದಾಲಯೇ ॥೧೯॥

ಕೌತುಕಾದೇಕದಾ ಪಂಚ ಮಿಲಿತ್ವಾ ಮಾಸಿ ಮಾಧವೇ ।
ಕನ್ಯಾ ಮಂದಾರಪುಷ್ಪಾಣಿ ವಿಚಿನ್ವತ್ಯೋ ವನಾದ್ವನಂ ॥೨೦॥

ಗೌರೀಂ ಸಮಾರಾಧಯಿತುಂ ಸುರಾಂಗನಾಃ ।
ಕದಾಚಿದ ಚ್ಛೋದ ಸರೋವರಂ ಯಯುಃ ।
ಹೇಮಾಂಬುಜಾನಿ ಪ್ರವರಾಣಿ ತಾಃ ಪುನಃ ।
ತಸ್ಮಾದುಪಾದಾಯ ವರೋತ್ಪಲೈಃ ಸಹ ॥೨೧॥

ವೈಡೂರ್ಯ ಶುದ್ಧಸ್ಫಟಿಕ ಪ್ರಕುಟ್ಟಿಮೇ
ಸ್ನಾತ್ವಾ ತು ಘಟ್ಟೇ ಪರಿಧಾಯ ಚಾಂಬರಂ ।
ಮೌನೇನ ಚ ಸ್ಥಂಡಿಲಪಿಂಡಕಾಮಯೀಂ
ಸುವರ್ಣಮುಕ್ತಾಭರಣಾಂ ವಿನಿರ್ಮಮುಃ ॥೨೨॥

---

೧೯. ಹೀಗೆ ನಾನಾಕಲೆಗಳಲ್ಲಿ ನಿಪುಣರಾದ ಆ ಕನ್ಯೆಯರ ಮನಸ್ಸಿಗೆ ವಿನೋದವನ್ನುಂಟುಮಾಡುವ ಆಯಾಯ ಕ್ರೀಡಾಸಾಧನಗಳಿಂದ ಮುಗ್ಧರಾಗಿ ಹೋಗಿದ್ದರು. ತಂದೆಯರಿಂದ ಲಾಲನೆಗೆ ಪಾತ್ರರಾಗಿ ಕುಬೇರನ ಅರಮನೆಯಲ್ಲಿ ಸಂಚರಿಸುತ್ತಲಿದ್ದರು.

೨೦. ಒಂದುದಿನ ವಸಂತಮಾಸದಲ್ಲಿ ಐದುಮಂದಿ ಕನ್ಯೆಯರೂ, ಮಂದಾರಪುಷ್ಪವನ್ನು ಕುಯ್ಯುತ್ತಾ ಕುತೂಹಲಾವಿಷ್ಟರಾಗಿ ಒಂದು ವನದಿಂದ ಮತ್ತೊಂದುವನವನ್ನು ಅಲೆಯುತ್ತಲಿದ್ದರು.

೨೧. ಈ ಕನ್ಯೆಯರು ಒಂದಾನೊಂದು ದಿವಸ ಸುವರ್ಣಕಮಲಗಳನ್ನೂ ಶ್ರೇಷ್ಠವಾದ ಉತ್ಪಲಪುಷ್ಪಗಳನ್ನೂ ತೆಗೆದುಕೊಂಡು ಗೌರಿಯನ್ನು ಪೂಜಿಸಲು ಅಚ್ಛೋದವೆಂಬ ಸರೋವರವನ್ನು ಹೊಂದಿದರು.

೨೨. ಅಲ್ಲಿ ವೈಡೂರ್ಯಮಣಿಗಳಿಂದಲೂ, ಶುದ್ಧವಾದ ಸ್ಫಟಿಕ ಮಣಿಗಳಿಂದಲೂ, ನಿಬದ್ಧವಾದ ಘಟ್ಟದಲ್ಲಿಳಿದು ಸ್ನಾನಮಾಡಿ ದಿವ್ಯವಾದ ವಸ್ತ್ರವನ್ನು ಧರಿಸಿ ಮೌನದಿಂದೊಡಗೂಡಿ ನಾನಾ ವಿಧವಾದ ಪರಿಷ್ಕೃತವಾದ ಮಣ್ಣಿನಿಂದ ಗೌರಿಯನ್ನು ರಚಿಸಿ, ಅವಳಿಗೆ ಸುವರ್ಣಾಭರಣಗಳನ್ನೂ ಮುತ್ತಿನ ಆಭರಣಗಳನ್ನೂ ತೊಡಿಸಿದರು.

ಸಮರ್ಚಿತಾಂ ಚಂದನಗಂಧಕುಟ್ಮಲೈಃ
ಅಭ್ಯರ್ಚ್ಯ ಗೌರೀಂ ವರಪಂಕಜಾದಿಭಿಃ ।
ನಾನೋಪಹಾರೈಶ್ಚ ಸುಭಕ್ತಿಭಾವಿತಾಃ
ಲಾಸ್ಯಪ್ರಯೋಗೈರ್ನನೃತುಃ ಕುಮಾರಿಕಾಃ ॥೨೩॥

ಗಾಂಧರ್ವಮಾಶ್ರಿತ್ಯ ಪರಂ ಸ್ವರಂ ತತೋ
ಗೇಯಂ ಸಭಾವಧ್ವನಿಭಿಃ ಸಮೂರ್ಛನಂ ।
ಏಣೀದೃಶಸ್ತಾಃ ಪ್ರಜಗುಃ ಕಲಾಕ್ಷರಂ
ತಾರಪ್ರವೃದ್ಧಂ ಗತಿಭಿಶ್ಚ ಸುಸ್ವರಂ ॥೨೪॥

ತಸ್ಮಿನ್ ಸುಭಾವೇ ರಸವರ್ಷಹರ್ಷಂ
ಕನ್ಯಾಸ್ವಲಂ ನಿರ್ಭರಚಿತ್ತವೃತ್ತಿಷು ।
ಅಚ್ಛೋದ ತೀರ್ಥೇ ಪ್ರವರೇ ತದಾಗತಃ
ಸ್ನಾತುಂ ಮುನೇರ್ವೇದನಿಧೇಃ ಸುತೋಽಗ್ರಜಃ ॥೨೫॥

---

೨೩. ಅನಂತರ ಹೆಚ್ಚಾದ ಭಕ್ತಿಯಿಂದ ಕೂಡಿ ಶ್ರೀಗಂಧದಿಂದಲೂ ನಾನಾವಿಧವಾದ ಪಂಕಜಾದಿ ಕುಡ್ಮಲಗಳಿಂದಲೂ, ಬೇಕಾದ ಭಕ್ಷ್ಯ ಭೋಜ್ಯಗಳಿಂದಲೂ, ಗೌರಿಯನ್ನು ಪೂಜಿಸಿ ಗೌರಿಯ ಪ್ರೀತ್ಯರ್ಥವಾಗಿ ಮೃದುವಾಗಿ ನರ್ತನವನ್ನು ಮಾಡಿದರು.

೨೪. ಮತ್ತೂ ಗಂಧರ್ವರಿಗುಚಿತವಾದ ಗೀತೆಯನ್ನು ಅನುಸರಿಸಿ ಭಾವಾವಿಷ್ಕರಣ ಪೂರ್ವಕವಾಗಿ ರಾಗವನ್ನು ವಿಸ್ತರಿಸುತ್ತಾ ಉಚ್ಚಸ್ವರ ದಿಂದ ಅಕ್ಷರಗಳೊಡನೆ ಮಧುರವಾಗಿ ಹಾಡಿದರು.

೨೫. ಈರೀತಿಯಾಗಿ ಆ ಕನ್ಯೆಯರು ರಸಭಾವಗಳಲ್ಲಿ ಮನಸ್ಸಿಟ್ಟು ಸಂತೋಷದಿಂದ ನರ್ತನಮಾಡುತ್ತಲೂ, ಹಾಡುತ್ತಲೂ ಇರುವ ಸಮಯ ದಲ್ಲಿ ವೇದನಿಧಿ ಎಂಬ ಮುನಿಯ ಜ್ಯೇಷ್ಠಪುತ್ರನು ಆ ಅಚ್ಛೋದ ಸರೋ ವರದಲ್ಲಿ ಸ್ನಾನಮಾಡಲು, ಬಂದನು.

ರೂಪೇಣ ನಿಸ್ಸೀಮತರೋ ವರಾನನಃ
ಪ್ರಫುಲ್ಲಪದ್ಮಾಯತಲೋಚನೋ ಯುವಾ ।
ವಿಸ್ತೀರ್ಣವಕ್ಷಾಃ ಸುಭುಜೋಽತಿಸುಂದರಃ
ಶ್ಯಾಮಚ್ಛವಿಃ ಕಾಮ ಇವಾಪರೋ ಹಿ ಸಃ ॥೨೬॥

ಬ್ರಹ್ಮಚಾರೀ ಸುಶಿಖೋ ಹಿ ಶೋಭತೇ
ದಂಡೇನ ಯುಕ್ತೋಽಧನುಷೇವ ಮನ್ಮಥಃ ।
ಏಣಾಜಿನಪ್ರಾವರಣಃ ಸಮುದ್ರಭೃಕ್
ಹೇಮಾಭಕಾಂಚೀ ಕಟಿಮೇಖಲಃ ಪರಃ ॥೨೭॥

ತಂದೃಷ್ಟ್ವಾ ಬ್ರಾಹ್ಮಣಂ ಬಾಲಾಸ್ತಾಸ್ತತ್ರ ಸರಸಸ್ತಟೇ ।
ಜಹೃಷುಃ ಕೌತುಕಾವಿಷ್ಟಾ ಅಯಂ ನೋ ಭವಿತಾಽತಿಥಿಃ ॥೨೮॥

---

೨೬. ಈ ತರುಣನ ರೂಪಕ್ಕೆ ಎಲ್ಲೆಯೇ ಇಲ್ಲ, ಇವನ ಮುಖವು ಬಹಳ ಸುಂದರವಾಗಿದ್ದಿತು. ಕಣ್ಣುಗಳಾದರೋ ಅರಳಿದ ಕಮಲಗಳಂತಿದ್ದುವು. ಎದೆಯು ಬಹು ವಿಶಾಲವಾಗಿದ್ದಿತು. ಇವನ ತೋಳುಗಳು, ಕೋಮಲವಾಗಿಯೂ, ದೀರ್ಘವಾಗಿಯೂ, ಇದ್ದುವು. ಇವನು ಕಪ್ಪಾದ ಮೈ ಬಣ್ಣದಿಂದ ಕೂಡಿ ಬೇರೊಬ್ಬ ಮನ್ಮಥನೋ ಎಂಬುತಿದ್ದನು.

೨೭. ಶಿಖೆಯಿಂದ ಕೂಡಿದ ಆ ಬ್ರಹ್ಮಚಾರಿಯು ದಂಡವನ್ನು ಹಿಡಿದು ಬರುತ್ತಿದ್ದರೆ ಧನುಸ್ಸನ್ನು ಧರಿಸಿ ಮನ್ಮಥನೇನಾದರೂ, ಬರುತ್ತಿರವನೋ ಎಂಬಂತೆ ಶೋಭಿಸುತ್ತಿದ್ದನು. ಮತ್ತು ಕೃಷ್ಣಾಜಿನವನ್ನು ಧರಿಸಿದ್ದನು. ಮುದ್ರೆಯನ್ನು ಧರಿಸಿದ್ದನು. ಮೇಖಲೆಯನ್ನು ಸೊಂಟದಲ್ಲಿ ಕಟ್ಟಿದ್ದನು.

೨೮. ಸರೋವರದಲ್ಲಿ ಆ ಬ್ರಾಹ್ಮಣನನ್ನು ನೋಡಿದ ಆ ಕನ್ನಿಕೆಯರು ಇವನು ನಮಗೆ ಸತ್ಕಾರಾರ್ಹನಾದ ಅತಿಥಿಯಾಗುವನೆಂದು ಕುತೂಹಲವುಳ್ಳವರಾಗಿ ಮನಸ್ಸಿನಲ್ಲಿ ಸಂತೋಷಹೊಂದಿದರು.

ಸಂಮುಕ್ತಗೀತನೃತ್ಯಾಸ್ತಾಸ್ತಸ್ಯಾಲೋಕನತತ್ಪರಾಃ ।
ಹರಿಣೋ ಲುಬ್ಧಕೇನೇವ ವಿದ್ಧಾಃ ಕಾಮೇನ ಸಾಯಕೈಃ ॥೨೯॥

ಪಶ್ಯಪಶ್ಯೇತಿ ಜಲ್ಪಂತ್ಯೋ ಮುಗ್ಧಾಃ ಪಂಚ ಸಸಂಭ್ರಮಂ ।
ತಸ್ಮಿನ್ ವಿಪ್ರವರೇ ಯೂನಿ ಕಾಮದೇವಭ್ರಮಂ ಯಯುಃ ॥೩೦॥

ಪುನಃ ಪುನಸ್ತಮಭ್ಯರ್ಚ್ಯ ನಯನೈಃ ಪಂಕಜೈರಿವ ।
ಪಶ್ಚಾದ್ವಿಚಾರಮಾರಬ್ಧ ಮಪ್ಸರೋಭಿಃ ಪರಸ್ಪರಂ ॥೩೧॥

ಯದ್ಯಯಂ ಕಾಮದೇವೋ ಹಿ ರತಿಹೀನಃ ಕಥಂ ಭವೇತ್ ।
ಅನ್ಯಥಾ ಹ್ಯಶ್ವಿನೌ ದೇವೌ ತಾವುಭೌ ಯುಗಚಾರಿಣೌ ॥೩೨॥

---

೨೯. ವ್ಯಾಧನ ಬಾಣಗಳಿಗೆ ಗುರಿಯಾದ ಹರಿಣಿಗಳಂತೆ, ಅವನನ್ನು ನೋಡಿದ ಮಾತ್ರಕ್ಕೆ ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟ ಆ ಕನ್ನಿಕೆಯರು ನೃತ್ಯಗಾನವನ್ನು ಬಿಟ್ಟು ಅವನನ್ನು ಅತ್ಯಾದರದಿಂದ ನೋಡುತ್ತಾ ನಿಂತರು.

೩೦. ಆ ಐವರು ಕನ್ಯೆಯರು ಸಂಭ್ರಮದಿಂದ ಕೂಡಿ ನೋಡು ನೋಡೆಂದು ಒಬ್ಬರಿಗೊಬ್ಬರು ಹೇಳುತ್ತಾ ತರುಣನಾದ ಆ ವಿಪ್ರಶ್ರೇಷ್ಠನಲ್ಲಿ ಮನ್ಮಥಭ್ರಾಂತಿಯನ್ನು ಹೊಂದಿದರು.

೩೧. ಕಮಲಗಳಂತಿರುವ ಕಣ್ಣುಗಳಿಂದ ಆ ತರುಣನನ್ನು ಪುನಃ ಪುನಃ ಪೂಜಿಸಿ ಆ ಅಪ್ಸರಸ್ತ್ರೀಯರು ಮುಂದೆ ಒಬ್ಬರೊಡನೆ ಒಬ್ಬರು ವಿಮರ್ಶೆಯನ್ನಾರಂಭಿಸಿದರು.

೩೨. ಇವನೇನಾದರೂ ಮನ್ಮಥನಿರಬಹುದೇ? ಅವನು ಎಂದಿಗೂ ರತಿವಿಯುಕ್ತನಾಗಿರುವುದಿಲ್ಲವು. ಅಥವಾ ಇವನೇನಾನರೂ ಅಶ್ವಿನಿದೇವತೆಗಳಾಗಿರಬಹುದೇ! ಹಾಗೂ ಹೇಳುವಂತಿಲ್ಲ ಅಶ್ವಿನೀದೇವತೆಗಳು ಇಬ್ಬರೂ ಕೂಡಿಯೇ ಸಂಚರಿಸುವವರು.

ಗಂಧರ್ವಃ ಕಿನ್ನರೋವಾಥ ಸಿದ್ಧೋ ವಾ ಕಾಮರೂಪಧೃಕ್ ।
ಋಷಿಪುತ್ರೋಽಥವಾ ಕಶ್ಚಿತ್ಕಶ್ಚಿದ್ವಾ ಮನುಜೋತ್ತಮಃ ॥೩೩॥

ಅಸ್ತಿ ವಾ ಕಶ್ಚಿದೇವಾಯಂ ಧಾತ್ರಾ ಸೃಷ್ಟೋ ಹಿ ನಃಕೃತೇ ।
ಯಥಾ ಭಾಗ್ಯವತಾಮರ್ಥೇ ನಿಧಾನಂ ಪೂರ್ವಕರ್ಮಭಿಃ ॥೩೪॥

ತಥಾಸ್ಮಾಕಂ ಕುಮಾರೀಣಾಂ ಗೌರ್ಯಾ ನೀತೋ ನರೋತ್ತಮಃ ।
ಕರುಣಾಜಲಕಲ್ಲೋಲಲಬ್ಧಾದ್ರೀಕೃತಚಿತ್ತಯಾ ॥೩೫॥

ಮಯಾ ವೃತಸ್ತ್ವಯಾ ಚಾಯಂ ತ್ವಯಾ ವೃತಸ್ತಥಾನಯಾ ।
ಏವಂ ಪಂಚಸು ಕನ್ಯಾಸು ವದಂತೀಷುನೃಪೋತ್ತಮ ॥೩೬॥

ಶ್ರುತ್ವಾ ತದ್ವಚನಂ ತತ್ರ ಕೃತಮಾಧ್ಯಾಹ್ನಿಕಕ್ರಿಯಃ ।
ಆಲೋಚ್ಯ ಹೃದಯೇ ಸೋಽಪಿ ವಿಷ್ಣುಮೇತದ್ವಿಚಿಂತಿತಂ ॥೩೭॥

---

೩೩. ಕಾಮರೂಪವನ್ನು ಧರಿಸಲು ಶಕ್ತನಾದ ಗಂಧರ್ವನೇನಾದರೂ, ಇರಬಹುದೇ? ಅಥವಾ ಕಿನ್ನರನೋ? ಅಲ್ಲದಿದ್ದರೆ ಸಿದ್ಧನಿರಬಹುದೋ? ಅಥವಾ ಯಾವನಾದರೂ ಮುನಿಪುತ್ರನೋ? ಮನುಜೋತ್ತಮನಾದ ಮತ್ತಾವನಾದರೂ ಇರಬಹುದೇ?

೩೪. ಪೂರ್ವಜನ್ಮದಲ್ಲಿ ಮಾಡಿದ ಸುಕೃತ ವಿಶೇಷಗಳು ಭಾಗ್ಯವಂತರು ಅನುಭವಿಸುವುದಕ್ಕಾಗಿಯೇ ಹೇಗೆ ನಿಧಿಯೊಂದನ್ನು ಸಿದ್ಧಿಗೊಳಿಸುವುವೋ ಹಾಗೆಯೇ ನಮಗಾಗಿಯೇ ಬ್ರಹ್ಮನು ಒಬ್ಬನನ್ನು ಸಿದ್ಧಗೊಳಿಸಿರುವನು. ಅವನೇ ಇವನಿರಬಹುದು.

೩೫. ಅಥವಾ ನಮ್ಮಿಂದ ಪೂಜಿತಳಾದ ಗೌರಿಯೇ ಚಿತ್ತಕರುಣೆಯೆಂಬ ನೀರಿನಲ್ಲಿ ಎದ್ದ ಅಲೆಗಳಿಂದ ನೆನೆದವಳಾಗಿ ಶ್ರೇಷ್ಠನಾದ ವರನನ್ನೇನಾದರೂ, ಕರೆದುಕೊಂಡು ಬಂದಿರುವಳೋ?

೩೬—೩೭. "ನಾನಿವನನ್ನುವರಿಸುವೆನು, ನೀನೂ ವರಿಸುವೆಯಲ್ಲವೇ? ನೀನೂ ವರಿಸುವೆ, ಇವಳೂ ವರಿಸುವಳು". ಹೀಗೆಂಬುದಾಗಿ ಆ ಐವರು ಕನ್ಯೆಯರು ಪರಸ್ಪರವಾಗಿ ಮಾತನಾಡುತ್ತಿರಲು ಇವರ ಮಾತನ್ನು ಕೇಳಿದ

ಬ್ರಹ್ಮವಿಷ್ಣು ಗಿರಿಶಾದಯಃ ಸುರಾಃ
ಯೇಽಪಿ ಸಿದ್ಧಮುನಯಃ ಪುರಾತನಾಃ ।
ತೇಽಪಿಯೋಗ ಬಲಿನೋ ವಿಮೋಹಿತಾಃ
ಲೀಲಯಾ ತದಬಲಾಭಿ ರದ್ಭುತಂ ॥೩೮॥

ಯೋಷಿತಾಂ ನಯನತೀಕ್ಷ್ಣಸಾಯಕೈಃ
ಭ್ರೂಲತಾ ಸುದೃಢಚಾಪನಿರ್ಗತೈಃ ।
ಧನ್ವಿನಾ ಮಕರಕೇತುನಾ ಹತಃ
ಕಸ್ಯನೋ ಪತತಿ ವಾ ಮನೋಮೃಗಃ ॥೩೯॥

ತಾವದೇವ ನಯಧೀರ್ವಿರಾಜತೇ
ತಾವದೇವ ಜನತಾಭಯಂ ಭವೇತ್ ।
ತಾವದೇವ ಧೃಢಚಿತ್ತತಾ ಭೃಶಂ
ತಾವದೇವ ಗಣನಾ ಕುಲಸ್ಯ ಚ ॥೪೦॥

---

ಆ ತರುಣನು ಮಾಧ್ಯಾಹ್ನಿಕ ಕರ್ಮಗಳನ್ನಾಚರಿಸುತ್ತಾ, "ಈ ಅಬಲೆಯರು ತನ್ನ ಕರ್ಮಗಳಿಗೆ ವಿಘ್ನವೇ ಸರಿ" ಎಂದು ಮನಸ್ಸಿನಲ್ಲಿ ಯೋಚಿಸಿದನು.

೩೮. ಬ್ರಹ್ಮ, ವಿಷ್ಣು, ಮಹೇಶ್ವರನೇ ಮುಂತಾದ ದೇವತೆಗಳನ್ನೂ, ಪ್ರಾಚೀನರಾದ ಸಿದ್ಧಮಹರ್ಷಿಗಳನ್ನೂ, ಯೋಗಿಗಳನ್ನೂ, ತಮ್ಮ ಲೀಲೆಯಿಂದ ಸ್ತ್ರೀಯರು ಮೋಹಗೊಳಿಸಿದರೆಂಬ ವಿಚಾರವು ಬಹಳ ಅದ್ಭುತವಾಗಿಯೇ ಇರುವುದು.

೩೯. ಧನುರ್ಧಾರಿಯಾದ ಮನ್ಮಥನು ಸ್ತ್ರೀಯರ ಭ್ರೂಲತೆಗಳೆಂಬ ಧನುಸ್ಸನ್ನು ಹೂಡಿ, ನೇತ್ರಗಳೆಂಬ ಹರಿತವಾದ ಬಾಣಗಳಿಂದ ಹೊಡೆದಲ್ಲಿ ಯಾವ ಮನಸ್ಸೆಂಬ ಜಿಂಕೆ ತಾನೆ ಹತವಾಗದೇ ಇರುವುದು?

೪೦. ಅಲ್ಲಿಯವರೆವಿಗೆ ನೀತಿ ಜ್ಞಾನವು ಪ್ರಕಾಸಿಸುತ್ತಿರುವುದು. ಅಲ್ಲಿಯವರೆಗೆ ಜನಸಮುದಾಯದಿಂದ ಅಪವಾದದ ಭೀತಿಯೂ, ಅಲ್ಲಿಯವರೆವಿಗೆ ಮನೋನಿಗ್ರಹವು, ವಂಶದಮೇಲಿನ ಮಮತೆಯೂ ಅಲ್ಲಿಯವರೆಗೆ ಸರಿ.

ತಾವದೇವ ತಪಸಃ ಪ್ರಗಲ್ಭತಾ
ತಾವದೇವ ಸುಮನೇಶತಾ ನೃಣಾಂ ।
ಯಾವದೇವ ಲಲತೇಕ್ಷಣಾಸವೈಃ
ಮಾದ್ಯ ತೇಽದ್ಭುತತನ್ಮೈ ರ್ನಪೂರುಷಃ ॥೪೧॥

ಮೋಹಯಂತಿ ಮದಯಂತಿ ರಾಗಿಣಂ
ಯೋಷಿತಃ ಸ್ವಲಲಿತೈರ್ಮನೋಹರೈಃ ।
ಮೋಹಯಂತಿ ಮದಯಂತಿ ಮಾಮಿಮಾಃ
ಧರ್ಮರಕ್ಷಣ ಪರಂ ಹಿ ಸ್ವೈರ್ಗುಣೈಃ ॥೪೨॥

ಮಾಂಸರಕ್ತ ಮಲಮೂತ್ರ ನಿರ್ಮಿತೇ
ಯೋಷಿತಾಂ ವಪುಷಿ ನಿರ್ಗುಣೇಽಶುಚೌ ।
ಕಾಮಿನಸ್ತು ಪರಿಕಲ್ಪ್ಯ ಚಾರುತಾಂ
ಆವಿಶಂತಿ ಸುವಿಮೂಢಚೇತಸಃ ॥೪೩॥

---

೪೧. ತಪಸ್ಸೂ ಅಲ್ಲಿಯವರೆವಿಗೆ ಎಲ್ಲವನ್ನೂ ಕೆಳಗೆಮಾಡಿ ತಾನು ಮೇಲಾಗಿರುವುದು. ಅಲ್ಲಿಯವರೆಗೇ ಮನಸ್ಸಿನ ಕಾಂತಿಯು ಅತಿಮದ ಕಾರಿಯಾದ ಸ್ತ್ರೀಯರ ದೃಷ್ಟಿಪಾತವೆಂಬ ಮದ್ಯವನ್ನು ಕುಡಿದು ಮದ ಮೀರುವವನಾಗುವವರೆಗೇ ಇವೆಲ್ಲವೂ ಇರುವುವು.

೪೨. ಸ್ತ್ರೀಯರು ಅನುರಕ್ತನಾದ ಪುರುಷನನ್ನು ತಮ್ಮ ಮನೋ ಹರವಾದ ವಿಲಾಸದಿಂದ ಹುಚ್ಚೇರಿದವನನ್ನಾಗಿ ಮಾಡುವರು. ಮತ್ತು ಮತ್ತನನ್ನಾಗಿಯೂ ಮಾಡುವರು. ಪ್ರಕೃತದಲ್ಲಿ ಧರ್ಮರಕ್ಷಣವಲ್ಲಿ ಆಸಕ್ತನಾದ ನನ್ನನ್ನೂ ಸಹ ಈ ಸ್ತ್ರೀಯರು ತಮ್ಮ ಲೀಲೆಗಳಿಂದ, ಮುಗ್ಧ ನನ್ನಾಗಿಯೂ, ಮತ್ತನನ್ನಾಗಿಯೂ, ಮಾಡುವರು.

೪೩. ಮಾಂಸ, ರಕ್ತ, ಮಲ, ಮೂತ್ರ, ಇವುಗಳಿಂದ ಸೃಷ್ಟವಾದ, ನಿರ್ಗುಣವಾದ, ಅಶುಚಿಯಾದ, ಈ ಸ್ತ್ರೀಶರೀರದಲ್ಲಿ, ಅಜ್ಞರಾದ ಕಾಮಿಗಳು ತಮ್ಮ ಕಾಮದೋಷದಿಂದ ಸೌಂದರ್ಯವನ್ನು ಆರೋಪಿಸಿ ಪ್ರವೇಶಿಸುವರು.

ದಾರುಣಾ ಹಿ ಪರಿಕೀರ್ತಿತಾಂಗನಾ
ಸ್ವಾಧುಭಿರ್ವಿಮಲ ಬುದ್ಧಿಭಿರ್ಬುಧೈಃ ।
ಯಾವದೇವ ನ ಸಮೀಪಗಾಸ್ತ್ರಿಯಾಃ
ತಾವದೇವ ಹಿ ಗೃಹಂ ವ್ರಜಾಮ್ಯಹಂ ॥೪೪॥
ಸಮೀಪಂ ತಸ್ಯ ಯಾವನ್ನ ಆಗಚ್ಛಂತಿ ವರಸ್ತ್ರಿಯಃ ।
ವೈಷ್ಣವೇನ ಪ್ರಭಾವೇಣ ತಾವದಂತರ್ದಧೇ ದ್ವಿಜಃ ॥೪೫॥
ತಸ್ಯ ಯೋಗಬಲಾದ್ಭೂಪ ಗತಸ್ಯಾದರ್ಶನಂ ತದಾ ।
ದೃಷ್ಟ್ವಾ ತದದ್ಭುತಂಕರ್ಮ ವೈಷ್ಣವಬ್ರಹ್ಮಚಾರಿಣಃ ॥೪೬॥
ವಿತ್ರಸ್ತನಯನಾ ಬಾಲಾಃ ಕುರಂಗ್ಯ ಇವ ಕಾತರಾಃ ।
ಸಂಕ್ರಾಂತನಯನಾಃ ಶೂನ್ಯಾ ದದೃಶುಸ್ತಾ ದಿಶೋ ದಶ ॥೪೭॥

---

೪೪. ನಿರ್ಮಲವಾದ ಜ್ಞಾನವುಳ್ಳ ಪಂಡಿತರಾದ ಸಾಧುಗಳು ಸ್ತ್ರೀಯು ಮಹಾ ಅನರ್ಥಕ್ಕೆ ಕಾರಣಳೆಂದು ಹೇಳುವರು. ಆದುದರಿಂದ ಈ ಸ್ತ್ರಿಯರು ನನ್ನ ಸಮೀಪಕ್ಕೆ ಬರುವುದಕ್ಕೆ ಮೊದಲೇ ನಾನು ಮನೆಗೆ ಹೋಗುವೆನು.

೪೫. ಹೀಗೆಂಬುದಾಗಿ ಯೋಚಿಸಿ ಆ ವರವರ್ಣಿನಿಯರು ಸಮೀಪವನ್ನು ಸೇರುವುದಕ್ಕೆ ಮೊದಲೇ ವೈಷ್ಣವತೇಜಸ್ಸಿನಿಂದ ಕೂಡಿದ ಆ ಬ್ರಾಹ್ಮಣನು ಕಣ್ಣಿಗೆ ಮರೆಯಾದನು.

೪೬. ಹೀಗೆ ಯೋಗಸಾಮರ್ಥ್ಯದಿಂದ ಅಂತರ್ಧಾನ ಹೊಂದಿದ ಆ ವೈಷ್ಣವಬ್ರಹ್ಮಚಾರಿಯ ಕಾರ್ಯವನ್ನು ನೆನೆಸಿಕೊಂಡು ಆ ಸ್ತ್ರೀಯರು ಆಶ್ಚರ್ಯಚಕಿತರಾದರು.

೪೭. ಭಯಗೊಂಡ ಹರಿಣಿಗಳಂತೆ ಚಕಿತನೇತ್ರಗಳುಳ್ಳ ಆ ಸ್ತ್ರೀಯರು, ತಮ್ಮ ದೃಷ್ಟಿಯೆಲ್ಲಾ, ಬ್ರಹ್ಮಚಾರಿಯಲ್ಲೇ ಅಡಗಿ ಹೋದ ನಿಮಿತ್ತ ದೃಷ್ಟಿಶೂನ್ಯರಾಗಿ ಹತ್ತು ದಿಕ್ಕುಗಳನ್ನೂ ನಿರಾಲಂಬರಾಗಿ ನೋಡಿದರು.

॥ ಕನ್ಯಾ ಊಚುಃ ॥

ಇಂದ್ರಜಾಲಂ ಸ್ಫುಟಂ ವೇತ್ತಿ ಮಾಯಾಂ ಜಾನಾತಿವಾಪುನಃ ।
ದೃಷ್ಟೋಽಪ್ಯದೃಷ್ಟರೂಪೋಽಭೂದಿತ್ಯೂಚುಸ್ತಾಃ ಪರಸ್ಪರಂ ॥೪೮॥
ವ್ಯಾಪ್ತಂ ಚ ಹೃದಯಂ ತಾಸಾಂ ತದೈವ ವಿರಹಾಗ್ನಿನಾ ।
ಜ್ವಲದ್ದಾವಾನಲೇನೇವ ಸುಸ್ನಿಗ್ಧಂ ಸರ್ವಕಾನನಂ ॥೪೯॥
ತ್ಯಜೇಂದ್ರ ಜಾಲಿಕಾಂ ವಿದ್ಯಾಂ ಕಾಂತ ದರ್ಶಯ ಸತ್ವರಂ ।
ಆತ್ಮಾನಂ ನಹಿತೇ ಯುಕ್ತಂ ಪ್ರಾಗ್ಗ್ರಾಸೇ ಮಕ್ಷಿಕೋಪಮಂ॥೫೦॥
ಹಾಕಷ್ಟಂ ದರ್ಶಿತಃ ಕಸ್ಮಾದ್ಧಾತ್ರಾ ತ್ವಂ ಘಟಿತಃ ಕುತಃ ।
ಜ್ಞಾತಂ ಮಹಾನುಸಂತಾಪಹೇತುರ್ನಸ್ತ್ವಂ ವಿನಿರ್ಮಿತಃ ॥೫೧॥

---

೪೮. ಕನ್ನಿಕೆಯರು ಹೇಳಿದರು: ಇದ್ದ ವಸ್ತುವನ್ನು ಮರೆಮಾಚು ವುದರಲ್ಲೂ ಅಥವಾ ಇಲ್ಲದ್ದನ್ನು ತೋರಿಸುವುದರಲ್ಲಿಯೂ, ಅವನು ಬಹಳ ನಿಪುಣನಾಗಿರಬಹುದು. ಎಕೆಂದರೆ; ಕಣ್ಮೆದುರಿಗಿದ್ದರೂ ಕೂಡ ಕಾಣ ದಂತಾದವನಲ್ಲ! ಎಂಬುದಾಗಿ ಪರಸ್ಪರ ಮಾತನಾಡಿದರು.

೪೯. ಹಚ್ಚಗಿರುವ ಕಾಡನ್ನು ಕಾಳ್ಗಿಚ್ಚು ವ್ಯಾಪಿಸುವಂತೆ ವಿರ ಹಾಗ್ನಿಯು ಆಕ್ಷಣದಲ್ಲೇ ಆ ಸ್ತ್ರೀಯರ ಹೃದಯವನ್ನು ಆವರಿಸಿತು.

೫೦. ಎಲೈ ಕಾಂತನೇ? ಇಂದ್ರಜಾಲವನ್ನು ಬಿಟ್ಟು ಗೋಚರ ನಾಗು. ನೊಣವು ಮೊದಲನೆಯ ತುತ್ತನ್ನು ಹಾರಿಸುವಂತೆ ಪ್ರಥಮ ದರ್ಶನದಲ್ಲೇ ನಿನ್ನನ್ನು ಮರೆಮಾಚಿಕೊಳ್ಳುವುದು ನಿನಗೆ ಯುಕ್ತ ವಾದುದಲ್ಲ.

೫೧. ಆ ಬ್ರಹ್ಮನು ನಾವಿಲ್ಲಿಗೆ ಬಂದ ವೇಳೆಯಲ್ಲಿ ಏತಕ್ಕೆ ನಿನ್ನನ್ನು ಇಲ್ಲಿಗೆ ಕರತರಬೇಕಾಗಿತ್ತು. ಮತ್ತು ನಮ್ಮ ದೃಷ್ಟಿಗೆ ಬೀಳುವಂತೆ ಮಾಡಬೇಕಾಗಿತ್ತು! ತಿಳಿಯಿತು ದುಃಖವನ್ನುಂಟುಮಾಡಲು ಬ್ರಹ್ಮನು ಹೀಗೆ ಸೇರಿಸಿದನು.

ಕಚ್ಚಿತ್ತೇ ನಿರ್ದಯಂ ಚೇತಃ ಕಚ್ಚಿದಸ್ಮಾಸು ನೋ ಮತಿಃ ॥
ಕಚ್ಚಿತ್ಕ್ರೂರೋಽಸಿ ಹೇ ಕಾಂತ ಕಚ್ಚಿನ್ಮೃಷ್ಟಾಸಿ ನೋ ಮನಃ ॥೫೨॥

ಕಚ್ಚಿನ್ನಪ್ರತ್ಯಯೋಽಸ್ಮಾಸು ಕಚ್ಚಿದಸ್ಮಾನ್ ಪರೀಕ್ಷಸೇ ।
ಕಚ್ಚಿನ್ನಿಸರ್ಗಮತಾಶೀಲಃ ಕಚ್ಚಿನ್ಮಾಯಾವಿಶಾರದಃ ॥೫೩॥

ಕಚ್ಚಿಚ್ಚಿತ್ತೇ ಪ್ರವೇಷ್ಟುಂಚ ವೇತ್ಸಿವಿಜ್ಞಾನಲಾಘವಂ ।
ಕಚ್ಚಿನ್ನಿಷ್ಕ್ರಮಣೋಪಾಯಂ ನ ಜಾನಾಸಿ ಕುತಃ ಪುನಃ ॥೫೪॥

ಕಚ್ಚಿದ್ವಿನಾಪರಾಧಂ ಕಿಮಸ್ಮಾಸು ಪ್ರವಿಕುಪ್ಯಸೇ ।
ಕಚ್ಚಿದ್ದುಃಖಂ ನ ಜಾನಾಸಿ ಪರೇಷಾಂ ವಿಪ್ರಲಂಭನಂ ॥೫೫॥

---

೫೨. ಎಲೈ ಕಾಂತನೇ? ನಿನ್ನ ಮನಸ್ಸಿಗೆ ಇತರರ ದುಃಖವನ್ನು ನೋಡಿದರೆ ದುಃಖವೇ ಉಂಟಾಗುವುದಿಲ್ಲವೇ? ಅಥವಾ ನಿನಗೆ ನಮ್ಮಲ್ಲಿ ಮನಸ್ಸಿಲ್ಲವೋ? ನೀನೇನಾದರೂ ಬಹಳ ಕ್ರೂರಹೃದಯನೋ? ನಮ್ಮ ಮನಸ್ಸನ್ನು ಅಪಹರಿಸಿಕೊಂಡೇನಾದರೂ ಹೋದೆಯಾ?

೫೩. ನಮ್ಮಲ್ಲಿ, ನಿನಗೆ ನಂಬಿಕೆಯಿಲ್ಲವೋ? ಅಥವಾ ನಮ್ಮನ್ನೇನಾದರೂ, ಪರೀಕ್ಷಿಸುತ್ತಿರುವೆಯೋ? ಅಥವಾ ಸ್ವಭಾವದಿಂದಲೇ ಪ್ರೀತಿಯಿಲ್ಲವೊ? ಹಾಗಿಲ್ಲದಿದ್ದರೆ ನೀನೇನಾದರೂ, ಮಾಯಾವಿದ್ಯಾನಿಪುಣನೋ?

೫೪. ಅತಿ ಸೂಕ್ಷ್ಮವಾದ ಮನಸ್ಸಿನಲ್ಲಿ ಪ್ರವೇಶಮಾಡುವ ವಿದ್ಯೆಯನ್ನು ಅರಿತಿರುವೆಯೋ! ಹಾಗೆ ಪ್ರವೇಶಮಾಡಿದ ನೀನು ಹೊರಗೆ ಬರಲು ಅಭ್ಯಾಸಮಾಡಲಿಲ್ಲವೊ? ಏನು?

೫೫. ತಪ್ಪಿಲ್ಲದೇ ನಮ್ಮಲ್ಲಿ ಕೋಪಗೊಳ್ಳುವೆಯಾ? ಇತರರಿಗೆ ವಂಚನೆಯಿಂದ ಪ್ರಾಣನಾಶಕವಾದ ದುಃಖಉಂಟಾಗುವುದೆಂಬ ವಿಷಯವನ್ನು ನೀನು ಅರಿತಿಲ್ಲವೇ?

ತ್ವದ್ದರ್ಶನಂ ವಿನಾ ನಷ್ಟಾ ಹೃದಯೇಶ್ವರ ಸಾಂಪ್ರತಂ ।
ನಜೀವಾಮೋಽಥ ಜೀವಾಮಃ ಪುನಸ್ತ್ವದ್ದರ್ಶನಾಶಯಾ ॥೫೬॥

ವಯಂ ಚ ನೀಯಂತಾಂ ತತ್ರ ಶೀಘ್ರಂ ಯತ್ರಗತೋ ಭವಾನ್ ।
ತ್ವದ್ದರ್ಶನಹರೋ ಧಾತಾ ವ್ಯಧಾನ್ಮೋದಾಂಕುರಚ್ಛಿದಾಂ ॥೫೭॥

ಸರ್ವಥಾ ದರ್ಶಸಂದೇಹಿ ಕಾರುಣ್ಯಂ ಭಜ ಸರ್ವಥಾ ।
ಪರ್ಯಂತಂ ನಪ್ರಪಶ್ಯಂತಿ ಕಸ್ಯಚಿತ್ಸಜ್ಜನಾಜನಾಃ ॥೫೮॥

ಇತ್ಥಂ ವಿಲಪ್ಯ ತಾಃ ಕನ್ಯಾಃ ಪ್ರತೀಕ್ಷ್ಯ ಚ ಬಹುಕ್ಷಣಂ ।
ಪಿತುರ್ಭಯಾದ್ಗೃಹಂ ಗಂತುಂ ಶೀಘ್ರಮಾರೇಭಿರೇ ತತಃ ॥೫೯॥

ತತ್ರೇಮನಿಗಡೈರ್ಬದ್ಧಾಃ ಭೃಶಂ ವಿರಹ ವಿಕ್ಲವಾಃ ।
ಕಥಂಚಿದ್ಧೈರ್ಯಮಾಲಂಬ್ಯ ತಾಃ ಸ್ವಂ ಸ್ವಂಗೃಹಮಾಗತಾಃ ॥೬೦॥

---

೫೬. ಎಲೈ ಹೃದಯೇಶ್ವರನೇ! ನಿನ್ನನ್ನು ನೋಡದೆ ನಾವು ಬದುಕಲಾರೆವು. ಇದುವರೆವಿಗೆ ನಿನ್ನನ್ನು ಕಾಣದೆ ಬದುಕಿರುವುದು ಕೂಡ ಪುನಃ ನಿನ್ನನ್ನು ನೋಡಬೇಕೆಂಬ ಇಚ್ಛೆಯಿಂದಲೇನೆಯೇ.

೫೭. ನೀನು ಹೋದ ಸ್ಥಳಕ್ಕೆ ನಮ್ಮನ್ನು ಕರೆದುಕೊಂಡು ಹೋಗು. ಬ್ರಹ್ಮನು ನಿನ್ನ ದರ್ಶನವನ್ನಪಹರಿಸಿ ನಮ್ಮ ಸಂತೋಷಾಂಕುರವನ್ನು ಕುಯ್ದನು.

೫೮. ಹೇಗಾದರೂ ಮಾಡಿ ನಿನ್ನ ದರ್ಶನವನ್ನು ಕೊಡು. ದಯೆಯನ್ನು ಆಶ್ರಯಿಸು. ಸತ್ಪುರುಷರು ಯಾವನೊಬ್ಬ ಮನುಷ್ಯನ ವಿಪತ್ತನ್ನು ನೋಡಿ ಸಹಿಸಲಾರರು.

೫೯. ಆ ಬಾಲೆಯರು ಈ ರೀತಿಯಾಗಿ ಬಹಳಕಾಲ ತರುಣನನ್ನು ನಿರೀಕ್ಷಿಸಿ ತಂದೆಯ ಭಯದಿಂದ ಮನೆಗೆ ಹೋಗಲು ಪ್ರಯತ್ನಿಸಿದರು.

೬೦. ವಿರಹದುಃಖಿತರಾದ ಆ ಕನ್ಯೆಯರು ಅನುರಾಗವೆಂಬ ಬೇಡಿಯಿಂದ ಕೀಲಿತರಾಗಿ ಹೇಗೋ ಧೈರ್ಯವನ್ನಾಶ್ರಯಿಸಿ, ತಮ್ಮ ತಮ್ಮ ಮನೆಗೆ ಬಂದರು.

ಆಗತ್ಯ ಪತಿತಾಃ ಸರ್ವಾ ಮಾತೄಣಾಂ ತು ಸಮೀಪತಃ ।
ಕಿಮೇತನ್ಮಾತೃಭಿಃ ಪೃಷ್ಟಾಃ ಕುತಃ ಕಾಲಾತ್ಯಯೋಽಭವತ್ ॥೬೧॥

॥ ಕನ್ಯಾ ಊಚುಃ ॥

ಕ್ರೀಡಂತ್ಯಃ ಕಿನ್ನರೀಭಿಸ್ತು ಸಾರ್ಧಂ ಸಂಗತಕಂ ಯದಾ ।
ಸಂಸ್ಥಿತಾಸ್ತೇನ ನಜ್ಞಾತೋ ದಿವಸೋಽಚ್ಛೋದ ಸರೋವರೇ॥೬೨॥

ಪಥಿ ಶ್ರಾಂತಾ ವಯಂ ಮಾತಸ್ಸಂತಾಪಸ್ತೇನನಸ್ತನೌ ।
ಮೋಹೇನ ಮಹತಾ ವಕ್ತುಂ ನ ಕೇನಾಪ್ಯುತ್ಸಹಾಮಹೇ ॥೬೩॥

॥ ನಾರದ ಉವಾಚ ॥

ಇತ್ಯುಕ್ತ್ವಾ ಲುಠಿತಾಸ್ತತ್ರ ಮಣಿಭೂಮೌ ಕುಮಾರಿಕಾಃ ।
ಆಕಾರಂ ಗೋಪಯಂತ್ಯಸ್ತಾ ಮುಗ್ಧಾ ಜಲ್ಪಂತಿ ಮಾತೃಭಿಃ ॥೬೪॥

---

೬೧. ಅವರೆಲ್ಲರೂ ತಾಯಂದಿರ ಸಮೀಪದಲ್ಲಿ ಬಂದು ಬಿದ್ದರು. ಆ ಜನನಿಯರು ಎಲೈ ಪುತ್ರಿಯರೇ! ಇದೇನಿದು? ಏತಕ್ಕೆ ಇಷ್ಟು ತಡವಾಯಿತು? ಎಂದು ಕೇಳಿದರು.

೬೨. ಕನ್ನೆಯರು ಹೇಳಿದರು: ಅಚ್ಛೋದ ಸರೋವರದ ತೀರದಲ್ಲಿ ಕಿನ್ನರ ಸ್ತ್ರೀಯರೊಂದಿಗೆ ಆಡುತ್ತಾ ಹೃದಯಂಗಮವಾದ ವಚನಗಳಿಂದ ಹೃತ್ತಚಿತ್ತರಾದ ನಮಗೆ ಸಮಯವೇ ತಿಳಿಯದೇ ಹೋಯಿತು.

೬೩. ಎಲೈ ಜನನಿಯೇ! ನಾವು ದಾರಿಯಲ್ಲಿ ಬಹಳ ಬಳಲಿದೆವು. ನಮ್ಮ ಶರೀರದಲ್ಲಿ ಸಂತಾಪವು ಮಿತಿಮೀರಿರುವುದು. ಮೂರ್ಛೆಹೋದಂತಾಗಿರುವುದು. ನಾವು ಯಾರೊಂದಿಗೂ ಮಾತನಾಡಲಾರೆವು.

೬೪. ನಾರದನು ಹೇಳಿದನು: ಆ ಬಾಲೆಯರು ಹೀಗೆ ತಮ್ಮ ಹೃದ್ಗತವಾದ ಭಾವವನ್ನು ತಾಯಂದಿರಲ್ಲಿ ಮರೆಮಾಚುತ್ತಾ ಆ ಮಣಿನಿಬದ್ಧವಾದ ಭೂಮಿಯಲ್ಲಿ ಬಿದ್ದು, ಹೊರಳಾಡಿದರು.

ಕಾಚಿನ್ನರ್ತಯತಿ ಕ್ರೀಡಾಮಯೂರಂ ನ ಮುದಾ ತದಾ ।
ನ ಪಾಠಯತಿ ತಂ ಕೀರಂ ಪಂಜರೇಽನ್ಯಾ ಕುತೂಹಲಾತ್ ॥೬೫॥

ಲಾಲಯೇನ್ನಕುಲಂ ನಾನ್ಯಾ ನೋಲ್ಲಾಸಯತಿ ಸಾರಿಕಾಂ ।
ಅಪರಾತೀವ ಸಂಮುಗ್ಧಾ ನೈವ ಖೇಲತಿ ಸಾರಸೈಃ ॥೬೬॥

ಭೇಜಿರೇ ನ ವಿನೋದಂ ತಾ ರೇಮಿರೇ ನೈವ ಮಂದಿರೇ ।
ಊಚಿರೇ ಬಾಂಧವೈರ್ನಾಲಂ ವೀಣಾವಾದ್ಯಂ ನ ಚಕ್ರಿರೇ ॥೬೭॥

ಕಲ್ಪದ್ರುಮಪ್ರಸೂನಂ ಯತ್ಸರ್ವಂ ತಚ್ಚಾನಲೋಪಮಂ ।
ಮಂದಾರಕುಸುಮಾಮೋದಿ ನ ಪಪುರ್ಮಧುರಂ ಮಧು ॥೬೮॥

ಯೋಗಿನ್ಯ ಇವ ತಾಃ ಕನ್ಯಾ ನಾಸಾಗ್ರನ್ಯಸ್ತಲೋಚನಾಃ ।
ಅಲಕ್ಷ್ಯಧ್ಯಾನಸಂತಾನಾಃ ಪುರುಷೋತ್ತಮಮಾನಸಾಃ ॥೬೯॥

---

೬೫. ಅವರಲ್ಲೊಬ್ಬಳು ಕ್ರೀಡಾಮಯೂರವನ್ನು ಸಂತೋಷದಿಂದ ಕುಣಿಸುವುದನ್ನೇ ಬಿಟ್ಟಳು. ಮತ್ತೊಬ್ಬಳು ಪಂಜರದಲ್ಲಿರುವ ಗಿಳಿಯನ್ನು ಮಾತನಾಡಿಸುವುದನ್ನೇ ಬಿಟ್ಟಳು.

೬೬. ಒಬ್ಬಳು ಮುಂಗಸಿಯನ್ನು ಮುದ್ದಾಡುವುದನ್ನೇ ಬಿಟ್ಟಳು. ಸಾರಿಕೆಯೊಡನೆ ವಿನೋದವನ್ನೇ ದೂರಮಾಡಿದಳು. ಮತ್ತೊಬ್ಬಳು ಸಾರಸಪಕ್ಷಿಗಳೊಡನೆ ಕ್ರೀಡೆಯನ್ನು ಬಿಟ್ಟು ಬೆಪ್ಪಾಗಿ ಕುಳಿತು ಬಿಟ್ಟಳು.

೬೭. ಆ ಬಾಲೆಯರು ಮನೆಯಲ್ಲಿ ವಿನೋದವನ್ನೇ ಮರೆತರು. ಅವರ ಮನಸ್ಸಿನಲ್ಲಿ ಸಂತೋಷವೇ ಇಲ್ಲದಂತಾಯಿತು. ಅವರು ನಂಟರೊಂದಿಗೆ ಕೂಡ ಹೆಚ್ಚು ಮಾತನಾಡಲು ಅಪೇಕ್ಷಿಸಲಿಲ್ಲ. ವೀಣೆಯ ಮೇಲೆ ಕೈಯಿಡುವುದನ್ನೇ ಬಿಟ್ಟರು.

೬೮. ಕಲ್ಪವೃಕ್ಷದ ಹೂವುಗಳೆಲ್ಲಾ ಅವರಿಗೆ ಬೆಂಕಿಯಂತೆ ಸಂತಾಪವನ್ನುಂಟುಮಾಡಲಾರಂಭಿಸಿದವು. ಮಂದಾರ ಪುಷ್ಪದಿಂದ ಸುವಾಸಿತವಾದ ಸಿಹಿಯಾದ ಮದ್ಯವನ್ನೂ ದೂರಮಾಡಿದರು.

೬೯. ಆ ಕನ್ನಿಕೆಯರು ಯೋಗಿನಿಯರಂತೆ ಮೂಗಿನತುದಿಯಲ್ಲಿ ದೃಷ್ಟಿಯನ್ನಿಟ್ಟು ನಿರ್ವಿಕಲ್ಪಕ ಸಮಾಧಿಯಂತೆ ಲಕ್ಷ್ಯವಿಲ್ಲದ ಧ್ಯಾನಸಂತತಿಯನ್ನಾಶ್ರಯಿಸಿ ವಿಷ್ಣುವಿನಲ್ಲಿ ಮನಸ್ಸಿಟ್ಟಂತೆ ಆ ಬ್ರಹ್ಮಚಾರಿಯಲ್ಲಿ ಮನಸ್ಸಿಟ್ಟರು.

ಚಂದ್ರಕಾಂತಮಣಿಚ್ಛನ್ನೇ ಸ್ರವದ್ವಾರಿಣಿ ಕಂದರೇ ।
ಕ್ಷಣಂ ವಾತಾಯನೇ ಸ್ಥಿತ್ವಾ ಜಲಯಂತ್ರಗೃಹೇ ಕ್ಷಣಂ ॥೭೦॥

ರಚಯಂತಿ ಕ್ಷಣಂ ಶಯ್ಯಾಂ ದೀರ್ಘಿಕಾಂಭೋಜಿನೀದಲೈಃ ।
ವೀಜ್ಯಮಾನಾಃ ಸಖೀಭಿಸ್ತಾಃ ಶೀತಲೈರ್ನಲಿನೀದಲೈಃ ॥೭೧॥

ಇತ್ಥಂ ಯುಗಸಮಾಂ ರಾತ್ರಿಮನಯಂಸ್ತಾ ವರಸ್ತ್ರಿಯಃ ।
ಕಥಂಚಿದ್ಧಾರಣಂ ಕೃತ್ವಾ ವಿಹ್ವಲಾಃ ಸಜ್ವರಾ ಇವ ॥೭೨॥

ಪ್ರಾತರ್ವ್ಯೋಮಮಣಿಂ ದೃಷ್ಟ್ವಾ ಮನ್ಯಮಾನಾಃ ಸ್ವಜೀವಿತಂ ।
ವಿಜ್ಞಾಪ್ಯ ಮಾತರಂ ಸ್ವಾಂ ಸ್ವಾಂ ಗೌರೀಂ ಪೂಜಯಿತುಂ ಗತಾಃ ॥

ಸ್ನಾತ್ವಾ ತೇನ ವಿಧಾನೇನ ಪುಷ್ಪೈರ್ಧೂಪೈಸ್ತಥಾ ಪುನಃ ।
ವಿಧಾಯ ಪೂಜನಂ ದೇವ್ಯಾ ಗಾಯಂತ್ಯಸ್ತತ್ರ ತಾಃ ಸ್ಥಿತಾಃ ॥೭೪॥

---

೭೦. ಚಂದ್ರಕಾಂತಮಣಿಗಳಿಂದ ಸ್ರವಿಸುವ ನೀರನ್ನು ಉಗುಳು ತ್ತಿರುವ, ಗುಹೆಯನ್ನು ಪ್ರವೇಶಿಸಿ ಒಂದು ಕ್ಷಣವನ್ನು ಕಳೆಯುವರು ಮತ್ತೊಂದು ಕ್ಷಣವನ್ನು ಜಲಯಂತ್ರಗೃಹದಲ್ಲಿಯೂ, ಇನ್ನೊಂದು ಕ್ಷಣ ವನ್ನು ಕಿಟಕಿಯಲ್ಲಿ ನಿಂತೂ ಕಳೆಯುವರು.

೭೧. ಆ ಬಾಲೆಯರು ಸರೋವರದ ನಳಿನೀ ಪತ್ರಗಳನ್ನು ತಂದು ರಚಿಸಿದ ಶಯನವನ್ನಾಶ್ರಯಿಸಿ, ಸಖಿಯರು ತಣ್ಣಗಿರುವ ನಳಿನೀ ದಳ ಗಳಿಂದ ಗಾಳಿಯನ್ನು ಬೀಸುತ್ತಿದ್ದರೆ, ಅಲ್ಲಿ ಕ್ಷಣಕಾಲವನ್ನು ಹೇಗೋ ಕಳೆಯುವರು.

೭೨. ಜ್ವರದಿಂದ ಪೀಡಿತರಾದ ಮನಷ್ಯರಂತೆ ಅತಿಕಷ್ಟವನ್ನು ಅನುಭವಿಸುತ್ತಾ ಹೇಗೋ ಪ್ರಾಣಧಾರಣೆ ಮಾಡಿಕೊಂಡು, ಆ ವರವರ್ಣಿ ನಿಯರು ಒಂದು ಯುಗದಂತೆ ಆ ಒಂದು ರಾತ್ರಿಯನ್ನು ಕಳೆದರು.

೭೩. ಮಾರನೆಯದಿವಸ ಸೂರ್ಯನನ್ನು ಕಂಡು ಬದುಕಿವೆವೆಂದು ತಿಳಿದು, ಅವರು ತಮ್ಮ ತಮ್ಮ ತಾಯಂದಿರ ಅನುಮತಿಯನ್ನು ಪಡೆದು ಗೌರೀಪೂಜೆಗಾಗಿ ಹೊರಟರು.

೭೪. ಆ ಅಚ್ಛೋದ ಸರೋವರದಲ್ಲಿ ಸ್ನಾನಮಾಡಿ, ಹಿಂದಿನಂತೆ ಪುಷ್ಪ, ಧೂಪ, ದೀಪ ಇವೇ ಮೊದಲಾದವುಗಳಿಂದ ಗೌರಿಯನ್ನು ಪೂಜಿಸಿ ಅಲ್ಲಿ ಕುಳಿತು ಗಾನ ಮಾಡುವುದಕ್ಕಾರಂಭಿಸಿದರು.

ಏತಸ್ಮಿನ್ನಂತರೇ ವಿಪ್ರಃ ಸ್ನಾತುಂ ಸೋऽಪಿ ಸಮಾಗತಃ ।
ಪಿತುರಾಶ್ರಮತಸ್ತಸ್ಮಾದಚ್ಛೋದೇऽತ್ರ ಸರೋವರೇ ॥೭೫॥

ಮಿತ್ರಂ ದೃಷ್ಟ್ವೈವ ರಾತ್ರ್ಯಂತೇ ಪದ್ಮಿನ್ಯ ಇವ ಕನ್ಯಕಾಃ ।
ಉತ್ಫುಲ್ಲನಯನಾ ಜಾತಾ ಸ್ತಂ ದೃಷ್ಟ್ವಾ ಬ್ರಹ್ಮಚಾರಿಣಂ ॥೭೬॥

ಗತ್ವಾ ತತ್ರೈವ ತಾಃ ಕನ್ಯಾಃ ಸಮೀಪಂ ಬ್ರಹ್ಮಚಾರಿಣಃ ।
ಸವ್ಯಾಪಸವ್ಯಬಂಧೇನ ಭುಜಪಾಶಂ ಚ ಚಕ್ರಿರೇ ॥೭೭॥

ಗತೋऽಸಿ ಪ್ರಿಯ ಪೂರ್ವೇದ್ಯುರ್ಗಂತುಮದ್ಯ ನಲಭ್ಯತೇ ।
ವೃತಸ್ತ್ವಂ ನೂನಮಸ್ಮಾಭಿರ್ನಾತ್ರ ತೇऽಸ್ತಿ ವಿಚಾರಣಾ ॥೭೮॥

ಇತ್ಯುಕ್ತೋ ಬ್ರಾಹ್ಮಣಃ ಪ್ರಾಹ ಪ್ರಹಸನ್ ಬಾಹುಪಾಶಗಃ ।
ಯುಷ್ಮಾಭಿರುಚ್ಯತೇ ಭದ್ರಮನುಕೂಲಂ ಪ್ರಿಯಂ ವಚಃ ॥೭೯॥

---

೭೫. ಇಷ್ಟರಲ್ಲಿ ಆ ಮುನಿಪುತ್ರನೂ ಕೂಡ ತಂದೆಯ ಆಶ್ರಮದಿಂದ ಹೊರಟು ಈ ಅಚ್ಛೋದ ಸರೋವರದಲ್ಲಿ ಸ್ನಾನಮಾಡಲು ಬಂದನು.

೭೬. ಆ ಕನ್ಯೆಯರು ಆ ಬ್ರಹ್ಮಚಾರಿಯನ್ನು ನೋಡಿ ಪ್ರಾತಃಕಾಲದಲ್ಲಿ ಸೂರ್ಯನನ್ನು ಕಂಡ ಕಮಲಿನಿಗಳಂತೆ ಮುಖವಿಕಾಸವನ್ನು ಹೊಂದಿದರು.

೭೭. ಅವರು ಆ ಬ್ರಹ್ಮಚಾರಿಯ ಹತ್ತಿರಕ್ಕೆ ಹೋಗಿ ತಮ್ಮ ಬಾಹುಯುಗ್ಮವನ್ನು ನೀಡಿ ಅವನನ್ನು ಗಾಢವಾಗಿ ಆಶ್ಲೇಷಿಸಿದರು.

೭೮. ಎಲೈ ಪ್ರಿಯನೇ! ನಿನ್ನೆ ಹೇಗೋ ತಪ್ಪಿಸಿಕೊಂಡು ಹೊರಟು ಹೋದೆ. ಆದರೆ ಈ ದಿವಸ ಹೋಗಲು ಸಾಧ್ಯವಿಲ್ಲ. ನಾವು ನಿನ್ನನ್ನು ವರಿಸಿರುವೆವು. ನಿನಗೆ ಇನ್ನೇನೂ ವಿಚಾರಮಾಡಲು ಕಾರಣವಿಲ್ಲ.

೭೯. ಬಾಹುಪಾಶಮಧ್ಯವನ್ನು ಸೇರಿದ ಆ ಬ್ರಾಹ್ಮಣನು ಈ ಮಾತನ್ನು ಕೇಳಿ ನಿಮ್ಮ ಮಾತು ಪ್ರಿಯವಾಗಿಯೂ ಹಿತವಾಗಿಯೂ ಇರುವುದು.

ಪ್ರಥಮಾಶ್ರಮನಿಷ್ಠಸ್ಯ ಕಿಂತು ನಶ್ಯೇತ ಮೇ ವ್ರತಂ ।
ವಿದ್ಯಾಭ್ಯಸನಶೀಲಸ್ಯ ತಿಷ್ಠತಶ್ಚ ಗುರೋಃ ಕುಲೇ ॥೮೦॥
ಆಶ್ರಮೋ ಯತ್ರ ಯೋಧರ್ಮೋ ರಕ್ಷಣೀಯಃ ಸ ಪಂಡಿತೈಃ ।
ವಿವಾಹೋಽಯಮತೋ ಮನ್ಯೇ ನ ಧರ್ಮ ಇತಿ ಕನ್ಯಕಾಃ ॥೮೧॥
ಆಕರ್ಣ್ಯ ವಿಪ್ರವಾಕ್ಯಾನಿ ವಿಪ್ರಮೂಚುರ್ವರಸ್ತ್ರಿಯಃ ।
ಸಕಲಧ್ವನಿ ಸೋತ್ಕಂಠಾ ಕೋಕಿಲಾ ಇವ ಮಾಧವೇ ॥೮೨॥
ಧರ್ಮಾದರ್ಥೋಽರ್ಥತಃ ಕಾಮಃ ಕಾಮಾತ್ಸುಖಫಲೋದಯಃ ।
ಇತ್ಯೇವ ನಿಶ್ಚಯಂಜ್ಞಾಸ್ತೇ ವರ್ಣಯಂತಿ ವಿಪಶ್ಚಿತಃ ॥೮೩॥
ಸ ಕಾಮೋ ಧರ್ಮಬಾಹುಲ್ಯಾತ್ಪುರತಸ್ತೇ ಸಮುತ್ಥಿತಃ ।
ಸೇವ್ಯತಾಂ ವಿವಿಧೈರ್ಭೋಗೈಃ ಸ್ವೇಚ್ಛಾ ಭೂಮಿರಿಯಂ ಯತಃ ॥೮೪॥

---

೮೦. ಆದರೆ ನಾನು ಬ್ರಹ್ಮಚರ್ಯಾಶ್ರಮವನ್ನು ಆಶ್ರಯಿಸಿ ಗುರುಕುಲದಲ್ಲಿ ವಿದ್ಯಾಭ್ಯಾಸಮಾಡುತ್ತಿರುವೆನು. ಆದುದರಿಂದ ನನ್ನ ವ್ರತ ಭಂಗವಾಗುವುದು.

೮೧. ಪಂಡಿತನಾದವನು ತಾನು ಆಶ್ರಯಿಸಿದ ಆಶ್ರಮಧರ್ಮವನ್ನು ಹೇಗಾದರೂ ರಕ್ಷಿಸಬೇಕು. ಹೀಗಿರುವುದರಿಂದ ಎಲೈ ಕನ್ಯೆಯರೇ! ಈಗ ವಿವಾಹವು ನನಗೆ ಧರ್ಮವಲ್ಲವೆಂದು ನಾನು ತಿಳಿದಿರುವೆನು.

೮೨. ಈ ಮಾತನ್ನು ಕೇಳಿದ ಆ ಉತ್ತಮಸ್ತ್ರೀಯರು ವಸಂತಋತುವಿನ ಕೋಗಿಲೆಗಳಂತೆ ಮಧುರವಾದ ಧ್ವನಿಗಳಿಂದ ಔತ್ಸುಕ್ಯವನ್ನು ತೋರಿಸುತ್ತಾ, ಬ್ರಾಹ್ಮಣನನ್ನು ಕುರಿತು ಹೀಗೆ ಹೇಳಿದರು.

೮೩. ದೃಢಬುದ್ಧಿಯುಳ್ಳ ವಿದ್ವಾಂಸರು ಧರ್ಮದಿಂದ ಅರ್ಥವೂ, ಅರ್ಥದಿಂದ ಕಾಮವೂ, ಕಾಮದಿಂದ ಸುಖಸಂಪತ್ತೂ, ಬರುವುವೆಂದು ನಿಶ್ಚಯಿಸಿರುವರು.

೮೪. ನೀನಾಚರಿಸಿರುವ ಬಹಳ ಧರ್ಮದಿಂದ ಕಾಮವು ತಾನಾಗಿಯೇ ನಿನ್ನ ಮುಂದೆ ನಿಂತಿರುವುದು. ನಿನಗೆ ಬೇಕಾದ ಭೋಗಗಳನ್ನು ಅನುಭವಿಸು. ಈ ಭೂಮಿಯು ಕಾಮೋಪಭೋಗಕ್ಕೆ ಬಹಳ ಅನುಕೂಲವಾಗಿರುವುದು.

ಶ್ರುತ್ವಾ ತದ್ವಚನಂ ತಾಸಾಂ ಪ್ರಾಹ ಗಂಭೀರಯಾ ಗಿರಾ ।
ತಥ್ಯಂ ವೋ ವಚನಂ ಕಿಂತು ಮಮಾಪ್ಯಾವಶ್ಯಕಂ ವ್ರತಂ ॥೮೫॥

ಪ್ರಾಪ್ಯಾನುಜ್ಞಾಂ ಗುರೋಃ ಕುರ್ವೇ ವಿವಾಹಂ ಕರ್ಮ ನಾನ್ಯಥಾ ।
ಇತ್ಯುಕ್ತಾಃ ಪುನರೂಚುಸ್ತಾಃ ಸ್ಫುಟಂ ಮೂಢೋಽಸಿ ಸುಂದರ॥೮೬॥

ಸಿದ್ಧೌಷಧಂ ಬ್ರಹ್ಮಧಿಯಾ ರಸಾಯನಂ ।
ಸಿದ್ಧಿರ್ನಿಧಿಃ ಸಾಧುಕುಲಾ ವರಾಂಗನಾಃ ।
ಮಂತ್ರಸ್ತಥಾ ಸಿದ್ಧರಸಶ್ಚ ಧರ್ಮತೋ
ಮುನೇ ವಿಷೇವ್ಯಾಃ ಸುಧಿಯಾ ಸಮಾಗತಾಃ ॥೮೭॥

ಕಾರ್ಯಂ ತು ದೈವಾದ್ಯದಿ ಸಿದ್ಧಮಾಗತಂ
ತಸ್ಮಿನ್ನುಪೇಕ್ಷಾಂ ನ ಚ ಯಾಂತಿ ನೀತಿಗಾಃ ।

---

೮೫. ಈ ರೀತಿಯಾಗಿ ಅವರು ಹೇಳಿದ ಮಾತನ್ನು ಕೇಳಿ ಆ ಬ್ರಹ್ಮಚಾರಿಯು ನೀವು ಹೇಳುವುದೇನೋ ನಿಜ, ಆದರೂ ನಾನು ನನ್ನ ವ್ರತವನ್ನು ಕಾಪಾಡಿಕೊಳ್ಳಬೇಕಷ್ಟೇ! ಎಂಬುದಾಗಿ ಗಂಭೀರವಾಗಿ ಹೇಳಿದನು.

೮೬. ಗುರುವಿನ ಅನುಜ್ಞೆಯನ್ನು ಪಡೆದು ವಿವಾಹಮಾಡಿಕೊಳ್ಳುವೆನು. ಹಾಗಿಲ್ಲದೆ ಖಂಡಿತವಾಗಿಯೂ, ಮಾಡಿಕೊಳ್ಳುವುದಿಲ್ಲ. ಹೀಗೆಂಬುದಾಗಿ ಹೇಳಿದ ಆ ಬ್ರಾಹ್ಮಣನ ಮಾತನ್ನು ಕೇಳಿ ಆ ಸ್ತ್ರೀಯರು, ಎಲೈ ಸುಂದರನೇ! ಖಂಡಿತವಾಗಿಯೂ ನೀನು ಮಂಕನೇ ಸರಿ. ಎಂದರು.

೮೭. ಎಲೈ ಮುನಿಯೇ! ತಾನಾಗಿಯೇ ಬಂದ ಸಿದ್ಧೌಷಧ, ರಸಾಯನ, ಸಿದ್ಧಿ, ನಿಧಿ. ಉತ್ತಮಕುಲೋತ್ಪನ್ನಳಾದ ಸ್ತ್ರೀ, ಮಂತ್ರ, ಸಿದ್ಧರಸ, ಇವುಗಳನ್ನು ಪಂಡಿತನು ಬ್ರಹ್ಮಜ್ಞಾನಿಯಾದರೂ ಸರಿಯೇ, ಬ್ರಹ್ಮಬುದ್ಧಿಯಿಂದ ಸೇವಿಸಬೇಕು.

೮೮. ದೈವಾನುಕೂಲತೆಯಿಂದ ತಾನು ಮಾಡಿರುವ ಕಾರ್ಯವು ಫಲೋನ್ಮುಖವಾದರೇ, ಆ ಕಾಲದಲ್ಲಿ ನೀತಿಜ್ಞರು ಉದಾಸೀನತೆಯನ್ನು

**ಯಸ್ಮಾದುಪೇಕ್ಷ್ಯಾ ನ ಪುನಃ ಫಲಪ್ರದಾ**
**ತಸ್ಮಾನ್ನದೀರ್ಘೀಕರಣಂ ಪ್ರಶಸ್ಯತೇ ॥೮೮॥**
**ವಿಷಾದಪ್ಯಮೃತಂ ಗ್ರಾಹ್ಯಮಮೇಧ್ಯಾದಪಿ ಕಾಂಚನಂ ।**
**ನೀಚಾದಪ್ಯುತ್ತಮಾಂ ವಿದ್ಯಾಂ ಸ್ತ್ರೀರತ್ನಂ ದುಷ್ಕುಲಾದಪಿ ॥೮೯॥**
**ಸಾಂದ್ರಾನುರಾಗಾಃ ಕುಲಜನ್ಮನಿರ್ಮಲಾಃ**
**ಸ್ನೇಹಾರ್ದ್ರಚಿತ್ತಾಃ ಸುಗಿರಃ ಸ್ವಯಂವರಾಃ ।**
**ಕನ್ಯಾಃ ಸುರೂಪಾಃ ಖಲು ಚಾರುಯೌವನಾಃ**
**ಧನ್ಯಾ ಲಭಂತೇಽತ್ರ ನರಾಸ್ತು ನೇತರೇ ॥೯೦॥**
**ಕ್ವ ವಯಂ ಸುರಸುಂದರ್ಯಃ ಕ್ವ ಭವಾನ್ ತಾಪಸೋ ವಟುಃ ।**
**ದುರ್ಘಟಸ್ಯ ವಿಧಾನೇಸ ಮನ್ಯೇ ಧಾತ್ರೈವ ಪಂಡಿತಃ ॥೯೧॥**

---

ಎಂದಿಗೂ ತೋರಿಸುವುದಿಲ್ಲ. ಏಕೆಂದರೆ ಆಗ ಉದಾಸೀನತೆಯನ್ನು ತೋರಿಸಿದರೆ ಆ ಫಲವು ಎಂದಿಗೂ ಪುನಃ ಇವನ ಕಡೆಗೆ ತಿರುಗುವುದೇ ಇಲ್ಲ. ಆದುದರಿಂದ ವಿಲಂಬ ಮಾಡದೇ ಕೈಯ್ಯಲ್ಲಿ ಬಿದ್ದ ಫಲವನ್ನು ಸೇವಿಸುವುದೇ ಉತ್ತಮವಾದುದು.

೮೯. ಅಮೃತವು ವಿಷದಲ್ಲಿದ್ದರೂ, ಗ್ರಾಹ್ಯವೇ ಸರಿ. ಅಮೇಧ್ಯ ದಲ್ಲಿರುವ ಸುವರ್ಣವನ್ನು ಬಿಡಬಾರದು. ವಿದ್ಯೆಯು ನೀಚನಲ್ಲಿದ್ದರೂ, ಉಪಾದೇಯವೇ ಸರಿ, ಹಾಗೆಯೇ ದುಷ್ಕುಲೋತ್ಪನ್ನಳಾದರೂ ಉತ್ತಮ ಸ್ತ್ರೀಯನ್ನು ವರಿಸಬಹುದು.

೯೦. ಸತ್ಕುಲದಲ್ಲಿ ಹುಟ್ಟಿ ನಿರ್ಮಲರಾಗಿರುವ, ದೃಢವಾಗಿ ಅನು ರಕ್ತರಾದ, ಸ್ನೇಹಪೂರ್ಣವಾಗಿ ಮಾತನಾಡುತ್ತಾ ಸ್ವಯಂವರಕ್ಕೆ ಸಿದ್ಧ ರಾಗಿರುವ, ಸೌಂದರ್ಯದಿಂದಲೂ ನವಯೌವನದಿಂದಲೂ ಕೂಡಿರುವ, ಕನ್ಯೆಯರನ್ನು ಧನ್ಯರು ಪಡೆಯುವರು. ಇತರರಿಗೆ ಸಾಧ್ಯವಿಲ್ಲ.

೯೧. ಸುರಸುಂದರಿಯರಾದ ನಾವೆಲ್ಲಿ! ನಿರಂತರ ತಪಸ್ಸಿನಿಂದ ಕಾಯಕ್ಲೇಶಗಳನ್ನು ಅನುಭವಿಸುವ ಬ್ರಹ್ಮಚಾರಿಯಾದ ನೀನೆಲ್ಲಿ! ಹೀಗಿದ್ದರೂ, ನಿನ್ನಲ್ಲಿ ನಮಗೆ, ಮೋಹವನ್ನುಂಟುಮಾಡಿದ ಆ ಬ್ರಹ್ಮನು ಅತಿ ಸಮರ್ಥನೇ ಸರಿ!

ತಸ್ಮಾದಸ್ಮಾನಿದಾನೀಂತು ಸ್ವೀಕುರ್ಯಾನ್ಮಂಗಲಂ ಭವಾನ್ ।
ಗಾಂಧರ್ವೇಣ ವಿವಾಹೇನ ಅನ್ಯಥಾ ನೋಪಜೀವನಂ ॥೯೨॥

ಶ್ರುತ್ವಾ ವಾಕ್ಯಂ ತತಃ ಪ್ರಾಹ ಬ್ರಾಹ್ಮಣೋ ಧರ್ಮವಿತ್ತಮಃ ।
ಭೋಮೃಗಾಕ್ಷ್ಯಃ ಕಥಂ ತ್ಯಾಜ್ಯೋಧರ್ಮೋಧರ್ಮ ಧನ್ಯೈರ್ನರೈಃ ॥

ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವ ಚತುಷ್ಟಯಂ ।
ಯಥೋಕ್ತಂ ಫಲದಂ ಜ್ಞೇಯಂ ವಿಪರೀತಂ ತು ನಿಷ್ಫಲಂ ॥೯೪॥

ನಾಕಾಲೇಽಹಂ ವ್ರತೀ ಕುರ್ಯಾಮತೋ ದಾರಪರಿಗ್ರಹಂ ।
ನ ಕ್ರಿಯಾ ಫಲಮಾಪ್ನೋತಿ ಕ್ರಿಯಾಕಾಲಂ ನವೇತ್ತಿ ಯಃ ॥೯೫॥

ಯತೋ ಧರ್ಮವಿಚಾರೇಽಸ್ಮಿನ್ ಪ್ರಸಕ್ತಂ ಮಮ ಮಾನಸಂ ।
ತಸ್ಮಾಚ್ಛೃಣುತ ಹೇ ಕನ್ಯಾ ನ ಸಮೀಹೇ ಸ್ವಯಂವರಂ ॥೯೬॥

---

೯೨. ಆದುದರಿಂದ ಗಾಂಧರ್ವವಿವಾಹ ವಿಧಿಯಿಂದ ನಮ್ಮನ್ನು ಈ ಕ್ಷಣವೇ ವರಿಸುವುದು ಒಳ್ಳೆಯದು ಹಾಗಿಲ್ಲದಿದ್ದರೆ, ನಾವಂತೂ, ಬದುಕುವವರಲ್ಲ.

೯೩. ಧರ್ಮಜ್ಞನಾದ ಬ್ರಾಹ್ಮಣನು ಈ ಮಾತನ್ನು ಕೇಳಿ ಎಲೈ ಮೃಗಾಕ್ಷಿಯರೇ! ಧರ್ಮವೊಂದೇ ಪುರುಷಾರ್ಥವೆಂದು ನಂಬಿ ನಡೆದುಕೊಳ್ಳುವ ಮನುಷ್ಯರು ಹೇಗೆ ತಾನೇ ಧರ್ಮವನ್ನು ಬಿಟ್ಟಾರು? ಎಂದನು.

೯೪. ಧರ್ಮ, ಅರ್ಥ, ಕಾಮ, ಮೋಕ್ಷಗಳು, ವಿಧಿಯಂತೆ, ಅನುಷ್ಠಿತಗಳಾದರೇ, ಅವುಗಳು ಫಲವನ್ನು ಕೊಡುವುವು. ಅಲ್ಲದಿದ್ದರೆ ಆವುಗಳೆಂದಿಗೂ ಫಲಕೊಡಲಾರವು.

೯೫. ಇಷ್ಟೊಂದು ದಿವಸಗಳೂ ವ್ರತವನ್ನು ಧಾರಣೆಮಾಡಿ ಮಧ್ಯದಲ್ಲಿ ಈಗ ನಾನೆಂದಿಗೂ, ದಾರಪರಿಗ್ರಹವನ್ನು ಮಾಡಲಾರೆನು. ಕಾಲವನ್ನರಿಯದೇ ಕೆಲಸ ಮಾಡಿದವನು ಎಂದಿಗೂ ಫಲವನ್ನು ಹೊಂದುವುದಿಲ್ಲ.

೯೬. ನನ್ನ ಮನಸ್ಸು ಧರ್ಮವಿಚಾರವಮಾಡಬೇಕೆಂದೇ ಕುತೂಹಲ ಪಡುತ್ತಿರುವುದು. ಆದುದರಿಂದ ನಾನೀಗ ಖಂಡಿತವಾಗಿಯೂ, ಸ್ವಯಂ ವರವನ್ನು ಅಪೇಕ್ಷಿಸುವುದಿಲ್ಲ.

ಏವಂಜ್ಞಾತ್ವಾಶಯಂ ತಸ್ಯ ಸಮೀಕ್ಷ್ಯೈವ ಪರಸ್ಪರಂ ।
ಕರಾತ್ಕರಂ ವಿಮುಚ್ಯಾಥ ಜಗ್ರಾಹಾಂಘ್ರಿಂ ಪ್ರಮೋಹಿನೀ ॥೯೭॥

ಭುಜೌ ಜಗೃಹತುಸ್ತಸ್ಯ ಸುಶೀಲಾ ಸುಸ್ವರಾ ತಥಾ ।
ಆಲಿಲಿಂಗ ಸುತಾರಾ ಚ ವಕ್ತ್ರಂ ಚುಂಬತಿ ಚಂದ್ರಿಕಾ ॥೯೮॥

ತಥಾಪಿ ನಿರ್ವಿಕಾರೋಽಸೌ ಪ್ರಳಯಾನಲಸನ್ನಿಭಃ ।
ಶಶಾಪಬ್ರಹ್ಮಚಾರೀ ತಾಃ ಕ್ರೋಧೇನಾತ್ಯಂತಮೂರ್ಛಿತಃ ॥೯೯॥

ಪಿಶಾಚ್ಯ ಇವ ಮಾಂ ಲಗ್ನಾಸ್ತತ್ಪಿಶಾಚ್ಯೋ ಭವಿಷ್ಯಥ ।
ಏವಂ ತೇನಾಶು ಶಪ್ತಾಸ್ತಾಸ್ತಂ ತ್ಯಕ್ತ್ವಾ ಪುರತಃ ಸ್ಥಿತಾಃ ॥೧೦೦॥

---

೯೭. ಈರೀತಿಯಾದ ಅವನ ಅಭಿಪ್ರಾಯವನ್ನು ತಿಳಿದ ಆ ಕನ್ಯೆಯರು ಒಬ್ಬರನ್ನೊಬ್ಬರು ನೋಡಿದರು. ಅವರಲ್ಲಿ ಪ್ರಮೋಹಿನೀ ಎಂಬುವಳು ಸಖಿಯರ ಕೈಗಳನ್ನು ಬಿಟ್ಟು ಇವನ ಕಾಲುಗಳನ್ನು ಹಿಡಿದಳು.

೯೮. ಸುಶೀಲಾ ಸುಸ್ವರಾ ಎಂಬಿಬ್ಬರೂ, ಇವನ ಒಂದೊಂದು ತೋಳುಗಳನ್ನು ಹಿಡಿದುಕೊಂಡರು. ಸುತಾರಾ ಎಂಬುವಳು ಇವನನ್ನು ಆಲಂಗಿಸಿದಳು. ಚಂದ್ರಿಕಾ ಎಂಬುವಳು, ಇವನ ಮುಖವನ್ನು ಚುಂಬಿಸಿದಳು.

೯೯. ಆದರೂ ಇವನ ಮನಸ್ಸು ಮಾತ್ರ ವಿಕಾರಗೊಳ್ಳಲಿಲ್ಲ. ಮತ್ತು ಪ್ರಳಯಕಾಲದ ಅಗ್ನಿಗೆ ಸಮಾನನಾಗಿ ಕೋಪದಿಂದ ಜ್ವಲಿಸುತ್ತಾ, ಅವರನ್ನು ಶಪಿಸಿದನು.

೧೦೦. ಪಿಶಾಚಿಗಳಂತೆ ನನ್ನನ್ನು ಅಂಟಿರುವ ನೀವುಗಳು ಪಿಶಾಚಿಗಳಾಗಿಯೇ ಹೋಗಿರಿ, ಎಂಬುದಾಗಿ ಶಪಿಸಿದನು. ಶಾಪಹೊಂದಿದ ಆ ಕನ್ಯೆಯರು ಆ ಬ್ರಹ್ಮಚಾರಿಯನ್ನು ಬಿಟ್ಟು ಮುಂದೆ ನಿಂತರು.

ಕಿಮೇತಚ್ಚೇಷ್ಟಿತಂ ಪಾಪಂ ಹ್ಯನಾಗಸಿ ವಿಜೇಷ್ಟಯಾ ।
ಪ್ರಿಯಂಕೃತ್ಯೋಽಪ್ರಿಯಂಕೃತ್ವಾಧಿಕ್ತ್ವಾಂ ಧರ್ಮಕೃತಾಂತಕಂ ॥

ಅನುರಕ್ತೇಷು ಭಕ್ತೇಷು ಮಿತ್ರೇಷು ದ್ರೋಹಕಾರಿಣಃ ।
ಪುಂಸೋ ಲೋಕೋಭಯೋಃ ಸೌಖ್ಯಂ ನಾಶಮಾಪ್ನೋತಿನಃ ಶ್ರುತಂ

ತಸ್ಮಾತ್ತ್ವಮಪಿ ನಃ ಶಾಪಾತ್ಪಿಶಾಚೋ ಭವ ಸತ್ವರಂ ।
ಇತ್ಯುಕ್ತ್ವಾ ಪಿ ಚ ತಾ ಬಾಲಾ ನಿಶ್ವಸಂತ್ಯಃ ಕ್ರುಧಾಕುಲಾಃ ॥೧೦೩॥

ತಥೈವಾನ್ಯೋನ್ಯಸಂರಂಭಾಸ್ತಸ್ಮಿನ್ ಸರಸಿ ಪಾರ್ಥಿವ ।
ತಾಃ ಕನ್ಯಾ ಬ್ರಹ್ಮಚಾರೀಚ ಸರ್ವೇ ಪೈಶಾಚ್ಯಮಾಗತಾಃ ॥೧೦೪॥

ಸ ಪಿಶಾಚಃ ಪಿಶಾಚ್ಯಸ್ತಾಃ ಕ್ರಂದಮಾನಾಃ ಸುದಾರುಣಂ ।
ಕ್ಷಪಯಂತಿ ವಿಪಾಕಾಂಸ್ತಾನ್ ಪೂರ್ವೋಪಾತ್ತಸ್ಯ ಕರ್ಮಣಃ ॥

---

೧೦೧. ಇದೇನಿದು! ತಪ್ಪಿಲ್ಲದ ಜನರಲ್ಲಿ ಚಾಪಲ್ಯದಿಂದ ಈರೀತಿಯಾದ ಪಾಪವನ್ನಾಚರಿಸಬಹುದೇ! ಪ್ರಿಯವನ್ನುಂಟುಮಾಡಿ ಸಂತೋಷಪಡಿಸಬೇಕೆಂದು ಪ್ರವೃತ್ತರಾದ ಜನರಲ್ಲಿ ಈರೀತಿಯಾಗಿ ಅಪ್ರಿಯವನ್ನಾಚರಿಸಬಹುದೇ? ಧರ್ಮಕಂಟಕನಾದ ನಿನಗೆ ನಿಂದೆಯಿರಲಿ.

೧೦೨ ಅನುರಕ್ತರಲ್ಲಿಯೂ, ಭಕ್ತರಲ್ಲಿಯೂ ಸ್ನೇಹಿತರಲ್ಲಿಯೂ, ದ್ರೋಹವನ್ನಾಚರಿಸುವ ಮನುಷ್ಯನಿಗೆ ಉಭಯಲೋಕಗಳ ಸೌಖ್ಯಗಳೂ ಹಾಳಾಗುವುವು. ಎಂದು ನಾವು ಕೇಳಿದ್ದೇವೆ.

೧೦೩. ಆದುದರಿಂದ ನೀನೂ ಕೂಡ ನಮ್ಮ ಶಾಪದಿಂದ ಶೀಘ್ರವಾಗಿಯೇ ಪಿಶಾಚಿಯಾಗು. ಹೀಗೆಂಬುದಾಗಿ ಹೇಳಿ ಆ ಕನ್ಯೆಯರು ನಿಟ್ಟುಸುರನ್ನು ಬಿಡುತ್ತಾ ತಮ್ಮ ಕ್ರೋಧವನ್ನು ಪ್ರಕಾಶಪಡಿಸಿದರು.

೧೦೪. ಎಲೈ ಯುಧಿಷ್ಠಿರನೇ! ಆ ಕನ್ಯೆಯರೂ ಮತ್ತು ಆ ಬ್ರಹ್ಮಚಾರಿಯೂ, ಪರಸ್ಪರ ಕೋಪಗೊಂಡು ಎಲ್ಲರೂ ಆ ಸರೋವರದಲ್ಲಿ ಪಿಶಾಚಭಾವವನ್ನಾಶ್ರಯಿಸಿದರು.

೧೦೫. ಗಂಡುಪಿಶಾಚಿಯೂ, ಹೆಣ್ಣುಪಿಶಾಚಿಗಳೂ ಘೋರವಾಗಿ ರೋದನಮಾಡುತ್ತಾ ಪೂರ್ವಜನ್ಮದಲ್ಲಿ ಆಚರಿಸಿದ ಕರ್ಮದ ಫಲವನ್ನು ಕಳೆಯುತ್ತಿದ್ದವು.

**ಸ್ವಕಾಲೇ ಪ್ರಭವತ್ಯೇವ ಪೂರ್ವೋಪಾತ್ತಂ ಶುಭಾಶುಭಂ ।**
**ಸ್ವಚ್ಛಾಯಾಮಿವ ದುರ್ವಾರಂ ದೇವಾನಾಮಪಿ ಪಾರ್ಥಿವ ॥೧೦೬॥**

**ಕ್ರಂದಂತಿ ಪಿತರಸ್ತಾಸಾಂ ಮಾತರಸ್ತತ್ರ ತತ್ರ ಚ ।**
**ಭ್ರಾತರಶ್ಚೈವ ಬಾಲಾನಾಂ ದೈವಂ ಹಿ ದುರತಿಕ್ರಮಂ ॥೧೦೭॥**

**ಅತ ಊರ್ಧ್ವಂ ಪಿಶಾಚಾಸ್ತ ಆಹಾರಾರ್ಥಂ ಸುದುಃಖಿತಾಃ ।**
**ಇತಸ್ತತಶ್ಚ ಧಾವಂತೋ ವಸಂತಿ ಸರಸಸ್ತಟೇ ॥೧೦೮॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಾವಿಂಶೋಽಧ್ಯಾಯಃ**

---

೧೦೬. ಪೂರ್ವಜನ್ಮಾನುಷ್ಠಿತವಾದ ಶುಭಾಶುಭಕರ್ಮವು ತನ್ನ ಸಮಯವು ಬಂದಾಗ ದೇವತೆಗಳನ್ನೂ ಬಿಡದೆ ತನ್ನ ನೆರಳಿನಂತೆ ಬೆನ್ನಟ್ಟುವುದು.

೧೦೭. ಈರೀತಿಯಾಗಿ ಪಿಶಾಚಭಾವವನ್ನು ಹೊಂದಿದ ಆ ಬಾಲೆಯರೂ, ತಾಯಿತಂದೆಗಳೂ, ಅಣ್ಣತಮ್ಮಂದಿರೂ, ನಿರಂತರವಾಗಿ ಕಣ್ಣಿನಲ್ಲಿ ನೀರಿಡಲಾರಂಭಿಸಿದರು. ದೈವವನ್ನು ಮೀರಲು ಯಾರಿಗೆ ತಾನೆ ಶಕ್ತಿಯಿರುವುದು !

೧೦೮. ಅಲ್ಲಿಂದ ಮುಂದೆ ಆ ಪಿಶಾಚಿಗಳು ಆಹಾರಕ್ಕಾಗಿ ಬಹು ದುಃಖಗೊಂಡು ಇಲ್ಲಿ ಅಲ್ಲಿ ಅಲೆಯುತ್ತಾ ಆ ಸರೋವರದ ತೀರದಲ್ಲಿ ವಾಸಿಸುತ್ತಿದ್ದುವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀ ॥

## ಅಥ ಪದ್ಮಪುರಾಣೇ ಆದಿಖಂಡೇ ತ್ರಯೋವಿಂಶೋಽಧ್ಯಾಯಃ

॥ ನಾರದ ಉವಾಚ ॥

**ಏವಂ ಬಹುತಿಥೇ ಕಾಲೇ ಲೋಮಶೋ ಮುನಿಸತ್ತಮಃ ।**
**ಆಗತಶ್ಚ ಮಹಾಭಾಗಸ್ತತ್ರ ಯಾದೃಚ್ಛಿಕೋ ಮುನಿಃ ॥ ೧ ॥**
**ತಂ ದೃಷ್ಟ್ವಾ ಬ್ರಾಹ್ಮಣಂ ಸರ್ವೇ ಪಿಶಾಚಾಃ ಕ್ಷುತ್ಸಮಾಕುಲಾಃ ।**
**ಧಾವನ್ತೋ ಹ್ಯತ್ತುಕಾಮಾಸ್ತೇ ಮಿಲಿತ್ವಾ ಯೂಥವರ್ತಿನಃ ॥ ೨ ॥**
**ದಹ್ಯಮಾನಾಃ ಸುತೀವ್ರೇಣ ತೇಜಸಾ ಲೋಮಶಸ್ಯ ತು ।**
**ಅಸಮರ್ಥಾಃ ಪುರಃ ಸ್ಥಾತುಂ ತೇ ಸರ್ವೇ ದೂರತಃ ಸ್ಥಿತಾಃ ॥ ೩ ॥**
**ಪೂರ್ವಕರ್ಮಬಲಾತ್ತತ್ರ ಪಿಶಾಚಃ ಸಹ ವೈ ದ್ವಿಜಃ ।**
**ಸಮೀಕ್ಷ್ಯ ಲೋಮಶಂ ರಾಜನ್ಸಾಷ್ಟಾಙ್ಗಂ ಪ್ರಣಿಪತ್ಯ ಚ ॥ ೪ ॥**

---

ಪದ್ಮಪುರಾಣದ ಆದಿಖಂಡದ ಇಪ್ಪತ್ತಮೂರನೆಯ ಅಧ್ಯಾಯವು

೧. ನಾರದನು ಹೇಳಿದನು: ಹೀಗೆ ಬಹಳ ಕಾಲ ಕಳೆದಮೇಲೆ ಲೋಮಶನೆಂಬ ಮುನಿಶ್ರೇಷ್ಠನು ದೈವವಶಾತ್ ಅಲ್ಲಿಗೆ ಬಂದನು.

೨. ಆ ಬ್ರಾಹ್ಮಣನನ್ನು ನೋಡಿ ಹಸಿವಿನಿಂದ ಕಂಗೆಟ್ಟ ಆ ಪಿಶಾಚಗಳೆಲ್ಲವೂ ಗುಂಪಾಗಿಸೇರಿ ಇವನನ್ನು ತಿನ್ನಲು ಓಡಿ ಬಂದುವು.

೩. ಲೋಮಶ ಮಹರ್ಷಿಯ ತೀಕ್ಷ್ಣವಾದ ಆ ತೇಜಸ್ಸು ತಮ್ಮನ್ನು ಸುಡುವುದನ್ನು ಕಂಡು ಆ ಪಿಶಾಚಗಳು ಮುಂದೆ ನಿಲ್ಲಲಾರದೇ ದೂರಕ್ಕೆ ಹೋಗಿ ನಿಂತುವು.

೪. ಎಲೈ ಯುಧಿಷ್ಠಿರನೆ! ಆ ಬ್ರಾಹ್ಮಣ ಪಿಶಾಚಿಯು ಪೂರ್ವದಲ್ಲಿ ತಾನು ಮಾಡಿದ ತಪೋಮಹಿಮೆಯಿಂದ ಲೋಮಶ ಮಹರ್ಷಿಯನ್ನು ಕಂಡು ಸಾಷ್ಟಾಂಗ ನಮಸ್ಕಾರ ಮಾಡಿತು.

ಉವಾಚ ಸೂನೃತಾಂ ವಾಚಂ ಬದ್ಧ್ವಾ ಶಿರಸಿ ಚಾಂಜ್ಞಲಿಮ್ ।
ಮಹಾಭಾಗ್ಯೋದಯೋ ವಿಪ್ರ ಸಾಧೂನಾಂ ಸಂಗತಿರ್ಭವೇತ್ ॥ ೫ ॥
ಗಙ್ಗಾದಿಪುಣ್ಯತೀರ್ಥೇಷು ಯೋ ನರಃ ಸ್ನಾತಿ ಸರ್ವದಾ ।
ಯಃ ಕರೋತಿ ಸತಾಂ ಸಙ್ಗಂ ತಯೋಃ ಸತ್ಸಙ್ಗಮೋ ವರಃ ॥ ೬ ॥
ಗುರೂಣಾಂ ಸಙ್ಗಮೋ ವಿಪ್ರ ದೃಷ್ಟಾದೃಷ್ಟಫಲೋ ಭುವಿ ।
ಸ್ವರ್ಗದೋ ರೋಗಹಾರೀ ಚ ಕಿಂ ತಮೋಽಪಹರೋ ಮತಃ ॥ ೭ ॥
ಇತ್ಯುಕ್ತ್ವಾ ಕಥಯಾಮಾಸ ಪೂರ್ವವೃತ್ತಾನ್ತ ಮುದ್ಭುತಮ್ ।
ಇಮಾ ಗನ್ಧರ್ವಕನ್ಯಾಸ್ತಾ ಮುನೇ ಸೋಽಹಂ ದ್ವಿಜಾತ್ಮಜಃ ॥ ೮ ॥

---

೫. ಅನಂತರ ಶಿರಸ್ಸಿನಲ್ಲಿ ಅಂಜಲಿಯನ್ನು ಜೋಡಿಸಿ ಪ್ರಿಯವೂ, ಸತ್ಯವೂ ಆದ ಮುಂದೆ ಹೇಳುವ ಮಾತನ್ನು ಹೇಳಿತು: ಎಲೈ ಬ್ರಾಹ್ಮಣ ಶ್ರೇಷ್ಠನೇ! ಸಾಧುಗಳ ಸಂಬಂದ ದೊರಗುವಾಗ ಮುಂದೆ ಮಹಾ ಫಲವನ್ನಿಟ್ಟುಕೊಂಡೇ ಒದಗುವುದು.

೬. ಗಂಗಾದಿ ಸಕಲ ತೀರ್ಥಗಳಲ್ಲಿ ಸರ್ವದಾ ಸ್ನಾನ ಮಾಡುವವನು ಸತ್ಸಹವಾಸದಲ್ಲಿರುವವನು ಇವರಿಬ್ಬರಲ್ಲಿ ಸತ್ಸಂಗದಲ್ಲಿರುವವನೇ ಮೇಲಾಗುವನು.

೭. ಗುರುಗಳ ಸಹವಾಸವು ದೃಷ್ಟಫಲವನ್ನೂ, ಅದೃಷ್ಟಫಲವನ್ನೂ ಕೊಡುವುದು; ಸ್ವರ್ಗವನ್ನೂ ನೀಡುವುದು; ರೋಗವನ್ನೂ ಪರಿಹರಿಸುವುದು; ಹೀಗಿರುವಲ್ಲಿ ಅಜ್ಞಾನವನ್ನು ಕಳೆಯುವುದೆಂದು ಹೇಳಬೇಕಾದುದೇ ಇಲ್ಲ.

೮. ಹೀಗೆಂದು ಹೇಳಿ ಪೂರ್ವ ವೃತ್ತಾಂತವನ್ನು ಹೇಳಲಾರಂಭಿಸಿದನು. ಇವರೆಲ್ಲರೂ ಗಂಧರ್ವ ಕನ್ನಿಕೆಯರು; ನಾನು ಬ್ರಾಹ್ಮಣ ಪುತ್ರನು.

ಸರ್ವೇ ಪಿಶಾಚರೂಪೇಣ ಮಿಥಃ ಶಾಪವಿಮೋಹಿತಾಃ ।
ದೀನಾನನಾಃ ಸುತಿಷ್ಠಾಮಸ್ತ್ವಾಗ್ರೇ ಮುನಿಸತ್ತಮ ॥ ೯ ॥

ತ್ವದ್ದರ್ಶನೇನ ಬಾಲಾನಾಂ ನಿಸ್ತಾರೋ ನೋ ಭವಿಷ್ಯತಿ ।
ಸೂರ್ಯೋದಯೇ ತಮಸ್ತೋಮಃ ಕಿಂ ನ ನಶ್ಯೇತ ಪುಷ್ಕಲಃ ॥೧೦॥

ಶ್ರುತ್ವೈತಲ್ಲೋಮಶೋ ವಾಕ್ಯಂ ಕೃಪಾರ್ದ್ರೀಕೃತಮಾನಸಃ ।
ಪ್ರತ್ಯುವಾಚ ಮಹಾತೇಜಾ ದುಃಖಿತಂ ತಂ ಮುನೇಃ ಸುತಮ್॥೧೧॥

ಮತ್ಪ್ರಸಾದಾಚ್ಚ ಸರ್ವೇಷಾಂ ಸ್ಮೃತಿಃ ಸಪದಿ ಜಾಯತಾಮ್ ।
ಧರ್ಮೇ ಚ ವರ್ತತಾಂ ಯೇನ ಮಿಥಃ ಶಾಪೋ ಲಯಂ ವ್ರಜೇತ್॥

---

೯. ಎಲೈ ಋಷಿವರ್ಯನೇ! ನಾವೆಲ್ಲರೂ ಪರಸ್ಪರ ದತ್ತವಾದ ಶಾಪಕ್ಕೊಳಗಾಗಿ, ವಿವೇಕಶೂನ್ಯವಾದ ಪಿಶಾಚಭಾವವನ್ನು ಹೊಂದಿ, ನಿನ್ನಮುಂದೆ ದೀನಮುಖವುಳ್ಳವರಾಗಿ ನಿಂತಿರುವೆವು.

೧೦. ಬಾಲ್ಯಾವಸ್ಥೆಯಲ್ಲಿರುವ ನಮ್ಮ ಈ ಮಹಾದುಃಖವು ನಿನ್ನ ದರ್ಶನದಿಂದ ದೂರವಾಗುವುದೆಂಬ ವಿಷಯದಲ್ಲಿ ಸಂದೇಹವೇ ಇಲ್ಲ. ಸೂರ್ಯೋದಯವಾದ ನಂತರ ಕತ್ತಲೆಯು ಎಷ್ಟೊಂದು ದಟ್ಟವಾಗಿದ್ದರೂ, ನಾಶವಾಗುವುದಿಲ್ಲವೇನು?

೧೧. ಮಹಾ ತೇಜಸ್ವಿಯಾದ ಲೋಮಶ ಮಹರ್ಷಿಯು ಈ ಮಾತನ್ನು ಕೇಳಿದೊಡನೆಯೇ ಕೃಪೆಯಿಂದ ಮನಸ್ಸಿನಲ್ಲಿ ಕರುಣೆಯನ್ನು ಹೊಂದಿ ದೀನನಾದ ಮುನಿಪುತ್ರನನ್ನು ಕುರಿತು ಹೀಗೆ ಹೇಳಿದನು.

೧೨. ನನ್ನ ಅನುಗ್ರಹದಿಂದ ನಿಮ್ಮೆಲ್ಲರಿಗೂ ಪೂರ್ವಜನ್ಮದ ಸ್ಮರಣೆಯುಂಟಾಗಲಿ. ಧರ್ಮದಲ್ಲಿ ನಡೆಯಿರಿ. ಅದರಿಂದ ಶಾಪವು ನಾಶವಾಗುವುದು.

॥ ಪಿಶಾಚ ಉವಾಚ ॥

ಮಹರ್ಷೇ ಕಥ್ಯತಾಂ ಧರ್ಮೋ ಮುಚ್ಯೇಮ ಯೇನ ಕಿಲ್ಬಿಷಾತ್ ।
ನಾಯಂ ಕಾಲೋ ವಿಲಮ್ಬಸ್ಯ ಶಾಪಾಗ್ನಿರ್ದಾರುಣೋ ಯತಃ॥೧೩॥

॥ ಲೋಮಶ ಉವಾಚ ॥

ಮಯಾ ಸಾರ್ಧಂ ಪ್ರಕುರ್ವನ್ತು ರೇವಾಸ್ನಾನಂ ವಿಧಾನತಃ ।
ಶಾಪಾನ್ಮೋಕ್ಷ್ಯತಿ ವೋ ರೇವಾ ನಾನ್ಯಥಾ ನಿಷ್ಕೃತಿರ್ಭವೇತ್ ॥೧೪॥
ಶೃಣುಷ್ವಾವಹಿತೋ ವಿಪ್ರ ಪಾಪನಾಶೋ ಧ್ರುವೋ ನೃಣಾಮ್ ।
ರೇವಾಸ್ನಾನೇನ ಜಾಯೇತ ಇತಿ ಮೇ ನಿಶ್ಚಿತಾ ಮತಿಃ ॥೧೫॥
ಸಪ್ತಜನ್ಮಕೃತಂ ಪಾಪಂ ವರ್ತಮಾನಂ ಚ ಪಾತಕಮ್ ।
ರೇವಾಸ್ನಾನಂ ದಹೇತ್ಸರ್ವಂ ತೂಲರಾಶಿಮಿವಾನಲಃ ॥೧೬॥

---

೧೩. ಪಿಶಾಚಿಯು ಹೇಳಿತು: ಎಲೈ ಮಹರ್ಷಿಯೇ! ಈ ಮಹಾ ಪಾತಕವನ್ನು ತೊಲಗಿಸುವ ಧರ್ಮವನ್ನು ಬೇಗ ಹೇಳು. ಶಾಪಾಗ್ನಿಯ ತೀಕ್ಷ್ಣತೆಯನ್ನು ಸಹಿಸಲಾರೆವು. ಆದುದರಿಂದ ಇದು ವಿಲಂಬಕ್ಕೆ ಕಾಲವಲ್ಲ.

೧೪. ಲೋಮಶ ಮಹರ್ಷಿಯು ಹೇಳಿದನು: ನನ್ನೊಂದಿಗೆ ರೇವಾ ನದಿಯಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿರಿ. ರೇವಾನದಿಯು ನಿಮ್ಮನ್ನು ಶಾಪದಿಂದ ಬಿಡುಗಡೆ ಮಾಡುವುದು. ಹಾಗಿಲ್ಲದಿದ್ದರೆ ಪರಿಹಾರವಾಗು ವುದೇ ಇಲ್ಲ.

೧೫. ಎಲೈ ಬ್ರಾಹ್ಮಣನೇ! ಮನಸಿಟ್ಟು ಕೇಳು. ರೇವಾನದಿಯಲ್ಲಿ ಸ್ನಾನಮಾಡುವುದರಿಂದ ಮನುಷ್ಯರ ಸರ್ವಪಾಪವೂ ತೊಲಗುವುದೆಂದು ಖಂಡಿತವಾಗಿಯೂ, ನಾನು ನಂಬಿರುವೆನು.

೧೬. ಅಗ್ನಿಯು ಹತ್ತಿಯ ರಾಶಿಯನ್ನು ಸುಡುವಂತೆ ರೇವಾ ಸ್ನಾನವು ಹಿಂದಿನ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳನ್ನೂ, ಈ ಜನ್ಮ ದಲ್ಲಿ ಮಾಡಿದ ಪಾಪಗಳನ್ನೂ ಸಹ ಕ್ಷಣಕಾಲದಲ್ಲಿ ದಹಿಸುವುದು.

ಪ್ರಾಯಶ್ಚಿತ್ತಂ ನ ಪಶ್ಯನ್ತಿ ಯಸ್ಮಿನ್ಪಾಪೇ ಪಿಶಾಚಕ ।
ತತ್ಸರ್ವಂ ನರ್ಮದಾತೋಯೇ ಸ್ನಾನಮಾತ್ರೇಣ ನಶ್ಯತಿ ॥೧೭॥
ಜ್ಞಾನಕೃನ್ನರ್ಮದಾ ಸ್ನಾನಮತೋ ಮೋಕ್ಷಫಲಂ ಹಿಸಾ ।
ಹಿಮವತ್ಪುಣ್ಯತೀರ್ಥಾನಿ ಸರ್ವಪಾಪಹರಾಣಿ ವೈ ॥೧೮॥
ಇನ್ದ್ರಲೋಕಪ್ರದಂ ಹ್ಯೇದಂ ನಿರ್ಮಿತಂ ಬ್ರಹ್ಮವಾದಿಭಿಃ ।
ಸರ್ವಕಾಮಫಲಾ ರೇವಾ ಮೋಕ್ಷದಾ ಪರಿಕೀರ್ತಿತಾ ॥೧೯॥
ಪಾಪಘ್ನೀ ಪಾಪಹರಣೀ ಸರ್ವಕಾಮ ಫಲಪ್ರದಾ ।
ವಿಷ್ಣುಲೋಕದ ಆಪ್ಲಾವೋ ನಾರ್ಮದಃ ಪಾಪನಾಶನಃ ॥೨೦॥
ಯಾಮುನಃ ಸರ್ವಲೋಕಾಯ ಭವೇದಾಪ್ಲವ ಉತ್ತಮಃ ।
ಸಾರಸ್ವತೋಽಘವಿಧ್ವಂಸೀ ಬ್ರಹ್ಮಲೋಕ ಫಲ ಪ್ರದಃ ॥೨೧॥

---

೧೭. ಯಾವ ಪಾಪಕ್ಕೆ ಧರ್ಮಶಾಸ್ತ್ರದಲ್ಲಿ ಪ್ರಾಯಶ್ಚಿತ್ತವೇ ಉಕ್ತವಾಗಿಲ್ಲವೋ ಅಂತಹ ಪಾಪವೂ ಸಹ ರೇವಾನದಿಯಲ್ಲಿ ಸ್ನಾನ ಮಾಡಿದ ಮಾತ್ರಕ್ಕೆ ತೊಲಗುವುದು.

೧೮. ನರ್ಮದಾ ಸ್ನಾನವು ಜ್ಞಾನವನ್ನುಂಟುಮಾಡುತ್ತದೆ. ಆದ್ದರಿಂದಲೇ ಅದು ಮೋಕ್ಷವನ್ನು ಕೊಡುತ್ತದೆ. ಹಿಮವತ್ಪರ್ವತದಲ್ಲಿರುವ ಪ್ರಸಿದ್ಧಗಳಾದ ತೀರ್ಥಗಳೂ ಸರ್ವ ಪಾಪಗಳನ್ನೂ ಪರಿಹರಿಸುವುವು.

೧೯. ಬ್ರಹ್ಮಜ್ಞಾನಿಗಳು ಈ ತೀರ್ಥವನ್ನು ಇಂದ್ರಲೋಕದ ಪ್ರಾಪ್ತಿಗಾಗಿ ಸೃಷ್ಟಿಸಿರುವರು. ಆದುದರಿಂದಲೇ ರೇವಾನದಿಯು ಸರ್ವವಿಧವಾದ ಕೋರಿಕೆಗಳನ್ನೂ ಪೂರ್ಣಮಾಡಿ ಮೋಕ್ಷವನ್ನು ಕೊಡುವುದು.

೨೦. ರೇವಾನದಿಯು ಸ್ಥೂಲಸೂಕ್ಷ್ಮಗಳಾದ ಸರ್ವಪಾಪಗಳನ್ನೂ ಪರಿಹರಿಸಿ ಇಷ್ಟಾರ್ಥಗಳನ್ನೆಲ್ಲಾ ಕೊಡುವುದು. ಇದರಲ್ಲಿ ಮಾಡಿದ ಸ್ನಾನವು ಪಾಪವನ್ನು ಪರಿಹರಿಸಿ ವಿಷ್ಣುಲೋಕವನ್ನೂ ಕೊಡುವುದು.

೨೧. ಯಮುನಾನದಿಯಲ್ಲಿ ಸ್ನಾನವು ಎಲ್ಲಾ ಲೋಕಗಳ ಪ್ರಾಪ್ತಿಗೆ ಉತ್ತಮವಾದುದು. ಸರಸ್ವತೀನದಿಯ ಸ್ನಾನವು ಸರ್ವಪಾಪಗಳನ್ನೂ, ಪರಿಹರಿಸಿ ಬ್ರಹ್ಮಲೋಕದ ಪ್ರಾಪ್ತಿಗೆ ಹೇತುವಾದುದು.

ವಿಶಾಲಫಲದಾ ಪ್ರೋಕ್ತಾ ವಿಶಾಲಾ ಹಿ ಪಿಶಾಚಕ ।
ಪಾಪೇನ್ಧನದವಾಗ್ನಿಸ್ತು ಗರ್ಭಹೇತುಕ್ರಿಯಾಪಹಃ ॥೨೨॥
ವಿಷ್ಣುಲೋಕಾಯ ಮೋಕ್ಷಾಯ ನಾರ್ಮದಃ ಪರಿಕೀರ್ತಿತಃ ।
ಸರಯುಗಂಡಕೀಸಿನ್ಧುಶ್ಚನ್ದ್ರಭಾಗಾ ಚ ಕೌಶಿಕೀ ॥೨೩॥
ತಾಪೀ ಗೋದಾವರೀ ಭೀಮಾ ಪಯೋಷ್ಣೀಕೃಷ್ಣವೇಣಿಕಾ ।
ಕಾವೇರೀ ತುಙ್ಗಭದ್ರಾ ಚ ಅನ್ಯಾಶ್ಚಾಪಿ ಸಮುದ್ರಗಾಃ ॥೨೪॥
ತಾಸು ರೇವಾ ಪರಾ ಪ್ರೋಕ್ತಾ ವಿಷ್ಣುಲೋಕಪ್ರದಾಯಿನೀ ।
ರೇವಾ ತು ಪ್ರಾಪ್ಯತೇ ಪುಣ್ಯೈಃ ಪೂರ್ವಜನ್ಮಕೃತೈರ್ದ್ವಿಜ ।
ಅಪುನರ್ಭವದಂ ತತ್ರ ಮಜ್ಜನಂ ಮುನಿಪುತ್ರಕ ॥೨೫॥

---

೨೨. ಎಲೈ ಪಿಶಾಚಿಯೇ! ವಿಶಾಲಾನದಿಯು ವಿಶಾಲವಾದ ಫಲವನ್ನು ಕೊಡುವುದಾಗಿ ಪ್ರಸಿದ್ಧವಾಗಿರುವುದು. ನರ್ಮದಾಸ್ನಾನವು ಪಾಪವೆಂಬ ಸೌದೆಯ ರಾಶಿಗೆ ಕಾಳ್ಗಿಚ್ಚಾಗಿ ಪ್ರಸಿದ್ಧವಾಗಿರುವುದು. ಮತ್ತು ಪುನರ್ಜನ್ಮದ ಪ್ರಸಕ್ತಿಯನ್ನೇ ನಾಶಮಾಡುವುದು.

೨೩. ಅಲ್ಲದೆ ನರ್ಮದಾ ಸ್ನಾನವು ವಿಷ್ಣುಲೋಕಪ್ರದವಾಗಿಯೂ, ಮೋಕ್ಷಪ್ರದವಾಗಿಯೂ ಪ್ರಸಿದ್ಧವಾಗಿರುವುದು. ಸರಯೂ, ಗಂಡಕೀ ಸಿಂಧು, ಚಂದ್ರಭಾಗಾ, ಕೌಶಿಕೀ, ಈ ನದಿಗಳೆಲ್ಲಾ ಸಮುದ್ರಗಾಮಿಗಳಾಗಿ ಪ್ರಸಿದ್ಧಗಳಾಗಿರುವುವು.

೨೪. ಹಾಗೆಯೇ ತಾಪೀ, ಗೋದಾವರೀ, ಭೀಮಾ, ಪಯೋಷ್ಣೀ ಕೃಷ್ಣವೇಣಿಕಾ, ಕಾವೇರೀ, ತುಂಗಭದ್ರಾ, ಮತ್ತು ಇತರ ನದಿಗಳೂ ಸಹ ಸಮುದ್ರವನ್ನು ಸೇರುವುವು.

೨೫. ಈ ನದಿಗಳಲ್ಲೆಲ್ಲಾ ರೇವಾನದಿಯು ವಿಷ್ಣುಲೋಕಪ್ರದವಾಗಿ ಬಹು ಪ್ರಸಿದ್ಧವಾಗಿರುವುದು. ಈ ನದಿಯನ್ನು ಹೊಂದಬೇಕಾದರೆ ಪೂರ್ವಜನ್ಮದಲ್ಲಿ ಬಹಳ ಪುಣ್ಯ ಮಾಡಿರಬೇಕು. ಇಲ್ಲಿ ಮಾಡುವ ಸ್ನಾನವು ಪುನರ್ಜನ್ಮವನ್ನೇ ನೀಗುವುದು.

ಗಾಯನ್ತಿ ದೇವಾಃ ಸತತಂ ನಿವಿಷ್ಟಾಃ
ರೇವಾ ಕದಾ ಮಜ್ಜನದಾ ಹಿ ನೋ ಭವೇತ್ ।
ಸ್ನಾತಾ ನರಾ ಯತ್ರ ನ ಗರ್ಭವೇದನಾಂ
ಪಶ್ಯನ್ತಿ ತಿಷ್ಠನ್ತಿ ಚ ವಿಷ್ಣುಸನ್ನಿಧೌ ॥೨೬॥
ಮಜ್ಜನ್ತಿ ತೇ ಪ್ರತ್ಯಹಮತ್ರ ಮಾನವಾ
ರೇವಾಸುತೋಯೇ ಬಹುಪಾಪ ಕಞ್ಚುಕಾಃ ।
ಮಜ್ಜನ್ತಿ ತೇ ನೋ ನಿರಯೇಷು ಧರ್ಮತಃ
ಸ್ವರ್ಗೇ ತು ತೇ ಚಾರು ಚರನ್ತಿ ದೇವವತ್ ॥೨೭॥
ತೀರ್ಥೈರ್ವ್ರತೈರ್ದಾನ ತಪೋಭಿರಧ್ವರೈಃ
ಸಾರ್ಧಂ ವಿಧಾತ್ರಾ ತುಲಯಾ ಧೃತಾ ಪುರಾ ।
ರೇವಾ ಪಿಶಾಚಾಶುತಯೋರ್ಧ್ವಯೋರಭೂತ್
ರೇವಾ ವರಾ ತತ್ರ ಚ ಮೋಕ್ಷಸಾಧಿಕಾ ॥೨೮॥

---

೨೬. ದೇವತೆಗಳು ಕೂಡ ರೇವಾನದಿಯಲ್ಲಿ ನಮಗೆ ಯಾವಾಗ ಸ್ನಾನವು ದೊರಕುವುದೆಂದು ಹಂಬಲಿಸುತ್ತಾ ಅದರ ಗುಣಗಳನ್ನು ಸರ್ವದಾ ಗಾನಮಾಡುತ್ತಿರುವರು. ಇಲ್ಲಿ ಸ್ನಾನಮಾಡಿದವರು ಗರ್ಭವಾಸದ ದುಃಖವನ್ನೇ ಎಂದಿಗೂ ನೋಡಲಾರರು ಮತ್ತು ವಿಷ್ಣುವಿನ ಸನ್ನಿಧಿಯನ್ನೂ ಹೊಂದುವರು.

೨೭–೨೮. ಇಲ್ಲಿ ನಿರತವೂ ಸ್ನಾನಮಾಡುವವರು ಬಹು ಪಾಪಕರ್ಮಗಳಿಂದ ಕೂಡಿದ್ದರೂ ಸಹ ನರಕದಲ್ಲಿ ಬೀಳುವುದೇ ಇಲ್ಲ. ಮತ್ತು ಸ್ವರ್ಗದಲ್ಲಿ ದೇವತೆಗಳಂತೆ ತಮ್ಮಿಷ್ಟದಂತೆ ಸಂಚರಿಸುವರು. ಪೂರ್ವದಲ್ಲಿ ಬ್ರಹ್ಮನು ಈ ರೇವಾನದಿಯನ್ನು ಪುಣ್ಯತಮಗಳಾದ ವ್ರತ, ದಾನ, ತಪಸ್ಸು ಮತ್ತು ಯಜ್ಞ, ಇವುಗಳೊಡನೆ ತಕ್ಕಡಿಯಲ್ಲಿಟ್ಟು ತೂಕ ಮಾಡಿದನು. ಎಲೈ ಪಿಶಾಚವೇ! ಕೇಳು ಆಗ ರೇವಾನದಿಯು ತೂಕವೇ ಅಧಿಕವಾದ್ದರಿಂದ ಶ್ರೇಷ್ಠವಾಯಿತು ಮತ್ತು ಮೋಕ್ಷಕ್ಕೂ ಸಾಧಕ ವಾಯಿತು.

॥ ನಾರದ ಉವಾಚ ॥

ಏತಚ್ಛ್ರುತ್ವಾ ವಚಸ್ತಸ್ಯ ಲೋಮಶಸ್ಯ ಪಿಶಾಚಕಾಃ ।
ತೇನ ಸಾರ್ಧಂ ಯಯುಃ ಶೀಘ್ರಂ ರೇವಾ ಮಜ್ಜನಹೇತವೇ ॥೨೯॥

ತತೋ ದೈವಾತ್ಸಮುತ್ಪನ್ನೋ ರೇವಾರೋಧಸಿ ಮಾರುತಃ ।
ತೇಷಾಂ ಪ್ರವಾಹಸ್ಪೃಷ್ಟಾನಾಂ ಗಾತ್ರೇ ಜಲಕಣಪ್ರದಃ ॥೩೦॥

ರೇವಾಜಲಕಣಸ್ಪರ್ಶಾತ್ಪೈಶಾಚ್ಯಾತ್ತೇ ವಿಮೋಚಿತಾಃ ।
ತತ್ಕ್ಷಣಾದ್ದಿವ್ಯಪುರುಷಃ ಪ್ರಶಶಂಸುಶ್ಚ ನರ್ಮದಾಮ್ ॥೩೧॥

ತತೋ ಲೋಮಶವಾಕ್ಯೇನ ತಾಶ್ಚ ಗನ್ಧರ್ವಕನ್ಯಕಾಃ ।
ಪರಿಣೀತಾಃ ಸುಖಂ ತೇನ ವಿಪ್ರೇಣ ನರ್ಮದಾತಟೇ ॥೩೨॥

ಉವಾಸ ಸುಚಿರಂ ಕಾಲಂ ಸ್ನಾನಪಾನಾವಗಾಹನೈಃ ।
ಅರ್ಚಿತ್ವಾ ನರ್ಮದಾಮತ್ರ ವಿಷ್ಣುಲೋಕಂ ಗತಾಶ್ಚ ತೇ ॥೩೩॥

---

೨೯. ನಾರದನು ಹೇಳಿದನು: ಹೀಗೆಂಬುದಾಗಿ ಹೇಳಿದ ಲೋಮಶ ಮಹರ್ಷಿಯ ಮಾತನ್ನು ಕೇಳಿ, ಆ ಪಿಶಾಚಿಗಳೆಲ್ಲಾ ಆ ಋಷಿಯೊಡನೆ ರೇವಾನದಿಯಲ್ಲಿ ಸ್ನಾನಮಾಡಲು ಹೊರಟವು.

೩೦. ಅನಂತರ ರೇವಾನದಿಯ ದಡದಲ್ಲಿ ಪ್ರವಾಹವನ್ನು ಸ್ಪರ್ಶ ಮಾಡುವುದರಿಂದಲೇ ಜಲಕಣಪೂರಿತವಾದ ಮಂದಮಾರುತವು ಆ ಪಿಶಾಚಿಗಳ ಮೇಲೆ ಬೀಸಿತು.

೩೧. ಜಲಕಣಸ್ಪರ್ಶವಾದ ಕೂಡಲೇ ಪಿಶಾಚಭಾವದಿಂದ ಮುಕ್ತರಾಗಿ, ಆ ಕನ್ಯೆಯರೂ, ಮತ್ತು ಬ್ರಹ್ಮಚಾರಿಯೂ, ನರ್ಮದಾ ನದಿಯನ್ನು ಹೊಗಳುವುದಕ್ಕೆ ಆರಂಭಮಾಡಿದರು. ನರ್ಮದಾ ನದಿಗೆ ರೇವಾ ಎಂಬ ಹೆಸರೂ ಉಂಟು.

೩೨. ಅನಂತರ ಲೋಮಶ ಮಹರ್ಷಿಯ ಅಪ್ಪಣೆಯಂತೆ ಆ ಬ್ರಾಹ್ಮಣನು ಆ ಕನ್ಯೆಯರನ್ನು ವಿವಾಹ ವಿಧಿಯಂತೆ ರೇವಾದಡದಲ್ಲಿಯೇ ಸ್ವೀಕರಿಸಿದನು.

೩೩. ನರ್ಮದಾನದಿಯ ದಡದಲ್ಲಿಯೇ ವಾಸಮಾಡಿಕೊಂಡು ಆ ನದಿಯನ್ನು ಪೂಜಿಸುತ್ತಾ, ಸ್ನಾನಪಾನಾದಿಗಳನ್ನಾಚರಿಸುತ್ತಾ, ಬಹಳ ಕಾಲ ಕಳೆದನಂತರ ಅವರೆಲ್ಲರೂ ವಿಷ್ಣುಲೋಕವನ್ನು ಸೇರಿದರು.

ಏವಂ ತೇ ಕಥಿತೋ ರಾಜನ್ನರ್ಮದಾಗುಣ ಸಂಶ್ರಯಃ ।
ಇತಿ ಹಾಸೋ ಮಹಾಪುಣ್ಯಃ ಶ್ರವಣಾತ್ಪಾಪನಾಶನಃ ॥೩೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ತ್ರಯೋವಿಂಶೋಽಧ್ಯಾಯಃ

---

೩೪. ಎಲೈ ಯುಧಿಷ್ಠಿರನೆ! ನರ್ಮದಾನದಿಯ ಗುಣಗಳನ್ನಾಶ್ರಯಿಸಿ ನಿನಗೆ ಹೇಳಿದ ಈ ಇತಿಹಾಸವು ಕೇಳಿದ ಮಾತ್ರದಿಂದಲೇ ಸರ್ವಪಾಪಗಳನ್ನೂ ಪರಿಹರಿಸುವುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಚತುರ್ವಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಅಥಾನ್ಯಾನಿ ತು ತೀರ್ಥಾನಿ ವಸಿಷ್ಠೋಕ್ತಾನಿ ಮೇ ವದ ।
ಶ್ರುತ್ವಾ ಯಾನಿ ಚ ಪಾಪಾನಿ ವಿಲಯಂ ಯಾನ್ತಿ ನಾರದ ॥೧॥

॥ ನಾರದ ಉವಾಚ ॥

ಶೃಣುಷ್ವಾತ್ರ ಹಿ ತೀರ್ಥಾನಿ ವಸಿಷ್ಠೋಕ್ತಾನಿ ಪಾರ್ಥಿವ ।
ದಕ್ಷಿಣಂ ಸಿನ್ಧುಮಾಸಾದ್ಯ ಬ್ರಹ್ಮಚಾರೀ ಜಿತೇನ್ದ್ರಿಯಃ ।
ಅಗ್ನಿಷ್ಟೋಮಮವಾಪ್ನೋತಿ ವಿಮಾನಂ ಚಾಧಿರೋಹತಿ ॥೨॥

---

ಪದ್ಮಪುರಾಣದ ಆದಿಖಂಡದ ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು:– ಎಲೈ ನಾರದನೇ ಶ್ರವಣ ಮಾತ್ರದಿಂದಲೇ ಪಾಪಗಳನ್ನು ಪರಿಹರಿಸುವ ವಸಿಷ್ಠನಿಂದ ಪ್ರೋಕ್ತವಾದ ಇನ್ನೂ ಇತರ ತೀರ್ಥಗಳನ್ನು ತಿಳಿಸು.

೨. ನಾರದನು ಹೇಳಿದನು: ಎಲೈ ಯುಧಿಷ್ಠಿರನೆ ವಸಿಷ್ಠೋಕ್ತವಾದ ತೀರ್ಥಗಳನ್ನು ಹೇಳುವೆನು, ಕೇಳು. ಬ್ರಹ್ಮಚಾರಿಯಾಗಿ ಇಂದ್ರಿಯಗಳನ್ನು ಜಯಿಸಿ, ದಕ್ಷಿಣ ಸಮುದ್ರದಲ್ಲಿ ಸ್ನಾನಾದಿಗಳನ್ನಾಚರಿಸುವವನು ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು. ಮತ್ತು ವಿಮಾನಾರೋಹಣವನ್ನೂ ಮಾಡುವನು.

ಚರ್ಮಣ್ವತೀಂ ಸಮಾಸಾದ್ಯ ನಿಯತೋ ನಿಯತಾಶನಃ ।
ರನ್ತಿದೇವಾಭ್ಯನುಜ್ಞಾತೋ ಅಗ್ನಿಷ್ಟೋಮಫಲಂ ಲಭೇತ್ ॥ ೩ ॥
ತತೋ ಗಚ್ಛೇತ ಧರ್ಮಜ್ಞ ಹಿಮವತ್ಸುತಮರ್ಬುದಮ್ ।
ಪೃಥಿವ್ಯಾ ಯತ್ರ ವೈ ಛಿದ್ರಂ ಪೂರ್ವಮಾಸೀದ್ಯುಧಿಷ್ಠಿರ ॥ ೪ ॥
ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ ।
ತತ್ರೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥ ೫ ॥
ಪಿಙ್ಗಾತೀರ್ಥಮುಪಸ್ಪೃಶ್ಯ ಬ್ರಹ್ಮಚಾರೀ ನರಾಧಿಪ ।
ಕಪಿಲಾನಾಂ ನರವ್ಯಾಘ್ರ ಶತಸ್ಯ ಫಲಮಾಪ್ನುಯಾತ್ ॥ ೬ ॥
ತತೋ ಗಚ್ಛೇತ ಧರ್ಮಜ್ಞ ಪ್ರಭಾಸಂ ಲೋಕವಿಶ್ರುತಮ್ ।
ಯತ್ರ ಸನ್ನಿಹಿತೋ ನಿತ್ಯಂ ಸ್ವಯಮೇವ ಹುತಾಶನಃ ॥ ೭ ॥

---

೩. ಶೌಚಾದಿ ನಿಯಮಗಳಿಂದ ಕೂಡಿ ಆಹಾರ ನಿಯಮ ಪುರಸ್ಸರವಾಗಿ ಚರ್ಮಣ್ವತೀ ನದಿಯಲ್ಲಿ ಸ್ನಾನ ಮಾಡುವವನು ರಂತಿದೇವನ ಅನುಜ್ಞೆಯಿಂದ ಅಗ್ನಿಷ್ಟೋಮ ಫಲವನ್ನು ಹೊಂದುವನು.

೪. ಎಲೈ ಧರ್ಮಜ್ಞನಾದ ಯುಧಿಷ್ಠಿರನೇ! ಭೂಮಿಯು ಪೂರ್ವದಲ್ಲಿ ಬಿರಿದುಹೋಗಿದ್ದಲ್ಲಿರುವ ಹಿಮವಂತನ ಪುತ್ರನೆಂದು ಪ್ರಸಿದ್ಧವಾದ ಅರ್ಬುದ ಕ್ಷೇತ್ರವನ್ನು ಹೊಂದಬೇಕು.

೫. ಆ ಅರ್ಬುದಕ್ಷೇತ್ರದಲ್ಲಿ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ವಸಿಷ್ಠಮಹರ್ಷಿಯ ಆಶ್ರಮವು ಇರುವುದು. ಅಲ್ಲಿ ಒಂದು ರಾತ್ರಿ ವಾಸಮಾಡುವುದರಿಂದ ಸಹಸ್ರ ಗೋದಾನದ ಫಲವನ್ನು ಮಾನವನು ಹೊಂದುವನು.

೬. ಎಲೈ ನರೇಂದ್ರನೇ! ಅಲ್ಲಿಯೇ ಬ್ರಹ್ಮಚರ್ಯದಿಂದಿದ್ದು ಪಿಂಗಾ ತೀರ್ಥದಲ್ಲಿ ಸ್ನಾನಮಾಡುವವನು ನೂರು ಕಪಿಲಾಗೋದಾನ ಮಾಡಿದ ಫಲವನ್ನು ಹೊಂದುವನು.

೭–೮. ಮುಂದೆ ಜಗತ್ಪ್ರಸಿದ್ಧವಾದ ಪ್ರಭಾಸತೀರ್ಥವನ್ನು ಹೊಂದಬೇಕು. "ಅಗ್ನಿ ಮುಖಾವೈ ದೇವಾಃ" ಎಂಬ ಶ್ರುತಿಯಂತೆ ದೇವತೆಗಳಿಗೆ ಮುಖಸ್ಥಾನವನ್ನು ಹೊಂದಿರುವ ಮತ್ತು ವಾಯುವಿನ ಸಹಾಯ

ತಸ್ಮಿಂಸ್ತೀರ್ಥವರೇ ಸ್ನಾತ್ವಾ ಶುಚಿಃ ಪ್ರಯತಮಾನಸಃ ।
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥ ೮ ॥
ತತೋ ಗತ್ವಾ ಸರಸ್ವತ್ಯಾಃ ಸಾಗರಸ್ಯ ಚ ಸಙ್ಗಮಮ್ ।
ಗೋಸಹಸ್ರಫಲಂ ಪ್ರಾಪ್ಯ ಸ್ವರ್ಗಲೋಕೇ ಮಹೀಯತೇ ॥ ೯ ॥
ದೀಪ್ಯಮಾನೋಽಗ್ನಿವನ್ನಿತ್ಯಂ ಪ್ರಭಯಾ ಭರತರ್ಷಭ ।
ತೀರ್ಥೇ ಸಲಿಲರಾಜಸ್ಯ ಸ್ನಾತ್ವಾ ಪ್ರಯತಮಾನಸಃ ॥೧೦॥
ತ್ರಿರಾತ್ರಮುಷಿತಸ್ತತ್ರ ತರ್ಪಯೇತ್ಪಿತೃದೇವತಾಃ ।
ನಿರಾಜತಿ ಯಥಾ ಸೋಮೋ ವಾಜಿಮೇಧಂ ಚ ವಿನ್ದತಿ ॥೧೧॥
ವರದಾನಂ ತತೋ ಗಚ್ಛೇತ್ತೀರ್ಥಂ ಭರತಸತ್ತಮ ।
ವಿಷ್ಣೋರ್ದುರ್ವಾಸಸಾ ಯತ್ರ ವರೋದತ್ತೋ ಯುಧಿಷ್ಠಿರ॥೧೨॥

---

ದಿಂದ ಅಭಿವೃದ್ಧಿಯನ್ನು ಹೊಂದುವ ಅಗ್ನಿಭಗವಂತನು ಸಾಕ್ಷಾತ್ತಾಗಿ ಸದಾಕಾಲದಲ್ಲೂ ಅಲ್ಲಿ ವಾಸಿಸುವನು. ಆ ತೀರ್ಥದಲ್ಲಿ ಶುಚಿಯಾಗಿ, ಮನೋನಿಗ್ರಹದಿಂದ ಸ್ನಾನಮಾಡುವವನು ಅಗ್ನಿಷ್ಟೋಮ ಮತ್ತು ಅತಿರಾತ್ರಗಳೆಂಬ ಯಾಗಗಳ ಫಲವನ್ನು ಹೊಂದುವನು.

೯. ಮುಂದೆ ಸರಸ್ವತೀ ನದಿಯು ಸಮುದ್ರವನ್ನು ಸೇರುವ ಸ್ಥಳದಲ್ಲಿ ಸ್ನಾನಮಾಡಿದವನು ಸಹಸ್ರ ಗೋದಾನದ ಫಲಕ್ಕೆ ಭಾಗಿಯಾಗಿ ಸ್ವರ್ಗಲೋಕದಲ್ಲಿ ಸುಖಿಸುವನು.

೧೦. ಇಂತಹವನು ಯಾವಾಗಲೂ ಅಗ್ನಿಯಂತೆ ತೇಜಸ್ವಿಯಾಗುವನು. ಮುಂದೆ ವರುಣತೀರ್ಥದಲ್ಲಿ ಮನೋನಿಗ್ರಹಮಾಡಿ ಸ್ನಾನವನ್ನು ಮಾಡಬೇಕು.

೧೧. ಮೂರುರಾತ್ರಿಗಳು ಅಲ್ಲಿ ಉಪವಾಸಮಾಡಿ, ಪಿತೃಗಳನ್ನೂ, ದೇವತೆಗಳನ್ನೂ ತೃಪ್ತಿಪಡಿಸಬೇಕು. ಹೀಗೆ ಮಾಡುವವನು ಚಂದ್ರನಂತೆ ಪ್ರಕಾಶಿಸುವುದಲ್ಲದೇ, ಅಶ್ವಮೇಧದ ಫಲವನ್ನೂ ಹೊಂದುವನು.

೧೨. ಎಲೈ ಭರತವಂಶೋತ್ಪನ್ನನಾದ ಯುಧಿಷ್ಠಿರನೇ! ಮುಂದೆ ವರದಾನವೆಂಬ ತೀರ್ಥವನ್ನು ಸೇರಬೇಕು. ಇಲ್ಲಿಯೇ ವಿಷ್ಣುವು ದೂರ್ವಾಸನಿಂದ ವರವನ್ನು ಪಡೆದುದು.

ವರದಾನೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ।
ತತೋ ದ್ವಾರವತೀಂ ಗಚ್ಛೇನ್ನಿಯತೋ ನಿಯತಾಶನಃ ॥೧೩॥
ಪಿಣ್ಡಾರಕೇ ನರಃ ಸ್ನಾತ್ವಾ ಲಭೇದ್ಬಹುಸುವರ್ಣಕಮ್ ।
ತಸ್ಮಿಂಸ್ತೀರ್ಥೇ ಮಹಾರಾಜ ಪದ್ಮಲಕ್ಷಣಲಕ್ಷಿತಾಃ ॥೧೪॥
ಅದ್ಯಾಪಿ ಮುದ್ರಾ ದೃಶ್ಯನ್ತೇ ತದದ್ಭುತಮರಿಂದಮ ।
ತ್ರಿಶೂಲಾಙ್ಕಾನಿ ಪದ್ಮಾನಿ ದೃಶ್ಯನ್ತೇ ಕುರುನನ್ದನ ॥೧೫॥
ಮಹಾದೇವಸ್ಯ ಸಾನ್ನಿಧ್ಯಂ ತತ್ರೈವ ಭರತರ್ಷಭ ।
ಸಾಗರಸ್ಯ ಚ ಸಿನ್ಧೋಶ್ಚ ಸಂಗಮಂ ಪ್ರಾಪ್ಯ ಭಾರತ ॥೧೬॥
ತೀರ್ಥೇ ಸಲಿಲರಾಜಸ್ಯ ಸ್ನಾತ್ವಾ ಪ್ರಯತಮಾನಸಃ ।
ತರ್ಪಯಿತ್ವಾ ಪಿತೄನ್ದೇವಾನೃಷೀಂಶ್ಚ ಭರತರ್ಷಭ ।
ಪ್ರಾಪ್ನೋತಿ ವಾರುಣಂ ಲೋಕಂ ದೀಪ್ಯಮಾನಃ ಸ್ವತೇಜಸಾ ॥೧೭॥

---

೧೩. ಆ ವರದಾನ ತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರ ಗೋದಾನದ ಫಲವನ್ನು ಹೊಂದುವನು. ಮುಂದೆ ಆಹಾರನಿಯಮ ಉಳ್ಳವನಾಗಿ ದ್ವಾರವತಿಯನ್ನು ಸೇರಬೇಕು.

೧೪–೧೫. ಎಲೈ ಕೌರವನೇ! ಪಿಂಡಾರಕ ಕ್ಷೇತ್ರದಲ್ಲಿ ಸ್ನಾನವನ್ನು ಮಾಡುವವನು ಬಹು ಸುವರ್ಣವನ್ನು ಸಂಪಾದಿಸುವನು. ಆ ತೀರ್ಥದಲ್ಲಿ ಪದ್ಮದ ಮುದ್ರೆಯಿಂದ ಕೂಡಿದ ಹಣಗಳು ಈಗಲೂ ಸಿಕ್ಕುತ್ತವೆ. ಮತ್ತು ಆ ಪದ್ಮಮುದ್ರೆಯೊಳಗೆ ತ್ರಿಶೂಲಚಿಹ್ನೆಯೂ ಇದೆ.

೧೬–೧೭. ಎಲೈ ಯುಧಿಷ್ಠಿರನೆ! ಅಲ್ಲಿಯೇ ಶಿವನು ಯಾವಾಗಲೂ ವಾಸಿಸುತ್ತಿರುವನು. ಮುಂದೆ ಸಿಂಧುನದಿಯು ಸಮುದ್ರವನ್ನು ಸೇರುವ ಸಂಗಮವನ್ನು ಸೇರಬೇಕು. ಅಲ್ಲಿ ವರುಣತೀರ್ಥದಲ್ಲಿ ಮನಸ್ಸನ್ನು ನಿಗ್ರಹಿಸಿ ಸ್ನಾನಮಾಡಿ ಪಿತೃಗಳಿಗೂ, ದೇವತೆಗಳಿಗೂ, ಋಷಿಗಳಿಗೂ, ತೃಪ್ತಿಪಡಿಸಿದ ಮನುಷ್ಯನು ಸಹಜವಾದ ತೇಜಸ್ಸಿನಿಂದ ಪ್ರಕಾಶಿಸುತ್ತಾ ವರುಣಲೋಕವನ್ನು ಹೊಂದುವನು.

ಶಙ್ಕುಕರ್ಣೇಶ್ವರಂ ದೇವಮರ್ಚಯಿತ್ವಾ ಯುಧಿಷ್ಠಿರ ।
ಅಶ್ವಮೇಧಂ ದಶಗುಣಂ ಪ್ರವದನ್ತಿ ಮನೀಷಿಣಃ ॥೧೮॥
ಪ್ರದಕ್ಷಿಣಮುಪಾವೃತ್ಯ ಗಚ್ಛೇತ ಭರತರ್ಷಭ ।
ತೀರ್ಥಂ ಕುರುವರಶ್ರೇಷ್ಠ ತ್ರಿಷು ಲೋಕೇಷು ವಿಶ್ರುತಮ್ ॥೧೯॥
ತಿಮಿಾತಿ ನಾಮ್ನಾ ವಿಖ್ಯಾತಂ ಸರ್ವಪಾಪಪ್ರಮೋಚನಮ್।
ಯತ್ರ ಬ್ರಹ್ಮಾದಯೋ ದೇವಾ ಉಪಾಸನ್ತೇ ಮಹೇಶ್ವರಮ್॥೨೦॥
ತತ್ರ ಸ್ನಾತ್ವಾರ್ಚಯಿತ್ವಾ ಚ ರುದ್ರಂ ದೇವಗಣೈರ್ವೃತಮ್ ।
ಜನ್ಮಪ್ರಭೃತಿ ಪಾಪಾನಿ ಕೃತಾನಿ ನುದತೇ ನರಃ ॥೨೧॥
ತಿಮಿರತ್ರ ನರಶ್ರೇಷ್ಠ ಸರ್ವದೇವೈರಭಿಷ್ಟುತಃ ।
ತತ್ರ ಸ್ನಾತ್ವಾ ನರಶ್ರೇಷ್ಠ ಹಯಮೇಧಮವಾಪ್ನುಯಾತ್ ॥೨೨॥

---

೧೮. ಎಲೈ ಯುಧಿಷ್ಠಿರನೇ! ಆ ತೀರ್ಥದಲ್ಲಿ ಶಂಕುಕರ್ಣೇಶ್ವರನನ್ನು ಪೂಜಿಸಿದರೆ ಹತ್ತು ಅಶ್ವಮೇಧಯಾಗ ಮಾಡಿದ ಫಲವನ್ನು ಮಾನವನು ಹೊಂದುವನೆಂದು ವಿದ್ವಾಂಸರು ಹೇಳುವರು

೧೯. ಎಲೈ ಭರತವಂಶೋತ್ಪನ್ನನಾದ ಯುಧಿಷ್ಠಿರನೇ! ಮುಂದೆ ಈಶ್ವರನನ್ನು ಬಲಕ್ಕೆ ಮಾಡಿಕೊಂಡು ಪ್ರಯಾಣಮಾಡಬೇಕು. ಹೀಗೆ ಮಾಡಿದರೆ ಮೂರುಲೋಕಗಳಲ್ಲೂ ಪ್ರಸಿದ್ಧವಾದ ತೀರ್ಥವೊಂದು ಸಿಕ್ಕುವುದು.

೨೦. ಸರ್ವಪಾಪವನ್ನು ಪರಿಹರಿಸುವ 'ತಿಮೀ' ಎಂದು ಪ್ರಖ್ಯಾತವಾದ ಈ ಕ್ಷೇತ್ರದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಮಹೇಶ್ವರನನ್ನು ಉಪಾಸಿಸುತ್ತಿರುವರು.

೨೧. ಆ ತೀರ್ಥದಲ್ಲಿ ಸ್ನಾನಮಾಡಿ ದೇವತೆಗಳಿಂದ ಕೂಡಿರುವ ರುದ್ರದೇವನನ್ನು ಪೂಜಿಸುವವನು ಹುಟ್ಟಿದ ಮೊದಲು ಮಾಡಿದ ಸರ್ವಪಾಪಗಳನ್ನೂ ಕಳೆದುಕೊಳ್ಳುವನು.

೨೨. ಎಲೈ ಪುರುಷೋತ್ತಮನೇ! ಈ ತೀರ್ಥವನ್ನು ಸರ್ವದೇವತೆಗಳೂ ಹೊಗಳುತ್ತಿರುವರು. ಅಲ್ಲಿ ಸ್ನಾನಮಾಡಿದವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

ಜಿತ್ವಾ ತತ್ರ ಮಹಾಪ್ರಾಜ್ಞ ವಿಷ್ಣುನಾ ದಿತಿನನ್ದನಮ್ ।
ಪುರಾ ಶೌಚಂ ಕೃತಂರಾಜನ್ಹತ್ವಾ ದೈವತಕಣ್ಟಕಮ್ ॥೨೩॥
ತತೋ ಗಚ್ಛೇತ ಧರ್ಮಜ್ಞ ವಸುಧಾರಾ ಮಭಿಷ್ಟುತಾಮ್ ।
ಗಮನಾದೇವ ತಸ್ಯಾಂ ಹಿ ಹಯಮೇಧಮವಾಪ್ನುಯಾತ್ ॥೨೪॥
ಸ್ನಾತ್ವಾ ನರವರಶ್ರೇಷ್ಠ ಪ್ರಯತಾತ್ಮಾ ತು ಮಾನವಃ ।
ತರ್ಪಯಿತ್ವಾ ಪಿತೄನ್ದೇವಾನ್ ವಿಷ್ಣುಲೋಕೇ ಮಹೀಯತೇ॥೨೫॥
ತೀರ್ಥಂ ಚಾಪ್ಯಪರಂ ತತ್ರ ವಸೂನಾಂ ಭರತರ್ಷಭ ।
ತತ್ರಸ್ನಾತ್ವಾ ಚ ಪೀತ್ವಾ ಚ ವಸೂನಾಂ ಸಮ್ಮತೋ ಭವೇತ್ ॥೨೬॥
ಸಿಂಧುತಮಮಿತಿ ಖ್ಯಾತಂ ಸರ್ವಪಾಪಪ್ರಣಾಶನಮ್ ।
ತತ್ರ ಸ್ನಾತ್ವಾ ನರಶ್ರೇಷ್ಠ ಲಭೇದ್ಬಹುಸುವರ್ಣ ಕಮ್ ॥೨೭॥

---

೨೩. ಪೂರ್ವಕಾಲದಲ್ಲಿ ವಿಷ್ಣುವು ದೇವತೆಗಳಿಗೆ ಬಹುರೀತಿಯಲ್ಲಿ ಪೀಡೆಯನ್ನು ಉಂಟುಮಾಡುತ್ತಿದ್ದ ದೈತ್ಯನನ್ನು ಕೊಂದು ಆ ಪಾಪವನ್ನು ಇಲ್ಲಿ ಕಳೆದನು.

೨೪. ಮುಂದೆ ವಸುಧಾರಾ ಎಂಬುದಾಗಿ ಪ್ರಸಿದ್ಧವಾದ ತೀರ್ಥ ವಿಶೇಷವಿರುವುದು. ಅದನ್ನು ಹೊಂದಿದ ಮಾತ್ರದಿಂದಲೇ ಅಶ್ವಮೇಧ ಯಾಗದ ಫಲವನ್ನು ಹೊಂದುವನು.

೨೫. ಎಲೈ ಪ್ರಜಾಧಿಪತಿಯಾದ ಯುಧಿಷ್ಠಿರನೇ! ಅಲ್ಲಿ ಮನೋನಿಗ್ರಹದಿಂದ ಕೂಡಿ ಸ್ನಾನವನ್ನಾಚರಿಸಿ ಪಿತೃಗಳಿಗೂ ದೇವತೆಗಳಿಗೂ ತರ್ಪಣವನ್ನು ಕೊಡುವವನು ವಿಷ್ಣುಲೋಕದಲ್ಲಿ ಸುಖಿಸುವನು.

೨೬. ಆ ಪ್ರದೇಶದಲ್ಲೇ 'ವಸುತೀರ್ಥ' ವೆಂಬ ಮತ್ತೊಂದು ತೀರ್ಥವಿರುವುದು. ಅಲ್ಲಿ ಸ್ನಾನಪಾನಾದಿಗಳನ್ನಾಚರಿಸುವವನು ವಸುಗಳಿಗೆ ಪ್ರಿಯನಾಗುವನು.

೨೭. ಮುಂದೆ 'ಸಿಂಧುತಮ' ಎಂದು ಪ್ರಸಿದ್ಧವಾದ ಸರ್ವಪಾಪಗಳನ್ನೂ ಪರಿಹರಿಸುವ ತೀರ್ಥವಿಶೇಷದಲ್ಲಿ ಸ್ನಾನಮಾಡುವವನು ಬಹುವಾಗಿ ಸುವರ್ಣವನ್ನು ಹೊಂದುವನು.

ಬ್ರಹ್ಮತುಙ್ಗಂ ಸಮಾಸಾದ್ಯ ಶುಚಿಃ ಪ್ರಯತಮಾನಸಃ ।
ಬ್ರಹ್ಮಲೋಕಮವಾಪ್ನೋತಿ ಸುಕೃತೀ ವಿರಜಾ ನರಃ ॥೨೮॥
ಕುಮಾರಿಕಾಣಾಂ ಶಕ್ರಸ್ಯ ತೀರ್ಥಂ ಸಿದ್ಧನಿಷೇವಿತಮ್ ।
ತತ್ರ ಸ್ನಾತ್ವಾ ನರಶ್ರೇಷ್ಠ ಶಕ್ರಲೋಕಮವಾಪ್ನುಯಾತ್ ॥೨೯॥
ರೇಣುಕಾಯಾಶ್ಚ ತತ್ರೈವ ತೀರ್ಥಂ ದೇವನಿಷೇವಿತಮ್ ।
ಸ್ನಾತ್ವಾ ತತ್ರ ಭವೇದ್ವಿಪ್ರೋ ವಿಮಲಶ್ಚನ್ದ್ರಮಾ ಇವ ॥೩೦॥
ಅಥ ಪಞ್ಚನದಂ ಗತ್ವಾ ನಿಯತೋ ನಿಯತಾಶನಃ ।
ಪಞ್ಚಯಜ್ಞಾನವಾಪ್ನೋತಿ ಕ್ರಮಶೋ ಯೇ ತು ಕೀರ್ತಿತಾಃ॥೩೧॥
ತತೋ ಗಚ್ಛೇತ ಧರ್ಮಜ್ಞ ಭೀಮಾಯಾಃ ಸ್ಥಾನ ಮುತ್ತಮಂ ।
ತತ್ರ ಸ್ನಾತ್ವಾ ನ ಯೋನ್ಯಾಂ ವೈ ನರೋ ಭರತಸತ್ತಮ ॥೩೨॥

---

೨೮. ಮುಂದೆ ಬಾಹ್ಯಶೌಚದಿಂದಲೂ, ಆಂತರಶೌಚದಿಂದಲೂ ಕೂಡಿ, 'ಬ್ರಹ್ಮತುಂಗ' ವೆಂಬ ಕ್ಷೇತ್ರವನ್ನು ಸೇರಬೇಕು. ಹೀಗೆಮಾಡಿದರೆ ಸರ್ವಪಾಪಗಳನ್ನೂ ಕಳೆದು, ಪುಣ್ಯಯುಕ್ತನಾಗಿ ಬ್ರಹ್ಮಲೋಕವನ್ನು ಸೇರುವನು.

೨೯. ಮುಂದೆ ಸಿದ್ಧರಿಂದ ಸೇವಿತವಾದ ಶಕ್ರಕುಮಾರಿಕಾ ತೀರ್ಥದಲ್ಲಿ ಸ್ನಾನವನ್ನು ಮಾಡುವವನು ಇಂದ್ರಲೋಕವನ್ನು ಹೊಂದುವನು.

೩೦-೩೧. ಅಲ್ಲಿಯೇ ದೇವತೆಗಳಿಗೆ ಪ್ರಿಯವಾದ ರೇಣುಕಾ ತೀರ್ಥದಲ್ಲಿ ಸ್ನಾನಮಾಡುವ ಬ್ರಾಹ್ಮಣನು ಚಂದ್ರನಂತೆ ಪರಿಶುದ್ಧನಾಗುವನು. ಮುಂದೆ ಪಂಚನದವೆಂಬ ಕ್ಷೇತ್ರದಲ್ಲಿ ಶೌಚಾದಿಗಳಿಂದಲೂ, ಆಹಾರ ನಿಯಮಗಳಿಂದಲೂ, ಕೂಡಿದ ಮನುಷ್ಯನು ಪಂಚಯಜ್ಞದ ಫಲಗಳನ್ನು ಹೊಂದುವನು.

೩೨. ಮುಂದೆ ಶ್ರೇಷ್ಠವಾದ 'ಭೀಮಾ' ಕ್ಷೇತ್ರದಲ್ಲಿ ಸ್ನಾನ ಮಾಡುವವನು ಪುನಃ ಗರ್ಭವಾಸವನ್ನೇ ಅನುಭವಿಸಲಾರನು.

ದೇವ್ಯಾಃ ಪುತ್ರೋ ಭವೇದ್ರಾಜಂಸ್ತತ್ರ ಕುಣ್ಡಲವಿಗ್ರಹಃ ।
ಗವಾಂ ಶತಸಹಸ್ರಸ್ಯ ಫಲಂ ಚೈವಾಪ್ನುಯಾನ್ಮಹತ್ ॥೩೩॥

ಗಿರಿಕುಂಜಂ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಂ ।
ಪಿತಾಮಹಂ ನಮಸ್ಕೃತ್ಯ ಗೋಸಹಸ್ರ ಫಲಂ ಲಭೇತ್ ॥೩೪॥

ತತೋ ಗಚ್ಛೇತ ಧರ್ಮಜ್ಞ ವಿಮಲಂ ತೀರ್ಥ ಮುತ್ತಮಂ ।
ಅದ್ಯಾಪಿ ಯತ್ರ ದೃಶ್ಯಂತೇ ಮತ್ಸ್ಯಾಃ ಸೌವರ್ಣರಾಜತಾಃ ॥೩೫॥

ತತ್ರ ಸ್ನಾತ್ವಾ ನರಶ್ರೇಷ್ಠ ವಾಜಪೇಯ ಮವಾಪ್ನುಯಾತ್ ।
ಸರ್ವಪಾಪವಿಶುದ್ಧಾತ್ಮಾ ಗಚ್ಛೇತ್ಪರಮಿಕಾಂ ಗತಿಂ ॥೩೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಚತುರ್ವಿಂಶೋಽಧ್ಯಾಯಃ

---

೩೩. ಎಲೈ ರಾಜೇಂದ್ರನೇ! ಅವನು ರಾಣಿಯ ಪುತ್ರನಾಗುವನು. ಮತ್ತು ಕಿವಿಯ ಆಭರಣಗಳಿಂದ ಕೂಡಿ ಜ್ವಲಿಸುವನು. ಅಲ್ಲದೇ ಒಂದು ಲಕ್ಷ ಗೋದಾನದ ಫಲವನ್ನೂ ಹೊಂದುವನು.

೩೪. ಮುಂದೆ ಗಿರಿಕುಂಜವೆಂಬ ಕ್ಷೇತ್ರವನ್ನು ಹೊಂದಿ ಅಲ್ಲಿ ಬ್ರಹ್ಮನನ್ನು ನಮಸ್ಕರಿಸುವವನು ಗೋಸಹಸ್ರ ಫಲ ಭಾಗಿಯಾಗುವನು.

೩೫. ಮುಂದೆ ವಿಮಲತೀರ್ಥವನ್ನು ಸೇವಿಸಬೇಕು. ಆ ತೀರ್ಥದಲ್ಲಿ ಈಗಲೂ, ಚಿನ್ನದ ಮತ್ತು ಬೆಳ್ಳಿಯ ಮೀನುಗಳು ದೃಷ್ಟಿಗೆ ಗೋಚರವಾಗುವುವು.

೩೬. ಆ ವಿಮಲತೀರ್ಥದಲ್ಲಿ ಸ್ನಾನಮಾಡುವವನು ವಾಜಪೇಯ ಯಾಗದ ಫಲವನ್ನು ಹೊಂದುವನು. ಮತ್ತು ಸರ್ವಪಾಪಗಳಿಂದ ಮುಕ್ತನಾಗಿ ಮೋಕ್ಷವನ್ನೂ ಹೊಂದುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಪಂಚವಿಂಶೋಽಧ್ಯಾಯಃ

॥ ನಾರದ ಉವಾಚ ॥

ವಿತಸ್ತಾಂ ಚ ಸಮಾಸಾದ್ಯ ಸಂತರ್ಪ್ಯ ಪಿತೃದೇವತಾಃ ।
ನರಃ ಫಲಮವಾಪ್ನೋತಿ ವಾಜಪೇಯಸ್ಯ ಭಾರತ ॥ ೧ ॥

ಕಾಶ್ಮೀರೇಷ್ವೇವ ನಾಗಸ್ಯ ಭವನಂ ತಕ್ಷಕಸ್ಯ ಚ ।
ವಿತಸ್ತಾಖ್ಯಮಿತಿಖ್ಯಾತಂ ಸರ್ವಪಾಪಪ್ರಮೋಚನಂ ॥ ೨ ॥

ತತ್ರ ಸ್ನಾತ್ವಾ ನರೋ ಮಾನಂ ವಾಜಪೇಯಮವಾಪ್ನುಯಾತ್ ।
ಸರ್ವಪಾಪವಿಶುದ್ಧಾತ್ಮಾ ಗಚ್ಛೇಚ್ಚ ಪರಮಾಂ ಗತಿಂ ॥ ೩ ॥

---

ಪದ್ಮಪುರಾಣದ ಆದಿಖಂಡದ ಇಪ್ಪತ್ತೈದನೆಯ ಅಧ್ಯಾಯವು

೧. ನಾರದನು ಹೇಳಿದನು: ಎಲೈ ಭರತವಂಶೋತ್ಪನ್ನನಾದ ಯುಧಿಷ್ಠಿರನೇ? ಮುಂದೆ ವಿತಸ್ತಾ ತೀರ್ಥವನ್ನು ಹೊಂದಿ ದೇವತೆಗಳನ್ನೂ ಪಿತೃಗಳನ್ನೂ ತೃಪ್ತಿಗೊಳಿಸುವ ಮನುಷ್ಯನು ವಾಜಪೇಯ ಯಾಗದ ಫಲವನ್ನು ಹೊಂದುವನು.

೨. ಸರ್ವಪಾಪಗಳನ್ನೂ ಪರಿಹರಿಸುವ ಈ ವಿತಸ್ತಾ ತೀರ್ಥವು ನಾಗವೆಂಬ ದೇವಜಾತಿಗೆ ಸೇರಿದ ಸರ್ಪಕ್ಕೂ ಮತ್ತು, ತಕ್ಷಕನಿಗೂ, ನಿವಾಸಸ್ಥಾನವಾಗಿದ್ದುಕೊಂಡು ಕಾಶ್ಮೀರದೇಶದಲ್ಲಿರುವುದು.

೩. ಅಲ್ಲಿ ಸ್ನಾನಮಾಡುವ ಮನುಷ್ಯನು ವಾಜಪೇಯ ಯಾಗದ ಫಲಭಾಗಿಯಾಗಿಯೂ ಮತ್ತು ಮೋಕ್ಷಕ್ಕೆ ಭಾಗಿಯೂ ಆಗುವನು.

**ತತೋ ಗಚ್ಛೇತ ಮಲದಂ ತ್ರಿಷುಲೋಕೇಷು ವಿಶ್ರುತಂ ।**
**ಪಶ್ಚಿಮಾಯಾಂ ತು ಸಂಧ್ಯಾಯಾ ಮುಪಸ್ಪೃಶ್ಯ ಯಥಾವಿಧಿ ॥ ೪ ॥**

**ಚರುಂ ಸಪ್ತಾರ್ಚಿಷೇ ರಾಜನ್ ಯಥಾಶಕ್ತಿ ನಿವೇದಯೇತ್ ।**
**ಪಿತೄಣಾಮಕ್ಷಯಂ ದಾನಂ ಪ್ರವದಂತಿ ಮನೀಷಿಣಃ ॥ ೫ ॥**

**ಗವಾಂ ಶತಸಹಸ್ರೇಣ ರಾಜಸೂಯಶತೇನ ಚ ।**
**ಅಶ್ವಮೇಧಸಹಸ್ರೇಣ ಶ್ರೇಯಾನ್ ಸಪ್ತಾರ್ಚಿಷಶ್ಚರುಃ ॥ ೬ ॥**

**ತತೋ ನಿವೃತ್ತೋ ರಾಜೇಂದ್ರ ರುದ್ರಾಸ್ಪದಮಥಾವಿಶೇತ್ ।**
**ಅಭಿಗಮ್ಯ ಮಹಾದೇವಮಶ್ವಮೇಧ ಫಲಂ ಲಭೇತ್ ॥ ೭ ॥**

**ಮಣಿಮಂತಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ಏಕರಾತ್ರೋಷಿತೋ ರಾಜನ್ ಅಗ್ನಿಷ್ಟೋಮಫಲಂ ಲಭೇತ್ ॥ ೮ ॥**

---

೪. ಮುಂದೆ ಮೂರು ಲೋಕಗಳಲ್ಲಿಯೂ, ಪ್ರಸಿದ್ಧವಾದ ಮಲದ ತೀರ್ಥವನ್ನು ಪ್ರವೇಶಿಸಿ ಸಾಯಂಕಾಲದಲ್ಲಿ ವಿಧಿಯನ್ನನುಸರಿಸಿ ಸ್ನಾನವನ್ನು ಮಾಡಬೇಕು.

೫. ತನ್ನ ಐಶ್ವರ್ಯವನ್ನು ಅನುಸರಿಸಿ ಅಗ್ನಿಗೆ ಚರುವೆಂಬ ಅನ್ನವನ್ನು ಸಮರ್ಪಣಮಾಡಬೇಕು. ಹೀಗೆ ಮಾಡುವುದರಿಂದ ಪಿತೃಗಳಿಗೆ ಅನಂತದಾನ ಮಾಡಿದಂತಾಗುವುದು. ಎಂದು ಪಂಡಿತರು ಹೇಳುವರು.

೬. ಅಗ್ನಿಯಲ್ಲಿ ಚರುಸಮರ್ಪಣವು ಸಹಸ್ರಶತಗೋದಾನಕ್ಕಿಂತಲೂ, ರಾಜಸೂಯಯಾಗಶತಕ್ಕಿಂತಲೂ, ಅಶ್ವಮೇಧಯಾಗಸಹಸ್ರಕ್ಕಿಂತಲೂ, ಮೇಲಾಗಿರುವುದು.

೭. ಮುಂದೆ ರುದ್ರಾಸ್ಪದವೆಂಬ ಶಿವಕ್ಷೇತ್ರವನ್ನು ಹೊಂದಿ ಮಹಾದೇವನನ್ನು ಎದುರುಗೊಳ್ಳುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೮. ಮುಂದೆ ಮಣಿಮಸ್ತವೆಂಬ ಪ್ರದೇಶವನ್ನು ಸೇರಿ, ಬ್ರಹ್ಮಚರ್ಯದಿಂದಲೂ, ಐಕಾಗ್ರ್ಯದಿಂದಲೂ, ಕೂಡಿ ಒಂದುರಾತ್ರಿ ವಾಸಮಾಡುವ ಮನುಷ್ಯನು ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು.

ಅಥ ಗಚ್ಛೇತ ರಾಜೇಂದ್ರ ದೇವಿಕಾಂ ಲೋಕವಿಶ್ರುತಾಂ ।
ಪ್ರಸೂತಿರ್ಯತ್ರ ವಿಪ್ರಾಣಾಂ ಶ್ರೂಯತೇ ಭರತರ್ಷಭ ॥ ೯ ॥

ತ್ರಿಶೂಲಪಾಣೇಃ ಸ್ಥಾನಂ ಚ ಯತ್ರ ಲೋಕೇಷು ವಿಶ್ರುತಂ ।
ದೇವಿಕಾಯಾಂ ನರಃ ಸ್ನಾತ್ವಾ ಅಭ್ಯರ್ಚ್ಯ ಚ ಮಹೇಶ್ವರಂ ॥೧೦॥

ಯಥಾಶಕ್ತಿ ನರಸ್ತತ್ರ ನಿವೇದ್ಯ ಭರತರ್ಷಭ ।
ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಲಭತೇ ಫಲಂ ॥೧೧॥

ಕಾಮಾಖ್ಯಂ ತತ್ರ ರುದ್ರಸ್ಯ ತೀರ್ಥಂ ದೇವರ್ಷಿಸಮ್ಮತಂ ।
ತತ್ರ ಸ್ನಾತ್ವಾ ನರಃಕ್ಷಿಪ್ರಂ ಸಿದ್ಧಿಮಾಪ್ನೋತಿ ಭಾರತ ॥೧೨॥

ಯಜನಂ ಯಾಜನಂ ಗತ್ವಾ ತಥೈವ ಬ್ರಹ್ಮವಾಲಕಂ ।
ಪುಷ್ಪನ್ಯಾಸಮುಪಸ್ಪೃಶ್ಯ ನ ಶೋಚೇನ್ಮರಣಂ ತತಃ ॥೧೩॥

---

೯. ಎಲೈ ರಾಜನೇ? ಮುಂದೆ ಜಗತ್ಪ್ರಸಿದ್ಧವಾದ ದೇವಿಕಾ ಕ್ಷೇತ್ರವನ್ನು ಸೇರಬೇಕು. ಅಲ್ಲಿಯೇ ಬ್ರಾಹ್ಮಣರ ಉತ್ಪತ್ತಿಯು ನಡೆಯಿತೆಂದು ಶ್ರುತಿಪ್ರಸಿದ್ಧಿಯಿರುವುದು.

೧೦. ಇಲ್ಲಿಯೇ ತ್ರಿಶೂಲಪಾಣಿಯಾದ ಶಿವನು ವಾಸಮಾಡುತ್ತಿರುವನೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯಿರುವುದು. ಆ ದೇವಿಕಾ ಕ್ಷೇತ್ರದಲ್ಲಿ ಸ್ನಾನಮಾಡಿ ಶಿವನನ್ನು ಪೂಜಿಸಬೇಕು.

೧೧. ಎಲೈ ಭರತವಂಶ ಶ್ರೇಷ್ಠನಾದ ಯುಧಿಷ್ಠಿರನೇ? ತನ್ನ ಶಕ್ತಿಗನುಗುಣವಾಗಿ ನಿವೇದನ ಮಾಡುವ ಮನುಷ್ಯನು ಸರ್ವಕಾಮ ಸಮೃದ್ಧಿ ಎಂಬ ಯಜ್ಞದ ಫಲವನ್ನು ಹೊಂದುವನು.

೧೨. ಅಲ್ಲಿಯೇ ದೇವರ್ಷಿಗಳಿಗೆ ಪೂಜ್ಯವಾದ ಕಾಮತೀರ್ಥವೆಂದು ಪ್ರಸಿದ್ಧವಾದ ರುದ್ರತೀರ್ಥವಿರುವುದು. ಅಲ್ಲಿ ಸ್ನಾನಮಾಡುವ ಮನುಷ್ಯನು ಶೀಘ್ರವಾಗಿಯೇ ಸಿದ್ಧಿಯನ್ನು ಹೊಂದುವನು.

೧೩. ಯಜನ, ಯಾಜನ, ಮತ್ತು ಬ್ರಹ್ಮವಾಲಕವೆಂಬ ಪ್ರದೇಶವನ್ನು ಸೇರಿ ಪುಷ್ಪನ್ಯಾಸತೀರ್ಥದಲ್ಲಿ ಸ್ನಾನ ಮಾಡುವವನು ಅಲ್ಲಿಂದ ಮುಂದೆ ಮರಣವನ್ನು ಕುರಿತು ದುಃಖಪಡಬೇಕಾಗಿಲ್ಲ.

ಅರ್ಧಯೋಜನವಿಸ್ತಾರಾಂ ಪಂಚಯೋಜನಮಾಯತಾಂ ।
ಏತಾವದ್ದೇವಿಕಾಮಾಹುಃ ಪುಣ್ಯಾಂ ದೇವರ್ಷಿಸಮ್ಮತಾಂ ॥೧೪॥
ತತೋ ಗಚ್ಛೇತ ಧರ್ಮಜ್ಞ ದೀರ್ಘಸತ್ರಂ ಯಥಾಕ್ರಮಂ ।
ತತ್ರ ಬ್ರಹ್ಮಾದಯೋ ದೇವಾಃ ಸಿದ್ಧಾಶ್ಚ ಪರಮರ್ಷಯಃ ॥೧೫॥
ದೀರ್ಘಸತ್ರಮುಪಾಸಂತೇ ದೀಕ್ಷಿತಾ ನಿಯತವ್ರತಾಃ ।
ಗಮನಾದೇವ ರಾಜೇಂದ್ರ ದೀರ್ಘಸತ್ರಮರಿಂದಮ ॥೧೬॥
ರಾಜಸೂಯಾಶ್ವಮೇಧಾಭ್ಯಾಂ ಫಲಂಪ್ರಾಪ್ನೋತಿ ಮಾನವಃ ।
ತತೋ ವಿನಾಶನಂ ಗಚ್ಛೇನ್ನಿಯತೋ ನಿಯತಾಶನಃ ॥೧೭॥

---

೧೪. ಈ ದೇವಿಕಾಕ್ಷೇತ್ರವು ಅರ್ಧಯೋಜನ ಅಗಲವುಳ್ಳದ್ದಾಗಿಯೂ, ಐದುಯೋಜನ ದೈರ್ಘ್ಯವುಳ್ಳದ್ದಾಗಿಯೂ, ಇರುವುದೆಂದು ದೇವರ್ಷಿಗಳು ಒಪ್ಪಿಕೊಂಡಿರುವರು.

೧೫. ಎಲೈ ಧರ್ಮಜ್ಞನಾದ ಯುಧಿಷ್ಠಿರನೇ! ಮುಂದೆ ದೀರ್ಘಸತ್ರ ಕ್ಷೇತ್ರವನ್ನು ಸೇರಬೇಕು. ಅಲ್ಲಿಯೇ ಬ್ರಹ್ಮಾದಿ ದೇವತೆಗಳೂ, ಸಿದ್ಧರೂ, ಪರಮ ಋಷಿಗಳೂ, ದೀರ್ಘಸತ್ರಗಳನ್ನು ಅನುಷ್ಠಾನ ಮಾಡಿದರು.

೧೬. ಎಲೈ ಯುಧಿಷ್ಠಿರನೇ! ಬ್ರಹ್ಮಾದಿಗಳು ದೀಕ್ಷೆಯನ್ನು ಹೊಂದಿ ವ್ರತಗ್ರಹಣಮಾಡಿ ದೀರ್ಘಸತ್ರವನ್ನನುಷ್ಠಿಸುತ್ತಿರುವ ಈ ಪ್ರದೇಶವನ್ನು ಸೇರಿದ ಮಾತ್ರದಿಂದಲೇ ರಾಜಸೂಯಾಶ್ವಮೇಧಯಾಗಗಳ ಫಲವನ್ನು ಹೊಂದುವನು.

೧೭. ಹೀಗೆ ರಾಜಸೂಯಾಶ್ವಮೇಧಯಾಗಗಳ ಫಲಗಳನ್ನು ಕೊಡುವ ಕ್ಷೇತ್ರವನ್ನು ಸೇವಿಸಿ ಮುಂದೆ ನಿಯಮದಿಂದಲೂ, ಆಹಾರ ಮಿತಿಯಿಂದಲೂ, ಕೂಡಿ ವಿನಾಶನ ಕ್ಷೇತ್ರವನ್ನು ಹೊಂದಬೇಕು.

ಗಚ್ಛತ್ಯಂತರ್ಹಿತಾ ಯತ್ರ ಮೇರು ಪೃಷ್ಠೇ ಸರಸ್ವತೀ ।
ಚಮಸೇ ಚ ಶಿವೋದ್ಭೇದೇ ನಾಗೋದ್ಭೇದೇ ಚ ದೃಶ್ಯತೇ ॥೧೮॥

ಸ್ನಾತ್ವಾ ತು ಚಮಸೋದ್ಭೇದೇ ಅಗ್ನಿಷ್ಟೋಮಫಲಂ ಲಭೇತ್ ।
ಶಿವೋದ್ಭೇದೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೧೯॥

ನಾಗೋದ್ಭೇದೇ ನರಃ ಸ್ನಾತ್ವಾ ನಾಗಲೋಕಮವಾಪ್ನುಯಾತ್ ।
ಶಶಯಾನಂ ಚ ರಾಜೇಂದ್ರ ತೀರ್ಥ ಮಾಸಾದ್ಯ ದುರ್ಲಭಂ ॥೨೦॥

ಶಶರೂಪಪ್ರತಿಚ್ಛನ್ನಾಃ ಪುಷ್ಕರಾ ಯತ್ರ ಭಾರತ ।
ಸರಸ್ವತ್ಯಾಂ ಮಹಾಭಾಗ ಅನುಸಂವತ್ಸರಂ ಹಿತೇ ॥೨೧॥

ಸ್ನಾಯಂತೇ ಭರತಶ್ರೇಷ್ಠ ವೃತಾಂ ವೈ ಕಾರ್ತಿಕೀಂ ಸದಾ ।
ತತ್ರ ಸ್ನಾತ್ವಾ ನರವ್ಯಾಘ್ರ ದ್ಯೋತತೇ ಶಿವವತ್ಸದಾ ॥೨೨॥

---

೧೮. ಈ ವಿನಾಶಕ್ಷೇತ್ರದಲ್ಲಿ ಸರಸ್ವತೀ ನದಿಯು ಗುಪ್ತಗಾಮಿನಿಯಾಗಿರುವುದು. ಮೇರುಪೃಷ್ಠವನ್ನಾಶ್ರಯಿಸಿರುವುದು. ಚಮಸಕ್ಷೇತ್ರದಲ್ಲಿಯೂ, ಶಿವೋದ್ಭೇದ ಪ್ರದೇಶದಲ್ಲಿಯೂ, ನಾಗೋದ್ಭೇದ ಪ್ರದೇಶದಲ್ಲಿಯೂ, ಅನಂತರ ಆ ಸರಸ್ವತಿಯೂ ದೃಗ್ಗೋಚರವಾಗುವುದು.

೧೯. ಚಮಸೋದ್ಭೇದ ಕ್ಷೇತ್ರದಲ್ಲಿ ಸ್ನಾನ ಮಾಡುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವನು. ಶಿವೋದ್ಭೇದ ಕ್ಷೇತ್ರದಲ್ಲಿ ಸ್ನಾನಮಾಡುವವನು, ಸಹಸ್ರಗೋದಾನದ ಫಲವನ್ನು ಹೊಂದುವನು.

೨೦. ನಾಗೋದ್ಭೇದ ತೀರ್ಥದಲ್ಲಿ ಸ್ನಾನಮಾಡುವವನು, ನಾಗಲೋಕವನ್ನು ಹೊಂದುವನು. ಮುಂದೆ ಶ್ರೇಷ್ಠವಾದ ಶಶಯಾನ ತೀರ್ಥವನ್ನು ಹೊಂದಬೇಕು.

೨೧. ಸರಸ್ವತೀ ನದಿಯ ಸಂಬಂಧಿಯಾದ ಈ ಶಶಯಾನ ತೀರ್ಥದಲ್ಲಿ ಶಶಾಕಾರದಿಂದ ಕೂಡಿರುವ ಪಕ್ಷಿವಿಶೇಷಗಳು ಪ್ರತಿಸಂವತ್ಸರದಲ್ಲಿಯೂ, ಕಾರ್ತಿಕಹುಣ್ಣಿಮೆಯಲ್ಲಿ ಸ್ನಾನಮಾಡುವುವು.

೨೨. ಹೀಗೆ ಪಕ್ಷಿಗಳಿಗೆ ಕೂಡಾ ಕಾರ್ತಿಕ ಪೌರ್ಣಮಾಸಿಯಲ್ಲಿ ಸ್ನಾನದಲ್ಲಿ ಭಕ್ತಿಯನ್ನುಂಟುಮಾಡುವ ಶಶಯಾನ ತೀರ್ಥದಲ್ಲಿ ಸ್ನಾನಮಾಡುವವನು ಶಿವನಂತೆ ಪ್ರಕಾಶಿಸುವನು.

ಗೋಸಹಸ್ರಫಲಂ ಚೈವ ಪ್ರಾಪ್ನುಯಾದ್ಭರತರ್ಷಭ ।
ಕುಮಾರಕೋಟಿಮಾಸಾದ್ಯ ನಿಯತಃ ಕುರುನಂದನ ॥೨೩॥

ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।
ಗವಾಮಯುತಮಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೨೪॥

ತತೋ ಗಚ್ಛೇತ ಧರ್ಮಜ್ಞ ರುದ್ರ ಕೋಟಿಂ ಸಮಾಹಿತಃ ।
ಪುರಾ ಯತ್ರ ಮಹಾರಾಜ ಋಷಿಕೋಟಿಃ ಸಮಾಹಿತಾ ॥೨೫॥

ತೇ ಹರ್ಷೇಣ ಸಮಾವಿಷ್ಟಾ ದೇವದರ್ಶನಕಾಂಕ್ಷಯಾ ।
ಅಹಂ ಪೂರ್ವಮಹಂ ಪೂರ್ವಂ ದ್ರಕ್ಷ್ಯಾಮಿ ವೃಷಭಧ್ವಜಂ ॥೨೬॥

ಏವಂ ಸಂಪ್ರಸ್ಥಿತಾ ರಾಜನ್ ಋಷಯಃ ಕಿಲ ಭಾರತ ।
ತತೋ ಯೋಗೀಶ್ವರೇಣಾಪಿ ಯೋಗಮಾಸ್ಥಾಯ ಭೂಪತೇ ॥೨೭॥

---

೨೩. ಎಲೈ ಭರತ ಶ್ರೇಷ್ಠನೇ! ಸಹಸ್ರಗೋದಾನದ ಫಲವನ್ನೂ ಹೊಂದುವನು. ಮುಂದೆ ಕುಮಾರಕೋಟಿತೀರ್ಥವನ್ನು ನಿಯಮಪರನಾಗಿ ಸೇವಿಸಬೇಕು.

೨೪. ಅಲ್ಲಿ ಸ್ನಾನಮಾಡಿ ಭಕ್ತಿಯಿಂದ ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುವವನು, ಹತ್ತುಸಾವಿರ ಗೋವುಗಳನ್ನು ಹೊಂದುವನು. ಮತ್ತು ತನ್ನ ವಂಶೋತ್ಪನ್ನರಾದ ಸರ್ವರನ್ನೂ ಉದ್ಧರಿಸುವನು.

೨೫. ಮುಂದೆ ರುದ್ರಕೋಟಿಕ್ಷೇತ್ರವನ್ನು ಸೇವಿಸಬೇಕು. ಇಲ್ಲಿಯೇ ಪೂರ್ವದಲ್ಲಿ ಕೋಟಿ ಋಷಿಗಳು ಏಕಾಗ್ರಚಿತ್ತರಾಗಿ ಈಶ್ವರನನ್ನು ಉಪಾಸಿಸುತ್ತಿದ್ದರು.

೨೬. ಆ ಕೋಟಿಮುನಿಗಳಲ್ಲಿ ಪ್ರತಿಯೊಬ್ಬರೂ, ಶಿವನನ್ನು ನಾನು ಮುಂದೆ ಸಾಕ್ಷಾತ್ಕರಿಸಬೇಕು, ನಾನು ಮುಂದೆ ಸಾಕ್ಷಾತ್ಕರಿಸಬೇಕು ಎಂದು ಅತಿ ಸಂತೋಷದಿಂದ ತ್ವರೆಗೊಳ್ಳುತ್ತಿದ್ದರು.

೨೭. ಹೀಗೆ ತ್ವರೆಯಿಂದ ನುಗ್ಗುತ್ತಿರುವ ಋಷಿಗಳನ್ನು ನೋಡಿ ಯೋಗೀಶ್ವರನಾದ ಶಿವನು ಯೋಗಶಕ್ತಿಯನ್ನಾಶ್ರಯಿಸಿದನು.

ತೇಷಾಂ ಮನ್ಯುಪ್ರಶಾಂತ್ಯರ್ಥಮೃಷೀಣಾಂ ಭಾವಿತಾತ್ಮನಾಂ ।
ಸೃಷ್ಟ್ವಾ ತು ಕೋಟಿರುದ್ರಾಣಾಮೃಷೀಣಾ ಮಗ್ರತಃ ಸ್ಥಿತಃ ॥೨೮॥
ಮಯಾ ಪೂರ್ವಂ ಹರೋ ದೃಷ್ಟ ಇತಿ ತೇ ಮೇನಿರೇ ಪೃಥಕ್ ।
ತೇಷಾಂ ತುಷ್ಟೋ ಮಹಾದೇವ ಋಷೀಣಾ ಮುಗ್ರತೇಜಸಾಂ ।
ಭಕ್ತ್ಯಾ ಪರಮಯಾ ರಾಜನ್ ವರಂ ತೇಷಾಂ ಪ್ರದತ್ತವಾನ್ ॥೨೯॥
ಅದ್ಯಪ್ರಭೃತಿ ಯುಷ್ಮಾಕಂ ಧರ್ಮವೃದ್ಧಿರ್ಭವಿಷ್ಯತಿ ।
ತತ್ರ ಸ್ನಾತ್ವಾ ನರವ್ಯಾಘ್ರ ರುದ್ರಕೋಟ್ಯಾಂ ನರಃ ಶುಚಿಃ ॥೩೦॥
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ತತೋ ಗಚ್ಛೇತ ರಾಜೇಂದ್ರ ಸಂಗಮಂ ಲೋಕವಿಶ್ರುತಂ ॥೩೧॥
ಸರಸ್ವತ್ಯಾಂ ಮಹಾಪುಣ್ಯಮುಪಾಸೀತ ಜನಾರ್ದನಂ ।
ಯತ್ರ ಬ್ರಹ್ಮಾದಯೋದೇವಾ ಋಷಯಃ ಸಿದ್ಧಚಾರಣಾಃ ॥೩೨॥

---

೨೮. ನಿರಂತರ ಧ್ಯಾನದಿಂದ ಸಂಸ್ಕೃತಚಿತ್ತರಾದ ಆ ಮುನಿಗಳ ದುಃಖಪರಿಹಾರಾರ್ಥವಾಗಿ ಶಿವನು ಒಬ್ಬೊಬ್ಬ ಮುನಿಗಳ ಮುಂಭಾಗ ದಲ್ಲೂ ಒಬ್ಬೊಬ್ಬ ಈಶ್ವರನನ್ನು ಸೃಷ್ಟಿಸಿದನು.

೨೯. ನಾನು ಮೊದಲು ಈಶ್ವರನನ್ನು ನೋಡಿದೆನು, ತಾನು ಮೊದಲು ಈಶ್ವರನನ್ನು ನೋಡಿದೆನು ಎಂದು ತಿಳಿದಿರುವ ಮಹಾತೇಜಸ್ವಿ ಗಳಾದ ಮುನಿಗಳ ಭಕ್ತಿಯನ್ನು ನೋಡಿ, ಸಂತುಷ್ಟನಾದ ಶಿವನು ಅವ ರಿಗೆ ಮುಂದಿನ ವರವನ್ನು ಕೊಟ್ಟನು.

೩೦–೩೧. ಇಲ್ಲಿಂದ ಮುಂದೆ ನಿಮ್ಮ ಧರ್ಮವು ಬೆಳೆಯುತ್ತಾ, ಬರುವುದು ಎಂದನು. ಹೀಗೆ ಪ್ರಸಿದ್ಧವಾಗಿರುವ, ಈ ರುದ್ರಕೋಟಿಯಲ್ಲಿ ಮನುಷ್ಯನು ಶುಚಿಯಾಗಿದ್ದುಕೊಂಡು ಸ್ನಾನವನ್ನು ಮಾಡಬೇಕು. ಹೀಗೆ ಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು. ವಂಶ ವನ್ನು ಮೇಲಕ್ಕೆ ಎತ್ತುವನು. ಮುಂದೆ ಜಗತ್ಪ್ರಸಿದ್ಧವಾದ ಸಂಗಮ ವನ್ನು ಸೇರಬೇಕು.

೩೨–೩೩. ಆ ಸರಸ್ವತೀ ಸಂಗಮದಲ್ಲಿ ಮಹಾಪುಣ್ಯವನ್ನು ಕೊಡುವ ಜನಾರ್ದನನನ್ನು ಸೇವಿಸಬೇಕು. ಇಲ್ಲಿ ಬ್ರಹ್ಮಾದಿ ದೇವತೆಗಳೂ, ಮುನಿ

ಅಭಿಗಚ್ಛಂತಿ ರಾಜೇಂದ್ರ ಚೈತ್ರೀ ಶುಕ್ಲ ಚತುರ್ದಶೀಂ ।
ತತ್ರ ಸ್ನಾತ್ವಾ ನರವ್ಯಾಘ್ರ ವಿಂದೇದ್ಬಹುಸುವರ್ಣಕಂ ॥೩೩॥
ಸರ್ವಪಾಪವಿಶುದ್ಧಾತ್ಮಾ ಶಿವಲೋಕಂ ಸ ಗಚ್ಛತಿ ।
ಋಷೀಣಾಂ ಯತ್ರ ಸತ್ರಾಣಿ ಸಮಾಪ್ತಾನಿ ನರಾಧಿಪ ।
ತತ್ರಾವಸಾನಮಾಸಾದ್ಯ ಗೋಸಹಸ್ರಫಲಂ ಲಭೇತ್ ॥೩೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಪಂಚವಿಂಶೋಽಧ್ಯಾಯಃ

---

ಗಳೂ, ಸಿದ್ಧರೂ, ಚಾರಣರೂ, ಚೈತ್ರ ಶುಕ್ಲ ಹುಣ್ಣಿಮೇ ದಿವಸ ಬಂದು ಸೇರುವರು. ಹೀಗೆ ಬ್ರಹ್ಮಾದಿಗಳಿಗೆ ಅಭಿಗಮ್ಯವಾದ ಈ ಸರಸ್ವತೀ ಸಂಗಮದಲ್ಲಿ ಸ್ನಾನಮಾಡುವವನು ಬಹು ಸುವರ್ಣವನ್ನು ಹೊಂದುವನು.

೩೪. ಮತ್ತು ಸರ್ವಪಾಪಗಳನ್ನೂ ಕಳೆದು ಶಿವಲೋಕವನ್ನು ಸೇರುವನು. ಅನೇಕಮುನಿಗಳು ಬಹಳಯಾಗಗಳನ್ನು ಪೂರ್ಣವಾಗಿ ಅನುಷ್ಠಾನ ಮಾಡಿರುವ, ಈ ದೇಶದಲ್ಲಿ ಮೃತಿಯನ್ನು ಹೊಂದುವವನು ಸಹಸ್ರ ಗೋದಾನದ ಫಲವನ್ನು ಹೊಂದುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಷಟ್‌ವಿಂಶೋಽಧ್ಯಾಯಃ

॥ ನಾರದ ಉವಾಚ ॥

**ತತೋ ಗಚ್ಛೇತ ರಾಜೇಂದ್ರ ಕುರುಕ್ಷೇತ್ರಮಭಿಷ್ಟುತಂ ।**
**ಪಾಪೇಭ್ಯೋ ವಿಪ್ರಮುಚ್ಯಂತೆ ತದ್ಗತಾಃ ಸರ್ವಜಂತವಃ ॥ ೧ ॥**

**ಕುರುಕ್ಷೇತ್ರಂಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಂ ।**
**ಯ ಏವಂ ಸತತಂ ಬ್ರೂಯಾತ್ಸರ್ವಪಾಪೈಃ ಪ್ರಮುಚ್ಯತೇ ॥ ೨ ॥**

**ತತ್ರ ಮಾಸಂ ವಸೇದ್ಧೀರಃ ಸರಸ್ವತ್ಯಾಂ ನರಾಧಿಪ ।**
**ಯತ್ರ ಬ್ರಹ್ಮಾದಯೋದೇವಾ ಯತ್ರ ಬ್ರಹ್ಮರ್ಷಿಚಾರಣಾಃ ॥ ೩ ॥**

---

ಪದ್ಮಪುರಾಣದ ಇಪ್ಪತ್ತಾರನೆಯ ಅಧ್ಯಾಯವು

೧. ನಾರದನು ಹೇಳಿದನು: ಎಲೈ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಮುಂದೆ ಶ್ರೇಷ್ಠವಾದ ಕುರುಕ್ಷೇತ್ರವನ್ನು ಹೊಂದಬೇಕು. ಯಾವ ಪ್ರಾಣಿಗಳೇ ಆಗಲೀ, ಈ ಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದಲೇ ಸರ್ವಪಾಪಗಳಿಂದಲೂ ಮುಕ್ತವಾಗುವುವು.

೨. ಕುರುಕ್ಷೇತ್ರವನ್ನು ಹೊಂದುವೆನು. ಕುರುಕ್ಷೇತ್ರದಲ್ಲಿ ವಾಸಮಾಡುವೆನು, ಎಂಬುದಾಗಿ ಯಾವಾಗಲೂ ಹೇಳುತ್ತಿರುವವನೂ ಕೂಡ ಸರ್ವಪಾಪಗಳನ್ನೂ ಕಳೆದುಕೊಳ್ಳುವನು.

೩. ಆ ಕುರುಕ್ಷೇತ್ರದಲ್ಲಿ ಸರಸ್ವತೀನದಿಯ ತೀರದಲ್ಲಿ ಒಂದು ತಿಂಗಳು ವಾಸಮಾಡಬೇಕು. ಈ ಕುರುಕ್ಷೇತ್ರದಲ್ಲಿ ಬ್ರಹ್ಮಾದಿದೇವತೆಗಳೂ, ಬ್ರಹ್ಮರ್ಷಿಗಳೂ, ಚಾರಣರೂ, ಬಂದು ವಾಸಿಸುವರು.

ಗಂಧರ್ವಾಪ್ಸರಸೋ ಯಕ್ಷಾಃ ಪನ್ನಗಾಶ್ಚ ಮಹೀಪತೇ ।
ಬ್ರಹ್ಮಕ್ಷೇತ್ರಂ ಮಹಾಪುಣ್ಯಮಭಿಗಚ್ಛಂತಿ ಭಾರತೇ ॥ ೪ ॥
ಮನಸಾಪ್ಯಭಿಕಾಮಸ್ಯ ಕುರಕ್ಷೇತ್ರಂ ಯುಧಿಷ್ಠಿರ ।
ಪಾಪಾನಿ ವಿಪ್ರಣಶ್ಯಂತಿ ಬ್ರಹ್ಮಲೋಕಂ ಚ ಗಚ್ಛತಿ ॥ ೫ ॥
ಗತ್ವಾ ಚ ಶ್ರದ್ಧಯಾ ಯುಕ್ತಃ ಕುರುಕ್ಷೇತ್ರಂ ಕುರೂದ್ವಹ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥ ೬ ॥
ತತೋ ಮತ್ತರ್ಣಕಂ ರಾಜನ್ ದ್ವಾರಪಾಲಂ ಮಹಾಬಲಂ ।
ಯಂ ವೈ ಸಮಭಿವಾದ್ಯೈವ ಗೋಸಹಸ್ರಫಲಂ ಲಭೇತ್ ॥ ೭ ॥
ತತೋ ಗಚ್ಛೇತ ಧರ್ಮಜ್ಞ ವಿಷ್ಣೋಃ ಸ್ಥಾನಮನುತ್ತಮಂ ।
ಸತತಂ ನಾಮ ರಾಜೇಂದ್ರ ಯತ್ರ ಸನ್ನಿಹಿತೋ ಹರಿಃ ॥ ೮ ॥

---

೪. ಎಲೈ ಯುಧಿಷ್ಠಿರನೇ! ಗಂಧರ್ವರೂ, ಅಪ್ಸರಸ್ತ್ರೀಯರೂ, ಯಕ್ಷರೂ, ಪನ್ನಗರೂ, ಪುಣ್ಯತಮವಾದ ಈ ಬ್ರಹ್ಮಕ್ಷೇತ್ರವನ್ನು ಸೇರಿ ಸಂತೋಷಪಡುವರು.

೫. ಕುರುಕ್ಷೇತ್ರವನ್ನು ಮನಸ್ಸಿನಲ್ಲಿಯೇ ನೆನೆಸಿದರೂ ಸರಿಯೇ ಪಾಪಗಳನ್ನೆಲ್ಲಾ ನೀಗಿ ಬ್ರಹ್ಮಲೋಕವನ್ನು ಸೇರುವನು.

೬. ಶ್ರದ್ಧೆಯಿಂದ ಕುರುಕ್ಷೇತ್ರವನ್ನು ಸೇರುವವನು ರಾಜಸೂಯ ಮತ್ತು ಅಶ್ವಮೇಧಯಾಗಗಳ ಫಲವನ್ನು ಹೊಂದುವನು.

೭. ಅನಂತರ ಮಹಾಬಲಶಾಲಿಯಾದ, ದ್ವಾರರಕ್ಷಕನಾದ ಮತ್ತರ್ಣಕನನ್ನು ನಮಸ್ಕರಿಸುವವನು ಸಾವಿರ ಗೋದಾನದ ಫಲವನ್ನು ಹೊಂದುವನು.

೮. ಎಲೈ ಧರ್ಮಜ್ಞನಾದ ಯುಧಿಷ್ಠಿರನೇ! ಮುಂದೆ ಶ್ರೇಷ್ಠವಾದ ವಿಷ್ಣುಸ್ಥಾನವನ್ನು ಸೇರಬೇಕು. ಅಲ್ಲಿ ಯಾವಾಗಲೂ, ಶ್ರೀ ಹರಿಯು ಸನ್ನಿಹಿತನಾಗಿರುವನು.

ತತ್ರ ಸ್ನಾತ್ವಾ ಚ ದೃಷ್ಟ್ವಾ ಚ ತ್ರಿಲೋಕಪ್ರಭವಂ ಹರಿಂ ।
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೯ ॥

ತತಃ ಪಾರಿಪ್ಲವಂ ಗಚ್ಛೇತ್ತೀರ್ಥಂ ತ್ರೈಲೋಕ್ಯ ವಿಶ್ರುತಂ ।
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಮಾನವಃ ॥೧೦॥

ಪೃಥಿವ್ಯಾಸ್ತೀರ್ಥಮಾಸಾದ್ಯ ಗೋಸಹಸ್ರಫಲಂ ಲಭೇತ್ ।
ತತಃ ಶಾಲ್ವಿಕಿನಂ ಗತ್ವಾ ತೀರ್ಥಸೇವೀ ನರಾಧಿಪ ॥೧೧॥

ದಶಾಶ್ವಮೇಧಿಕೇ ಸ್ನಾತ್ವಾ ತದೇವ ಲಭತೇ ಫಲಂ ।
ಸರ್ಪಿರ್ನದೀಂ ಸಮಾಸಾದ್ಯ ನಾಗಾನಾಂ ತೀರ್ಥ ಮುತ್ತಮಂ॥೧೨॥

---

೯. ಅಲ್ಲಿ ಸ್ನಾನವನ್ನು ಮಾಡಿ ಶ್ರೀ ಹರಿಯ ದರ್ಶನವನ್ನು ಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು. ಮತ್ತು ವಿಷ್ಣುಲೋಕವನ್ನೂ ಹೊಂದುವನು.

೧೦. ಅನಂತರ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ಪಾರಿಪ್ಲವತೀರ್ಥವನ್ನು ಸೇವಿಸುವವನು ಅಗ್ನಿಷ್ಟೋಮ, ಅತಿರಾತ್ರಗಳೆಂಬ ಯಾಗಗಳ ಫಲವನ್ನು ಹೊಂದುವನು.

೧೧. ಮುಂದೆ ಪೃಥಿವೀತೀರ್ಥವನ್ನು ಸೇವಿಸುವವನು ಸಹಸ್ರಗೋದಾನದ ಫಲವನ್ನು ಹೊಂದುವನು. ಮುಂದೆ ಶಾಲ್ವಿಕಿ ಕ್ಷೇತ್ರವನ್ನು ಸೇರಬೇಕು.

೧೨. ಹಾಗೆಯೇ ದಶಾಶ್ವಮೇಧಿಕ ಕ್ಷೇತ್ರದಲ್ಲಿ ಸ್ನಾನಮಾಡುವವನು ದಶಾಶ್ವಮೇಧಯಾಗದ ಫಲವನ್ನೇ ಹೊಂದುವನು. ಮುಂದೆ ಸರ್ಪಿನದಿಯನ್ನು ಹೊಂದಿ ನಾಗತೀರ್ಥವನ್ನು ಸೇವಿಸಬೇಕು.

ಅಗ್ನಿಷ್ಟೋಮಮವಾಪ್ನೋತಿ ನಾಗಲೋಕಂ ಚ ಗಚ್ಛತಿ ।
ತತೋ ಗಚ್ಛೇತ ಧರ್ಮಜ್ಞ ದ್ವಾರಪಾಲಮತರ್ಣಕಂ ।
ಉಪೋಷ್ಯ ರಜನೀಮೇಕಾಂ ಗೋಸಹಸ್ರಫಲಂ ಲಭೇತ್ ॥೧೩॥

ತತಃ ಪಂಚನದಂ ಗತ್ವಾ ನಿಯತೋ ನಿಯತಾಶನಃ ।
ಕೋಟಿತೀರ್ಥಮುಪಸ್ಪೃಶ್ಯ ಹಯಮೇಧಫಲಂ ಲಭೇತ್ ॥೧೪॥

ಅಶ್ವಿನೋಸ್ತೀರ್ಥ ಮಾಸಾದ್ಯ ರೂಪವಾನಭಿಜಾಯತೇ ।
ತತೋ ಗಚ್ಛೇತ ಧರ್ಮಜ್ಞ ವಾರಾಹಂ ತೀರ್ಥಮುತ್ತಮಂ ॥೧೫॥
ವಿಷ್ಣುರ್ವರಾಹರೂಪೇಣ ಪುರಾ ಯತ್ರ ಸ್ಥಿತೋಽಭವತ್ ।
ತತ್ರ ಸ್ಥಿತ್ವಾ ನರವ್ಯಾಘ್ರ ಅಗ್ನಿಷ್ಟೋಮಫಲಂ ಲಭೇತ್ ॥೧೬॥
ತತೋ ಜಯಿನ್ಯಾಂ ರಾಜೇಂದ್ರ ಸೋಮತೀರ್ಥಂ ಸಮಾವಿಶೇತ್ ।
ಸ್ನಾತ್ವಾ ಫಲಮವಾಪ್ನೋತಿ ರಾಜಸೂಯಸ್ಯ ಮಾನವಃ ॥೧೭॥

---

೧೩. ಹೀಗೆ ಮಾಡುವವನು ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು. ಮತ್ತು ನಾಗಲೋಕವನ್ನೂ ಹೊಂದುವನು. ಅಲ್ಲಿಂದ ಮುಂದೆ ಅತರ್ಣಕವೆಂಬ ದ್ವಾರಪಾಲಕ್ಷೇತ್ರವನ್ನು ಹೊಂದಿ ಅಲ್ಲಿ ಒಂದು ರಾತ್ರಿಯಲ್ಲಿ ವಾಸಿಸುವವನು ಗೋಸಹಸ್ರದಾನದ ಫಲವನ್ನು ಹೊಂದುವನು.

೧೪. ಮುಂದೆ ಪಂಚನದಕ್ಷೇತ್ರವನ್ನು ಹೊಂದಿ ಶೌಚಾದಿಗಳಿಂದ ಕೂಡಿ ಆಹಾರನಿಯಮವನ್ನು ಹೊಂದಿ ಕೋಟಿತೀರ್ಥದಲ್ಲಿ ಸ್ನಾನಮಾಡುವವನು ಅಶ್ವಮೇಧ ಯಾಗದ ಫಲವನ್ನು ಹೊಂದುವನು.

೧೫. ಮುಂದೆ ಅಶ್ವಿನೀತೀರ್ಥವನ್ನು ಹೊಂದಿ ಸ್ನಾನಾದಿಗಳನ್ನಾಚರಿಸುವವನು ಸೌಂದರ್ಯಶಾಲಿಯಾಗುವನು. ಮುಂದೆ ವರಾಹತೀರ್ಥವನ್ನು ಸೇವಿಸಬೇಕು.

೧೬. ಇಲ್ಲಿಯೇ ಹಿಂದೆ ವಿಷ್ಣುವು ವರಾಹರೂಪವನ್ನು ತಾಳಿದನು. ಇಲ್ಲಿ ಇದ್ದಮಾತ್ರದಿಂದಲೇ ಅಗ್ನಿಷ್ಟೋಮ ಯಾಗದ ಫಲವನ್ನು ಹೊಂದುವನು.

೧೭. ಮುಂದೆ ಜಯಿನೀಕ್ಷೇತ್ರದಲ್ಲಿರುವ ಸೋಮತೀರ್ಥದಲ್ಲಿ ಸ್ನಾನಮಾಡುವವನು ರಾಜಸೂಯಯಾಗದ ಫಲವನ್ನು ಹೊಂದುವನು.

ಏಕಧ್ವಂಸೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ।
ಕೃತಶೌಚಂ ಸಮಾಸಾದ್ಯ ತೀರ್ಥಸೇವೀ ಕುರೂದ್ವಹ ।
ಪುಂಡರೀಕಮವಾಪ್ನೋತಿ ಕೃತಶೌಚೋ ಭವೇಚ್ಛುಚಿಃ ॥೧೮॥
ತತೋ ಮುಂಜೀವಟಂ ನಾಮ ಮಹಾದೇವಸ್ಯ ಧೀಮತಃ ।
ತತ್ರೋಷ್ಯ ರಜನೀಮೇಕಾಂ ಗಾಣಪತ್ಯಮವಾಪ್ನುಯಾತ್ ॥೧೯॥
ತತ್ರೈವ ಚ ಮಹಾರಾಜ ಜಯಾಂ ಲೋಕ ಪರಿಶ್ರುತಾಂ ।
ಸ್ನಾತ್ವಾಽಭಿಗಮ್ಯ ರಾಜೇಂದ್ರ ಸರ್ವಕಾಮಾನವಾಪ್ನುಯಾತ್ ॥೨೦॥
ಕುರುಕ್ಷೇತ್ರಸ್ಯ ತದ್ದ್ವಾರಂ ವಿಶ್ರುತಂ ಭರತರ್ಷಭ ।
ಪ್ರದಕ್ಷಿಣಮುಪಾವೃತ್ಯ ತೀರ್ಥಸೇವೀ ಸಮಾವೃತಃ ॥೨೧॥
ಸಂಸ್ಮೃತ್ಯ ಪುಷ್ಕರಾಣಾಂ ತು ಸ್ನಾತ್ವಾರ್ಚ್ಯ ಪಿತೃದೇವತಾಃ ।
ಜಾಮದಗ್ನ್ಯೇನ ರಾಮೇಣ ಆಹೂತೋ ವೈ ಮಹಾತ್ಮನಾ ।
ಕೃತಕೃತ್ಯೋ ಭವೇದ್ರಾಜನ್ ಅಶ್ವಮೇಧಂ ಚ ವಿಂದತೇ ॥೨೨॥

---

೧೮. ಏಕಧ್ವಂಸತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರಗೋ ದಾನ ಫಲವನ್ನು ಹೊಂದುವನು. ಮುಂದೆ ಕೃತಶೌಚಕ್ಷೇತ್ರವನ್ನು ಹೊಂದಿ ಆ ತೀರ್ಥವನ್ನು ಸೇವಿಸುವವನು ಪೌಂಡರೀಕಯಾಗದ ಫಲವನ್ನು ಹೊಂದುವನು. ಶುದ್ಧನೂ ಆಗುವನು.

೧೯. ಮುಂಜೀವಟವೆಂಬ ಮಹಾದೇವಕ್ಷೇತ್ರದಲ್ಲಿ ಒಂದುರಾತ್ರಿ ಯಲ್ಲಿ ವಾಸಿಸುವವನೂ ಕೂಡ ಗಣಾಧಿಪತ್ಯವನ್ನು ಹೊಂದುವನು.

೨೦. ಅಲ್ಲಿಯೇ ಜಗತ್ತಿನಲ್ಲಿ ಪ್ರಸಿದ್ಧವಾಗ ಜಯಾತೀರ್ಥವಿರುವುದು. ಅಲ್ಲಿ ಸ್ನಾನಮಾಡುವವನು ಸಕಲವಾದ ಇಷ್ಟಾರ್ಥವನ್ನೂ ಹೊಂದುವನು.

೨೧. ಎಲೈ ಭರತವಂಶೋತ್ಪನ್ನನಾದ ಯುಧಿಷ್ಠಿರನೇ! ಅದೇ ಕುರುಕ್ಷೇತ್ರಕ್ಕೆ ಬಾಗಿಲು. ಈ ಪ್ರಸಿದ್ಧವಾದ ಕ್ಷೇತ್ರವನ್ನು ಪ್ರದಕ್ಷಿಣೆ ಮಾಡಿ ತೀರ್ಥವನ್ನು ಸೇವಿಸಬೇಕು.

೨೨. ಅಲ್ಲಿ ಪುಷ್ಕರತೀರ್ಥಗಳನ್ನು ಸ್ಮರಿಸುತ್ತಾ ಸ್ನಾನಮಾಡಿ ಪಿತೃ ದೇವತೆಗಳನ್ನು ಪೂಜಿಸುತ್ತಾ, ಮಹಾತ್ಮನಾದ ಪರಶುರಾಮನ ಪ್ರೀತಿ ಯನ್ನು ಸಂಪಾದಿಸುವವನು ಅಶ್ವಮೇಧಯಾಗದ ಫಲವನ್ನು ಹೊಂದಿ ಕೃತಕೃತ್ಯನಾಗುವನು.

ತತೋ ರಾಮ ಹ್ರದಂ ಗಚ್ಛೇತ್ತೀರ್ಥಸೇವೀ ನರಾಧಿಪ ।
ಯತ್ರ ರಾಮೇಣ ರಾಜೇಂದ್ರ ತಪಸಾ ದೀಪ್ತತೇಜಸಾ ॥೨೩॥
ಕ್ಷತ್ರಮುತ್ಸಾರ್ಯ ವೀರ್ಯೇಣ ಹ್ರದಾಃ ಪಂಚ ನಿವೇಶಿತಾಃ ।
ಪೂರಯಿತ್ವಾ ನರವ್ಯಾಘ್ರ ರುಧಿರೇಣೇತಿ ನಃ ಶ್ರುತಂ ॥೨೪॥
ಪಿತರಸ್ತರ್ಪಿತಾಃ ಸರ್ವೇ ತಥೈವ ಪ್ರಪಿತಾಮಹಾಃ ।
ತತಸ್ತೇ ಪಿತರಃ ತೃಪ್ತಾ ರಾಮಮೂಚುರ್ಮಹೀಪತೇ ॥೨೫॥
ರಾಮ ರಾಮ ಮಹಾಭಾಗ ಪ್ರೀತಾಃ ಸ್ಮ ತವ ಭಾರ್ಗವ ।
ಅನಯಾ ಪಿತೃಭಕ್ತ್ಯಾ ಚ ವಿಕ್ರಮೇಣ ಚ ತೇಽನಘ ॥೨೬॥
ವರಂ ವೃಣೀಷ್ವ ಭದ್ರಂ ತೇ ಕಿಮಿಚ್ಛಸಿ ಮಹಾಮತೇ ।
ಏವಮುಕ್ತಃ ಸ ರಾಜೇಂದ್ರ ರಾಮಃ ಪ್ರವದತಾಂ ವರಃ ॥೨೭॥
ಅಬ್ರವೀತ್ಪ್ರಾಂಜಲಿರ್ವಾಕ್ಯಂ ಪಿತೄನ್ ಸ ಗಗನೇ ಸ್ಥಿತಾನ್ ।
ಭವಂತೋ ಯದಿ ಮೇ ಪ್ರೀತಾ ಯದ್ಯನುಗ್ರಾಹ್ಯತಾ ಮಯಿ ॥೨೮॥

---

೨೩–೨೪. ಮುಂದೆ ಯಾತ್ರಿಕನು ರಾಮಹ್ರದವನ್ನು ಸೇವಿಸಬೇಕು. ಇಲ್ಲಿಯೇ ಪರಶುರಾಮನು ತಪಸ್ಸಿನಿಂದ ಪ್ರಕಾಶಿಸುತ್ತಾ ಅತಿಘೋರವಾದ ಕಾರ್ಯವನ್ನು ನಡೆಯಿಸಿದನು. ಅದೇನೆಂದರೆ: ಪರಶುರಾಮನು ಕ್ಷತ್ರಿಯ ಜಾತಿಯನ್ನೇ ತನ್ನ ಸಾಮರ್ಥ್ಯದಿಂದ ಬುಡಸಮೇತವಾಗಿ ನಾಶಮಾಡಿ ಐದುಕೊಳಗಳನ್ನು ರಕ್ತದಿಂದ ಪೂರ್ಣಮಾಡಿದನೆಂದು ನಮ್ಮೆಲ್ಲರಿಗೂ ತಿಳಿದುಬಂದಿರುವುದು.

೨೫. ಎಲೈ ರಾಜನೇ ಹಾಗೆ ಪೂರ್ಣವಾದ ಆ ರಕ್ತದಿಂದ ಪಿತೃಗಳನ್ನೂ ಪ್ರಪಿತಾಮಹರನ್ನೂ, ತೃಪ್ತಿಪಡಿಸಿದನು. ಅನಂತರ ತೃಪ್ತರಾದ ಆ ಪಿತೃಗಳು ರಾಮನನ್ನು ಕುರಿತು ಹೀಗೆ ಹೇಳಿದರು.

೨೬. ಎಲೈ ಭಾಗ್ಯಶಾಲಿಯಾದ ಭೃಗುವಂಶೋತ್ಪನ್ನನಾದ ರಾಮನೇ ನಿನ್ನ ಈ ಪಿತೃಭಕ್ತಿಗೂ, ಪರಾಕ್ರಮಕ್ಕೂ ನಾವು ಮೆಚ್ಚಿರುವೆವು.

೨೭–೨೮. ಎಲೈ ಯುಧಿಷ್ಠಿರನೇ! ಕೇಳು. ಎಲೈ ಮಹಾಮೇಧಾವಿಯಾದ ರಾಮನೇ! ನಿನಗೆ ಇಷ್ಟವಾದ ಶುಭವಾದ ವರವನ್ನು ಕೇಳಿಕೋ. ಎಂಬುದಾಗಿ ಅವರು ಹೇಳಲು ಪರಶುರಾಮನು ಕೈಮುಗಿದುಕೊಂಡು ಅಂತರಿಕ್ಷದಲ್ಲಿರುವ ಪಿತೃಗಳನ್ನು ಕುರಿತು ಹೇಳಿದನು. ಎಲೈ ಪಿತೃಗಳೇ ನೀವು ಪ್ರೀತರಾಗಿ ನನಗೆ ಅನುಗ್ರಹ ಮಾಡಬೇಕೆಂದಿದ್ದೀರಿ.

ಪಿತೃಪ್ರಸಾದಾದಿಚ್ಛೇಯಂ ತಪಸಾಪ್ಯಾಯನಂ ಪುನಃ ।
ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾರಿತಂ ಮಯಾ ॥೨೯॥
ತತಶ್ಚ ಪಾಪಾನ್ಮುಚ್ಯೇಯಂ ಯುಷ್ಮಾಕಂ ತೇಜಸಾಪ್ಯಹಂ ।
ಹ್ರದಾಶ್ಚ ತೀರ್ಥಭೂತಾ ಮೇ ಭವೇಯುರ್ಭುವಿ ವಿಶ್ರುತಾಃ ॥೩೦॥
ಏತಚ್ಛ್ರುತ್ವಾ ಶುಭಂ ವಾಕ್ಯಂ ರಾಮಸ್ಯ ಪಿತರಸ್ತಥಾ ।
ಪ್ರತ್ಯೂಚುಃ ಪರಮಪ್ರೀತಾ ರಾಮಂ ತೋಷಸಮನ್ವಿತಾಃ ॥೩೧॥
ತಪಸ್ತೇ ವರ್ಧತಾಂ ಭೂಯಃ ಪಿತೃಭಕ್ತ್ಯಾ ವಿಶೇಷತಃ ।
ಯಚ್ಚ ರೋಷಾಭಿಭೂತೇನ ಕ್ಷತ್ರಮುತ್ಸಾದಿತಂ ತ್ವಯಾ ॥೩೨॥
ತತಶ್ಚ ಪಾಪಾನ್ಮುಕ್ತಸ್ತ್ವಂ ನಿಹತಾಸ್ತೇ ಸ್ವಕರ್ಮಣಾ ।
ಹ್ರದಾಶ್ಚ ತವ ತೀರ್ಥ ತ್ವಂ ಗಮಿಷ್ಯಂತಿ ನ ಸಂಶಯಃ ॥೩೩॥

---

೨೯–೩೦. ಪಿತೃಗಳಾದ ನಿಮ್ಮ ಅನುಗ್ರಹದಿಂದ ತಪಸ್ಸ್ಪೃಪ್ತಿ ಯುಂಟಾಗಲೆಂದು ಅಪೇಕ್ಷಿಸುತ್ತೇನೆ. ಮತ್ತು ಕೋಪದಿಂದ ವಿವೇಕ ಹೀನನಾಗಿ ಕ್ಷತ್ರಿಯ ಜಾತಿಯನ್ನೇ ನಾಶಮಾಡಿದನಷ್ಟೆ! ನಿಮ್ಮ ಮಹಿಮೆಯು ಆ ಪಾಪದಿಂದ ಕೂಡ ನನ್ನನ್ನು ಬಿಡಿಸಲಿ. ಮತ್ತು ಈ ರಕ್ತ ಸರೋವರಗಳು ತೀರ್ಥಗಳಾಗಿ ಪರಿಣಮಿಸಲಿ, ಎಂದನು.

೩೧. ಈ ರೀತಿಯಾಗಿ ಪರುಶುರಾಮನ ವಾಕ್ಯವನ್ನು ಕೇಳಿ ಸಂತುಷ್ಟ ರಾದ ಆ ಪಿತೃಗಳು ಮುಂದೆ ಹೇಳುವಂತೆ ಶುಭವಾದ ವಾಕ್ಯವನ್ನು ಹೇಳಿದರು.

೩೨–೩೩. ನಿನ್ನ ಕೋರಿಕೆಯಂತೆ ತಪಸ್ಸು ಹೆಚ್ಚಿ ನಿನಗೆ ಸಂತೋಷ ವನ್ನು ಉಂಟುಮಾಡಲಿ. ಅದರಲ್ಲಿಯೂ, ನಿನಗಿರುವ ಪಿತೃಭಕ್ತಿಯು ಆ ತಪಸ್ಸನ್ನು ಮತ್ತಷ್ಟು ಬೆಳೆಯಿಸಲಿ. ಅಲ್ಲದೇ ಕೋಪಗೊಂಡು ಕ್ಷತ್ರಿಯರನ್ನು ನಾಶಮಾಡಿದೆಯಷ್ಟೆ, ಆ ಪಾಪದಿಂದಲೂ, ಕೂಡ ನೀನು ಮುಕ್ತನಾಗುವೆ. ಏಕೆಂದರೆ: ಆ ಕ್ಷತ್ರಿಯರು ತಮ್ಮ ಕೃತ್ಯದಿಂದಲೇ ತಾವು ಹಾಳಾಗಿರುವರು. ಈ ಪಂಚಹ್ರದಗಳೂ, ತೀರ್ಥಗಳಾಗುವುವು. ಇದರಲ್ಲಿ ಸಂದೇಹವಿಲ್ಲ.

ಹ್ರದೇಷ್ವೇತೇಷು ಯಃ ಸ್ನಾತ್ವಾ ಪಿತೄನ್ಸಂತರ್ಪಯಿಷ್ಯತಿ ।
ಪಿತರಸ್ತಸ್ಯ ವೈ ಪ್ರೀತಾ ದಾಸ್ಯಂತಿ ಭುವಿ ದುರ್ಲಭಂ ॥೩೪॥

ಈಪ್ಸಿತಂ ಮನಸಃ ಕಾಮಂ ಸ್ವರ್ಗಲೋಕಂ ಚ ಶಾಶ್ವತಂ ।
ಏವಂ ದತ್ವಾ ವರಂ ರಾಜನ್ ರಾಮಸ್ಯ ಪಿತರಸ್ತದಾ ॥೩೫॥

ಆಮಂತ್ರ್ಯ ಭಾರ್ಗವಂ ಪ್ರೀತಾಸ್ತತ್ರೈವಾಂತರ್ದಧುಸ್ತತಃ ।
ಏವಂ ರಾಮಹ್ರದಾಃ ಪುಣ್ಯಾ ಭಾರ್ಗವಸ್ಯ ಮಹಾತ್ಮನಃ ॥೩೬॥

ಸ್ನಾತ್ವಾ ಹ್ರದೇಷು ರಾಮಸ್ಯ ಬ್ರಹ್ಮಚಾರೀ ಶುಭವ್ರತಃ ।
ರಾಮಮಭ್ಯರ್ಚ್ಯ ರಾಜೇಂದ್ರ ಲಭೇದ್ಬಹುಸುವರ್ಣಕಂ ॥೩೭॥

ವಂಶಮೂಲಂ ಸಮಾಸಾದ್ಯ ತೀರ್ಥಸೇವೀ ಕುರೂದ್ವಹ ।
ಸ್ವವಂಶಮುದ್ಧರೇದ್ರಾಜನ್ ಸ್ನಾತ್ವಾ ವೈ ವಂಶಮೂಲಕೇ ॥೩೮॥

---

೩೪. ಈ ಹ್ರದಗಳಲ್ಲಿ ಸ್ನಾನವನ್ನು ಮಾಡಿ ಪಿತೃಗಳಿಗೆ ತರ್ಪಣವನ್ನು ಕೊಡುವವನು ಪಿತೃಗಳನ್ನು ತೃಪ್ತರನ್ನಾಗಿ ಮಾಡುವನು. ಮತ್ತು ಹಾಗೆ ತೃಪ್ತರಾದ ಆ ಪಿತೃಗಳು ಇವನಿಗೆ ಭೂಮಿಯಲ್ಲಿ ದುರ್ಲಭವಾದ ಇಷ್ಟಾರ್ಥಗಳನ್ನು ಕೊಡುವರು.

೩೫–೩೬. ಮತ್ತು ಅವನಿಗೆ ಸ್ಥಿರವಾದ ಸ್ವರ್ಗಲೋಕವು ದೊರೆಯುವುದು. ಈ ರೀತಿಯಾಗಿ ರಾಮನ ಪಿತೃಗಳು ರಾಮನಿಗೆ ವರವನ್ನು ಅನುಗ್ರಹಿಸಿದರು. ಅನಂತರ ಭಾರ್ಗವರಾಮನೊಂದಿಗೆ ಹೋಗಿ ಬರುವೆವೆಂಬುದಾಗಿ ಹೇಳಿ ಆ ಪಿತೃಗಳು ಅಲ್ಲಿಯೇ ಅಂತರ್ಧಾನಹೊಂದಿದರು. ಈ ರೀತಿಯಾಗಿ ಮಹಾತ್ಮನಾದ ಭಾರ್ಗವರಾಮನ ಪಂಚಹ್ರದಗಳು ಪುಣ್ಯತಮಗಳಾಗಿ ಪ್ರಸಿದ್ಧಗಳಾದುವು.

೩೭. ಬ್ರಹ್ಮಚರ್ಯವನ್ನು ಧಾರಣೆಮಾಡಿ ವ್ರತಪರನಾಗಿದ್ದುಕೊಂಡು ರಾಮನ ಮಡುಗಳಲ್ಲಿ ಸ್ನಾನಮಾಡಿ, ರಾಮನನ್ನು ಪೂಜಿಸುವವನು ಯಥೇಷ್ಟವಾಗಿ ಸುವರ್ಣವನ್ನು ಹೊಂದುವನು.

೩೮. ಮುಂದೆ ತೀರ್ಥಾರ್ಥಿಯು ವಂಶಮೂಲಕ್ಷೇತ್ರವನ್ನು ಹೊಂದಿ ವಂಶಮೂಲಕ್ಷೇತ್ರದಲ್ಲಿ ಸ್ನಾನಮಾಡಿದರೆ ತನ್ನ ವಂಶೋತ್ಪನ್ನರಾದ ಸರ್ವರಿಗೂ ಮುಕ್ತಿಯನ್ನುಂಟುಮಾಡುವನು.

ಕಾಯ ಶೋಧನ ಮಾಸಾದ್ಯ ತೀರ್ಥಂ ಭರತಸತ್ತಮ ।
ಶರೀರಶುದ್ಧಿಮಾಪ್ನೋತಿ ಸ್ನಾತಸ್ತತ್ರ ನ ಸಂಶಯಃ ॥೩೯॥

ಶುದ್ಧದೇಹಸ್ತು ಸಂಯಾತಿ ಶುಭಾನ್ಲೋಕಾನನುತ್ತಮಾನ್ ।
ತತೋ ಗಚ್ಛೇತ ರಾಜೇಂದ್ರ ತೀರ್ಥಂ ತ್ರೈಲೋಕ್ಯದುರ್ಲಭಂ ॥೪೦॥

ಲೋಕಾ ಯತ್ರೋದ್ಧೃತಾಃ ಪೂರ್ವಂ ವಿಷ್ಣುನಾ ಪ್ರಭವಿಷ್ಣುನಾ ।
ಲೋಕೋದ್ಧಾರಂ ಸಮಾಸಾದ್ಯ ತೀರ್ಥಂ ತ್ರೈಲೋಕ್ಯವಿಶ್ರುತಂ ॥೪೧॥

ಸ್ನಾತ್ವಾ ತೀರ್ಥವರೇ ರಾಜನ್ ಲೋಕಾನುದ್ಧರತೇ ಸ್ವಕಾನ್ ।
ಶ್ರೀತೀರ್ಥಂ ಚ ಸಮಾಸಾದ್ಯ ವಿಂದತೇ ಶ್ರಿಯಮುತ್ತಮಾಂ ॥೪೨॥

ಕಪಿಲಾತೀರ್ಥಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।
ತತ್ರ ಸ್ನಾತ್ವಾರ್ಚಯಿತ್ವಾ ಚ ದೇವಾನಿಹ ಪಿತೄಂಸ್ತಥಾ ॥೪೩॥

---

೩೯. ಎಲೈ ಯುಧಿಷ್ಠಿರನೆ ಕಾಯಶೋಧನತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಶರೀರ ಶುದ್ಧಿಯನ್ನು ಹೊಂದುತ್ತಾನೆ. ಸಂಶಯ ವಿಲ್ಲ.

೪೦. ಅಲ್ಲಿ ಶರೀರ ಶುದ್ಧಿಯನ್ನು ಹೊಂದಿದವನು ಉತ್ತಮ ಲೋಕ ವನ್ನು ಹೊಂದುವನು. ಹಾಗೆಯೇ ಮುಂದೆ ಹೋದರೆ, ಮೂರು ಲೋಕ ಗಳಲ್ಲಿಯೂ ದುರ್ಲಭವಾದ ತೀರ್ಥಶ್ರೇಷ್ಠವನ್ನು ಹೊಂದುವನು.

೪೧. ಆ ತೀರ್ಥವು ಯಾವುದೆಂದರೆ ಪೂರ್ವದಲ್ಲಿ ಸರ್ವ ಲೋಕಕ್ಕೆ ಪ್ರಭುವಾದ ವಿಷ್ಣುವು ಭುವನವನ್ನೆಲ್ಲಾ ಯಾವ ಪ್ರದೇಶದಲ್ಲಿ ಉದ್ಧಾರ ಮಾಡಿದನೋ ಅದೇ ಲೋಕೋದ್ಧಾರವೆಂಬ ಮೂರುಲೋಕದಲ್ಲಿ ಪ್ರಸಿದ್ಧ ವಾದ ತೀರ್ಥವು.

೪೨. ಅಂತಹ ಲೋಕೋದ್ಧಾರ ತೀರ್ಥದಲ್ಲಿ ಸ್ನಾನಮಾಡುವವನು ತನ್ನ ಜನವನ್ನೆಲ್ಲಾ ಉದ್ಧಾರಮಾಡುವನು. ಮುಂದೆ ಶ್ರೀತೀರ್ಥವನ್ನು ಭಜಿಸುವವನು ಉತ್ತಮವಾದ ಸಂಪತ್ತನ್ನು ಪಡೆಯುವನು.

೪೩–೪೪. ಮುಂದೆ ಸ್ಥಿರವಾದ ಮನಸ್ಸುಳ್ಳವನಾಗಿ ಬ್ರಹ್ಮಚರ್ಯ ವನ್ನು ಧಾರಣೆಮಾಡಿ ಕಪಿಲಾತೀರ್ಥದಲ್ಲಿ ಸ್ನಾನಮಾಡಿ, ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಬೇಕು. ಹೀಗೆ ಮಾಡುವವನು ಸಹಸ್ರ ಕಪಿಲಗೋ

ಕಪಿಲಾನಾಂ ಸಹಸ್ರಸ್ಯ ಫಲಂ ವಿಂದತಿ ಮಾನವಃ ।
ಸೂರ್ಯತೀರ್ಥಂ ಸಮಾಸಾದ್ಯ ಸ್ನಾತ್ವಾ ನಿಯತಮಾನಸಃ ॥೪೪॥

ಅರ್ಚಯಿತ್ವಾ ಪಿತೄನ್ದೇವಾನುಪವಾಸಪರಾಯಣಃ ।
ಅಗ್ನಿಷ್ಟೋಮಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥೪೫॥

ಗವಾಂ ಭವನಮಾಸಾದ್ಯ ತೀರ್ಥಸೇವೀ ಯಥಾಕ್ರಮಂ ।
ತತ್ರಾಭಿಷೇಕಂ ಕುರ್ವಾಣಃ ಗೋಸಹಸ್ರಫಲಂ ಲಭೇತ್ ॥೪೬॥

ಗಂಗಾತೀರ್ಥಂ ಸಮಾಸಾದ್ಯ ತೀರ್ಥಸೇವೀ ನರಾಧಿಪ ।
ಕೇವ್ಯಾಸ್ತೀರ್ಥೇ ನರಃ ಸ್ನಾತ್ವಾ ಲಭತೇ ವೀರ್ಯಮುತ್ತಮಂ ॥೪೭॥

ತತೋ ಗಚ್ಛೇತ ರಾಜೇಂದ್ರ ದ್ವಾರಪಾಲಂ ಲವರ್ಣಕಂ ।
ತಸ್ಯ ತೀರ್ಥಂ ಸರಸ್ವತ್ಯಾಂ ಯಥೇಂದ್ರಸ್ಯ ಮಹಾತ್ಮನಃ ॥೪೮॥

---

ವುಗಳ ದಾನದ ಫಲವನ್ನು ಹೊಂದುವನು. ಮುಂದೆ ಸೂರ್ಯತೀರ್ಥವನ್ನು ಹೊಂದಿ ನಿಯತಮನಸ್ಕನಾಗಿ ಸ್ನಾನಮಾಡಬೇಕು.

೪೫. ಅಲ್ಲಿಯೇ ಉಪವಾಸಾಸಕ್ತನಾಗಿ ಪಿತೃಗಳನ್ನೂ ದೇವತೆಗಳನ್ನೂ ಪೂಜಿಸುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವನು. ಮತ್ತು ಸೂರ್ಯಲೋಕವನ್ನೂ ಹೊಂದುವನು.

೪೬. ಮುಂದೆ ಗೋಭವನಕ್ಷೇತ್ರವನ್ನು ಹೊಂದಿ ಅಲ್ಲಿ ಸ್ನಾನ ಮಾಡುವವನು ಸಹಸ್ರಗೋದಾನ ಫಲವನ್ನು ಹೊಂದುವನು.

೪೭. ಮುಂದೆ ಗಂಗಾತೀರ್ಥವನ್ನು ಹೊಂದಿ ತೀರ್ಥಪರನಾಗಿ, ಕೇವೀತೀರ್ಥವೆಂಬ ತೀರ್ಥವಿಶೇಷದಲ್ಲಿ ಸ್ನಾನ ಮಾಡುವವನು ಬಹು ಬಲವನ್ನು ಹೊಂದುವನು.

೪೮-೪೯. ಮುಂದೆ ದ್ವಾರಪಾಲಲವರ್ಣಕ್ಷೇತ್ರವನ್ನು ಹೊಂದಬೇಕು. ಆ ಲವರ್ಣಕ ತೀರ್ಥವು ಮಹೇಂದ್ರತೀರ್ಥದಂತೆ ಪ್ರಸಿದ್ಧ

ತತ್ರ ಸ್ನಾತ್ವಾ ನರೋ ರಾಜನ್ ಅಗ್ನಿಷ್ಟೋಮಫಲಂ ಲಭೇತ್ ॥೪೯॥
ತತೋ ಗಚ್ಛೇತ ಧರ್ಮಜ್ಞ ಬ್ರಹ್ಮಾವರ್ತಂ ನರಾಧಿಪ ।
ಬ್ರಹ್ಮಾವರ್ತೇ ನರಃ ಸ್ನಾತ್ವಾ ಬ್ರಹ್ಮಲೋಕಮವಾಪ್ನುಯಾತ್ ॥೫೦॥
ತತೋ ಗಚ್ಛೇತ ಧರ್ಮಜ್ಞ ಸುತೀರ್ಥಕ ಮನುತ್ತಮಂ ।
ಯತ್ರ ಸನ್ನಿಹಿತಾ ನಿತ್ಯಂ ಪಿತರೋ ದೈವತೈಃ ಸಹ ॥೫೧॥
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ।
ಅಶ್ವಮೇಧಮವಾಪ್ನೋತಿ ಪಿತೃಲೋಕಂ ಚ ಗಚ್ಛತಿ ॥೫೨॥
ತತೋಽನ್ಯತೀರ್ಥಂ ಧರ್ಮಜ್ಞ ಸಮಾಸಾದ್ಯ ಯಥಾಕ್ರಮಂ ।
ಕಾಶೀಶ್ವರಸ್ಯ ತೀರ್ಥೇಷು ಸ್ನಾತ್ವಾ ಭರತಸತ್ತಮ ।
ಸರ್ವವ್ಯಾಧಿವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥೫೩॥

---

ವಾಗಿ ಸರಸ್ವತೀನದಿಯಲ್ಲಿ ಇರುವುದು. ಅಲ್ಲಿ ಸ್ನಾನಮಾಡುವವನು ಅಗ್ನಿಷ್ಟೋಮಫಲವನ್ನು ಹೊಂದುವನು.

೫೦. ಮುಂದೆ ಬ್ರಹ್ಮಾವರ್ತತೀರ್ಥವಿರುವುದು. ಅಲ್ಲಿ ಸ್ನಾನ ಮಾಡುವವನು ಬ್ರಹ್ಮಲೋಕವನ್ನು ಹೊಂದುವನು.

೫೧. ಮುಂದೆ ಶ್ರೇಷ್ಠವಾದ ಸುತೀರ್ಥಕ ತೀರ್ಥವನ್ನು ಸೇವಿಸ ಬೇಕು. ಈ ತೀರ್ಥದಲ್ಲಿ ಪಿತೃಗಳೂ, ದೇವತೆಗಳೂ, ಸದಾ ವಾಸಿಸು ವರು.

೫೨. ಪಿತೃಗಳನ್ನೂ, ದೇವತೆಗಳನ್ನೂ ಪೂಜಿಸುತ್ತಾ, ಅಲ್ಲಿ ಸ್ನಾನ ಮಾಡುವವನು ಅಶ್ವಮೇಧಯಾಗದ ಫಲವನ್ನು ಹೊಂದುವನು. ಮತ್ತು ಪಿತೃಲೋಕವನ್ನೂ ಹೊಂದುವನು.

೫೩. ಹಾಗೆಯೇ ಮುಂದೆ ಆಯಾಯತೀರ್ಥಗಳನ್ನು ಸೇವಿಸುತ್ತಾ, ಕಾಶೀಶ್ವರತೀರ್ಥದಲ್ಲಿ ಸ್ನಾನಮಾಡುವವನು ಸರ್ವವ್ಯಾಧಿಗಳಿಂದಲೂ, ನಿರ್ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜಾರ್ಹನಾಗುವನು.

ಮಾತೃತೀರ್ಥಂ ಚ ತತ್ರೈವ ಯತ್ರ ಸ್ನಾತಸ್ಯ ಪಾರ್ಥಿವ ।
ಪ್ರಜಾ ವಿವರ್ಧತೇ ರಾಜನ್ ಸ್ವರ್ಗತಿಂ ಸಮವಾಪ್ನುಯಾತ್ ॥೫೪॥

ತತಃ ಶೀತವನಂ ಗಚ್ಛೇನ್ನಿಯತೋ ನಿಯತಾಶನಃ ।
ತೀರ್ಥಂ ತತ್ರ ಮಹಾರಾಜ ಮಹದನ್ಯತ್ರ ದುರ್ಲಭಂ ।
ಪುನಾತಿ ದರ್ಶನಾದೇವ ದಂಡೇನೈಕಂ ನರಾಧಿಪ ॥೫೫॥

ಕೇಶಾನಾವಪ್ಯ ವೈ ತಸ್ಮಿನ್ ಪೂತೋ ಭವತಿ ಭಾರತ ।
ತತ್ರ ತೀರ್ಥವರಂ ಚಾನ್ಯತ್ ಸ್ನಾತಲೋಕಾರ್ತಿಹಂ ಸ್ಮೃತಂ ॥೫೬॥

ತತ್ರ ವಿಪ್ರಾ ನರವ್ಯಾಘ್ರ ವಿದ್ವಾಂಸಸ್ತತ್ವತತ್ಪರಾಃ ।
ಗತಿಂ ಗಚ್ಛಂತಿ ಪರಮಾಂ ಸ್ನಾತ್ವಾ ಭರತಸತ್ತಮ ॥೫೭॥

ಸ್ವರ್ಣಲೋಮಾಪನಯನೇ ತೀರ್ಥೇ ಭರತಸತ್ತಮ ।
ಪ್ರಾಣಾಯಾಮೈರ್ನಿರ್ಹರಂತಿ ಸ್ವಲೋಮಾನಿ ದ್ವಿಜೋತ್ತಮಾಃ ॥

---

೫೪. ಅಲ್ಲಿಯೇ ಮಾತೃತೀರ್ಥದಲ್ಲಿ ಸ್ನಾನಮಾಡುವವನು ಪ್ರಜಾ ಸಂಪತ್ತಿನಿಂದ ಕೂಡಿ, ಸ್ವರ್ಗಲೋಕವನ್ನು ಸೇರುವನು.

೫೫. ಮುಂದೆ ಶೌಚಾದಿನಿಯಮಪರನಾಗಿ ಆಹಾರನಿಯಮವನ್ನು ಹೊಂದಿ ಶೀತವನವನ್ನು ಸೇರಬೇಕು. ಅಲ್ಲಿರುವ ತೀರ್ಥವು ಇಂದ್ರಿಯ ನಿಗ್ರಹವನ್ನು ಹೊಂದಿ ನೋಡಿದಮಾತ್ರದಿಂದಲೇ ಮನುಷ್ಯನನ್ನು ಶುದ್ಧಿ ಗೊಳಿಸುವುದು.

೫೬. ಅಲ್ಲಿ ಕ್ಷೌರವನ್ನು ಮಾಡಿಸಿಕೊಂಡರೆ ಶುದ್ಧಿಯಾಗುವನು. ಅಲ್ಲಿ 'ಸ್ನಾತಲೋಕಾರ್ತಿಹಾ' ಎಂದು ಮತ್ತೊಂದು ತೀರ್ಥವು ಇರುವುದು.

೫೭. ಎಲೈ, ಧರ್ಮರಾಜನೇ? ತತ್ವಜ್ಞರಾದ ಬ್ರಾಹ್ಮಣಶ್ರೇಷ್ಠರು ಅಲ್ಲಿ ಸ್ನಾನಮಾಡಿದರೆ ಅತ್ಯುತ್ತಮವಾದ ಗತಿಯನ್ನು ಹೊಂದುವರು.

೫೮. ಮುಂದೆ ಸ್ವರ್ಣಲೋಮಾಪನಯನವೆಂಬ ತೀರ್ಥದಲ್ಲಿ ಸಂಕಲ್ಪ ಮಾಡಿ ಕ್ಷೌರಮಾಡಿಸಿಕೊಳ್ಳಬೇಕು. ಅನಂತರ ಪರಿಶುದ್ಧ ರಾಗಿ ಉತ್ತಮವಾದ ಗತಿಯನ್ನೈದುವರು.

ಪೂತಾತ್ಮಾನಶ್ಚ ರಾಜೇಂದ್ರ ಪ್ರಯಾಂತಿ ಪರಮಾಂ ಗತಿಂ ।
ದಶಾಶ್ವಮೇಧಿಕೇ ಚೈವ ತಸ್ಮಿಂಸ್ತೀರ್ಥೇ ಮಹೀಪತೇ ॥೫೯॥

ತತ್ರ ಸ್ನಾತ್ವಾ ನರವ್ಯಾಘ್ರ ಗಚ್ಛಂತಿ ಪರಮಾಂ ಗತಿಂ ।
ತತೋ ಗಚ್ಛೇತ ರಾಜೇಂದ್ರ ಮಾನುಷಂ ಲೋಕವಿಶ್ರುತಂ ॥೬೦॥

ತತ್ರ ಕೃಷ್ಣಾ ಮೃಗಾ ರಾಜನ್ ವ್ಯಾಧೇನ ಶರಪೀಡಿತಾಃ ।
ವಿಗಾಹ್ಯ ತಸ್ಮಿನ್ಸರಸಿ ಮಾನುಷತ್ವಮುಪಾಗತಾಃ ॥೬೧॥

ತಸ್ಮಿನ್ ತೀರ್ಥೇ ನರಃ ಸ್ನಾತ್ವಾ ಬ್ರಹ್ಮಚಾರೀ ಸಮಾಹಿತಃ ।
ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ॥೬೨॥

ಮಾನುಷಸ್ಯ ತು ಪೂರ್ವೇಣ ಕ್ರೋಶಮಾತ್ರೇ ಮಹೀಪತೇ ।
ಆಪಗಾ ನಾಮ ವಿಖ್ಯಾತಾ ನದೀ ಸಿದ್ಧನಿಷೇವಿತಾ ॥೬೩॥

---

೫೯. ಎಲೈ ಮಹೀಪತಿಯಾದ ಯುಧಿಷ್ಠಿರನೆ! ಮುಂದೆ ದಶಾಶ್ವಮೇಧಿಕವೆಂಬ ತೀರ್ಥವು ಅದೇ ಪ್ರದೇಶದಲ್ಲಿ ಇರುವುದು.

೬೦. ಅಲ್ಲಿ ಸ್ನಾನವನ್ನು ಮಾಡುವವರು ಉತ್ತಮಗತಿಯನ್ನು ಪಡೆಯುವರು. ಮುಂದೆ ಜಗತ್ಪ್ರಸಿದ್ಧವಾದ ಮಾನುಷತೀರ್ಥ ಇರುವುದು.

೬೧–೬೨. ಅಲ್ಲಿ, ಬೇಡನ ಬಾಣಗಳಿಗೆ ಸಿಲುಕಿದ ಕೃಷ್ಣಮೃಗಗಳು ಆ ಸರಸ್ಸಿನಲ್ಲಿ ಪ್ರವೇಶಿಸಿ ಮನುಷ್ಯರೂಪವನ್ನು ಹೊಂದಿದುವು. ಆ ತೀರ್ಥದಲ್ಲಿ ಬ್ರಹ್ಮಚರ್ಯದಿಂದಲೂ, ಭಕ್ತಿಯಿಂದಲೂ, ಕೂಡಿ ಸ್ನಾನಮಾಡುವ ಮನುಷ್ಯನು ಸರ್ವಪಾಪಗಳನ್ನೂ ಕಳೆದು ಸ್ವರ್ಗಲೋಕದಲ್ಲಿ ಸುಖಿಸುವನು.

೬೩. ಮಾನುಷತೀರ್ಥಕ್ಕಿಂತಲೂ ಪೂರ್ವದಿಕ್ಕಿನಲ್ಲಿ ಒಂದು ಹರಿದಾರಿಯ ದೂರದಲ್ಲಿ ಸಿದ್ಧರಿಂದ ಸೇವಿಸಲ್ಪಟ್ಟಿರುವ, "ಆಪಗಾ" ಎಂಬುದಾಗಿ ಪ್ರಸಿದ್ಧವಾದ ನದಿಯು, ಇರುವುದು.

ಶ್ಯಾಮಾಕಭೋಜನಂ ತತ್ರ ಯಃ ಪ್ರಯಚ್ಛತಿ ಮಾನವಃ ।
ದೇವಾನ್ ಪಿತೄನ್ ಸಮುದ್ದಿಶ್ಯ ತಸ್ಯ ಧರ್ಮಫಲಂ ಮಹತ್ ॥೬೪॥

ಏಕಸ್ಮಿನ್ ಭೋಜಿತೇ ವಿಪ್ರೇ ಕೋಟಿರ್ಭವತಿ ಭೋಜಿತಾ ।
ತತ್ರ ಸ್ನಾತ್ವಾರ್ಚಯಿತ್ವಾ ಚ ದೈವತಾನಿ ಪಿತೄಂಸ್ತಥಾ ॥೬೫॥

ಉಷಿತ್ವಾ ರಜನೀಮೇಕಾಮಗ್ನಿಷ್ಟೋಮಫಲಂ ಲಭೇತ್ ।
ತತೋ ಗಚ್ಛೇತ ಧರ್ಮಜ್ಞ ಬ್ರಹ್ಮಣಃ ಸ್ಥಾನಮುತ್ತಮಂ ॥೬೬॥

ಬ್ರಹ್ಮಾವರ್ತಮಿತ್ಯೇವಂ ಪ್ರಕಾಶಂ ಭುವಿ ವಿಶ್ರುತಂ ।
ತತ್ರ ಸಪ್ತರ್ಷಿಕುಂಡೇಷು ಸ್ನಾತಸ್ಯ ಭರತರ್ಷಭ ॥೬೭॥

ಕೇದಾರೇ ಚೈವ ರಾಜೇಂದ್ರ ಕಪಿಲಸ್ಯ ಮಹಾತ್ಮನಃ ।
ಬ್ರಹ್ಮಾಣಮಭಿಗಮ್ಯಾಥ ಶುಚಿಃ ಪ್ರಯತಮಾನಸಃ ॥೬೮॥

---

೬೪. ಅಲ್ಲಿ, ದೇವತೆಗಳನ್ನೂ, ಪಿತೃಗಳನ್ನೂ, ಉದ್ದೇಶಿಸಿ ಸಾಮೇಅಕ್ಕಿಯಿಂದ ಮಾಡಿದ ಅನ್ನಾದಿಗಳನ್ನು, ದಾನಮಾಡುವವನು ಹೆಚ್ಚಾದ ಧರ್ಮ ಫಲವನ್ನು ಹೊಂದುವನು.

೬೫. ಅಲ್ಲಿ ಒಬ್ಬ ಬ್ರಾಹ್ಮಣನನ್ನು ಭೋಜನ ಮಾಡಿಸಿದರೆ ಕೋಟಿಬ್ರಾಹ್ಮಣರನ್ನು ಭೋಜನಮಾಡಿಸಿದಂತಾಗುವುದು. ಅಲ್ಲಿ ಸ್ನಾನ ಮಾಡಿ, ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಬೇಕು.

೬೬. ಹೀಗೆ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಿ ಒಂದು ರಾತ್ರಿ ಅಲ್ಲಿಯೇ ಉಪವಾಸವನ್ನು ಮಾಡಬೇಕು. ಹೀಗೆ ಮಾಡುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವನು. ಮುಂದೆ ಬ್ರಹ್ಮಸ್ಥಾನವನ್ನು ಹೊಂದಬೇಕು.

೬೭–೬೮. ಆ ಬ್ರಹ್ಮಸ್ಥಾನವು ಬ್ರಹ್ಮಾವರ್ತವೆಂಬುದಾಗಿ ಭೂಮಿಯಲ್ಲಿ ಪ್ರಸಿದ್ಧವಾಗಿರುವುದು. ಅಲ್ಲಿ ಸಪ್ತರ್ಷಿಕುಂಡಗಳಲ್ಲಿ ಸ್ನಾನಮಾಡಬೇಕು. ಮತ್ತು, ಕಪಿಲಕೇದಾರದಲ್ಲಿಯೂ, ಸ್ನಾನಮಾಡಿ, ಸ್ಥಿರ ಮನಸ್ಸಿನಿಂದ ಕೂಡಿ ಕಾಯಶೌಚಯುಕ್ತನಾಗಿ ಬ್ರಹ್ಮನನ್ನು ಸೇವಿಸಬೇಕು.

ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕಂ ಪ್ರಪದ್ಯತೇ ।
ಕಪಿಷ್ಠಲಸ್ಯ ಕೇದಾರಂ ಸಮಾಸಾದ್ಯ ಸುದುರ್ಲಭಂ ॥೭೯॥

ಅಂತರ್ಧಾನಮವಾಪ್ನೋತಿ ತಪಸಾ ದಗ್ಧಕಿಲ್ಬಿಷಃ ।
ತತೋ ಗಚ್ಛೇತ ರಾಜೇಂದ್ರ ಸೇವಕಂ ಲೋಕವಿಶ್ರುತಂ ॥೮೦॥

ಕೃಷ್ಣಪಕ್ಷೇ ಚತುರ್ದಶ್ಯಾಮಭಿಗಮ್ಯ ವೃಷಧ್ವಜಂ ।
ಲಭತೇ ಸರ್ವಕಾಮಾನ್ಹಿ ಸ್ವರ್ಗಲೋಕಂ ಚ ಗಚ್ಛತಿ ॥೮೧॥

ತಿಸ್ರಃ ಕೋಟ್ಯಶ್ಚ ತೀರ್ಥಾನಾಂ ಸವರೇ ಕುರುನಂದನ ।
ರುದ್ರಕೋಟೀ ತಥಾ ಕೂಪೇ ಹ್ರದೇಷು ಚ ಸಮಂತತಃ ॥೮೨॥

ಇಲಾಸ್ಪದಂ ಚ ತತ್ರೈವ ತೀರ್ಥಂ ಭರತಸತ್ತಮ ।
ತತ್ರ ಸ್ನಾತ್ವಾರ್ಚಯಿತ್ವಾ ಚ ದೈವತಾನಿ ಪಿತೄನಥ ।
ನ ದುರ್ಗತಿಮವಾಪ್ನೋತಿ ವಾಜಪೇಯಂ ಚ ವಿಂದತಿ ॥೮೩॥

---

೭೯. ಹೀಗೆ ಮಾಡುವವನು ಸರ್ವಪಾಪಗಳನ್ನೂ ಕಳೆದು ಬ್ರಹ್ಮಲೋಕವನ್ನು ಸೇರುವನು. ಮತ್ತೂ, ಕಪಿಷ್ಠಲಕೇದಾರ ಸೇವೆಯು ಅತಿಪ್ರಶಸ್ತವಾದುದು.

೮೦. ಈ ಸೇವೆಯನ್ನಾಶ್ರಯಿಸುವವನು ತಪಸ್ಸಿನ ಮೂಲಕ ಸರ್ವಪಾಪಗಳನ್ನೂ ತೊಳೆದು ಅಂತರ್ಧಾನ ಶಕ್ತಿಯನ್ನು ಪಡೆಯುವನು. ಎಲೈ ಯುಧಿಷ್ಠಿರನೇ? ಮುಂದೆ ಸೇವಕಕ್ಷೇತ್ರವಿರುವುದು.

೮೧. ಸೇವಕಕ್ಷೇತ್ರದಲ್ಲಿ ಕೃಷ್ಣಚತುರ್ದಶಿಯಲ್ಲಿ ಈಶ್ವರನನ್ನು ಸೇವಿಸುವವನು ಸರ್ವಕೋರಿಕೆಗಳನ್ನೂ, ಹೊಂದಿ ಸ್ವರ್ಗಲೋಕವನ್ನು ಸೇರುವನು.

೮೨. ಎಲೈ ಯುಧಿಷ್ಠಿರನೇ? ಶ್ರೇಷ್ಠವಾದ ಈ ಸೇವಕಕ್ಷೇತ್ರದಲ್ಲಿ ಮೂರು ಕೋಟಿ ತೀರ್ಥಗಳಿರುವುವು. ಮತ್ತೂ, ಇಲ್ಲಿರುವ ಬಾವಿಗಳಲ್ಲಿಯೂ, ಮಡುವುಗಳಲ್ಲಿಯೂ, ಕೋಟಿರುದ್ರರು ಸರ್ವತ್ರ ವಾಸಿಸುವರು.

೮೩. ಅಲ್ಲಿಯೇ ಇಲಾಸ್ಪದವೆಂಬ ತೀರ್ಥವಿರುವುದು. ಅಲ್ಲಿ ಸ್ನಾನ ಮಾಡಿ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸುವವನು ಎಂದಿಗೂ ದುರ್ಗತಿ

ಕಿಂದಾನೇ ಚ ನರಶ್ರೇಷ್ಠ ಕಿಂಯಜ್ಞೇ ಚ ಮಹೀಪತೇ ।
ಅಪ್ರಮೇಯಮವಾಪ್ನೋತಿ ದಾನಂ ಯಜ್ಞಂ ತಥೈವ ಚ ॥೭೪॥
ಕಲಸ್ಯಾಂ ವಾರ್ಯುಪಸ್ಪೃಶ್ಯ ಶ್ರದ್ಧಧಾನೋ ಜಿತೇಂದ್ರಿಯಃ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೭೫॥
ಸರಕಸ್ಯ ತು ಪೂರ್ವೇಣ ನಾರದಸ್ಯ ಮಹಾತ್ಮನಃ ।
ಕುರುಶ್ರೇಷ್ಠ ಶುಭಂ ತೀರ್ಥಂ ರಾಮಜನ್ಮೇತಿ ವಿಶ್ರುತಂ ॥೭೬॥
ತತ್ರ ತೀರ್ಥೇ ನರಃ ಸ್ನಾತ್ವಾ ಪ್ರಾಣಾಂಶ್ಚೋತ್ಸೃಜ್ಯ ಭಾರತ ।
ನಾರದೇನಾಭ್ಯನುಜ್ಞಾತೋ ಲೋಕಾನಾಪ್ನೋತಿ ದುರ್ಲಭಾನ್ ॥
ಶುಕ್ಲಪಕ್ಷೇ ದಶಮ್ಯಾಂ ತು ಪುಂಡರೀಕಂ ಸಮಾವಿಶೇತ್ ।
ತತ್ರ ಸ್ನಾತ್ವಾ ನರೋ ರಾಜನ್ ಪುಂಡರೀಕಫಲಂ ಲಭೇತ್ ॥೭೮॥

---

ಯನ್ನು ಹೊಂದುವುದಿಲ್ಲ. ಮತ್ತು, ವಾಜಪೇಯಯಾಗದ ಫಲವನ್ನು ಹೊಂದುವನು.

೭೪–೭೫. ಎಲೈ ರಾಜನೇ? ಮುಂದೆ ಕಿಂದಾನತೀರ್ಥದಲ್ಲಿಯೂ ಕಿಂಯಜ್ಞತೀರ್ಥದಲ್ಲಿಯೂ, ಸ್ನಾನಮಾಡುವವನು ಅನಂತ ದಾನಫಲಗಳನ್ನೂ ಅನಂತ ಯಜ್ಞಫಲಗಳನ್ನೂ ಹೊಂದುವನು. ಕಲಸೀತೀರ್ಥದಲ್ಲಿ ನಂಬಿಕೆಯಿಂದ ಕೂಡಿ ಇಂದ್ರಿಯಗಳನ್ನು ಜಯಿಸಿ ಸ್ನಾನಾದಿಗಳನ್ನಾಚರಿಸುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವನು.

೭೬–೭೭. ಸರಕಕ್ಕಿಂತಲೂ ಪೂರ್ವಕ್ಕೆ ರಾಮಜನ್ಮ ಎಂಬುದಾಗಿ ಪ್ರಸಿದ್ಧವಾದ ನಾರದತೀರ್ಥವಿರುವುದು. ಅದಕ್ಕೆ ರಾಮಜನ್ಮವೆಂದೂ ಹೆಸರುಂಟು. ಆ ತೀರ್ಥದಲ್ಲಿ ಸ್ನಾನಮಾಡಿ ಪ್ರಾಣತ್ಯಾಗ ಮಾಡುವವನು, ನಾರದನ ಅಪ್ಪಣೆಯಂತೆ ಅತಿಮೇಲಾದ ಲೋಕಗಳನ್ನು ಹೊಂದುವನು.

೭೮. ಶುಕ್ಲಪಕ್ಷದ ದಶಮಿಯಲ್ಲಿ ಪುಂಡರೀಕ ತೀರ್ಥವನ್ನು ಹೊಂದಬೇಕು. ಹಾಗೆ ಹೊಂದಿ ಅಲ್ಲಿ ಸ್ನಾನಮಾಡುವವನು ಪುಂಡರೀಕಯಜ್ಞಫಲವನ್ನು ಹೊಂದುವನು.

ತತಸ್ತ್ರಿವಿಷ್ಟಪಂ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಂ ।
ತತ್ರ ವೈತರಣೀ ಪುಣ್ಯಾ ನದೀ ಪಾಪಪ್ರಮೋಚನೀ ॥೭೯॥

ತತ್ರ ಸ್ನಾತ್ವಾರ್ಚಯಿತ್ವಾ ಚ ಶೂಲಪಾಣಿಂ ವೃಷಧ್ವಜಂ ।
ಸರ್ವಪಾಪವಿಶುದ್ಧಾತ್ಮಾ ಗಚ್ಛೇಚ್ಚ ಪರಮಾಂ ಗತಿಂ ॥೮೦॥

ತತೋ ಗಚ್ಛೇತ ರಾಜೇಂದ್ರ ಫಲಕೀವನಮುತ್ತಮಂ ।
ತತ್ರ ದೇವಾಃ ಸದಾ ರಾಜನ್ ಫಲಕೀವನಮಾಶ್ರಿತಾಃ ॥೮೧॥

ತಪಶ್ಚರಂತಿ ವಿಪುಲಂ ಬಹುವರ್ಷಸಹಸ್ರಕಂ ।
ದೃಷದ್ವತ್ಯಾಂ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ ।
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ವಿಂದತಿ ಮಾನವಃ ॥೮೨॥

ತೀರ್ಥೇ ಚ ಸರ್ವದೇವಾನಾಂ ಸ್ನಾತ್ವಾ ಭರತಸತ್ತಮ ।
ಗೋಸಹಸ್ರಸ್ಯ ರಾಜೇಂದ್ರ ಫಲಮಾಪ್ನೋತಿ ಮಾನವಃ ॥೮೩॥

---

೭೯–೮೦. ಮುಂದೆ ಮೂರುಲೋಕಗಳಲ್ಲಿಯೂ ಪ್ರಸಿದ್ಧವಾದ ತ್ರಿವಿಷ್ಟಪ ಕ್ಷೇತ್ರವನ್ನು ಹೊಂದಬೇಕು. ಅಲ್ಲಿ ಸರ್ವಪಾಪಗಳನ್ನೂ ಪರಿಹರಿಸುವ ವೈತರಣೀನದಿಯು ಹರಿಯುತ್ತಿರುವುದು. ಅಲ್ಲಿ ಸ್ನಾನಮಾಡಿ ಈಶ್ವರನನ್ನು ಪೂಜಿಸುವವನು ಸರ್ವಪಾಪಗಳಿಂದ ನಿರ್ಮುಕ್ತನಾಗಿ ಮೋಕ್ಷವನ್ನು ಹೊಂದುವನು.

೮೧–೮೨. ಮುಂದೆ ದೇವತೆಗಳಿಗೆ ಸದಾ ಆಶ್ರಯವಾದ ಫಲಕೀ ವನವನ್ನು ಹೊಂದಬೇಕು. ಅಲ್ಲಿರುವ ದೇವತೆಗಳೆಲ್ಲರೂ, ಎಷ್ಟೋ ಸಹಸ್ರ ವರ್ಷಗಳಿಂದಲೂ, ತಪಸ್ಸುಮಾಡುತ್ತಿರುವರು. ದೃಷದ್ವತೀತೀರ್ಥದಲ್ಲಿ ಸ್ನಾನಮಾಡಿ ದೇವತೆಗಳನ್ನು ಪೂಜಿಸುವವನು, ಅಗ್ನಿಷ್ಟೋಮ ಅತಿರಾತ್ರ ಯಾಗಗಳ ಫಲವನ್ನು ಹೊಂದುವನು.

೮೩. ಎಲೈ ಭರತವಂಶಶ್ರೇಷ್ಠನಾದ ಯುಧಿಷ್ಠಿರನೇ! ಸರ್ವದೇವತೀರ್ಥದಲ್ಲಿ ಸ್ನಾನಮಾಡುವವನು. ಸಹಸ್ರಗೋದಾನದ ಫಲವನ್ನು ಪಡೆಯುವನು.

ಪಾಣಿಖ್ಯಾತೇ ನರಃ ಸ್ನಾತ್ವಾ ತರ್ಪಯಿತ್ವಾ ಚ ದೇವತಾಃ ।
ಅವಾಪ್ನುತೇ ರಾಜಸೂಯಮೃಷಿಲೋಕಂ ಸ ಗಚ್ಛತಿ ॥೮೪॥
ತತೋ ಗಚ್ಛೇತ ಧರ್ಮಜ್ಞ ಮಿಶ್ರಕಂ ಲೋಕವಿಶ್ರುತಂ ।
ತತ್ರ ತೀರ್ಥಾನಿ ರಾಜೇಂದ್ರ ಮಿಶ್ರಿತಾನಿ ಮಹಾತ್ಮನಾ ॥೮೫॥
ವ್ಯಾಸೇನ ನೃಪಶಾರ್ದೂಲ ದ್ವಿಜಾರ್ಥಮಿತಿ ನಃ ಶ್ರುತಂ ।
ಸರ್ವತೀರ್ಥೇಷು ಸ ಸ್ನಾತಿ ಮಿಶ್ರಕೇ ಸ್ನಾತಿ ಯೋ ನರಃ ॥೮೬॥
ತತೋ ವ್ಯಾಸವನಂ ಗಚ್ಛೇತ್ ನಿಯತೋ ನಿಯತಾಶನಃ ।
ಮನೋಜವೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೮೭॥
ಗತ್ವಾ ಮಧುವಟೀಂ ಚಾಪಿ ದೇವ್ಯಾಃ ಸ್ಥಾನಂ ನರಃ ಶುಚಿಃ ।
ತತ್ರ ಸ್ನಾತ್ವಾರ್ಚಯೇದ್ದೇವಾನ್ ಪಿತೄಂಶ್ಚ ನಿಯತಃ ಶುಚಿಃ ।
ಸ ದೇವ್ಯಾ ಸಮನುಜ್ಞಾತೋ ಗೋಸಹಸ್ರಫಲಂ ಲಭೇತ್ ॥೮೮॥

---

೮೪. ಪಾಣಿಖ್ಯಾತತೀರ್ಥದಲ್ಲಿ ದೇವತೆಗಳನ್ನು ತೃಪ್ತಿಗೊಳಿಸುವವನು ರಾಜಸೂಯಯಾಗದ ಫಲವನ್ನು ಹೊಂದುವನು. ಮತ್ತು ಮುನಿಲೋಕವನ್ನು ಸೇರುವನು.

೮೫–೮೬. ಎಲೈ ಧರ್ಮವನ್ನು ಬಲ್ಲ ರಾಜಶ್ರೇಷ್ಠನಾದ ಯುಧಿಷ್ಠಿರನೇ! ಅನಂತರ ಮಿಶ್ರಕವೆಂಬ ಪ್ರಸಿದ್ಧವಾದ ತೀರ್ಥಕ್ಕೆ ಹೋಗಬೇಕು. ಮಹಾತ್ಮನಾದ ವ್ಯಾಸನು ಎಲ್ಲಾ ತೀರ್ಥಗಳನ್ನೂ ಮಿಶ್ರಮಾಡಿ ಬ್ರಾಹ್ಮಣರಿಗೋಸ್ಕರ ಅದನ್ನು ನಿರ್ಮಿಸಿರುವನೆಂದು ಕೇಳಿದ್ದೇನೆ. ಆ ಮಿಶ್ರಕದಲ್ಲಿ ಸ್ನಾನಮಾಡಿದವನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವನ್ನು ಹೊಂದುತ್ತಾನೆ.

೮೭. ಮುಂದೆ ಶೌಚಾದಿಗಳಿಂದಲೂ, ಆಹಾರನಿಯಮದಿಂದಲೂ ಕೂಡಿ, ವ್ಯಾಸವನದಲ್ಲಿರುವ ಮನೋಜವ ತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರ ಗೋದಾನದ ಫಲವನ್ನು ಹೊಂದುವನು.

೮೮. ಮುಂದೆ ದೇವೀಸ್ಥಾನವಾದ ಮಧುವಟಿಯಲ್ಲಿ ಸ್ನಾನಮಾಡಿ ದೇವತೆಗಳನ್ನೂ ಪಿತೃಗಳನ್ನೂ, ಶೌಚಾದಿ ನಿಯಮಗಳಿಂದ ಕೂಡಿ ಪೂಜಿಸುವವನು ದೇವಿಯ ಆಜ್ಞೆಯಂತೆ ಸಹಸ್ರ ಗೋದಾನದ ಫಲವನ್ನು ಹೊಂದುವನು.

ಕೌಶಿಕ್ಯಾಃ ಸಂಗಮೇ ಯಸ್ತು ದೃಷದ್ವತ್ಯಾಶ್ಚ ಭಾರತ ।
ಸ್ನಾತೋ ವೈ ನಿಯತಾಹಾರಃ ಸರ್ವಪಾಪೈಃ ಪ್ರಮುಚ್ಯತೇ ॥೮೯॥

ತತೋ ವ್ಯಾಸಸ್ಥಲೀಂಗಚ್ಛೇತ್ ಯತ್ರ ವ್ಯಾಸೇನ ಧೀಮತಾ ।
ಪುತ್ರಶೋಕಾಭಿತಪ್ತೇನ ದೇಹತ್ಯಾಗಾಯ ನಿಶ್ಚಯಃ ॥೯೦॥

ಕೃತೋ ದೇವೈಶ್ಚ ರಾಜೇಂದ್ರ ಪುನರುತ್ಥಾಪಿತಸ್ತಥಾ ।
ಅಭಿಗಮ್ಯ ಸ್ಥಲೀಂ ತಸ್ಯ ಗೋಸಹಸ್ರಫಲಂ ಲಭೇತ್ ॥೯೧॥

ಖಣಾಂತಂ ಕೂಪಮಾಸಾದ್ಯ ತಿಲಪ್ರಸ್ಥಂ ಪ್ರದಾಯ ಚ ।
ಗಚ್ಛೇತ ಪರಮಾಂ ಸಿದ್ಧಿಮೃಣೈರ್ಮುಕ್ತೋ ನರಾಧಿಪ ।
ವೇದೀ ತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೯೨॥

ಅಹಶ್ಚ ಸುದಿನಶ್ಚೈವ ದ್ವೇ ತೀರ್ಥೇತು ಸುದುರ್ಲಭೇ ।
ತಯೋಃ ಸ್ನಾತ್ವಾ ನರಶ್ರೇಷ್ಠ ಸೂರ್ಯಲೋಕಮವಾಪ್ನುಯಾತ್ ॥

---

೮೯. ಕೌಶಿಕೀ ದೃಷದ್ವತೀ ನದಿಗಳ ಸಂಗಮದಲ್ಲಿ ಸ್ನಾನಮಾಡುವವನು ಸರ್ವಪಾಪಗಳಿಂದ ಮುಕ್ತನಾಗುವನು. ಆದರೆ, ಆಹಾರನಿಯಮದಿಂದ ಕೂಡಿರಬೇಕು.

೯೦–೯೧. ಪೂರ್ವದಲ್ಲಿ ವ್ಯಾಸನು ಪುತ್ರಶೋಕವನ್ನು ಸಹಿಸಲಾರದೇ ಪ್ರಾಣತ್ಯಾಗವನ್ನು ಮಾಡಲು ನಿಶ್ಚಯಿಸಿದ ಕಾಲದಲ್ಲಿ ದೇವತೆಗಳು ಅವನನ್ನು ಸಮಾಧಾನಗೊಳಿಸಿದ ಸ್ಥಳವಾದ ವ್ಯಾಸಸ್ಥಲೀ ಪ್ರದೇಶವನ್ನು ಹೊಂದುವವನು ಸಹಸ್ರಗೋದಾನದ ಫಲವನ್ನು ಹೊಂದುವನು.

೯೨. ಖಣಾಂತವೆಂಬ ಬಾವಿಯನ್ನು ಹೊಂದಿ ಒಂದು ಬಳ್ಳ ಎಳ್ಳನ್ನು ದಾನಮಾಡುವ ಮನುಷ್ಯನು ಉತ್ತಮವಾದ ಸಿದ್ಧಿಯನ್ನು ಹೊಂದುವನು. ವೇದೀತೀರ್ಥದಲ್ಲಿ ಸ್ನಾನಮಾಡುವವನು ಗೋಸಹಸ್ರದಾನದ ಫಲವನ್ನು ಹೊಂದುವನು.

೯೩. ಅಹಸ್ತೀರ್ಥವೆಂದೂ, ಸುದಿನತೀರ್ಥವೆಂದೂ ಪ್ರಸಿದ್ಧಗಳಾದ ತೀರ್ಥಗಳಲ್ಲಿ ಸ್ನಾನಮಾಡುವವನು ಸೂರ್ಯಲೋಕವನ್ನು ಪಡೆಯುವನು.

ಮೃಗಧೂಮಂ ತತೋ ಗಚ್ಛೇತ್ತ್ರಿಷು ಲೋಕೇಷು ವಿಶ್ರುತಂ ।
ತತ್ರ ರುದ್ರಪದೇ ಸ್ನಾತ್ವಾ ಸಮಭ್ಯರ್ಚ್ಯಚ ಮಾನವಃ ॥೯೪॥

ಶೂಲಪಾಣಿಂ ಮಹಾತ್ಮಾನಮಶ್ವಮೇಧಫಲಂ ಲಭೇತ್ ।
ಕೋಟಿತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೯೫॥

ಅಥ ವಾಮನಕಂ ಗತ್ವಾ ತ್ರಿಷು ಲೋಕೇಷು ವಿಶ್ರುತಂ ।
ತತ್ರ ವಿಷ್ಣುಪದೇ ಸ್ನಾತ್ವಾ ಸಮಭ್ಯರ್ಚ್ಯಚ ವಾಮನಂ ॥೯೬॥

ಸರ್ವಪಾಪವಿಶುದ್ಧಾತ್ಮಾ ವಿಷ್ಣುಲೋಕಮವಾಪ್ನುಯಾತ್ ।
ಕುಲಂಪುನೇ ನರಃ ಸ್ನಾತ್ವಾ ಪುನಾತಿ ಸ್ವಕುಲಂ ನರಃ ॥೯೭॥

ಪವನಸ್ಯ ಹ್ರದಂ ಗತ್ವಾ ಮಹತಾಂ ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ನರವ್ಯಾಘ್ರ ವಾಯುಲೋಕೇ ಮಹೀಯತೇ ॥೯೮॥

---

೯೪-೯೫. ಮುಂದೆ ಮೂರು ಲೋಕಗಳಲ್ಲಿಯೂ, ಪ್ರಸಿದ್ಧವಾದ ಮೃಗಧೂಮಕ್ಷೇತ್ರವನ್ನು ಹೊಂದಿ ರುದ್ರಪದತೀರ್ಥದಲ್ಲಿ ಸ್ನಾನಮಾಡಿ ಮಹಾತ್ಮನಾದ ಈಶ್ವರನನ್ನು ಪೂಜಿಸುವವನು ಅಶ್ವಮೇಧಯಾಗದ ಫಲವನ್ನು ಅನುಭವಿಸುವನು. ಹಾಗೆಯೇ ಕೋಟಿತೀರ್ಥದಲ್ಲಿ ಸ್ನಾನ ಮಾಡುವವನು ಸಹಸ್ರಗೋದಾನದ ಫಲವನ್ನು ಹೊಂದುವನು.

೯೬-೯೭. ಮುಂದೆ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ವಾಮನಕ್ಷೇತ್ರವನ್ನು ಹೊಂದಿ ವಿಷ್ಣುಪದತೀರ್ಥದಲ್ಲಿ ಸ್ನಾನಮಾಡಿ ವಾಮನನನ್ನು ಪೂಜಿಸುವವನು ಸರ್ವಪಾಪಗಳಿಂದಲೂ, ಶುದ್ಧಿಹೊಂದಿ ವಿಷ್ಣುಲೋಕವನ್ನು ಸೇರುವನು. ಹಾಗೆಯೇ ಕುಲಂಪುನಕ್ಷೇತ್ರದಲ್ಲಿ ಸ್ನಾನಮಾಡುವವನು ತನ್ನ ವಂಶದಲ್ಲಿ ಉತ್ಪನ್ನರಾದ ಸರ್ವರನ್ನೂ ಶುದ್ಧಿಗೊಳಿಸುವನು.

೯೮. ಪವನಹ್ರದವೆಂಬ ಮಹಾತ್ಮರಿಗೆ ಸೇವ್ಯವಾದ ತೀರ್ಥವನ್ನು ಹೊಂದಿ ಸ್ನಾನಮಾಡುವವನು ವಾಯುಲೋಕದಲ್ಲಿ ಪೂಜ್ಯನಾಗುವನು.

ಅಮರಾಣಾಂ ಹ್ರದೇ ಸ್ನಾತ್ವಾ ಸಮಭ್ಯರ್ಚ್ಯಾಮರಾಧಿಪಂ ।
ಅಮರಾಣಾಂ ಪ್ರಭಾವೇಣ ಸ್ವರ್ಗಲೋಕೇ ಮಹೀಯತೇ ॥೯೯॥
ಶಾಲಿಹೋತ್ರಸ್ಯ ರಾಜೇಂದ್ರ ಶಾಲಿಸೂರ್ಯೇಯಥಾವಿಧಿ ।
ಸ್ನಾತ್ವಾ ನರ ವರ ಶ್ರೇಷ್ಠ ಗೋಸಹಸ್ರಫಲಂ ಲಭೇತ್ ॥೧೦೦॥
ಶ್ರೀಕುಂಜಂಚ ಸರಸ್ವತ್ಯಾಂ ತೀರ್ಥಂ ಭರತಸತ್ತಮ ।
ತತ್ರ ಸ್ನಾತ್ವಾ ನರೋ ರಾಜನ್ ಅಗ್ನಿಷ್ಟೋಮಫಲಂ ಲಭೇತ್॥೧೦೧॥
ತತೋ ನೈಮಿಷಕುಂಜಂ ಚ ಸಮಾಸಾದ್ಯ ಸುದುರ್ಲಭಂ ।
ಋಷಯಃ ಕಿಲ ರಾಜೇಂದ್ರ ನೈಮಿಷೇಯಾಸ್ತಪೋಧನಾಃ ॥೧೦೨॥
ತೀರ್ಥಯಾತ್ರಾಂ ಪುರಸ್ಕೃತ್ಯ ಕುರುಕ್ಷೇತ್ರೇ ಗತಾಃ ಪುರಾ ।
ತತಃ ಕುಂಜಃ ಸರಸ್ವತ್ಯಾಂ ಕೃತೋ ಭರತಸತ್ತಮ ॥೧೦೩॥

---

೯೯. ಅಮರಹ್ರದದಲ್ಲಿ ಸ್ನಾನಮಾಡಿ ಅಮರಾಧಿಪನನ್ನು ಪೂಜಿಸುವವನು ದೇವತೆಗಳ ಅನುಗ್ರಹದಿಂದ ಸ್ವರ್ಗಲೋಕದಲ್ಲಿ ಪೂಜ್ಯನಾಗುವನು.

೧೦೦. ಎಲೈ ರಾಜಶ್ರೇಷ್ಠನೇ! ಶಾಲಿಹೋತ್ರಮುನಿಯ ಶಾಲಿಸೂರ್ಯತೀರ್ಥದಲ್ಲಿ ಸ್ನಾನಮಾಡುವವನು ಸಹಸ್ರಗೋದಾನದ ಫಲವನ್ನು ಹೊಂದುವನು.

೧೦೧. ಎಲೈ ಭರತವಂಶೋತ್ಪನ್ನರಲ್ಲಿ ಶ್ರೇಷ್ಠನಾದ ಯುಧಿಷ್ಠಿರನೇ! ಸರಸ್ವತೀನದಿಯಲ್ಲಿರುವ ಶ್ರೀಕುಂಜ ತೀರ್ಥದಲ್ಲಿ ಸ್ನಾನಮಾಡುವವನು ಅಗ್ನಿಷ್ಟೋಮಯಾಗದ ಫಲವನ್ನು ಹೊಂದುವನು.

೧೦೨–೧೦೩–೧೦೪. ಮುಂದೆ ನೈಮಿಷಕುಂಜವನ್ನು ಹೊಂದಿ ಸ್ನಾನಮಾಡುವವನು ಸಹಸ್ರಗೋದಾನದ ಫಲವನ್ನು ಹೊಂದುವನು. ಇದಾವುದೆಂದರೆ: ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ವಾಸಿಸುತ್ತಿರುವ

**ಋಷೀಣಾಮವಕಾಶಃ ಸ್ಯಾದ್ಯಥಾ ತುಷ್ಟಿಕರೋ ಮಹಾನ್ ।**
**ತಸ್ಮಿನ್ಕುಂಜೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೧೦೪॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಷಡ್ವಿಂಶೋಽಧ್ಯಾಯಃ**

---

ಮುನಿಗಳೆಲ್ಲರೂ, ತೀರ್ಥಯಾತ್ರೆಯನ್ನು ಮುಂದುವರಿಸುತ್ತಾ, ಕುರುಕ್ಷೇತ್ರದಲ್ಲಿ ಸರಸ್ವತೀ ನದೀತೀರದಲ್ಲಿ ಸಕಲಮುನಿಗಳೂ ಸೇರಲು ಯೋಗ್ಯವಾದ ಮಹಾಲತಾ ಮಂಡಪವನ್ನು ರಚಿಸಿದರು. ಅದೇ ನೈಮಿಷಕುಂಜವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಸಪ್ತವಿಂಶೋಽಧ್ಯಾಯಃ

ತತೋ ಗಚ್ಛೇತ ಧರ್ಮಜ್ಞ ಕನ್ಯಾತೀರ್ಥ ಮನುತ್ತಮಂ ।
ಕನ್ಯಾತೀರ್ಥೇ ನರಸ್ಸ್ನಾತ್ವಾ ಅಗ್ನಿಷ್ಟೋಮಫಲಂ ಲಭೇತ್ ॥ ೧ ॥
ತತೋ ಗಚ್ಛೇನ್ನರವ್ಯಾಘ್ರ ಬ್ರಹ್ಮಣಃ ಸ್ಥಾನಮುತ್ತಮಂ ।
ತತ್ರಾವರ್ಣಾವರಃ ಸ್ನಾತ್ವಾ ಬ್ರಾಹ್ಮಣ್ಯಂ ಲಭತೇ ನರಃ ॥ ೨ ॥
ತತೋ ಗಚ್ಛೇನ್ನರವ್ಯಾಘ್ರ ಸೋಮತೀರ್ಥ ಮನುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ಸೋಮಲೋಕಮವಾಪ್ನುಯಾತ್॥

---

### ಪದ್ಮಪುರಾಣದ ಆದಿಖಂಡದ ಇಪ್ಪತ್ತೇಳನೆಯ ಅಧ್ಯಾಯವು.

೧. ಎಲೈ ಧರ್ಮಜ್ಞನೇ! ಆಮೇಲೆ ಕನ್ಯಾತೀರ್ಥಕ್ಕೆ ಹೋಗ ಬೇಕು. ಅಲ್ಲಿ ಸ್ನಾನಮಾಡಿದ ಮನುಷ್ಯನಿಗೆ ಅಗ್ನಿಷ್ಟೋಮಯಾಗ ಮಾಡಿದ ಫಲವು ಲಭಿಸುತ್ತದೆ.

೨. ಅಲ್ಲಿಂದ ಮುಂದೆ ಮತ್ತೊಂದು ಬ್ರಹ್ಮನ ಒಳ್ಳೆಯ ಜಾಗ ವಿರುವುದು. ಅಲ್ಲಿ ಸ್ನಾನಮಾಡಿದ ಬ್ರಾಹ್ಮಣೇತರನು ಕೂಡ ಬ್ರಾಹ್ಮಣ ನಾಗುತ್ತಾನೆ. ಬ್ರಾಹ್ಮಣನು ಸ್ನಾನ ಮಾಡಿದರೆ ಉತ್ತಮವಾದ ಗತಿ ಯನ್ನು ಹೊಂದುತ್ತಾನೆ.

೩. ಆಮೇಲೆ ಶ್ರೇಷ್ಠವಾದ ಸೋಮತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಲು, ಆತನು ಸೋಮಲೋಕವನ್ನೇ ಹೊಂದುತ್ತಾನೆ.

ಸಪ್ತಸಾರಸ್ವತಂತೀರ್ಥಂ ತತೋ ಗಚ್ಛೇನ್ನರಾಧಿಪ ।
ಯತ್ರ ಮಂಖಣಕಸ್ಸಿದ್ಧೋ ಬ್ರಹ್ಮರ್ಷಿ ರ್ಲೋಕ ವಿಶ್ರುತಃ ॥ ೪ ॥

ಪುರಾ ಮಂಖಣಕೋ ರಾಜನ್ ಕುಶಾಗ್ರೇಣೇತಿ ವಿಶ್ರುತಃ ।
ಕ್ಷತಃ ಕಿಲ ಕರೇ ರಾಜನ್ ತಸ್ಯ ಶಾಕರಸೋಽಸ್ರವತ್ ॥ ೫ ॥

ಸವೈಶಾಕರಸಂದೃಷ್ಟ್ವಾ ಹರ್ಷಾವಿಷ್ಟೋಮಹಾತಪಾಃ ।
ಪ್ರನೃತ್ತಃಕಿಲ ವಿಪ್ರರ್ಷಿಃ ವಿಸ್ಮಯೋತ್ಫುಲ್ಲಲೋಚನಃ ॥ ೬ ॥

ತತಸ್ತಸ್ಮಿನ್ಪ್ರನೃತ್ತೇವೈ ಸ್ಥಾವರಂಜಂಗಮಂ ಚ ಯತ್ ।
ಪ್ರನೃತ್ತಮುಭಯಂವೀರ ತೇಜಸಾತಸ್ಯ ಮೋಹಿತಂ ॥ ೭ ॥

ಬ್ರಹ್ಮಾದಿಭಿಸ್ತತೋದೇವೈಃ ಋಷಿಭಿಶ್ಚ ತಪೋಧನೈಃ ।
ವಿಜ್ಞಪ್ತೋವೈ ಋಷೇರರ್ಥೇ ಮಹಾದೇವೋ ನರಾಧಿಪ
ನಾಯನೃತ್ಯೇದ್ಯಥಾದೇವ ತಥಾತ್ವಂ ಕರ್ತುಮರ್ಹಸಿ । ॥ ೮ ॥

---

೪. ಅನಂತರ ಸಪ್ತಸಾರಸ್ವತವೆಂಬ ತೀರ್ಥಕ್ಕೆ ತೆರಳಬೇಕು. ಅಲ್ಲಿ ಮಂಖಣಕನೆಂಬ ಪ್ರಸಿದ್ಧನಾದ ಋಷಿಯಿರುವನು.

೫. ಪೂರ್ವದಲ್ಲಿ ಮಂಖಣಕನೆಂಬ ಋಷಿಯು ಕೈಗೆ ದರ್ಭೆಯ ಕೊನೆಯು ಚುಚ್ಚಲು ಆ ಕೈಯಿಂದ ಶಾಕ (ಸೊಪ್ಪಿನ) ರಸವು ಹೊರ ಹೊಮ್ಮಿತು.

೬. ಆ ಶಾಕರಸವನ್ನು ಕಂಡು ಋಷಿಯು ಸಂತೋಷದಿಂದ ಕುಣಿದಾಡಿದನು.

೭. ಅವನು ಕುಣಿಯುತ್ತಿರಲು ಅವನ ತೇಜಸ್ಸಿನಿಂದ ಮೋಹಿತ ವಾದ ಚರಾಚರಪ್ರಪಂಚವೆಲ್ಲವೂ ಕುಣಿಯಲು ಮೊದಲಿಟ್ಟಿತು.

೮. ಆಮೇಲೆ, ಬ್ರಹ್ಮಾದಿದೇವತೆಗಳೂ, ತಪೋಧನರಾದ ಋಷಿಗಳೂ ಮಹದೇವನಲ್ಲಿಗೆ ಬಂದು, 'ಪ್ರಭೂ! ಆತನು ಕುಣಿಯದಂತೆ ಮಾಡಬೇಕು' ಎಂದು ಕೇಳಿಕೊಂಡರು.

**ತತೋ ದೇವೋ ಮುನಿಂ ದೃಷ್ಟ್ವಾ ಹರ್ಷಾವಿಷ್ಟೇನ ಚೇತಸಾ ।**
**ನೃತ್ಯಂತಮಬ್ರವೀಚ್ಚೈನಂ ಸುರಾಣಾಂ ಹಿತಕಾಮ್ಯಯಾ ॥ ೯ ॥**
**ಅಹೋ! ಮಹರ್ಷೇ ಧರ್ಮಜ್ಞ ! ಕಿಮರ್ಥಂ ನೃತ್ಯತೇ ಭವಾನ್ ।**
**ಹರ್ಷಸ್ಥಾನಂ ಕಿಮರ್ಥಂ ವಾ ತವಾದ್ಯ ಮುನಿಪುಂಗವ ॥೧೦॥**

**॥ ಋಷಿರುವಾಚ ॥**

**ತಪಸ್ವಿನೋ ಧರ್ಮಪಥೇ ಸ್ಥಿತಸ್ಯ ದ್ವಿಜಸತ್ತಮ ।**
**ಕಿಂ ಮೇ ನಾನ್ಯಃ ಸಮೋಽಬ್ರಹ್ಮನ್ ಕ್ಷತಾಚ್ಛಾಕರಸೋಽಸ್ರವತ್ ॥೧೧॥**
**ಯಂ ದೃಷ್ಟ್ವಾ ಸಂಪ್ರನೃತ್ತೋಽಹಂ ಹರ್ಷೇಣ ಮಹತಾನ್ವಿತಃ ।**
**ತಂ ಪ್ರಹಸ್ಯಾಬ್ರವೀದ್ದೇವಃ ಋಷಿಂ ರಾಗೇಣ ಮೋಹಿತಂ ॥೧೨॥**

---

೯. ಮಹಾದೇವನು ಮಹಾಸಂತೋಷದಿಂದ ಕುಣಿಯುತ್ತಿರುವ ಈ ಋಷಿಯ ಬಳಿ ಸಾರಿ, ದೇವತೆಗಳ ಹಿತವನ್ನು ಬಯಸಿ, ಇಂತು ಹೇಳಿದನು.

೧೦. ಎಲೈ ಧರ್ಮಜ್ಞನಾದ ಮಹರ್ಷಿಯೇ! ನೀನೇತಕ್ಕೆ ಕುಣಿಯುತ್ತಿದ್ದೀಯೆ? ಈಗಿನ ಈ ನಿನ್ನ ಹರ್ಷಕ್ಕೆ ಕಾರಣವಾದರೂ ಏನು?

೧೧. ಋಷಿಯು ಹೇಳಿದನು: ಓ ದ್ವಿಜೋತ್ತಮಾ! ಧರ್ಮಮಾರ್ಗ ನಿರತನಾದ ನನಗೆ ಸಮನಾದ ತಪಸ್ವಿಯು ಯಾರೂ ಇಲ್ಲ! ಇದೋ ನನ್ನ ಕೈಗಾಯದಿಂದ ಶಾಕರಸವು ಹೊರಹೊಮ್ಮಿತು.

೧೨. ಅದನ್ನು ಕಂಡು ಹೆಚ್ಚು ಸಂತೋಷವುಂಟಾದುದರಿಂದ ಕುಣಿದಾಡಿದೆನು. ಸಂತೋಷವೆಂಬ ಮೋಹದಿಂದ ಕೂಡಿದ ಆ ಋಷಿಯನ್ನು ನೋಡಿ ನಕ್ಕು, ದೇವದೇವನು, ‘ನೋಡು, ನಿನ್ನಂತೆ ನಾನು ಆಶ್ಚರ್ಯವನ್ನು ಹೊಂದಲಾರೆ, ಎಂದನು.

ಅಹಂತು ವಿಸ್ಮಯಯುಂ ವಿಪ್ರ ನ ಗಚ್ಛಾಮೀಹ ಪಶ್ಯಮಾಂ ।
ಏವಮುಕ್ತ್ವಾ ನಶ್ರೇಷ್ಠ ಮಹಾದೇವೇನ ವೈ ತದಾ ॥೧೩॥

ಅಂಗುಲ್ಯಗ್ರೇಣ ರಾಜೇಂದ್ರ ಸ್ವಾಂಗುಷ್ಠಸ್ತಾಡಿತೋಽನಘ ।
ತತೋ ಭಸ್ಮ ಕ್ಷತಾದ್ರಾಜನ್ ನಿಸ್ಸೃತಂ ಹೇಮಸನ್ನಿಭಂ ॥೧೪॥

ತದ್ದೃಷ್ಟ್ವಾ ವ್ರೀಡಿತೋ ರಾಜನ್! ಸ ಮುನಿಃ ಪಾದಯೋರ್ನತಃ ।
ನಾನ್ಯಂದೇವಮಹಂ ಮನ್ಯೇ ರುದ್ರಾತ್ಪರತರಂ ಮಹತ್ ॥೧೫॥

ಸುರಾಸುರಸ್ಯ ಜಗತೋ ಗತಿಸ್ತ್ವಮಸಿ ಶೂಲಧೃತ್ ।
ತ್ವಯಾಸೃಷ್ಟಮಿದಂ ವಿಶ್ವಂ ತ್ರೈಲೋಕ್ಯಂ ಸಚರಾಚರಂ ॥೧೬॥

ತ್ವಾಮೇವ ಭಗವನ್ ಸರ್ವೇ ಪ್ರವಿಶನ್ತಿ ಯುಗಕ್ಷಯೇ ।
ದೇವೈರಪಿ ನ ಶಕ್ಯಸ್ತ್ವಂ ಪರಿಜ್ಞಾತುಂ ಕುತೋ ಮಯಾ ॥೧೭॥

---

೧೩–೧೪. ಹೀಗೆಂದು ಹೇಳಿ ತನ್ನ ಬೆರಳಿನ ತುದಿಯಿಂದ ಹೆಬ್ಬೆಟ್ಟನ್ನು ಬಡಿದನು. ಆಗ ಆ ಗಾಯದಿಂದ ಚಿನ್ನದಂತೆ ಹೊಂಬಣ್ಣವಾಗಿ ಥಳಥಳಿಸುವ ಭಸ್ಮವು ಉದುರತೊಡಗಿತು.

೧೫. ಅದನ್ನು ಕಂಡು ಆ ಮುನಿಯು ನಾಚಿ, ದೇವನಪಾದಗಳಿಗೆರಗಿ, ರುದ್ರನಿಗಿಂತಲೂ ಉತ್ತಮವಾದ ಬೇರೆ ದೇವರೇ ಇಲ್ಲವೆಂದು ತಾನು ತಿಳಿದನು.

೧೬. ಹೇ, ಶೂಲಪಾಣೀ! ದೇವರಾಕ್ಷಸರಿಂದ ಕೂಡಿದ ಈ ಜಗತ್ತಿಗೆ ನೀನೇ ಗತಿಯು, ಈ ಮೂರುಲೋಕವನ್ನು ಸೃಷ್ಟಿಮಾಡಿದವನು ನೀನೇ.

೧೭. ಎಲ್ಲಾ ಪ್ರಾಣಿಗಳೂ ಪ್ರಳಯಕಾಲದಲ್ಲಿ ನಿನ್ನನ್ನೇ ಸೇರುತ್ತವೆ. ದೇವತೆಗಳೂ ನಿನ್ನನ್ನು ತಿಳಿಯಲು ಸಾಧ್ಯವಿಲ್ಲದಿರುವಾಗ ನಾನು ಹೇಗೆ ನಿನ್ನನ್ನರಿಯಲಿ?

ತ್ವಯಿ ಸರ್ವೇಶ ದೃಶ್ಯನ್ತೇ ಸುರಾ ಬ್ರಹ್ಮಾದಯೋಽನಘ ।
ಸರ್ವಸ್ತ್ವಮಸಿ ಲೋಕಾನಾಂ ಕರ್ತಾ ಕಾರಯಿತಾ ನ್ವಹಂ ॥೧೮॥

ತ್ವತ್ಪ್ರಸಾದಾನ್ಮಹಾದೇವ ತಪೋ ಮೇ ನ ಕ್ಷರೇತ ವೈ ।
ತತೋ ದೇವಃ ಪ್ರಹೃಷ್ಟಾತ್ಮಾ ಬ್ರಹ್ಮರ್ಷಿಮಿದಮಬ್ರವೀತ್ ॥೧೯॥

ತಪಸ್ತೇ ವರ್ಧತಾಂ ವಿಪ್ರ ಮತ್ಪ್ರಸಾದಾತ್ ಸಹಸ್ರಧಾ ।
ಆಶ್ರಮೇ ಚೇಹ ವತ್ಸ್ಯಾಮಿ ತ್ವಯಾ ಸಾರ್ಧಂ ಮಹಾಮುನೇ ॥೨೦॥

ಸಪ್ತಸಾರಸ್ವತೇ ಸ್ನಾತ್ವಾ ಅರ್ಚಯಿಷ್ಯನ್ತಿ ಯೇ ತು ಮಾಂ ।
ನ ತೇಷಾಂ ದುರ್ಲಭಂ ಕಿಂಚಿದಿಹಲೋಕೇ ಪರತ್ರ ವಾ ॥೨೧॥

ಗಚ್ಛೇಯುಃ ಸಾರಸ್ವತಂ ಚಾಪಿ ಲೋಕಂ ನಾಸ್ತ್ಯತ್ರ ಸಂಶಯಃ ।
ಏವಮುಕ್ತ್ವಾ ಮಹಾದೇವಃ ತತ್ರೈವಾನ್ತರಧೀಯತ ॥೨೨॥

---

೧೮. ಬ್ರಹ್ಮಾದಿದೇವತೆಗಳೂ ನಿನ್ನಲ್ಲೇ ಕಂಡುಬರುತ್ತಾರೆ. ಲೋಕಗಳೆಲ್ಲವನ್ನೂ ಮಾಡುವವನು ಮತ್ತು ಮಾಡಿಸುವವನೂ ನೀನೇ.

೧೯. ನಿನ್ನ ಅನುಗ್ರಹದಿಂದ ನನ್ನ ತಪಸ್ಸು ನಾಶವಾಗದಿರಲಿ, ಎಂದನು. ಆಗ ಸಂತುಷ್ಟನಾದ ಮಹಾದೇವನು ಆ ಬ್ರಹ್ಮರ್ಷಿಯನ್ನು ಕುರಿತು ಇಂತೆಂದನು.

೨೦. ನನ್ನ ಅನುಗ್ರಹದಿಂದ ನಿನ್ನ ತಪಸ್ಸು ಸಹಸ್ರಮುಖವಾಗಿ ಬೆಳೆಯಲಿ. ನಿನ್ನೊಡನೆ ನಿನ್ನ ಆಶ್ರಮದಲ್ಲಿಯೇ ಇರುತ್ತೇನೆ.

೨೧. ಈ ಸಪ್ತಸಾರಸ್ವತತೀರ್ಥದಲ್ಲಿ ಸ್ನಾನಮಾಡಿ ಯಾರು ನನ್ನನ್ನು ಪೂಜಿಸುವರೋ ಅವರಿಗೆ ಇಹಪರಗಳಲ್ಲಿ ದುರ್ಲಭವಾದುದೊಂದೂ ಇಲ್ಲ.

೨೨. ಅಂಥವನು ಸಾರಸ್ವತವೆಂಬ ಲೋಕವನ್ನೂ ಹೊಂದುತ್ತಾನೆ. ಈ ಅಂಶದಲ್ಲಿ ಸಂಶಯವಿಲ್ಲ. ಹೀಗೆ ಹೇಳಿ ಮಹಾದೇವನು ಅಂತರ್ಧಾನ ಹೊಂದಿದನು.

ತತಸ್ತ್ವೌಶನಸಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಂ ।
ಯತ್ರ ಬ್ರಹ್ಮಾದಯೋ ದೇವಾಃ ಋಷಯಶ್ಚ ತಪೋಧನಾಃ ॥೨೩॥
ಕಾರ್ತಿಕೇಯಶ್ಚ ಭಗವಾನ್ ತ್ರಿಸಂಧ್ಯಂ ಕಿಲ ಭಾರತ ।
ಸಾನ್ನಿಧ್ಯಮಕರೋತ್ತತ್ರ ಭಾರ್ಗವಪ್ರಿಯಕಾಮ್ಯಯಾ ॥೨೪॥
ಕಪಾಲಮೋಚನಂ ತೀರ್ಥಂ ಸರ್ವಪಾಪಪ್ರಣಾಶನಂ ।
ತತ್ರ ಸ್ನಾತ್ವಾ ನರವ್ಯಾಘ್ರ ಸರ್ವಪಾಪೈಃ ಪ್ರಮುಚ್ಯತೇ ॥೨೫॥
ಅಗ್ನಿತೀರ್ಥಂ ತತೋ ಗಚ್ಛೇತ್ ಸ್ನಾತ್ವಾ ಚ ಭರತರ್ಷಭ
ಅಗ್ನಿಲೋಕಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥೨೬॥
ವಿಶ್ವಾಮಿತ್ರಸ್ಯ ತತ್ರೈವ ತೀರ್ಥಂ ಭರತಸತ್ತಮ ।
ತತ್ರ ಸ್ನಾತ್ವಾ ಮಹಾರಾಜ ಬ್ರಾಹ್ಮಣ್ಯಮಭಿಜಾಯತೆ ॥೨೭॥
ಬ್ರಹ್ಮಯೋನಿಂ ಸಮಾಸಾದ್ಯ ಶುಚಿಃ ಪ್ರಯತಮಾನಸಃ ।
ತತ್ರ ಸ್ನಾತ್ವಾ ನರವ್ಯಾಘ್ರ ಬ್ರಹ್ಮಲೋಕಂ ಪ್ರಪದ್ಯತೇ ॥೨೮॥

---

೨೩–೨೪. ಆಮೇಲೆ ಪ್ರಸಿದ್ಧವಾದ ಐಶನಸವೆಂಬ ಕ್ಷೇತ್ರಕ್ಕೆ ಹೋಗಬೇಕು. ಆ ಸ್ಥಳದಲ್ಲಿ ತಮಗೆ ಪರುಶರಾಮನಲ್ಲಿರುವ ಪ್ರೀತಿಯಿಂದ ಬ್ರಹ್ಮಾದಿ ದೇವತೆಗಳೂ, ಋಷಿಗಳೂ, ಷಣ್ಮುಖನೂ ಸಹ ಮೂರುಕಾಲಗಳಲ್ಲಿಯೂ ಸ್ವಾನ್ನಿಧ್ಯವನ್ನು ಹೊಂದಿದ್ದರು.

೨೫. ಮುಂದೆ ಹೋದರೆ ಸಕಲಪಾಪಗಳನ್ನೂ ಪರಿಹರಿಸುವ ಕಪಾಲಮೋಚನವೆಂಬ ತೀರ್ಥವಿರುವುದು. ಅಲ್ಲಿ ಸ್ನಾನಮಾಡಿದ ಮನುಷ್ಯನು ಎಲ್ಲಾಪಾಪಗಳಿಂದಲೂ ಬಿಡುಗಡೆ ಹೊಂದುವನು.

೨೬. ಮುಂದೆ ಇರುವ ಅಗ್ನಿತೀರ್ಥಕ್ಕೆ ಹೋಗಿ ಸ್ನಾನಮಾಡಲು ಅಗ್ನಿಲೋಕವನ್ನು ಹೊಂದುವನು. ಮತ್ತು ಆತನು ಕುಲವನ್ನೂ ಉದ್ಧಾರ ಮಾಡುತ್ತಾನೆ.

೨೭–೨೮. ವಿಶ್ವಾಮಿತ್ರತೀರ್ಥದಲ್ಲಿ ಸ್ನಾನಮಾಡಲು ಬ್ರಾಹ್ಮಣ್ಯವುಂಟಾಗುವುದು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿ ಶುದ್ಧಹೃದಯನಾಗಿ ಅಲ್ಲಿಮಿಂದು ಬ್ರಹ್ಮಲೋಕವನ್ನು ಹೊಂದುತ್ತಾನೆ.

ಪುನಾತ್ಯಾಸಪ್ತಮಂ ಚೈವ ಕುಲಂ ನಾಸ್ತ್ಯತ್ರ ಸಂಶಯಃ ।
ತತೋಗಚ್ಛೇತ ರಾಜೇಂದ್ರ ತೀರ್ಥಂ ತ್ರೈಲೋಕ್ಯ ಮುತ್ತಮಂ ॥
ಪೃಥೂದಕಮಿತಿಖ್ಯಾತಂ ಕಾರ್ತಿಕೇಯಸ್ಯ ವೈ ನೃಪ ।
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ॥೩೦॥
ಅಜ್ಞಾನಾತ್ ಜ್ಞಾನತೋವಾಪಿ ಸ್ತ್ರಿಯಾ ವಾ ಪುರುಷೇಣ ವಾ ।
ಯತ್ಕಿಂಚಿದಶುಭಂ ಕರ್ಮ ಕೃತಂ ಮಾನುಷಬುದ್ಧಿನಾ ॥೩೧॥
ತತ್ಸರ್ವಂ ನಶ್ಯತೇ ತತ್ರ ಸ್ನಾತಮಾತ್ರಸ್ಯ ಭಾರತ ।
ಅಶ್ವಮೇಧಫಲಂ ಚಾಪಿ ಲಭತೇ ಸ್ವರ್ಗಮೇವ ಚ ॥೩೨॥
ಪುಣ್ಯಾಮಾಹುಃ ಕುರುಕ್ಷೇತ್ರಂ ಕುರುಕ್ಷೇತ್ರಾತ್ ಸರಸ್ವತೀಂ ।
ಸರಸ್ವತ್ಯಾಶ್ಚ ತೀರ್ಥಾನಿ ತೀರ್ಥೇಭ್ಯಶ್ಚ ಪೃಥೂದಕಂ ॥೩೩॥

---

೨೯. ಏಳುಕುಲಗಳನ್ನು ಉದ್ಧಾರ ಮಾಡುತ್ತಾನೆಂಬುದರಲ್ಲಿ ಸಂಶಯವಿಲ್ಲ.

೩೦. ಮೂರುಲೋಕದಲ್ಲಿಯೂ ಶ್ರೇಷ್ಠವಾದ, ಪೃಥೂದಕವೆಂದು ಪ್ರಖ್ಯಾತವಾದ ಕಾರ್ತಿಕೇಯತೀರ್ಥವನ್ನು ಹೊಂದಿ ಅಲ್ಲಿ ಪಿತೃದೇವತೆಗಳ ಅರ್ಚನೆಯನ್ನು ಮಾಡತಕ್ಕದ್ದು.

೩೧. ಗಂಡಸಾಗಲಿ, ಹೆಂಗಸಾಗಲಿ, ಮನುಷ್ಯಸ್ವಭಾವಾನುಗುಣವಾಗಿ, ತಿಳಿದೋ ತಿಳಿಯದೆಯೋ ಮಾಡಿದ ಪಾಪವೆಲ್ಲವೂ ಇಲ್ಲಿ ಸ್ನಾನ ಮಾಡಿದ ಮಾತ್ರದಿಂದಲೇ ನಾಶವಾಗುತ್ತದೆ.

೩೨–೩೪. ಅಶ್ವಮೇಧ ಫಲವನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾನೆ. ಕುರುಕ್ಷೇತ್ರವನ್ನು ಪುಣ್ಯಕ್ಷೇತ್ರವೆನ್ನುವರು. ಅದಕ್ಕಿಂತಲೂ ಸರಸ್ವತಿಯು ಪುಣ್ಯತರವು. ಆ ಸರಸ್ವತಿಗಿಂತಲೂ ಪೃಥೂದಕವು ಪುಣ್ಯತಮವು. ತೀರ್ಥಗಳಲ್ಲೆಲ್ಲಾ ಉತ್ತಮವಾದ ಈ ಪೃಥೂದಕದಲ್ಲಿ, ಜಪ

ಉತ್ತಮೋ ಸರ್ವತೀರ್ಥಾನಾಂ ಯಸ್ತ್ಯಜೇದಾತ್ಮನಃ ತನುಂ ।
ಪೃಥೂದಕೇ ಜಪ್ಯಪರಃ ನೈವ ಸಂಸರಣಂ ಲಭೇತ್ ॥೩೪॥

ಗೀತಂ ಸನತ್ಕುಮಾರೇಣ ವ್ಯಾಸೇನ ಚ ಮಹಾತ್ಮನಾ ।
ವೇದೇ ಚ ನಿಯತಂ ರಾಜನ್ ಅಭಿಗಚ್ಛೇತ್ ಪೃಥೂದಕಂ ॥೩೫॥

ಪೃಥೂದಕಾತ್ಪುಣ್ಯತಮಂ ನಾನ್ಯತ್ತೀರ್ಥಂ ನರೋತ್ತಮ ।
ಏತನ್ಮೇಧ್ಯಂ ಪವಿತ್ರಂ ಚ ಪಾವನಂ ಚ ನ ಸಂಶಯಃ ॥೩೬॥

ತತ್ರಸ್ನಾತ್ವಾ ದಿವಂ ಯಾನ್ತಿ ಅಪಿ ಪಾಪಕೃತೋ ಜನಾಃ ।
ಪೃಥೂದಕಂ ನರಶ್ರೇಷ್ಠ ಪ್ರಾಹುರೇವಂ ಮನೀಷಿಣಃ ॥೩೭॥

ಮಧುಪೂರಂತು ತತ್ರೈವ ತೀರ್ಥಂ ಭರತಸತ್ತಮ ।
ತತ್ರ ಸ್ನಾತ್ವಾ ನರೋರಾಜನ್ ಗೋಸಹಸ್ರಫಲಂ ಲಭೇತ್ ॥೩೮॥

---

ಪರನಾಗಿ ತನ್ನ ದೇಹವನ್ನು ಬಿಟ್ಟರೆ, ಪುನರ್ಜನ್ಮವನ್ನು ಪಡೆಯುವುದಿಲ್ಲ.

೩೫–೩೬. ಸನತ್ಕುಮಾರನಿಂದಲೂ, ಮಹಾತ್ಮರಾದ ವ್ಯಾಸರಿಂದಲೂ, ವೇದದಲ್ಲಿಯೂ ಸಹ ಹೊಗಳಲ್ಪಟ್ಟ ಈ ಪೃಥೂದಕವನ್ನು ಸೇವಿಸಬೇಕು. ಇದಕ್ಕಿಂತಲೂ ಪುಣ್ಯತಮವಾದುದು ಮತ್ತೊಂದಿಲ್ಲ. ಇದು ಪವಿತ್ರವೂ ಪಾವನವೂ ಆದುದುಎಂಬುದರಲ್ಲಿ ಸಂಶಯವಿಲ್ಲ.

೩೭. ಅಲ್ಲಿ ಮಿಂದ ಪಾಪಿಗಳೂ ಸಹ ಸ್ವರ್ಗಲೋಕವನ್ನು ಹೊಂದುತ್ತಾರೆ. ಎಲೈ, ರಾಜೇಂದ್ರ! ಪೃಥೂದಕವನ್ನು ತಿಳಿದ ಹಿರಿಯರು ಈರೀತಿ ಹೊಗಳುವರು.

೩೮. ಅಲ್ಲಿಯೇ ಮಧುಪೂರವೆಂಬ ಮತ್ತೊಂದು ತೀರ್ಥವಿರುವುದು. ಅಲ್ಲಿ ಸ್ನಾನಮಾಡಲು ಸಾವಿರ ಗೋವುಗಳನ್ನು ದಾನಮಾಡಿದ ಫಲವುಂಟಾಗುವುದು.

ತತೋಽಗಚ್ಛೇನ್ನರಶ್ರೇಷ್ಠ ತೀರ್ಥಂ ದೇವ್ಯಾ ಯಥಾಕ್ರಮಂ ।
ಸರಸ್ವತ್ಯಾರುಣಾಯಾಶ್ಚ ಸಂಗಮಂ ಲೋಕವಿಶ್ರುತಂ ॥೩೯॥

ತ್ರಿರಾತ್ರೋಪೋಷಿತಃ ಸ್ನಾತ್ವಾ ಮುಚ್ಯತೇ ಬ್ರಹ್ಮಹತ್ಯಯಾ ।
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಚೈವ ಸಮಶ್ನುತೇ ॥೪೦॥

ಪುನಾತ್ಯಾಸಪ್ತಮಂ ಚೈವ ಕುಲಂ ನಾಸ್ತ್ಯತ್ರ ಸಂಶಯಃ ।
ಅವಕೀರ್ಣಂಚ ತತ್ರೈವ ತೀರ್ಥಂ ಕುರುಕುಲೋದ್ವಹ ॥೪೧॥

ವಿಪ್ರಾಣಾಮನುಕಂಪಾರ್ಥಂ ದರ್ಭಿಣಾ ನಿರ್ಮಿತಾ ಪುರಾ ।
ವ್ರತೋಪನಯನಾಭ್ಯಾಂಚಾಪ್ಯುಪವಾಸೇನ ವಾ ದ್ವಿಜಃ ॥೪೨॥

ಕ್ರಿಯಾಮಂತ್ರೈಶ್ಚ ಸಂಯುಕ್ತೋ ಬ್ರಾಹ್ಮಣಸ್ಸ್ಯಾನ್ನ ಸಂಶಯಃ ।
ಕ್ರಿಯಾಮಂತ್ರವಿಹೀನೋಽಪಿ ತತ್ರ ಸ್ನಾತ್ವಾ ನರರ್ಷಭ ॥೪೩॥

---

೩೯–೪೦. ಹೀಗೆಯೇ ಮುಂದೆ ಪ್ರಸಿದ್ಧವಾದ, ಸರಸ್ವತೀ ಮತ್ತು ಅರುಣಾನದಿಗಳು ಕೂಡುವ ಸಂಗಮಸ್ಥಾನವನ್ನು ಸೇರಿ, ಸ್ನಾನಮಾಡಿ ಮೂರುರಾತ್ರಿಗಳು ಉಪವಾಸವಿರಲು ಬ್ರಹ್ಮಹತ್ಯೆಯಿಂದ ಬಿಡಲ್ಪಡುವನು. ಅಗ್ನಿಷ್ಟೋಮ, ಅತಿರಾತ್ರವೆಂಬ ಯಾಗಗಳ ಫಲವನ್ನು ಹೊಂದುತ್ತಾನೆ.

೪೧. ತನ್ನ ಕುಲವನ್ನು ಏಳುತಲೆಗಳವರೆಗೂ ಪಾವನಗೊಳಿಸುವನು. ಅವಕೀರ್ಣವೆಂಬ ತೀರ್ಥವೂ ಅಲ್ಲಿಯೇ ಇರುವುದು. ಇದನ್ನು ದರ್ಭಿಯೆಂಬ ಮುನಿಯು ಬ್ರಾಹ್ಮಣರಮೇಲಿನಕನಿಕರದಿಂದ ಹಿಂದೆ ನಿರ್ಮಿಸಿದನು.

೪೨. ವ್ರತ, ಉಪನಯನ, ಉಪವಾಸ, ಸತ್ಕ್ರಿಯೆ, ಮಂತ್ರ ಜಪ, ಇವುಗಳಿಂದ ಬ್ರಾಹ್ಮಣನಾಗುವನು.

೪೩. ಕ್ರಿಯಾಶುದ್ಧಿ, ಮಂತ್ರಶುದ್ಧಿಯಿಲ್ಲದಿದ್ದರೂ ಸರಿ, ಅಲ್ಲಿ ಸ್ನಾನಮಾಡಲು ವ್ರತಗಳನ್ನು ಸಾಂಗವಾಗಿ ಆಚರಿಸಿದಂತೆಯೇ ಆಗುವುದು. ಇದನ್ನು ಹಿಂದಿನಿಂದಲೂ ಎಲ್ಲರೂ ಬಲ್ಲರು.

ಚೀರ್ಣವ್ರತೋ ಭವೇದ್ವಿಪ್ರೋ ದೃಷ್ಟಮೇತತ್ಪುರಾತನಂ ।
ಸಮುದ್ರಾಶ್ಚಾಪಿ ಚತ್ವಾರಃ ಸಮಾನೀತಾಶ್ಚ ದರ್ಭಿಣಾ ॥೪೪॥

ತತ್ರ ಸ್ನಾತ್ವಾನರವ್ಯಾಘ್ರ ನ ದುರ್ಗತಿಮವಾಪ್ನುಯಾತ್ ।
ಫಲಾನಿ ಗೋಸಹಸ್ರಾಣಾಂ ಚತುರ್ಣಾಂ ವಿಂದತೇ ಚ ಸಃ ॥೪೫॥

ತತೋಗಚ್ಛೇತ ರಾಜೇಂದ್ರ ತೀರ್ಥಂ ಶತಸಹಸ್ರಕಂ ।
ಸಾಹಸ್ರಕಂ ಚ ತತ್ರೈವ ದ್ವೇ ತೀರ್ಥೇ ಲೋಕವಿಶ್ರುತೇ ॥೪೬॥

ಉಭಯೋರ್ಹಿ ನರಸ್ಸ್ನಾತ್ವಾ ಗೋಸಹಸ್ರಫಲಂ ಲಭೇತ್ ।
ದಾನಂ ವಾಪ್ಯುಪವಾಸೋವಾ ಸಹಸ್ರಗುಣಿತೋ ಭವೇತ್ ॥೪೭॥

ತತೋಗಚ್ಛೇತ ರಾಜೇಂದ್ರ ರೇಣುಕಾತೀರ್ಥಮುತ್ತಮಂ ।
ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ॥೪೮॥

---

೪೪. ನಾಲ್ಕು ಸಮುದ್ರಗಳನ್ನೂ ದರ್ಭಿಯು ಅಲ್ಲಿ ನೆಲಸಿರುವಂತೆ ಮಾಡಿರುವುದರಿಂದ ಅಲ್ಲಿ ಸ್ನಾನಮಾಡಿದ ಮನುಷ್ಯನು ದುರ್ಗತಿಯನ್ನು ಹೊಂದುವುದಿಲ್ಲ.

೪೫. ಅವನು ಅಲ್ಲಿ ನಾಲ್ಕುಸಾವಿರ ಗೋವುಗಳನ್ನು ದಾನಮಾಡಿದ ಫಲವನ್ನು ಹೊಂದುತ್ತಾನೆ.

೪೬–೪೭. ಆಮೇಲೆ, ಅಲ್ಲೇ ಇರುವ, ಪ್ರಖ್ಯಾತವಾದ ಶತಸಹಸ್ರಕ, ಸಾಹಸ್ರಕವೆಂಬೆರಡು ತೀರ್ಥಗಳನ್ನು ಸೇವಿಸಬೇಕು. ಅವುಗಳಲ್ಲಿ ಸ್ನಾನ ಮಾಡಿದ ಮನುಷ್ಯನು ಸಹಸ್ರಗೋದಾನವನ್ನು ಮಾಡಿದ ಫಲವನ್ನು ಪಡೆಯುತ್ತಾನೆ. ಅಲ್ಲಿ ಮಾಡಿದ ದಾನವೂ, ಉಪವಾಸವೂ ಒಂದಕ್ಕೆ ಸಾವಿರದಷ್ಟು ಹೆಚ್ಚುವುದು.

೪೮. ಮುಂದೆ ಶ್ರೇಷ್ಠವಾದ ರೇಣುಕಾತೀರ್ಥವು ಸಿಗುವುದು. ಪಿತೃಗಳ ಮತ್ತು ದೇವತೆಗಳ ಪೂಜೆಯಲ್ಲಿ ನಿರತನಾದವನು ಅಲ್ಲಿ ಸ್ನಾನ ಮಾಡಲು, ಪಾಪಗಳೆಲ್ಲವನ್ನೂ ಕಳೆದು ಅಗ್ನಿಷ್ಟೋಮಫಲವನ್ನು ಹೊಂದುವನು.

ಸರ್ವಪಾಪವಿಶುದ್ಧಾತ್ಮಾ ಅಗ್ನಿಷ್ಟೋಮಫಲಂ ಲಭೇತ್ ।
ವಿಮೋಚನ ಉಪಸ್ಪೃಶ್ಯ ಜಿತಮನ್ಯುಃ ಜಿತೇನ್ದ್ರಿಯಃ ॥೪೯॥
ಪ್ರತಿಗ್ರಹಕೃತೈಃ ಪಾಪೈಃ ಸರ್ವೈಃ ಸಂಪರಿಮುಚ್ಯತೇ ।
ತತಃ ಪಂಚವಟಂ ಗತ್ವಾ ಬ್ರಹ್ಮಚಾರೀ ಜಿತೇನ್ದ್ರಿಯಃ ॥೫೦॥
ಪುಣ್ಯೇನ ಮಹತಾ ಯುಕ್ತಃ ಸ್ವರ್ಗಲೋಕೇ ಮಹೀಯತೇ ।
ಯತ್ರ ಯೋಗೇಶ್ವರಃ ಸ್ಥಾಣುಃ ಸ್ವಯಮೇವ ವೃಷಧ್ವಜಃ ॥೫೧॥
ತಮರ್ಚಯಿತ್ವಾ ದೇವೇಶಂ ಗಮನಾದೇವ ಸಿದ್ಧ್ಯತಿ ।
ತೈಜಸಂ ವಾರುಣಂ ತೀರ್ಥಂ ದೀಪ್ಯತೇ ಸ್ವೇನ ತೇಜಸಾ ॥೫೨॥
ಯತ್ರ ಬ್ರಹ್ಮಾದಿಭಿರ್ದೇವೈ ಋಷಿಭಿಶ್ಚ ತಪೋಧನೈಃ ।
ಸೈನಾಪತ್ಯೇ ಚ ದೇವಾನಾಂ ಅಭಿಷಿಕ್ತೋ ಗುಹಸ್ತದಾ ॥೫೩॥

---

೪೯. ಕೋಪವಿಲ್ಲದೆ, ಜಿತೇಂದ್ರಿಯನಾಗಿ, ವಿಮೋಚನದಲ್ಲಿ ಸ್ನಾನ ಮಾಡಿದರೆ, ದಾನ ತೆಗೆದುಕೊಂಡುದರಿಂದ ಉಂಟಾದ ಎಲ್ಲಾಪಾಪಗಳಿಂದಲೂ ಮುಕ್ತನಾಗುತ್ತಾನೆ.

೫೦. ಆಮೇಲೆ ಪಂಚವಟವೆಂಬ ಕ್ಷೇತ್ರವಿಹುದು. ಅಲ್ಲಿ ಜಿತೇನ್ದ್ರಿಯನಾಗಿ ಬ್ರಹ್ಮಚರ್ಯದಿಂದಿರಲು, ಬಹಳ ಪುಣ್ಯವನ್ನುಗಳಿಸಿ ಸ್ವರ್ಗಲೋಕದಲ್ಲಿ ಮೆರೆಯುವನು.

೫೧. ಅಲ್ಲಿ ಶಿವನು ತಾನಾಗಿಯೇ ನೆಲಸಿರುವನು. ಆತನನ್ನು ಪೂಜೆಮಾಡಿ ಹೋಗೋಣದರಿಂದಲೇ ಮೋಕ್ಷ ಬರುವುದು.

೫೨–೫೩. ಮುಂದೆ ಉಜ್ಜ್ವಲವಾದ ತೈಜಸವೆಂಬ ವಾರುಣ ತೀರ್ಥವಿರುವುದು. ಹಿಂದೆ ಅಲ್ಲಿ ಬ್ರಹ್ಮಾದಿದೇವತೆಗಳೂ ತಪೋಧನರಾದ ಮಹರ್ಷಿಗಳೂ ಷಣ್ಮುಖನಿಗೆ ದೇವಸೈನ್ಯದ ನಾಯಕತನದ ಪಟ್ಟಕಟ್ಟಿದರು.

ತೈಜಸಸ್ಯ ತು ಪೂರ್ವೇಣ ಕುರುತೀರ್ಥಂ ಕುರೂದ್ವಹ ।
ಕುರುತೀರ್ಥೇ ನರಸ್ಸ್ನಾತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ ॥೫೪॥
ಸರ್ವಪಾಪವಿಶುದ್ಧಾತ್ಮಾ ರುದ್ರಲೋಕಂ ಪ್ರಪದ್ಯತೇ ।
ಸ್ವರ್ಗದ್ವಾರಂ ತತೋ ಗಚ್ಛೇತ್ ನಿಯತೋ ನಿಯತಾಶನಃ ॥೫೫॥
ಅಗ್ನಿಷ್ಟೋಮಮವಾಪ್ನೋತಿ ಬ್ರಹ್ಮಲೋಕಂ ಚ ಗಚ್ಛತಿ ।
ತತೋ ಗಚ್ಛೇದನರಕಂ ತೀರ್ಥಸೇವೀ ನರಾಧಿಪ ॥೫೬॥
ತತ್ರ ಸ್ನಾತ್ವಾ ನರೋ ರಾಜನ್ ನ ದುರ್ಗತಿಮವಾಪ್ನುಯಾತ್ ।
ತತ್ರ ಬ್ರಹ್ಮಾ ಸ್ವಯಂ ನಿತ್ಯಂ ದೇವೈಸ್ಸಹ ಮಹೀಯತೇ ॥೫೭॥
ಅಧ್ಯಾಸ್ತೇ ಪುರುಷವ್ಯಾಘ್ರ ನಾರಾಯಣಪುರೋಗಮೈಃ ।
ಸಾನ್ನಿಧ್ಯಂ ಚೈವ ರಾಜೇನ್ದ್ರ ರುದ್ರವೇದ್ಯಾಂ ಕುರೂದ್ವಹ ॥೫೮॥

---

೫೪. ಆ ತೈಜಸತೀರ್ಥದ ಬಲಕ್ಕೆ ಕುರುತೀರ್ಥವಿರುವುದು. ಅಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ ಬ್ರಹ್ಮಚರ್ಯದಿಂದಿರಲು, ಪಾಪರಹಿತ ನಾಗಿ ರುದ್ರಲೋಕವನ್ನು ಹೊಂದುತ್ತಾನೆ.

೫೫. ಆಮೇಲೆ, ನಿಯಮದಿಂದ, ಮಿತಾಹಾರಿಯಾಗಿ ಸ್ವರ್ಗದ್ವಾರ ವೆಂಬ ತೀರ್ಥವನ್ನು ಸೇವಿಸಲು ಅಗ್ನಿಷ್ಟೋಮಯಾಗದ ಫಲವನ್ನು ಪಡೆ ವುದಲ್ಲದೆ ಬ್ರಹ್ಮಲೋಕವನ್ನೂ ಹೊಂದುತ್ತಾನೆ.

೫೬. ಮುಂದೆ ಅನರಕವೆಂಬ ತೀರ್ಥವಿರುವುದು. ಅಲ್ಲಿ ಸ್ನಾನ ಮಾಡಿದರೆ ನರಕದರ್ಶನವಿಲ್ಲ.

೫೭. ಅಲ್ಲಿ ಬ್ರಹ್ಮನು, ವಿಷ್ಣುವೇ ಮೊದಲಾದ ದೇವತೆಗಳೊಡನೆ ಸದಾ ವಿರಾಜಿಸುತ್ತಿರುವನು.

೫೮. ರುದ್ರವೇದಿಯ ಸಾನ್ನಿಧ್ಯವೂ ಅಲ್ಲಿರುವುದು. ಆ ದೇವಿ ಯನ್ನು ದರ್ಶಿಸಲು ನರಕಭಯವಿಲ್ಲ.

ಅಭಿಗಮ್ಯತು ತಾಂ ದೇವೀಂ ನ ದುರ್ಗತಿಮವಾಪ್ನುಯಾತ್ ।
ತತ್ರೈವ ಚ ಮಹಾರಾಜ ವಿಶ್ವೇಶ್ವರಮುಮಾಪತಿಂ ॥೫೯॥

ಅಭಿಗಮ್ಯ ಮಹಾದೇವಂ ಮುಚ್ಯತೇ ಸರ್ವಕಿಲ್ಬಿಷೈಃ ।
ನಾರಾಯಣಂ ಚಾಭಿಗಮ್ಯ ಪದ್ಮನಾಭಮರಿಂದಮಂ ॥೬೦॥

ಶೋಭಮಾನೋ ಮಹಾರಾಜ ವಿಷ್ಣುಲೋಕಂ ಪ್ರಪದ್ಯತೇ ।
ತೀರ್ಥೇಷು ಸರ್ವದೇವಾನಾಂ ಸ್ನಾತಮಾತ್ರೋ ನರಾಧಿಪ ॥೬೧॥

ಸರ್ವದುಃಖಪರಿತ್ಯಕ್ತೋ ದ್ಯೋತತೇ ಶಿವವತ್ಸದಾ ।
ತತಸ್ತ್ವಸ್ತಿಪುರಂ ಗಚ್ಛೇತ್ ತೀರ್ಥಸೇವೀ ನರಾಧಿಪ ॥೬೨॥

ಪಾವನಂ ತೀರ್ಥಮಾಸಾದ್ಯ ತರ್ಪಯೇತ್ಪಿತೃದೇವತಾಃ ।
ಅಗ್ನಿಷ್ಟೋಮಸ್ಯ ಯಜ್ಞಸ್ಯ ಫಲಮಾಪ್ನೋತಿ ಭಾರತ ॥೬೩॥

---

೫೯. ಅಲ್ಲಿಯೇ ವಿಶ್ವೇಶ್ವರನನ್ನು ಸಂದರ್ಶಿಸಲು ಸರ್ವಪಾಪವೂ ನಶಿಸುವುದು.

೬೦. ಅಲ್ಲಿ ನಾರಾಯಣನನ್ನು ನಮಸ್ಕರಿಸಿದರೆ ವಿಷ್ಣುಲೋಕವನ್ನು ಪಡೆವನು.

೬೧. ಸರ್ವದೇವತೀರ್ಥವೆಂಬ ಮತ್ತೊಂದು ತೀರ್ಥದಲ್ಲಿ ಸ್ನಾನ ಮಾಡಿದ ಮಾತ್ರದಿಂದ, ದುಃಖವೊಂದೂ ಇಲ್ಲದೆ ಶಿವನಂತೆ ಸದಾ ಪ್ರಕಾಶಿಸುತ್ತಾನೆ.

೬೨-೬೩. ಆಮೇಲೆ, ಅಸ್ತಿಪುರವೆಂಬ ತೀರ್ಥಕ್ಕೆ ತೆರಳಿ ಅಲ್ಲಿ ಸ್ನಾನ ಮಾಡಿ ಪಿತೃಗಳನ್ನು ತೃಪ್ತಿಗೊಳಿಸಲು, ಅಗ್ನಿಷ್ಟೋಮಯಾಗ ಫಲವನ್ನು ಹೊಂದುತ್ತಾನೆ.

ಗಂಗಾಹ್ರದಶ್ಚ ತತ್ರೈವ ಕೂಪಶ್ಚ ಭರತರ್ಷಭ ।
ತಿಸ್ರಃ ಕೋಟ್ಯಸ್ತು ತೀರ್ಥಾನಾಂ ತಸ್ಮಿನ್ ಕೂಪೇ ಮಹೀಪತೇ ॥೬೪॥
ತತ್ರ ಸ್ನಾತ್ವಾ ನರೋ ರಾಜನ್ ಬ್ರಹ್ಮಲೋಕಂ ಪ್ರಪದ್ಯತೇ ।
ಆಪಗಾಯಾಂ ನರಃ ಸ್ನಾತ್ವಾ ಅರ್ಚಯಿತ್ವಾ ಮಹೇಶ್ವರಂ ॥೬೫॥
ಗತಿಂ ಪರಾಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ।
ತತಃ ಸ್ಥಾಣುವಟಂ ಗಚ್ಛೇತ್ ತ್ರಿಷು ಲೋಕೇಷು ವಿಶ್ರುತಂ ॥೬೬॥
ತತ್ರ ಸ್ನಾತ್ವಾ ಸ್ಥಿತೋ ರಾತ್ರಿಂ ರುದ್ರಲೋಕಮವಾಪ್ನುಯಾತ್ ।
ಬದರೀಣಾಂ ವನಂ ಗಚ್ಛೇದ್ವಸಿಷ್ಠಸ್ಯಾಶ್ರಮಂ ಗತಃ ॥೬೭॥
ಬದರೀ ಭಕ್ಷ್ಯತೇ ಯತ್ರ ತ್ರಿರಾತ್ರೋಪೋಷಿತೈರ್ನರೈಃ ।
ಸಮ್ಯಗ್ದ್ವಾದಶವರ್ಷಾಣಿ ಬದರೀಂ ಭಕ್ಷಯೇತ್ತು ಯಃ ॥೬೮॥

---

೬೪. ಎಲೈ ದೊರೆಯೇ! ಗಂಗಾಹ್ರದವೆಂಬ ಒಂದು ಭಾವಿ ಯಿರುವುದು. ಮೂರುಕೋಟಿತೀರ್ಥಗಳೂ ಅಲ್ಲಿ ಅಡಗಿವೆ. ಅಲ್ಲಿ ಸ್ನಾನ ಮಾಡಿದವನು ಬ್ರಹ್ಮಲೋಕವನ್ನು ಹೊಂದುವನು.

೬೫. ಆ ಗಂಗಾಹ್ರದದಲ್ಲಿ ಸ್ನಾನಮಾಡಿ ಈಶನನ್ನು ಪೂಜಿಸಲು ಸದ್ಗತಿಯುಂಟಾಗುವುದು. ಕುಲವನ್ನೂ ಉದ್ಧರಿಸುವನು.

೬೬. ಅನಂತರ ಸ್ಥಾಣುವಟಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಒಂದು ರಾತ್ರಿಯಿದ್ದರೆ ರುದ್ರಲೋಕವನ್ನು ಹೊಂದುವನು.

೬೭. ಆಮೇಲೆ ವಸಿಷ್ಠಾಶ್ರಮಕ್ಕೆ ಬಂದು ಬದರಿವನಕ್ಕೆ ಹೋಗಬೇಕು. ಅಲ್ಲಿ ಮೂರುರಾತ್ರಿ ಉಪವಾಸವಿದ್ದು, ಆ ಬದರೀಫಲವನ್ನು (ಎಲಚಿಹಣ್ಣು) ತಿನ್ನಬೇಕು.

೬೮. ಯಾವನು ಹನ್ನೆರಡು ವರ್ಷಗಳಕಾಲ ಬದರೀಫಲವನ್ನೇ ತಿನ್ನುವನೋ ಅಲ್ಲಿ ಮೂರುರಾತ್ರಿ ಉಪವಾಸಮಾಡಿದವನ ಸಮಾನನಾಗುವನು.

ತ್ರಿರಾತ್ರೋಪೋಷಿತೈಶ್ಚೈವ ಭವೇತ್ತುತ್ಸ್ಯೋ ನರಾಧಿಪ ।
ಇಂದ್ರಮಾರ್ಗಂ ಸಮಾಸಾದ್ಯ ತೀರ್ಥಸೇವೀ ನರಾಧಿಪ ॥೬೯॥

ಅಹೋರಾತ್ರೋಪವಾಸೇನ ಸ್ವರ್ಗಲೋಕೇ ಮಹೀಯತೇ ।
ಏಕರಾತ್ರಂ ಸಮಾಸಾದ್ಯ ಏಕರಾತ್ರೋಷಿತೋ ನರಃ ॥೭೦॥

ನಿಯತಃ ಸತ್ಯವಾದೀ ಚ ಬ್ರಹ್ಮಲೋಕೇ ಮಹೀಯತೇ ।
ತಥಾ ಗಚ್ಛೇಚ್ಚ ರಾಜೇಂದ್ರ ತೀರ್ಥಂ ತ್ರೈ ಲೋಕ್ಯವಿಶ್ರುತಂ ।
ಆದಿತ್ಯಸ್ಯಾಶ್ರಮೋ ಯತ್ರ ತೇಜೋರಾಶೇರ್ಮಹಾತ್ಮನಃ ॥೭೧॥

ತಸ್ಮಿನ್ ತೀರ್ಥೇ ನರಸ್ಸ್ನಾತ್ವಾ ಪೂಜಯಿತ್ವಾ ವಿಭಾವಸುಂ ।
ಆದಿತ್ಯಲೋಕಂ ವ್ರಜತಿ ಕುಲಂ ಚೈವ ಸಮುದ್ಧರೇತ್ ॥೭೨॥

ಸೋಮತೀರ್ಥೇ ನರಸ್ಸ್ನಾತ್ವಾ ತೀರ್ಥಸೇವೀ ಕುರೂದ್ವಹ ।
ಸೋಮಲೋಕಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ॥೭೩॥

---

೬೯. ಇಂದ್ರಮಾರ್ಗವೆಂಬ ತೀರ್ಥವನ್ನು ಸೇವಿಸಿ ಒಂದು ದಿನ ಪೂರ್ತಿ ಉಪವಾಸವಿರಲು ಸ್ವರ್ಗಲೋಕದಲ್ಲಿ ಸುಖಿಸುವನು.

೭೦. ಏಕರಾತ್ರವೆಂಬ ತೀರ್ಥವನ್ನು ಸೇರಿ ಸ್ನಾನಮಾಡಿ ನಿಯಮ ಪರನಾಗಿ, ಸತ್ಯವನ್ನೇ ನುಡಿಯುತ್ತಾ, ಒಂದುರಾತ್ರಿ ಉಪವಾಸಮಾಡಿ ದರೆ ಬ್ರಹ್ಮಲೋಕದಲ್ಲಿ ಸುಖಿಸುವನು.

೭೧-೭೨. ಆಮೇಲೆ, ಆದಿತ್ಯನ ಆಶ್ರಮಕ್ಕೆ ಹೋಗಿ ಆದಿತ್ಯತೀರ್ಥ ವಲ್ಲಿ ಸ್ನಾನಮಾಡಿ ಆದಿತ್ಯನನ್ನು ಪೂಜಿಸಿದರೆ ಆದಿತ್ಯಲೋಕವನ್ನು ಹೊಂದುವನು. ಕುಲವನ್ನು ಉದ್ಧಾರಮಾಡುವನು.

೭೩. ಮುಂದಿರುವ ಸೋಮತೀರ್ಥದಲ್ಲಿ ಸ್ನಾನಮಾಡಲು ಸೋಮ ಲೋಕವನ್ನು ಹೊಂದುವನು. ಸಂಶಯವಿಲ್ಲ.

ತತೋ ಗಚ್ಛೇತ ಧರ್ಮಜ್ಞ ದಧೀಚಸ್ಯ ನರಾಧಿಪ ।
ತೀರ್ಥಂ ಪುಣ್ಯತಮಂ ರಾಜನ್ ಪಾವನಂ ಲೋಕವಿಶ್ರುತಂ ॥೭೪॥
ಯತ್ರ ಸಾರಸ್ವತೋ ಜಾತಃ ಸಿದ್ಧರಾಟ್ ತಪಸೋ ನಿಧಿಃ ।
ತಸ್ಮಿನ್ ತೀರ್ಥೇ ನರಃ ಸ್ನಾತ್ವಾ ವಾಜಪೇಯಫಲಂ ಲಭೇತ್ ॥೭೫॥
ಸಾರಸ್ವತೀಂ ಗತಿಂ ಚೈವ ಲಭತೇ ನಾತ್ರ ಸಂಶಯಃ ।
ತತಃ ಕನ್ಯಾಶ್ರಮಂ ಗತ್ವಾ ನಿಯತೋ ಬ್ರಹ್ಮಚರ್ಯಯಾ ॥೭೬॥
ತ್ರಿರಾತ್ರಮುಷಿತೋ ರಾಜನ್ ಉಪವಾಸಪರಾಯಣಃ ।
ಲಭೇತ್ಕನ್ಯಾಶತಂ ದಿವ್ಯಂ ಬ್ರಹ್ಮಲೋಕಂ ಚ ಗಚ್ಛತಿ ॥೭೭॥
ತತೋಗಚ್ಛೇತ ಧರ್ಮಜ್ಞ ತೀರ್ಥಂ ಸನ್ನಿಹಿತಾಮಪಿ ।
ಯತ್ರ ಬ್ರಹ್ಮಾದಯೋ ದೇವಾಃ ಋಷಯಶ್ಚ ತಪೋಧನಾಃ ॥೭೮॥

---

೭೪. ಅಲ್ಲಿಂದ ಮುಂದೆ ಪುಣ್ಯತಮವಾದ ದಧೀಚತೀರ್ಥ ವಿರುವುದು.

೭೫. ಆ ತೀರ್ಥದಲ್ಲಿ ಸರಸ್ವತೀ ಪುತ್ರನಾದ, ತಪೋನಿಧಿ ದಧೀಚನು ಸಿದ್ಧಪುರುಷನಾದನು. ಅಲ್ಲಿ ಸ್ನಾನಮಾಡಲು ವಾಜಪೇಯ ಫಲವು ಲಭಿಸುವುದಲ್ಲದೆ ಸಾರಸ್ವತಗತಿಯೂ ಸಿಗುವುದು. ಸಂಶಯವಿಲ್ಲ.

೭೬–೭೭. ಮುಂದೆ ಕನ್ಯಾಶ್ರಮಕ್ಕೆ ಹೋಗಿ ಬ್ರಹ್ಮಚರ್ಯದಿಂದ ಮೂರುದಿವಸ ಉಪವಾಸವಿರುತ್ತಿರಲು ಸುಂದರಿಯರಾದ ನೂರುಮಂದಿ ಕನ್ಯೆಯರನ್ನು ಹೊಂದಿ ಬ್ರಹ್ಮಲೋಕವನ್ನೂ ಪಡೆಯುತ್ತಾನೆ.

೭೮. ಆಮೇಲೆ ಸನ್ನಿಹಿತಾ ಎಂಬ ತೀರ್ಥಕ್ಕೆ ತೆರಳಬೇಕು. ಅಲ್ಲಿಗೆ ಬ್ರಹ್ಮಾದಿದೇವತೆಗಳೂ ತಪಸ್ವಿಗಳಾದ ಋಷಿಗಳೂ ಪ್ರತಿ ತಿಂಗಳೂ ಬರುವರು. ಅದು ಹೆಚ್ಚುಪುಣ್ಯಪ್ರದವು.

ಮಾಸಿ ಮಾಸಿ ಸಮೇಷ್ಯನ್ತಿ ಪುಣ್ಯೇನ ಮಹತಾನ್ವಿತಾಃ ।
ಸನ್ನಿಹಿತಾಯಾಮುಪಸ್ಪೃಶ್ಯ ರಾಹುಗ್ರಸ್ತೇ ದಿವಾಕರೇ ॥೭೯॥
ಅಶ್ವಮೇಧಫಲಂ ತೇನ ಇಷ್ಟಂ ಭವತಿ ಶಾಶ್ವತಂ ।
ಪೃಥಿವ್ಯಾಂ ಯಾನಿ ತೀರ್ಥಾನಿ ಅಂತರಿಕ್ಷಚರಾಣಿ ಚ ॥೮೦॥
ಉದಪಾನಾಶ್ಚ ವಿಪ್ರಾಶ್ಚ ಪುಣ್ಯಾನ್ಯಾಯತನಾನಿ ಚ ।
ನಿಸ್ಸಂಶಯಂ ಅಮಾವಾಸ್ಯಾಂ ಸಮೇಷ್ಯನ್ತಿ ನರಾಧಿಪ ॥೮೧॥
ಮಾಸಿ ಮಾಸಿ ನರವ್ಯಾಘ್ರ ಸನ್ನಿಹಿತಾಯಾಂ ಜನೇಶ್ವರ ।
ತೀರ್ಥಸನ್ನಯನಾದೇವ ಸನ್ನಿಹಿತಾ ಭುವಿಶ್ರುತಾ ॥೮೨॥
ತತ್ರ ಸ್ನಾತ್ವಾ ಚ ಪೀತ್ವಾ ಚ ಸ್ವರ್ಗಲೋಕೇ ಮಹೀಯತೇ ।
ಅಮಾವಾಸ್ಯಾಂ ತಥಾ ಚೈವ ರಾಹುಗ್ರಸ್ತೇ ದಿವಾಕರೇ ॥೮೩॥

---

೭೯. ಸೂರ್ಯಗ್ರಹಣಕಾಲದಲ್ಲಿ ಸನ್ನಿಹಿತಾತೀರ್ಥವನ್ನು ಸೇವಿಸಲು ಶಾಶ್ವತವಾದ ಅಶ್ವಮೇಧ ಫಲವನ್ನು ಹೊಂದುತ್ತಾನೆ.

೮೦–೮೧. ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ ಇರುವ ಎಲ್ಲಾ ತೀರ್ಥಗಳೂ, ಸರಸ್ಸುಗಳೂ, ಬ್ರಾಹ್ಮಣರೂ, ಪುಣ್ಯವಾದ ದೇವಾಲಯಗಳೂ, ಅಮಾವಾಸ್ಯೆಯ ದಿವಸ ಪ್ರತಿ ತಿಂಗಳೂ, ಈ ಸನ್ನಿಹಿತಾ ತೀರ್ಥವನ್ನು ಬಳಿಸಾರುತ್ತವೆ.

೮೨. ಹೀಗೆ ತೀರ್ಥಗಳೆಲ್ಲವೂ ಇದರ ಬಳಿಸಾರುವುದರಿಂದಲೇ ಇದಕ್ಕೆ ಸನ್ನಿಹಿತೆಯೆಂದು ಹೆಸರಾಯಿತು. ಅಲ್ಲಿ ಸ್ನಾನಮಾಡಿದರಾಗಲಿ, ಕೊನೆಗೆ ನೀರುಕುಡಿದರಾಗಲಿ ಸ್ವರ್ಗಲೋಕದಲ್ಲಿ ಮೆರೆಯುತ್ತಾನೆ.

೮೩. ಅಮಾವಾಸ್ಯೆ ಮತ್ತು ಸೂರ್ಯಗ್ರಹಣ, ಈ ದಿನಗಳಲ್ಲಿ ಯಾವನು ಶ್ರಾದ್ಧವೆಸಗುವನೋ ಅವನ ಪುಣ್ಯಫಲವನ್ನು ಕೇಳು.

ಯಃ ಶ್ರಾದ್ಧಂ ಕುರುತೇ ಮರ್ತ್ಯಃ ತಸ್ಯ ಪುಣ್ಯಫಲಂ ಶೃಣು ।
ಅಶ್ವಮೇಧಸಹಸ್ರಸ್ಯ ಸಮ್ಯಗಿಷ್ಟಸ್ಯ ಯತ್ಫಲಂ ॥೮೪॥

ಸ್ನಾತ ಏವ ತದಾಪ್ನೋತಿ ಕೃತ್ವಾ ಶ್ರಾದ್ಧಂ ಚ ಮಾನವಃ ।
ಯತ್ಕಿಂಚಿದ್ದುಷ್ಕೃತಂ ಕರ್ಮ ಸ್ತ್ರಿಯಾ ವಾ ಪುರುಷಸ್ಯ ವಾ ॥೮೫॥

ಸ್ನಾತಮಾತ್ರಸ್ಯ ತತ್ಸರ್ವಂ ನಶ್ಯತೇ ನಾತ್ರ ಸಂಶಯಃ ।
ಪದ್ಮವರ್ಣೇನ ಯಾನೇನ ಬ್ರಹ್ಮಲೋಕಂ ಸ ಗಚ್ಛತಿ ॥೮೬॥

ಅಭಿವಾದ್ಯ ತತೋ ಗತ್ವಾ ದ್ವಾರಪಾಲಂ ಮುಚಕ್ರುಕಂ ।
ಗಂಗಾಹ್ರದಶ್ಚ ತತ್ರೈವ ತೀರ್ಥಂ ಭರತಸತ್ತಮ ॥೮೭॥

ತತ್ರ ಸ್ನಾಯೀತ ಧರ್ಮಜ್ಞ ಬ್ರಹ್ಮಚಾರೀ ಸಮಾಹಿತಃ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ವಿಂದತಿ ಮಾನವಃ ॥೮೮॥

---

೮೪. ವಿಧಿಪೂರ್ವಕವಾಗಿ ಶ್ರದ್ಧೆಯಿಂದ ಸಹಸ್ರ ಅಶ್ವಮೇಧಯಾಗಗಳನ್ನು ನಡೆಸಿದರೆ ಯಾವ ಪುಣ್ಯವು ಲಭಿಸುವುದೋ ಆ ಪುಣ್ಯವನ್ನು ಅಲ್ಲಿ ಸ್ನಾನಮಾಡಿ, ಶ್ರಾದ್ಧಮಾಡಿದಮಾತ್ರದಿಂದಲೇ ಹೊಂದುತ್ತಾನೆ.

೮೫. ಹೆಂಗಸಾಗಲೀ, ಗಂಡಸಾಗಲೀ ಮಾಡಿದ ಯಾವ ಪಾಪವಾದರೂ, ಇಲ್ಲಿ ಸ್ನಾನಮಾಡಿದಮಾತ್ರದಿಂದ ಸಂಶಯವಿಲ್ಲದೇ ನಾಶವಾಗುತ್ತದೆ.

೮೬. ಅಂಥವನು ಕಮಲದ ಬಣ್ಣವುಳ್ಳ ತೇರನ್ನೇರಿ ಬ್ರಹ್ಮಲೋಕವನ್ನು ಸೇರುವನು.

೮೭. ಆಮೇಲೆ ಅಲ್ಲಿಂದ ಹೊರಟು, ಮುಚಕ್ರುಕವೆಂಬ ಕ್ಷೇತ್ರವನ್ನು ಸೇರಿ ದ್ವಾರಪಾಲಕನನ್ನು ನಮಸ್ಕರಿಸಿ, ಅಲ್ಲಿರುವ ಗಂಗಾಹ್ರದವೆಂಬ ತೀರ್ಥವನ್ನು ಸೇವಿಸಬೇಕು.

೮೮. ಓ ಧರ್ಮಜ್ಞ ! ಅಲ್ಲಿ, ಬ್ರಹ್ಮಚರ್ಯನಿರತನಾಗಿ, ಸ್ಥಿರಚಿತ್ತನಾಗಿ ಸ್ನಾನಮಾಡಲು ರಾಜಸೂಯ ಮತ್ತು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಗಳಿಸುತ್ತಾನೆ.

ಪೃಥಿವ್ಯಾಂ ನೈಮಿಷಂ ಪುಣ್ಯಂ ಅನ್ತರಿಕ್ಷೇ ಚ ಪುಷ್ಕರಂ ।
ತ್ರಯಾಣಾಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ॥೮೯॥

ಪಾಂಸವೋ ಽಪಿ ಕುರುಕ್ಷೇತ್ರೇ ವಾಯುನಾತಿಸಮೀರಿತಾಃ ।
ಅಪಿ ದುಷ್ಕೃತ ಕರ್ಮಾಣಂ ನಯನ್ತಿ ಪರಮಾಂ ಗತಿಂ ॥೯೦॥

ದಕ್ಷಿಣೇನ ಸರಸ್ವತ್ಯಾ ಉತ್ತರೇಣ ಸರಸ್ವತೀಂ ।
ಯೇ ವಸಂತಿ ಕುರುಕ್ಷೇತ್ರೇ ತೇ ವಸನ್ತಿ ತ್ರಿವಿಷ್ಟಪೇ ॥೯೧॥

ಕುರುಕ್ಷೇತ್ರಂ ಗಮಿಷ್ಯಾಮಿ ಕುರುಕ್ಷೇತ್ರೇ ವಸಾಮ್ಯಹಂ ।
ಅಪ್ಯೇ ವಂ ವಾಚಮುತ್ಸೃಜ್ಯ ಸ್ವರ್ಗಲೋಕೇ ಮಹೀಯತೇ ॥೯೨॥

ಬ್ರಹ್ಮವೇದ್ಯಾಂ ಕುರುಕ್ಷೇತ್ರಂ ಪುಣ್ಯಂ ಬ್ರಹ್ಮರ್ಷಿಸೇವಿತಂ ।
ತಸ್ಮಿನ್ ವಸನ್ತಿ ಯೇ ರಾಜನ್ ನ ತೇ ಶೋಚ್ಯಾಃ ಕಥಂಚನ ॥೯೩॥

---

೮೯. ಭೂಮಿಯಲ್ಲಿ ನೈಮಿಷಕ್ಷೇತ್ರವು ಪುಣ್ಯವಾದುದು. ಆಕಾಶ ದಲ್ಲಿ ಪುಷ್ಕರಕ್ಷೇತ್ರವು ಪುಣ್ಯಪ್ರದವು. ಮೂರುಲೋಕಗಳಲ್ಲಿಯೂ ಕುರು ಕ್ಷೇತ್ರವು ಅಸಮಾನವಾದ ಪುಣ್ಯಕ್ಷೇತ್ರವು.

೯೦. ಗಾಳಿಯಲ್ಲಿ ಹಾರಿಬಂದ ಕುರುಕ್ಷೇತ್ರದ ಧೂಳಾದರೂ ಮೈಗೆ ತಗಲಿದ ಮಾತ್ರದಿಂದಲೇ ಅವನೆಷ್ಟೇಪಾಪಿಯಾಗಿರಲಿ, ಒಳ್ಳೆಯಗತಿ ಯನ್ನು ಹೊಂದುತ್ತಾನೆ.

೯೧. ಸರಸ್ವತೀ ನದಿಗೆ ದಕ್ಷಿಣದಲ್ಲಿಯಾಗಲಿ, ಉತ್ತರದಲ್ಲಿಯಾಗಲಿ ಕುರುಕ್ಷೇತ್ರದಲ್ಲಿ ಯಾರು ವಾಸಮಾಡವರೋ, ಅವರು ಸ್ವರ್ಗದಲ್ಲಿ ವಾಸ ಮಾಡಿದಂತೆ ಇರುವರು ಎಂದು ತಿಳಿ.

೯೨. "ಕುರುಕ್ಷೇತ್ರಕ್ಕೆ ಹೋಗುವೆನು. ಕುರುಕ್ಷೇತ್ರದಲ್ಲಿ ವಾಸ ಮಾಡುತ್ತೇನೆ" ಎಂದು ಬಾಯಲ್ಲಿ ಮಾತನಾಡಿದರೂ ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೯೩. ಸದಾ ಬ್ರಹ್ಮರ್ಷಿಗಳಿಂದ ಸೇವಿಸಲ್ಪಡುತ್ತಿರುವ ಕುರುಕ್ಷೇತ್ರ ವು ಬ್ರಹ್ಮವೇದಿಯಲ್ಲಿ ಪವಿತ್ರವಾದುದು. ಅಲ್ಲಿ ಯಾರು ವಾಸಿಸುವರೋ ಅವರನ್ನು ಕುರಿತು ಯಾರೂ ಚಿಂತಿಸಬೇಕಾದುದಿಲ್ಲ.

ತರಂಡಕಾರಂಡಕಯೋರ್ಯದಂತರಂ ರಾಮಹ್ರದಾನಾಂ ಚ ಮಚಕ್ರುಕಸ್ಯ ಚ ।
ಏತತ್ಕುರುಕ್ಷೇತ್ರ ಸಮನ್ತಪಂಚಕಂ ಪಿತಾಮಹಸ್ಯೋತ್ತರವೇದಿರುಚ್ಯತೇ ॥೯೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಸಪ್ತವಿಂಶೋಽಧ್ಯಾಯಃ

---

೯೪. ತರಂಡ, ಕಾರಂಡಕಗಳ ನಡುವೆ ಇರುವ ಪ್ರದೇಶವೂ, ರಾಮಹ್ರದಕ್ಕೂ ಮಚಕ್ರುಕಕ್ಕೂ ಮಧ್ಯೆ ಇರುವ ಪ್ರದೇಶವೂ ಮತ್ತು ಕುರುಕ್ಷೇತ್ರಸಮಂತ ಪಂಚಕವೂ, ಬ್ರಹ್ಮವೇದಿಯೆಂದು ಹೇಳಲ್ಪಡುತ್ತದೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಅಷ್ಟಾವಿಂಶೋಽಧ್ಯಾಯಃ

॥ ನಾರದ ಉವಾಚ ॥

**ತತೋ ಗಚ್ಛೇತ ಧರ್ಮಜ್ಞ ಧರ್ಮತೀರ್ಥಂ ಪುರಾತನಂ ।**
**ಯತ್ರ ಧರ್ಮೋ ಮಹಾಭಾಗಃ ತಪ್ತವಾ಼ ಉತ್ತಮಂ ತಪಃ ॥ ೧ ॥**

**ತೇನ ತೀರ್ಥಂ ಕೃತಂ ಪುಣ್ಯಂ ಆತ್ಮನಾಮ್ನಾ ಚ ಚಿಹ್ನಿತಂ ।**
**ತತ್ರ ಸ್ನಾತ್ವಾ ನರೋ ರಾಜ಼ ಧರ್ಮಶೀಲಸ್ಸಮಾಹಿತಃ ॥ ೨ ॥**

**ಆ ಸಪ್ತಮಂ ಕುಲಂ ಚೈವ ಪುನೀತೇ ನಾತ್ರ ಸಂಶಯಃ ।**
**ತತೋ ಗಚ್ಛೇತ ಧರ್ಮಜ್ಞ ಕಪಾಲವನಮುತ್ತಮಂ ॥ ೩ ॥**

---

ಪದ್ಮ ಪುರಾಣದ ಆದಿಖಂಡದ ಇಪ್ಪತ್ತೆಂಟನೆಯ ಅಧ್ಯಾಯವು

೧. ನಾರದನು ಹೇಳತೊಡಗಿದನು. ಓ ಧರ್ಮಜ್ಞ, ಆಮೇಲೆ, ಮಹಾಮಹಿಮನಾದ ಧರ್ಮನು ತಪಸ್ಸುಮಾಡಿದ ಸ್ಥಳವಾದ ಪುರಾತನವಾದ ಧರ್ಮತೀರ್ಥವನ್ನು ಕುರಿತು ತೆರಳಬೇಕು.

೨-೩. ಆ ಧರ್ಮನಿಂದ ಆ ತೀರ್ಥವು ಪವಿತ್ರಗೊಳಿಸಲ್ಪಟ್ಟುದಲ್ಲದೇ ಆತನ ಹೆಸರಿನಿಂದಲೂ ಪ್ರಖ್ಯಾತಗೊಳಿಸಲಟ್ಟಿತು. ಆ ತೀರ್ಥದಲ್ಲಿ ಸಮಾಹಿತಮನಸ್ಕನೂ ಧರ್ಮನಿರತನೂ ಆಗಿ ಯಾವ ಮನುಷ್ಯನು ಸ್ನಾನಮಾಡುವನೋ, ಆತನು ತನ್ನ ಏಳುತಲೆಗಳವರೆಗೂ ವಂಶವನು ಪಾವನಗೊಳಿಸುವನೆಂಬುದರಲ್ಲಿ ಸ್ವಲ್ಪವೂ ಸಂಶಯವಿಲ್ಲ.

ಕೃಚ್ಛ್ರೇಣ ಮಹತಾ ಗತ್ವಾ ತತ್ರ ಸ್ನಾತ್ವಾ ಸಮಾಹಿತಃ ।
ಅಗ್ನಿಷ್ಟೋಮಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೪ ॥

ಸೌಗಂಧಿಕಂ ವನಂ ರಾಜನ್ ತತೋ ಗಚ್ಛೇತ ಮಾನವಃ ।
ಯತ್ರ ಬ್ರಹ್ಮಾದಯೋ ದೇವಾಃ ಋಷಯಶ್ಚ ತಪೋಧನಾಃ ॥ ೫ ॥

ಸಿದ್ಧಚಾರಣಗಂಧರ್ವಾಃ ಕಿನ್ನರಾಃ ಸಮಹೋರಗಾಃ ।
ತದ್ವನಂ ಪ್ರವಿಶನ್ನೇವ ಸರ್ವಪಾಪೈಃ ಪ್ರಮುಚ್ಯತೇ ॥ ೬ ॥

ತತೋ ಹಿ ಸಾ ಸರಿಚ್ಛ್ರೇಷ್ಠಾ ನದೀನಾ ಮುತ್ತಮಾ ನದೀ ।
ಪ್ಲಕ್ಷಾದೇವೀ ಸ್ಮೃತಾ ರಾಜನ್ ಮಹಾಪುಣ್ಯಾ ಸರಸ್ವತೀ ॥ ೭ ॥

ತತ್ರಾಭಿಷೇಕಂ ಕುರ್ವೀತ ವಲ್ಮೀಕಾನ್ನಿಸ್ಸೃತೇ ಜಲೇ ।
ಅರ್ಚಯಿತ್ವಾಪಿತೄನ್ ದೇವಾನ್ ಅಶ್ವಮೇಧಫಲಂ ಲಭೇತ್ ॥ ೮ ॥

---

೪. ಮುಂದೆ ಉತ್ತಮವಾದ ಕಪಾಲವನಕ್ಕೆ ಶ್ರಮವಾದರೂ ಪರಿಗಣಿಸದೇ ತೆರಳಬೇಕು. ಅಲ್ಲಿ ಮನಸ್ಸಮಾಧಾನದಿಂದ ಸ್ನಾನ ಮಾಡಲು, ಅಗ್ನಿಷ್ಟೋಮಯಾಗವನ್ನು ಮಾಡಿದ ಪುಣ್ಯಫಲವನ್ನು ಪಡೆಯುವುದಲ್ಲದೇ ವಿಷ್ಣುಲೋಕವನ್ನೂ ಹೊಂದುತ್ತಾನೆ.

೫–೬. ಆಮೇಲೆ ಸೌಗಂಧಿಕವೆಂಬ ವನವನ್ನು ಕುರಿತು ಪ್ರಯಾಣ ಮಾಡಬೇಕು. ಅಲ್ಲಿ ಬ್ರಹ್ಮಾದಿದೇವತೆಗಳೂ, ತಪಸ್ವಿಗಳಾದ ಋಷಿ ಶ್ರೇಷ್ಠರೂ, ಸಿದ್ಧರೂ, ಚಾರಣರೂ, ಗಂಧರ್ವರೂ ನೆಲಸಿರುವರು ಆ ವನವನ್ನು ಹೊಗುತ್ತಲೇ ಎಲ್ಲಾ ಪಾಪಗಳಿಂದಲೂ ಬಿಡಲ್ಪಡು ತ್ತಾನೆ.

೭. ನದಿಗಳಲ್ಲೆಲ್ಲಾ ಉತ್ತಮವಾದ, ಪುಣ್ಯಸಲಿಲೆಯಾದ, ಸರ ಸ್ವತೀನದಿಯು ಆ ವನದಿಂದಾಚೆ ಪ್ಲಕ್ಷಾದೇವಿಯೆಂದು ಹೆಸರನ್ನು ಪಡೆದು ಹರಿಯುತ್ತದೆ.

೮. ಅಲ್ಲಿ ಹುತ್ತದಿಂದ ಹೊರಹೊರಟ ನೀರಿನಲ್ಲಿ ಸ್ನಾನಮಾಡಿ ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಲು ಅಶ್ವಮೇಧಯಾಗ ಮಾಡಿದ ಫಲವನ್ನು ಪಡೆಯುತ್ತಾನೆ.

**ಈಶಾನಾಧ್ಯುಷಿತಂ ನಾಮ ತತ್ರ ತೀರ್ಥಂ ಸುದುರ್ಲಭಂ ।**
**ಷಡ್ಗುಣಂ ಯಾತಿ ಪಾನೀಯಂ ವಲ್ಮೀಕಾದಿತಿ ನಿಶ್ಚಯಃ ॥ ೯ ॥**

**ಕಪಿಲಾನಾಂ ಸಹಸ್ರಂಚ ವಾಜಿಮೇಧಂ ಚ ವಿಂದತಿ ।**
**ತತ್ರ ಸ್ನಾತ್ವಾ ನರವ್ಯಾಘ್ರ ದೃಷ್ಟಮೇತತ್ಪುರಾತನೈಃ ॥೧೦॥**

**ಸುಗಂಧಾಂ ಶತಕುಂಭಾಂ ಚ ಪಂಚಯಜ್ಞಾಂ ಚ ಭಾರತ ।**
**ಅಭಿಗಮ್ಯ ನರಶ್ರೇಷ್ಠ ಸ್ವರ್ಗಲೋಕೇ ಮಹೀಯತೇ ॥೧೧॥**

**ತ್ರಿಶೂಲಪಾತಂ ತತ್ರೈವ ತೀರ್ಥಮಾಸಾದ್ಯ ದುರ್ಲಭಂ ।**
**ತತ್ರಾಭಿಷೇಕಂ ಕುರ್ವೀತ ಪಿತೃದೇವಾರ್ಚನೇ ರತಃ ॥೧೨॥**

**ಗಾಣಪತ್ಯಂಚ ಲಭತೇ ದೇಹಂ ತ್ಯಕ್ತ್ವಾ ನ ಸಂಶಯಃ ।**
**ತತೋ ರಾಜಗೃಹಂ ಗಚ್ಛೇತ್ ದೇವ್ಯಾಸ್ಸ್ಥಾನಂ ಸುದುರ್ಲಭಂ ॥೧೩॥**

---

೯. ಈಶಾನಾಧ್ಯುಷಿತವೆಂಬ ಸುದುರ್ಲಭವಾದ ತೀರ್ಥವೊಂದು ಅಲ್ಲಿದೆ. ಹುತ್ತದಿಂದ ಹೊರಟುಬರುವುದರಿಂದ ಆ ನೀರು, ಷಡ್ಗುಣಗಳನ್ನು ಪಡೆಯುತ್ತದೆ.

೧೦. ಎಲೈ ನರಶ್ರೇಷ್ಠ! ಅಲ್ಲಿ ಸ್ನಾನಮಾಡಿದುದರಿಂದ, ಸಾವಿರ ಹಸುಗಳನ್ನು ದಾನಮಾಡಿದ ಫಲವನ್ನೂ ಅಶ್ವಮೇಧಯಾಗದ ಫಲವನ್ನೂ ಹೊಂದುವನು. ಹಿಂದಿನವರು ಇದನ್ನು ಕಂಡಿರುವರು.

೧೧. ಸುಗಂಧಾ, ಶತಕುಂಭಾ, ಪಂಚಯಜ್ಞಾ ಎಂಬ ತೀರ್ಥಗಳನ್ನು ಸೇವಿಸುವುದರಿಂದ ಸ್ವರ್ಗಲೋಕವನ್ನು ಸೇರಿ ಸುಖಿಸುವನು.

೧೨. ಅಲ್ಲಿಯೇ ತ್ರಿಶೂಲಪಾತವೆಂಬ ದುರ್ಲಭವಾದ ತೀರ್ಥಕ್ಕೆ ಹೋಗಿ ಪಿತೃಗಳ ಮತ್ತು ದೇವತೆಗಳ ಅರ್ಚನೆಯಲ್ಲಿ ಆಸಕ್ತನಾಗಿ ಮನುಷ್ಯನು ಸ್ನಾನಮಾಡಲು, ಈ ಶರೀರವನ್ನು ಬಿಟ್ಟಮೇಲೆ ಗಣಗಳಿಗೆ ಒಡೆಯನಾಗುತ್ತಾನೆ.

೧೩. ಶಾಕಂಭರಿಯೆಂದು ಮೂರುಲೋಕಗಳಲ್ಲಿಯೂ ಪ್ರಖ್ಯಾತಳಾದ ದೇವಿಯ ನಿವಾಸವಾದ ರಾಜಗೃಹಕ್ಕೆ ಆಮೇಲೆ ಹೋಗಬೇಕು.

**ಶಾಕಂಭರೀತಿ ವಿಖ್ಯಾತಾ ತ್ರಿಷು ಲೋಕೇಷು ವಿಶ್ರುತಾ ।**
**ದಿವ್ಯಂ ವರ್ಷ ಸಹಸ್ರಂ ಹಿ ಶಾಕೇನ ಕಿಲ ಭಾರತ ॥೧೪॥**

**ಆಹಾರಂ ಸಾ ಕೃತವತೀ ಮಾಸಿ ಮಾಸಿ ನರಾಧಿಪ ।**
**ಋಷಯೋಽಭ್ಯಾಗತಾಸ್ತತ್ರ ದೇವ್ಯಾ ಭಕ್ತಾಃ ತಪೋಧನಾಃ ॥೧೫॥**

**ಆತಿಥ್ಯಂ ಚ ಕೃತಂ ತೇಷಾಂ ಶಾಕೇನ ಕಿಲ ಭಾರತ ।**
**ತತಃ ಶಾಕಂಭರೀತ್ಯೇವಂ ನಾಮ ತಸ್ಯಾಃ ಪ್ರತಿಷ್ಠಿತಂ ॥೧೬॥**

**ಶಾಕಂಭರೀಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।**
**ತ್ರಿರಾತ್ರಮುಷಿತಃ ಶಾಕಂ ಭಕ್ಷಯೇತ್ ನಿಯತಶ್ಶುಚಿಃ ॥೧೭॥**

**ಶಾಕಾಹಾರಸ್ಯ ಯತ್ ಸಮ್ಯಕ್ ವರ್ಷೈಃದ್ವಾದಶಭಿಃ ಫಲಂ ।**
**ತತ್ಫಲಂ ತಸ್ಯ ಭವತಿ ದೇವ್ಯಾಃ ಛಂದೇನ ಭಾರತ ॥೧೮॥**

---

೧೪. ಆದೇವಿಯು, ಒಂದುಸಹಸ್ರ ದೇವವರ್ಷಗಳವರೆಗೂ, ಪ್ರತಿ ತಿಂಗಳಲ್ಲಿಯೂ ಬರಿಯ ಶಾಕವನ್ನೇ ಆಹಾರವನ್ನಾಗಿ ಮಾಡಿಕೊಂಡಿದ್ದಳು.

೧೫-೧೬. ಆಕೆಯನ್ನು ನೋಡಲು ಆ ದೇವಿಯಭಕ್ತರಾದ ತಪೋನಿರತರಾದ ಋಷಿಗಳು ಅಲ್ಲಿಗೆ ಬಂದರು. ಅವರೆಲ್ಲರಿಗೂ ಬರಿಯಶಾಕದಿಂದಲೇ ಅತಿಥಿಸತ್ಕಾರವನ್ನು ಮಾಡಿದಳು· ಆದುದರಿಂದ ಆ ದೇವಿಯು 'ಶಾಕಂಭರಿ' ಯೆಂಬ ಹೆಸರಿನಿಂದಲೇ ವಿರಾಜಿಸಿದಳು.

೧೭. ಶಾಕಂಭರೀ ಕ್ಷೇತ್ರಕ್ಕೆ ತರಳಿ ಸಮಾಹಿತನಾಗಿಯೂ, ಬ್ರಹ್ಮಚರ್ಯನಿರತನಾಗಿಯೂ, ನಿಯಮಶೀಲನಾಗಿಯೂ, ಶುಚಿಯಾಗಿ ಮೂರುದಿವಸ ಅಲ್ಲಿದ್ದು ಕೇವಲ ಶಾಕವನ್ನೇ ತಿಂದುಕೊಂಡಿರಬೇಕು.

೧೮. ಓ ಭಾರತ! ಹನ್ನೆರಡುವರ್ಷಗಳು ಸರಿಯಾಗಿ ಶಾಕಾಹಾರಿಯಾಗಿದ್ದರೆ ಯಾವ ಫಲವುಂಟೋ ಆ ಫಲವನ್ನು ದೇವಿಯ ಅನುಗ್ರಹದಿಂದ, ಆತನು ಹೊಂದುವನು.

ತತೋ ಗಚ್ಛೇತ್ ಸುವರ್ಣಾಖ್ಯಂ ತ್ರಿಷು ಲೋಕೇಷು ವಿಶ್ರುತಂ ।
ಯತ್ರ ವಿಷ್ಣುಃ ಪ್ರಸಾದಾರ್ಥಂ ರುದ್ರಮಾರಾಧಯತ್ಪುರಾ ॥೧೯॥

ವರಾಂಶ್ಚ ಸುಬಹೂನ್ ಲೇಭೇ ದೇವೈರಪಿ ಸುದುರ್ಲಭಾನ್ ।
ಉಕ್ತಶ್ಚ ತ್ರಿಪುರಘ್ನೇನ ಪರಿತುಷ್ಟೇನ ಭಾರತ ॥೨೦॥

ಅಪಿ ಚಾತ್ಮಾ ಪ್ರಿಯತರೋ ಲೋಕೇ ಕೃಷ್ಣ ಭವಿಷ್ಯತಿ ।
ತ್ವನ್ಮುಖಂ ಚ ಜಗತ್ಕೃತ್ಸ್ನಂ ಭವಿಷ್ಯತಿ ನ ಸಂಶಯಃ ॥೨೧॥

ತತ್ರಾಭಿಗಮ್ಯ ರಾಜೇಂದ್ರ ಪೂಜಯಿತ್ವಾ ವೃಷಧ್ವಜಂ ।
ಅಶ್ವಮೇಧ ಮವಾಪ್ನೋತಿ ಗಾಣಪತ್ಯಂ ಚ ವಿಂದತಿ ॥೨೨॥

ಧೂಮವಂತೀಂ ತತೋ ಗಚ್ಛೇತ್ ತ್ರಿರಾತ್ರಮುಷಿತೋ ನರಃ ।
ಮನಸಾ ಪ್ರಾರ್ಥಿತಾನ್ ಕಾಮಾನ್ ಲಭತೇ ನಾತ್ರ ಸಂಶಯಃ ॥೨೩॥

---

೧೯. ಆಮೇಲೆ 'ಸುವರ್ಣ' ವೆಂದು ಮೂರುಲೋಕದಲ್ಲಿಯೂ ಪ್ರಸಿದ್ಧವಾದ ಕ್ಷೇತ್ರಕ್ಕೆ ಹೋಗಬೇಕು. ಹಿಂದೆ ಅಲ್ಲಿ ಶಿವನನ್ನು ಪ್ರಸನ್ನನಾಗಿ ಮಾಡಲು ವಿಷ್ಣುವು ಆರಾಧಿಸಿದನು.

೨೦. ದೇವತೆಗಳಿಗೂ ದುರ್ಲಭವಾದ ಅನೇಕ ವರಗಳನ್ನು ವಿಷ್ಣುವಿಗೆ ಇತ್ತು ಸಂತೋಷದಿಂದ ಶಿವನಿಂತೆಂದನು.

೨೧. ಕೃಷ್ಣ! ಲೋಕದಲ್ಲಿ ತನಗಿಂತಲೂ ಪ್ರಿಯವಾದುದು ಬೇರೊಂದಿಲ್ಲ. ಅಂಥ ಪ್ರಪಂಚವೆಲ್ಲವೂ ನಿನ್ನಲ್ಲೇ ಆಸಕ್ತವಾಗುವುದು. ಇದರಲ್ಲಿ ಸಂಶಯವಿಲ್ಲ.

೨೨. ಆ ಸುವರ್ಣಕ್ಷೇತ್ರಕ್ಕೆ ತೆರಳಿ ಶಿವನನ್ನು ಪೂಜಿಸಲು ಅಶ್ವಮೇಧ ಫಲವು ಲಭಿಸುತ್ತದೆ. ಈ ದೇಹವನ್ನು ಬಿಟ್ಟಮೇಲೆ ಗಣಾಧಿಪತ್ಯವನ್ನೂ ಪಡೆಯುವನು.

೨೩. ಅನಂತರ ಧೂಮವಂತಿಯೆಂಬ ಕ್ಷೇತ್ರಕ್ಕೆ ತೆರಳಿ ಮೂರು ದಿವಸಗಳು ಉಪವಾಸವಿರಲು ತಾನು ಅಪೇಕ್ಷಿಸಿದುದನ್ನೆಲ್ಲಾ ಹೊಂದುತ್ತಾನೆ.

ದೇವ್ಯಾಸ್ತು ದಕ್ಷಿಣಾರ್ಧೇನ ರಥಾವರ್ತೋ ನರಾಧಿಪ ।
ತತ್ರಾಗತ್ಯತು ಧರ್ಮಜ್ಞ ಶ್ರದ್ಧಧಾನೋ ಜಿತೇಂದ್ರಿಯಃ ॥೨೪॥

ಮಹಾದೇವ ಪ್ರಸಾದಾದ್ವೈ ಗಚ್ಛೇತ ಪರಮಾಂ ಗತಿಂ ।
ಪ್ರದಕ್ಷಿಣಮುಪಾವೃತ್ಯ ಗಚ್ಛೇತ ಭರತರ್ಷಭ ॥೨೫॥

ಧಾರಾಂ ನಾಮ ಮಹಾಪ್ರಾಜ್ಞ ಸರ್ವಪಾಪಪ್ರಣಾಶಿನೀಂ ।
ತತ್ರ ಸ್ನಾತ್ವಾ ನರವ್ಯಾಘ್ರ ನಶೋಚತಿ ನರಾಧಿಪ ॥೨೬॥

ತತೋ ಗಚ್ಛೇನ್ನರವ್ಯಾಘ್ರ ನಮಸ್ಕೃತ್ಯ ಮಹಾಗಿರಿಂ ।
ಸ್ವರ್ಗದ್ವಾರೇಣ ತತ್ತುಲ್ಯಂ ಗಂಗಾದ್ವಾರಂ ನ ಸಂಶಯಃ ॥೨೭॥

ತತ್ರಾಭಿಷೇಕಂ ಕುರ್ವೀತ ಕೋಟಿತೀರ್ಥೇ ಸಮಾಹಿತಃ ।
ಲಭತೇ ಪುಂಡರೀಕಂ ತು ಕುಲಂಚೈವ ಸಮುದ್ಧರೇತ್ ॥೨೮॥

---

೨೪–೨೫. ಆ ದೇವಿಯಿಂದ ದಕ್ಷಿಣಕ್ಕೆ ರಥಾವರ್ತವೆಂಬ ಕ್ಷೇತ್ರ ವಿದೆ. ಅಲ್ಲಿಗೆ ಹೋಗಿ ಶ್ರದ್ಧಾಳುವಾಗಿ ಜಿತೇಂದ್ರಿಯನಾಗಿದ್ದಲ್ಲಿ ಮಹಾ ದೇವನ ಅನುಗ್ರಹದಿಂದ ಉತ್ತಮವಾದ ಗತಿಯನ್ನು ಪಡೆಯುವನು. ಆದನ್ನು ಪ್ರದಕ್ಷಿಣೆಮಾಡಿಕೊಂಡು ಮುಂದೆ ಹೊರಡಬೇಕು.

೨೬. ಓ ನರಶ್ರೇಷ್ಠಾ! ಎಲ್ಲಾ ಪಾಪಗಳನ್ನೂ ಹೋಗಲಾಡಿಸುವ ಧಾರೆಯೆಂಬ ತೀರ್ಥದಲ್ಲಿ ಸ್ನಾನಮಾಡಲು ಅವನು ಎಂದಿಗೂ ದುಃಖ ಭಾಜನನಾಗುವುದಿಲ್ಲ.

೨೭. ಆಮೇಲೆ ಮಹಾಗಿರಿಯನ್ನು ನಮಸ್ಕರಿಸಿ ಮುಂದೆ ಹೊರಟು ಸ್ವರ್ಗದ್ವಾರಕ್ಕೆ ಸಮಾನವಾದ ಗಂಗಾದ್ವಾರವನ್ನು ಹೊಂದುವನು.

೨೮. ಅಲ್ಲಿ ಕೋಟಿತೀರ್ಥದಲ್ಲಿ ಸ್ನಾನಮಾಡಬೇಕು. ಹಾಗೆ ಮಾಡಿದರೆ ಪುಂಡರೀಕಯಾಗದ ಫಲವನ್ನು ಹೊಂದಿ ಕುಲವನ್ನು ಉದ್ಧ ರಿಸುವನು.

ಉಷ್ಯೈಕಾಂ ರಜನೀಂ ತತ್ರ ಗೋ ಸಹಸ್ರಫಲಂ ಲಭೇತ್ ।
ಸಪ್ತಗಂಗೇ ತ್ರಿಗಂಗೇ ಚ ಶಕ್ರಾವರ್ತೇ ಚ ತರ್ಪಯನ್ ॥೨೯॥

ದೇವಾನ್ ಪಿತೄಂಶ್ಚ ವಿಧಿವತ್ ಪುಣ್ಯಲೋಕೇ ಮಹೀಯತೇ ।
ತತಃ ಕನಖಲೇಸ್ನಾತ್ವಾ ತ್ರಿರಾತ್ರೋ ಪೋಷಿತೋ ನರಃ ।
ಅಶ್ವಮೇಧ ಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥೩೦॥

ಕಪಿಲಾ ವಟಂತು ಗಚ್ಛೇತ ತೀರ್ಥಸೇವೀ ನರಾಧಿಪ ।
ಉಷ್ಯೈಕಾಂ ರಜನೀಂ ತತ್ರ ಗೋಸಹಸ್ರಫಲಂ ಲಭೇತ್ ॥೩೧॥

ನಾಗರಾಜಸ್ಯ ರಾಜೇಂದ್ರ ಕಪಿಲಸ್ಯ ಮಹಾತ್ಮನಃ ।
ತೀರ್ಥಂ ಕುರುವರಶ್ರೇಷ್ಠ ಸರ್ವಲೋಕೇಷು ವಿಶ್ರುತಂ ॥೩೨॥

---

೨೯. ಅಲ್ಲಿ ಒಂದು ರಾತ್ರಿಯಿರಲು ಸಹಸ್ರಗೋವುಗಳನ್ನು ದಾನ ಮಾಡಿದ ಫಲವು ಲಭಿಸುತ್ತದೆ. ಸಪ್ತಗಂಗಾ, ತ್ರಿಗಂಗಾ, ಶತಾವರ್ತ ಗಳಲ್ಲಿ ವಿಧಿಪೂರ್ವಕವಾಗಿ ದೇವತೆಗಳನ್ನೂ, ಪಿತೃಗಳನ್ನೂ, ತರ್ಪಣಾದಿ ಗಳಿಂದ ಸಂತೋಷಗೊಳಿಸಲು ಪುಣ್ಯಲೋಕವನ್ನು ಹೊಂದುವನು.

೩೦. ಆಮೇಲೆ ಕನಖಲವೆಂಬ ತೀರ್ಥದಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸಮಾಡಿದವನು ಅಶ್ವಮೇಧ ಫಲವನ್ನು ಹೊಂದುವುದ ಲ್ಲದೇ ಸ್ವರ್ಗಲೋಕವನ್ನೂ ಹೊಂದುವನು.

೩೧. ಓ ರಾಜೇಂದ್ರ! ತೀರ್ಥಯಾತ್ರಾನಿರತನಾದವನು ಕಪಿಲಾ ವಟವೆಂಬ ತೀರ್ಥವನ್ನು ಸೇವಿಸಿ ಒಂದು ರಾತ್ರಿ ಅಲ್ಲಿದ್ದರೆ ಗೋಸಹಸ್ರ ದಾನಮಾಡಿದ ಫಲಕ್ಕೆ ಭಾಗಿಯಾಗುವನು.

೩೨. ಓ ಕುರುಶ್ರೇಷ್ಠಾ! ಮಹಾತ್ಮನಾದ ಕಪಿಲನೆಂಬ ಸರ್ಪರಾಜನ ಈ ತೀರ್ಥವು ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧವಾದುದು.

ತತ್ರಾಭಿಷೇಕಂ ಕುರ್ವೀತ ನಾಗತೀರ್ಥೇ ನರಾಧಿಪ ।
ಕಪಿಲಾನಾಂ ಸಹಸ್ರಸ್ಯ ಫಲಂ ಪ್ರಾಪ್ನೋತಿ ಮಾನವಃ ॥೩೩॥
ತತೋ ಲಲತಿಕಾಂ ಗಚ್ಛೇತ್ ಶಂತನೋಸ್ತೀರ್ಥಮುತ್ತಮಂ ।
ತತ್ರ ಸ್ನಾತ್ವಾ ನರೋ ರಾಜನ್ ನ ದುರ್ಗತಿಮವಾಪ್ನುಯಾತ್ ॥೩೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಅಷ್ಟಾವಿಂಶೋಽಧ್ಯಾಯಃ

---

೩೩. ಆ ನಾಗತೀರ್ಥದಲ್ಲಿ ಸ್ನಾನಮಾಡಿದರೆ ಸಾವಿರ ಕಪಿಲೆ ಹಸುಗಳನ್ನು ದಾನಮಾಡಿದಷ್ಟು ಫಲ ಬರುವುದು.

೩೪. ಆಮೇಲೆ ಶಂತನುಸೇವಿತವಾದ ಲಲತಿಕಾ ಎಂಬ ತೀರ್ಥಕ್ಕೆ ತೆರಳಿ ಸ್ನಾನಮಾಡಬೇಕು. ಎಲೈ ರಾಜೇಂದ್ರನೇ! ಆ ಮನುಷ್ಯನಿಗೆ ದುರ್ಗತಿಯಿಲ್ಲ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಅಷ್ಟೈಕೋನತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

**ತತೋ ಗಚ್ಛೇತ ರಾಜೇಂದ್ರ ಕಾಲಂದೀತೀರ್ಥಮುತ್ತಮಂ ।**
**ತತ್ರ ಸ್ನಾತ್ವಾ ನರೋ ರಾಜನ್ ನ ದುರ್ಗತಿಮವಾಪ್ನುಯಾತ್ ॥ ೧ ॥**

**ಪುಷ್ಕರೇ ತು ಕುರುಕ್ಷೇತ್ರೇ ಬ್ರಹ್ಮಾವರ್ತೇ ಪೃಥೂದಕೇ ।**
**ಅವಿಮುಕ್ತೇ ಸುವರ್ಣಾಖ್ಯೇ ಯತ್ಫಲಂ ನೋ ಲಭೇನ್ನರಃ ॥ ೨ ॥**

**ತತ್ಫಲಂ ಸಮವಾಪ್ನೋತಿ ಯಮುನಾಯಾಂ ನರೋತ್ತಮ ।**
**ಸ್ವರ್ಗಭೋಗೇಽತಿರಾಗೋವೈ ಯೇಷಾಂಮನಸಿ ವರ್ತತೇ ॥ ೩ ॥**

---

ಪದ್ಮಪುರಾಣದ ಆದಿಖಂಡದ ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಹೇಳತೊಡಗಿದನು. ರಾಜೇಂದ್ರ! ಆಮೇಲೆ ಉತ್ತಮವಾದ ಕಾಲಿಂದೀ ಎಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದವನು ನರಕವನ್ನು ಹೊಂದುವುದಿಲ್ಲ.

೨-೩. ಪುಷ್ಕರ, ಕುರುಕ್ಷೇತ್ರ, ಬ್ರಹ್ಮಾವರ್ತ, ಪೃಥೂದಕ, ಅವಿಮುಕ್ತ(ಕಾಶಿ) ಸುವರ್ಣವೆಂಬ ತೀರ್ಥಗಳಲ್ಲಿ ಮನುಷ್ಯನು ಯಾವ ಫಲವನ್ನು ಪಡೆಯಲಾರನೋ ಆ ಫಲವನ್ನು ಯಮುನಾಸ್ನಾನದಿಂದ ಹೊಂದುತ್ತಾನೆ. ಸ್ವರ್ಗಸುಖವನ್ನು ಪಡೆಯಬೇಕು ಎನ್ನುವವನು ಹೀಗೆ ಮಾಡಬೇಕು.

ಯಮುನಾಯಾಂ ವಿಶೇಷೇಣ ಸ್ನಾನದಾನೇನ ಸತ್ತಮ ।
ಆಯುರಾರೋಗ್ಯಸಂಪತ್ತೌ ರೂಪಯೌವನತಾಗುಣೇ　　॥ ೪ ॥

ಯೇಷಾಂ ಮನೋರಥೈಃ ತೈಸ್ತು ನ ತ್ಯಾಜ್ಯಂ ಯಾಮುನಂ ಜಲಂ ।
ಯೇ ಬಿಭ್ಯತಿ ನರಕಾದೇಃ ದಾರಿದ್ರ್ಯಾತ್ ಯೇಽತ್ರ ಸಂತಿ ಚ ।
ಸರ್ವಥಾ ತೈಃ ಪ್ರಯತ್ನೇನ ತತ್ರ ಕಾರ್ಯಂ ನಿಮಜ್ಜನಂ　　॥ ೫ ॥

ದಾರಿದ್ರ್ಯಪಾಪದೌರ್ಭಾಗ್ಯಪಂಕಪ್ರಕ್ಷಾಲನಾಯ ವೈ ।
ಋತೇ ವೈ ಯಾಮುನಂ ತೋಯಂ ನ ಚಾನ್ಯೋಽಸ್ತಿ ಯುಧಿಷ್ಠಿರ॥

ಶ್ರದ್ಧಾಹೀನಾನಿ ಕರ್ಮಾಣಿ ಮತಾನ್ಯರ್ಧಫಲಾನಿ ವೈ ।
ಫಲಂ ದದಾತಿ ಸಂಪೂರ್ಣಂ ಯಾಮುನಂ ಸ್ನಾನಮಾತ್ರತಃ　　॥ ೭ ॥

---

೪. ಯಮುನೆಯಲ್ಲಿ ವಿಶೇಷವಾಗಿ ಸ್ನಾನ, ದಾನವನ್ನು ಆಚರಿಸಬೇಕು. ಯಾರು, ಆಯುಸ್ಸುಆರೋಗ್ಯಭಾಗ್ಯಗಳನ್ನೂ ಸೌಂದರ್ಯವನ್ನೂ ಯೌವನವನ್ನೂ ಗುಣವನ್ನೂ ಅಪೇಕ್ಷಿಸುವರೋ ಅವರು ಯಮುನಾಜಲವನ್ನು ಬಿಡಕೂಡದು.

೫. ನರಕದ ದೆಸೆಯಿಂದ ಹೆದರುವವರೂ ದಾರಿದ್ರ್ಯಕ್ಕೆ ಅಂಜುವವರೂ ಸರ್ವಪ್ರಯತ್ನದಿಂದಲೂ ಈ ಯಮುನೆಯಲ್ಲಿ ಸ್ನಾನಮಾಡಬೇಕು.

೬. ಧರ್ಮರಾಜ! ದಾರಿದ್ರ್ಯ, ಪಾಪ, ದೌರ್ಭಾಗ್ಯವೆಂಬ ಕೊಳೆಯನ್ನು ತೊಳೆದುಕೊಳ್ಳಲು ಯಮುನೆಯ ನೀರನ್ನು ಬಿಟ್ಟರೆ ಬೇರೊಂದಿಲ್ಲ.

೭. ಶ್ರದ್ಧೆಯಿಲ್ಲದೇ ಮಾಡುವ ಕೆಲಸಗಳೆಲ್ಲವೂ ಅರ್ಧ ಫಲವನ್ನು ಕೊಡತಕ್ಕವೆಂದು ಶಾಸ್ತ್ರದಲ್ಲಿ ಹೇಳಿದೆ. ಈ ಯಾಮುನಜಲವು ಸ್ನಾನಮಾತ್ರದಿಂದ ಅಂತಹುದನ್ನೂ ಸಂಪೂರ್ಣಗೊಳಿಸುವುದು.

ಅಕಾಮೋ ವಾ ಸಕಾಮೋ ವಾ ಯಾಮುನೇ ಸಲಿಲೇ ನೃಪ ।
ಇಹಾಮುತ್ರ ಚ ದುಃಖಾನಿ ಮಜ್ಜನಾನ್ನೈವ ಪಶ್ಯತಿ ॥ ೮ ॥

ಪಕ್ಷದ್ವಯೇ ಯಥಾ ಚಂದ್ರಃ ಕ್ಷೀಯತೇ ವರ್ಧತೇ ತಥಾ ।
ಪಾತಕಂ ನಶ್ಯತೇ ತತ್ರ ಸ್ನಾನಾತ್ ಪುಣ್ಯಂ ವಿವರ್ಧತೇ ॥ ೯ ॥

ಯಥಾಬ್ಧೌ ಸುಖಮಾಯಾನ್ತಿ ರತ್ನಾನಿ ವಿವಿಧಾನಿ ಚ ।
ಆಯುರ್ವಿತ್ತಂ ಕಲತ್ರಾಣಿ ಸಂಪದಃ ಸಂಭವನ್ತಿ ಹಿ ॥೧೦॥

ಕಾಮಧೇನುಃ ಯಥಾ ಕಾಮಂ ಚಿನ್ತಾಮಣಿರ್ವಿಚಿನ್ತಿತಂ ।
ದದಾತಿ ಯಮುನಾಸ್ನಾನಂ ತದ್ವತ್ಸರ್ವಂ ಮನೋರಥಂ ॥೧೧॥

ಕೃತೇ ತಪಃ ಪರಂ ಜ್ಞಾನಂ ತ್ರೇತಾಯಾಂ ಯಜನಂ ತಥಾ ।
ದ್ವಾಪರೇ ಚ ಕಲೌ ದಾನಂ ಕಾಲಿಂದೀ ಸರ್ವದಾ ಶುಭಾ ॥೧೨॥

---

೮. ಎಲೈ ರಾಜನೇ ! ಇಷ್ಟವಿರಲಿ, ಇಲ್ಲದಿರಲಿ, ಯಮುನಾಜಲದಲ್ಲಿ ಸ್ನಾನಮಾಡಿದ ಮಾತ್ರದಿಂದ ಇಹಪರಗಳಲ್ಲಿ ದುಃಖಗಳನ್ನು ಕಾಣುವುದಿಲ್ಲ.

೯. ಚಂದ್ರನು ಕೃಷ್ಣಪಕ್ಷದಲ್ಲಿ ನಶಿಸಿ ಶುಕ್ಲಪಕ್ಷದಲ್ಲಿ ವೃದ್ಧಿ ಹೊಂದುವಂತೆ ಇಲ್ಲಿಯ ಸ್ನಾನದಿಂದ ಪಾಪವು ನಾಶವಾಗಿ ಪುಣ್ಯವು ಹೆಚ್ಚುವುದು.

೧೦. ಸಮುದ್ರದಲ್ಲಿ ನಾನಾ ವಿಧವಾದ ರತ್ನಗಳು ಸುಖವಾಗಿ ದೊರೆಯುವಂತೆ ಮನುಷ್ಯನಿಗೆ ಈ ಸ್ನಾನದಿಂದ, ಆಯಸ್ಸು, ದುಡ್ಡು, ಮಡದಿ ಸಂಪತ್ತುಗಳು ಉಂಟಾಗುತ್ತವೆ.

೧೧. ಕಾಮಧೇನು, ಚಿಂತಾಮಣಿಗಳು ಅಭೀಷ್ಟವಾದುವೆಲ್ಲವನ್ನೂ ಕೊಡುವಂತೆ ಯಮುನಾಸ್ನಾನವು ಎಲ್ಲಾ ಬಯಕೆಯನ್ನೂ ಪೂರೈಸುವುದು.

೧೨. ಕೃತಯುಗದಲ್ಲಿ ಜ್ಞಾನವೇ ತಪಸ್ಸು. ತ್ರೇತಾಯುಗದಲ್ಲಿ ಯಾಗಮಾಡುವುದೇ ತಪಸ್ಸು. ದ್ವಾಪರ ಮತ್ತು ಕಲಿಯುಗಗಳಲ್ಲಿ ದಾನವೇ ತಪಸ್ಸು. ಕಾಲಿಂದೀ ಸ್ನಾನವು ಯಾವಾಗಲೂ ಶುಭಪ್ರದವಾದುದು.

ಸರ್ವೇಷಾಂ ಸರ್ವವರ್ಣಾನಾಂ ಆಶ್ರಮಾಣಾಂಚ ಭೂಪತೇ ।
ಯಾಮುನೇ ಮಜ್ಜನಂ ಧರ್ಮಂ ಧಾರಾಭಿಃ ಖಲು ವರ್ಷತಿ ॥೧೩॥
ಅಸ್ಮಿನ್ ವೈ ಭಾರತೇ ವರ್ಷೇ ಕರ್ಮಭೂಮೌ ವಿಶೇಷತಃ ।
ಕಾಲಿಂದ್ಯಸ್ನಾಯಿನಾಂ ನೃಣಾಂ ನಿಷ್ಫಲಂ ಜನ್ಮಕೀರ್ತಿತಂ ॥೧೪॥
ನೈಶ್ವರ್ಯಂ ಗಗನೇ ಯದ್ವತ್ ಚಾಂದ್ರೇಽಮಾಯಾಂತು ಮಂಡಲೇ।
ತದ್ವನ್ನ ಭಾತಿ ಸತ್ಕರ್ಮ ಯಮುನಾಮಜ್ಜನಂ ವಿನಾ ॥೧೫॥
ವ್ರತೈಃ ದಾನೈಃ ತಪೋಭಿಶ್ಚ ನ ತಥಾ ಪ್ರೀಯತೇ ಹರಿಃ ।
ತತ್ರ ಮಜ್ಜನಮಾತ್ರೇಣ ಯಥಾ ಪ್ರೀಣಾತಿ ಕೇಶವಃ ॥೧೬॥
ನ ಸಮಂ ವಿದ್ಯತೇ ಕಿಂಚಿತ್ ತೇಜಃ ಸೌರೇಣ ತೇಜಸಾ ।
ತದ್ವತ್ ನ ಯಮುನಾಸ್ನಾನಸಮಾನಾಃ ಕ್ರತುಜಾಃ ಕ್ರಿಯಾಃ ॥೧೭॥

---

೧೩. ರಾಜೇಂದ್ರಾ! ಸಮಸ್ತ ಆಶ್ರಮಗಳ ಜನಗಳಿಗೆ, ಯಮುನಾ ಸ್ನಾನವು, ಧರ್ಮವನ್ನು ಧಾರೆಧಾರೆಯಾಗಿ ಸುರಿಸುವುದು.

೧೪. ಈ ಭರತವರ್ಷದಲ್ಲಿ, ಅದರಲ್ಲೂ ವಿಶೇಷವಾಗಿ ಈ ಕರ್ಮ ಭೂಮಿಯಲ್ಲಿ, ಯಮುನೆಯ ಸ್ನಾನವನ್ನು ಮಾಡದವರ ಜನ್ಮವು ವ್ಯರ್ಥವಾದುದು.

೧೫. ಅಮವಾಸ್ಯೆಯ ದಿನ ಆಕಾಶದಲ್ಲಿ ಚಂದ್ರಮಂಡಲವು ಎಂತು ಕಳೆಗುಂದಿ ಕಾಂತಿಯಿಲ್ಲದೇ ಇರುವುದೋ ಹಾಗೆ ಯಮುನಾ ಸ್ನಾನ ವಿಲ್ಲದೇ ಒಳ್ಳೆಯ ಕೆಲಸವು ಶೋಭಿಸಲಾರದು.

೧೬. ಯಮುನಾ ಸ್ನಾನದಿಂದ ಹರಿಯು ಸುಪ್ರೀತನಾಗುವಂತೆ ವ್ರತ, ದಾನ, ತಪಸ್ಸುಗಳಿಂದ ಪ್ರೀತನಾಗುವುದಿಲ್ಲ.

೧೭. ಸೂರ್ಯನ ತೇಜಸ್ಸಿಗೆ ಸಮಾನವಾದ ಮತ್ತೊಂದು ತೇಜಸ್ಸು ಹೇಗೆ ಪ್ರಪಂಚದಲ್ಲಿಲ್ಲವೋ ಹಾಗೆ ಯಮುನಾ ಸ್ನಾನಕ್ಕೆ ಸಮವಾದ ಯಾವ ಯಾಗಾದಿಕ್ರಿಯೆಗಳೂ ಇಲ್ಲ.

ಪ್ರೀತಯೇ ವಾಸುದೇವಸ್ಯ ಸರ್ವಪಾಪಾಪನುತ್ತಯೇ ।
ಕಾಲಿನ್ದ್ಯಾ ಮಜ್ಜನಂ ಕುರ್ಯಾತ್ ಸ್ವರ್ಗಲೋಕಾಯ ಮಾನವಃ ॥

ಕಿಂರಕ್ಷಿತೇನದೇಹೇನ ಸುಪುಷ್ಟೇನ ಬಲೀಯಸಾ ।
ಅಧ್ರುವೇಣ ಸುದೇಹೇನ ಯಮುನಾಮಜ್ಜನಂ ವಿನಾ ॥೧೯॥

ಅಸ್ಥಿಸ್ತಂಭಂ ಸ್ನಾಯುಬಂಧಂ ಮಾಂಸಕ್ಷತಜಲೇಪನಂ ।
ಚರ್ಮಾವನದ್ಧಂ ದುರ್ಗಂಧಪೂರ್ಣಂ ಮೂತ್ರಪುರೀಷಯೋಃ॥೨೦॥

ಜರಾಶೋಕವಿಪದ್ವ್ಯಾಪ್ತಂ ರೋಗಮಂದಿರಮಾತುರಂ ।
ರಾಗಮೂಲಮನಿತ್ಯಂ ಚ ಸರ್ವದೋಷಸಮಾಶ್ರಯಂ ॥೨೧॥

ಪರೋಪತಾಪಪಾಪಾರ್ತಿಪರದ್ರೋಹಪರೇರ್ಷಕಂ ।
ಲೋಲುಪಂ ಪಿಶುನಂ ಕ್ರೂರಂ ಕೃತಘ್ನಂ ಕ್ಷಣಿಕಂ ತಥಾ ॥೨೨॥

---

೧೮. ವಾಸುದೇವನ ಪ್ರೀತಿ ಉಂಟಾಗುವುಕ್ಕೂ ಎಲ್ಲಾ ಪಾಪಗಳೂ ನಾಶವಾಗಿ ಸ್ವರ್ಗಸಿಗುವುದಕ್ಕೂ ಮನುಜನು ಕಾಲಿಂದಿಯಲ್ಲಿ ಸ್ನಾನಮಾಡಬೇಕು.

೧೯. ಯಮುನಾ ಸ್ನಾನಮಾಡದೇ, ಗಟ್ಟಿಮುಟ್ಟಾಗಿರುವಂತೆ ಕಾಪಾಡಿಕೊಂಡು ಬಂದ ನಶ್ವರವಾದ ಈ ಒಳ್ಳೆಯ ದೇಹದಿಂದೇನು ಪ್ರಯೋಜನ?

೨೦–೨೫. ಈ ಶರೀರವು ರೋಗಕ್ಕೆ ಮನೆ. ಈ ಮನೆಗೆ ಮೂಳೆಗಳೇ ಕಂಭಗಳು. ನರಗಳೇ ಹುರಿ. ಮಾಂಸರಕ್ತಗಳು ಗಾರೆ. ಚರ್ಮವೇ ಹೊದಿಕೆ. ಮಲಮೂತ್ರಗಳನಾತದಿಂದ ಯಾವಾಗಲೂ ತುಂಬಿದುದೇ ಈ ದೇಹ. ಅಲ್ಲದೆ, ಮುಪ್ಪು, ದುಃಖಗಳೆಂಬ ವಿಪತ್ತಿನಿಂದ ವ್ಯಾಪ್ತವಾದುದು. ರೋಗದನೆಲೆ. ಕೋಪಕ್ಕೆ ಮೂಲ. ಅನಿತ್ಯ. ಸರ್ವದೋಷಗಳಿಗೂ ಬೀಡು, ಪರಹಿಂಸೆ, ಪರ ಪೀಡೆ, ಪರದ್ರೋಹ, ಹೊಟ್ಟೆ

**ನಿಷ್ಠುರಂ ದುರ್ಧರಂ ದುಷ್ಟಂ ದೋಷತ್ರಯವಿದೂಷಿತಂ ।**
**ಅಶುಚಿ ಚಾಪಿ ದುರ್ಗಂಧಿ ತಾಪತ್ರಯವಿಮೋಹಿತಂ ॥೨೩॥**

**ನಿಸರ್ಗತೋಽಧರ್ಮರತಂ ತೃಷ್ಣಾಶತಸಮಾಕುಲಂ ।**
**ಕಾಮಕ್ರೋಧಮಹಾಲೋಭನರಕದ್ವಾರಸಂಸ್ಥಿತಂ ॥೨೪॥**

**ಕೃಮಿವರ್ಚಸ್ಯಭಸ್ಮಾದಿಪರಿಣಾಮಗುಣಾವಹಂ ।**
**ಈದೃಕ್‌ಶರೀರಂ ವ್ಯರ್ಥಂ ಹಿ ಯಮುನಾಮಜ್ಜನಂ ವಿನಾ ॥೨೫॥**

**ಬುದ್ಬುದಾ ಇವ ತೋಯೇಷು ಪ್ರತ್ಯಂಡಾ ಇವ ಪಕ್ಷಿಷು ।**
**ಜಾಯನ್ತೇ ಮರಣಾಯೈವ ಯಮುನಾಸ್ನಾನವರ್ಜಿತಾಃ ॥೨೬॥**

**ಅವೈಷ್ಣವೋ ಹತೋ ವಿಪ್ರೋ ಹತಂ ಶ್ರಾದ್ಧಂ ಅಪಿಂಡಕಂ ।**
**ಅಬ್ರಹ್ಮಣ್ಯಂ ಹತಂ ಕ್ಷತ್ರಂ ಅನಾಚಾರಹತಂ ಕುಲಂ ॥೨೭॥**

---

ಕಿಚ್ಚು ಇವುಗಳು ಉಳ್ಳುದು. ಮತ್ತು ಚಂಚಲವಾದುದು. ಪಿಸುಣ ತನವುಳ್ಳುದು. ಉಪಕಾರಸ್ಮರಣೆಯಿಲ್ಲದುದು. ಕ್ಷಣಿಕವಾದುದು. ಅಲ್ಲದೇ ನಿಷ್ಠುರವೂ ಹಿಡಿತಕ್ಕೆ ಸಿಕ್ಕುವುದಲ್ಲದುದೂ, ದೋಷ ಪೂರ್ಣವೂ ಆದುದು. ಮತ್ತು ವಾತ, ಪಿತ್ತ, ಶ್ಲೇಷ್ಮಗಳಿಂದ ಕೆಡಿಸಲ್ಪಟ್ಟುದು. ಅಶುಚಿ, ದುರ್ಗಂಧ ಪೂರ್ಣವಾದುದು. ತಾಪತ್ರಯಗಳಿಗೆ ಸಿಲುಕಿದುದು. ಮತ್ತೂ ಸ್ವಭಾವವಾಗಿಯೇ ಅಧರ್ಮದಲ್ಲಿ ಆಸೆಯುಳ್ಳುದು. ಸಾವಿರಾರು ಆಶೆಗಳುಳ್ಳದ್ದು. ಕಾಮ, ಕ್ರೋಧ, ಲೋಭಾದಿಗಳಿಗೆ ವಶವಾಗಿ ನರಕದ ಹೆಬ್ಬಾಗಿಲಲ್ಲಿ ನಿಂತಿರುವಂಥದು. ಅಲ್ಲದೇ, ಪರಿಣಾಮದಲ್ಲಿ, ಕೃಮಿಗಳಾಗಿಯೋ, ಅಮೇಧ್ಯರೂಪವಾಗಿಯೋ, ಭಸ್ಮವಾಗಿಯೋ ಆಗುವಂಥದು. ಇಂಥ ಶರೀರವು ಯಮುನಾ ಸ್ನಾನದಿಂದ ಸಾರ್ಥಕವಾಗುವುದು. ಇಲ್ಲದಿದ್ದರೆ ನಿಜವಾಗಿಯೂ ವ್ಯರ್ಥವೇ ಸರಿ.

೨೬. ನೀರಿನಲ್ಲಿ ಗುಳ್ಳೆಗಳಂತೆಯೂ, ಪಕ್ಷಿಗಳಲ್ಲಿ ಈಚಲು ಹುಳುಗಳಂತೆಯೂ, ಯಮುನಾ ಸ್ನಾನಮಾಡದವರು ಸಾಯುವುದಕ್ಕೆಂದೇ ವ್ಯರ್ಥವಾಗಿ ಹುಟ್ಟುತ್ತಾರೆ.

೨೭. ವಿಷ್ಣುಭಕ್ತನಾಗದ ಬ್ರಾಹ್ಮಣನ ಜನ್ಮವು ವ್ಯರ್ಥ. ಪಿಂಡ ಪ್ರದಾನವಿಲ್ಲದ ಶ್ರಾದ್ಧವು ವ್ಯರ್ಥ. ಜೀವದಾನವನ್ನು ಬೇಡುವ ಕ್ಷತ್ರಿಯನ ಬಾಳು ವ್ಯರ್ಥ. ಆಚಾರವನ್ನನುಸರಿಸದ ಕುಲವು ಹಾಳು.

**ಸದಂಭಶ್ಚ ಹತೋಧರ್ಮಃ ಕ್ರೋಧೇನೈವ ಹತಂ ತಪಃ ।**
**ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಂ ॥೨೮॥**

**ಪರಭಕ್ತ್ಯಾ ಹತಾ ನಾರೀ ಬ್ರಹ್ಮಚಾರೀ ಮದಾದ್ಧತಃ ।**
**ಅದೀಪ್ತೇಽಗ್ನೌ ಹತೋ ಹೋಮಃ ಹತಾ ಭಕ್ತಿಃ ಸಮಾಯಿಕಾ ॥**

**ಉಪಜೀವ್ಯಾ ಹತಾ ಕನ್ಯಾ ಸ್ವಾರ್ಥೇ ಪಾಪಕ್ರಿಯಾ ಹತಾ ।**
**ಶೂದ್ರಭಿಕ್ಷೋಃ ಹತೋ ಯೋಗಃ ಕೃಪಣಸ್ಯ ಹತಂ ಧನಂ ॥೩೦॥**

**ಅನಭ್ಯಾಸಹತಾ ವಿದ್ಯಾ ಹತೋ ಬೋಧೋ ವಿರೋಧಕೃತ್ ।**
**ಜೀವನಾರ್ಥಂ ಹತಂ ತೀರ್ಥಂ ಜೀವನಾರ್ಥಂ ಹತಂ ವ್ರತಂ ॥೩೧॥**

---

೨೮. ಡಂಭಾಚಾರಕ್ಕಾಗಿ ಮಾಡಿದ ಧರ್ಮವು ವ್ಯರ್ಥವು. ಕೋಪದಿಂದ ತಪಸ್ಸು ಹಾಳಾಗುವುದು. ದೃಢವಲ್ಲದ ಜ್ಞಾನವು ಹಾಳು. ಪ್ರಮಾದದಿಂದ ಶಾಸ್ತ್ರಾರ್ಥವು ಹಾಳಾಗುವುದು.

೨೯. ಪರರಲ್ಲಿ ಆಸಕ್ತಿಯಿಂದ ನಾರಿಯು ಕೆಡುವಳು. ಮದದಿಂದ ಬ್ರಹ್ಮಚಾರಿಯು ನಾಶಹೊಂದುವನು. ಜ್ವಾಲೆಯಿಲ್ಲದ ಬೆಂಕಿಯಲ್ಲಿ ಮಾಡಿದ ಹೋಮವು ವ್ಯರ್ಥ. ಕಪಟವಾದ ಭಕ್ತಿಯು ಹಾಳು.

೩೦. ಮತ್ತೊಬ್ಬರ ಮನೆಯಲ್ಲಿ ಜೀವನಕ್ಕೋಸ್ಕರ ಇರುವ ಕನ್ಯೆಯು ನಾಶವಾಗುತ್ತಾಳೆ. ತನ್ನ ಹೊಟ್ಟೆಹೊರೆಯಲು ಮಾಡಿದ ಪಾಪಕೃತ್ಯವು ವ್ಯರ್ಥವು. ಶೂದ್ರಸನ್ಯಾಸಿಯ ಯೋಗವು ಹಾಳು. ಕೃಪಣನ ಬಳಿಯಿರುವ ಹಣವು ಇದ್ದೂ ಇಲ್ಲದಂತೆಯೇ.

೩೧. ಅಭ್ಯಾಸವಿಲ್ಲದ ವಿದ್ಯೆಯು ಹಾಳು. ದ್ವೇಷವನ್ನುಂಟು ಮಾಡುವ ಉಪದೇಶವು ಹಾಳು. ಜೀವನಕ್ಕೋಸ್ಕರ ಮಾಡುವ ತೀರ್ಥಪರ್ಯಟನವು ಹಾಳು. ಉದರ ಭರಣಕ್ಕೆಂದು ಹೂಡಿದ ವ್ರತವು ಹಾಳು.

ಅಸತ್ಯಾ ಚ ಹತಾ ವಾಣೀ ತಥಾ ಪೈಶುನ್ಯವಾದಿನೀ ।
ಷಟ್ಕರ್ಣಗೋ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥
ಹತಮಶ್ರೋತ್ರಿಯೇ ದಾನಂ ಹತೋ ಲೋಕಶ್ಚ ನಾಸ್ತಿಕಃ ।
ಅಶ್ರದ್ಧಯಾ ಹತಂ ಸರ್ವಂ ಯತ್ಕೃತಂ ಪಾರಲೌಕಿಕಂ ॥೩೩॥
ಇಹ ಲೋಕೋ ಹತೋ ನೃಣಾಂ ದರಿದ್ರಾಣಾಂ ಯಥಾ ನೃಪ ।
ಮನುಷ್ಯಾಣಾಂ ಹತಂ ಜನ್ಮ ಕಾಲಿನ್ದೀಮಜ್ಜನಂ ವಿನಾ ॥೩೪॥
ಉಪಪಾತಕ ಸರ್ವಾಣಿ ಪಾತಕಾನಿ ಮಹಾನ್ತಿ ಚ ।
ಭಸ್ಮೀಭವನ್ತಿ ಸರ್ವಾಣಿ ಯಮುನಾಮಜ್ಜನಾನ್ನೃಪ ॥೩೫॥
ವೇಪನ್ತೇ ಸರ್ವಪಾಪಾನಿ ಯಮುನಾಯಾಂ ಗತೇ ನರೇ ।
ನಾಶಕೇ ಸರ್ವಪಾಪಾನಾಂ ಯದಿ ಸ್ನಾಸ್ಯತಿ ವಾರಿಣಿ ॥೩೬॥

---

೩೨. ಸುಳ್ಳಿನಿಂದ ತುಂಬಿದ ಮಾತು ಹಾಳಾಯಿತು. ಅಂತೆಯೇ ಚಾಡಿಹೇಳುವ ನುಡಿಯೂ ಕೆಟ್ಟಿತು. ಆರುಕಿವಿಗಳನ್ನು ಮುಟ್ಟಿದ (ಮೂವರಿಗೆ ತಿಳಿದ) ಗುಟ್ಟು ಕೆಟ್ಟಿತು. ಅನ್ಯಮನಸ್ಸಿನಿಂದ ಮಾಡಿದ ಜಪವು ಕೆಟ್ಟಿತು.

೩೩. ಶ್ರೋತ್ರಿಯನಲ್ಲದವನಿಗೆ ನೀಡಿದ ದಾನವು ವ್ಯರ್ಥವು. ದೇವರಿಲ್ಲವೆನ್ನುವ ಜನರು ಕೆಟ್ಟರು. ದೇಹಾನಂತರ ಸದ್ಗತಿ ದೊರೆಯಲೆಂದು ಮಾಡಿದ ಕೆಲಸವು ಶ್ರದ್ಧೆಯಿಲ್ಲದಿದ್ದರೆ ನಿಷ್ಫಲವು.

೩೪, ಬಡವರಾದ ಮನುಷ್ಯರಿಗೆ ಈ ಲೋಕವು ವ್ಯರ್ಥವಾದಂತೆ. ಯಮುನಾಸ್ನಾನವಿಲ್ಲದ ಮನುಷ್ಯನ ಜನ್ಮವು ವ್ಯರ್ಥವಾದುದು.

೩೫. ಉಪಪಾತಕ, ಮಹಾಪಾತಕಗಳೆಲ್ಲವೂ ಯಮುನಾಸ್ನಾನದಿಂದ ಭಸ್ಮವಾಗುತ್ತವೆ.

೩೬–೩೭. ಸರ್ವ ಪಾಪನಿವಾರಕವಾದ ಈ ಜಲದಲ್ಲಿ "ಎಲ್ಲಿ ಸ್ನಾನ ಮಾಡಿ ಬಿಡುವರೋ" ಎಂದು ಪಾಪಗಳೆಲ್ಲವೂ, ಹೆದರಿ ನಡುಗುತ್ತವೆ.

ಪಾವಕಾ ಇವ ದೀಪ್ಯನ್ತೇ ಯಮುನಾಯಾಂ ನರೋತ್ತಮಾಃ ।
ವಿಮುಕ್ತಾಸ್ಸರ್ವ ಪಾಪೇಭ್ಯೋ ಮೇಘೇಭ್ಯ ಇವ ಚಂದ್ರಮಾಃ ॥
ಆರ್ದ್ರಶುಷ್ಕಲಘುಸ್ಥೂಲಂ ವಾಙ್ಮನಃಕರ್ಮಭಿಃ ಕೃತಂ ।
ತತ್ರ ಸ್ನಾನಂ ದಹೇತ್ಪಾಪಂ ಪಾವಕಃ ಸಮಿಧೋ ಯಥಾ ॥೩೮॥
ಪ್ರಮಾದಿಕಂ ಚ ಯತ್ಪಾಪಂ ಜ್ಞಾನಾಜ್ಞಾನಕೃತಂ ಚ ಯತ್ ।
ಸ್ನಾನಮಾತ್ರೇಣ ನಶ್ಯೇತ ಯಮುನಾಯಾಂ ನೃಪೋತ್ತಮ ॥೩೯॥
ನಿಷ್ಪಾಪಾಃ ತ್ರಿದಿವಂ ಯಾನ್ತಿ ಪಾಪಿಷ್ಠಾ ಯಾನ್ತಿ ಶುದ್ಧತಾಂ ।
ಸಂದೇಹೋ ನಾತ್ರ ಕರ್ತವ್ಯಃ ಸ್ನಾನೇ ವೈ ಯಮುನಾಜಲೇ ॥೪೦॥
ಸರ್ವೇಽಧಿಕಾರಿಣೋ ಹ್ಯತ್ರ ವಿಷ್ಣುಭಕ್ತೌ ಯಥಾನೃಪ ।
ಸರ್ವೇಷಾಂ ಸರ್ವದಾ ದೇವೀ ಯಮುನಾ ಪಾಪನಾಶಿಕಾ ॥೪೧॥

---

ಯಮುನೆಯಲ್ಲಿ, ಮಿಂದವರು ಮೇಘಗಳಿಂದ ಬಿಡಲ್ಪಟ್ಟ ಚಂದ್ರನಂತೆ, ಪಾಪಗಳಿಂದ ಬಿಡಲ್ಪಟ್ಟು, ಅಗ್ನಿಯಂತೆ ಪ್ರಕಾಶಿಸುತ್ತಾರೆ.

೩೮. ಹಸಿಯಾಗಿರಲಿ, ಒಣಗಿರಲಿ, ಸ್ವಲ್ಪವಿರಲಿ, ಹೆಚ್ಚಾಗಿರಲಿ, ಬೆಂಕಿಯು ಸೌದೆಯನ್ನು ಸುಡುವಂತೆ, ವಾಕ್ಕು, ಮನಸ್ಸು, ಕರ್ಮಗಳಿಂದ ಮಾಡಲ್ಪಟ್ಟ, ಹೊಸದು, ಹಳೆಯದು, ಅಲ್ಪ, ಅಧಿಕವಾದ ಪಾಪಗಳನ್ನು ಈ ಯಮುನಾ ಸ್ನಾನವು ಸುಟ್ಟುಬಿಡುವುದು.

೩೯. ಪ್ರಮಾದದಿಂದ ಮಾಡಿದ ಪಾಪವೂ, ತಿಳಿದೋ ತಿಳಿಯದೆಯೋ ಮಾಡಿದ ಪಾಪವೂ, ಯಮುನೆಯಲ್ಲಿ ಸ್ನಾನಮಾಡಿದ ಮಾತ್ರದಿಂದ ನಾಶವಾಗುತ್ತದೆ.

೪೦. ಯಮುನೆಯಲ್ಲಿ ಸ್ನಾನಮಾಡಲು, ಪಾಪವಿಲ್ಲದವರು ಸ್ವರ್ಗವನ್ನು ಹೊಂದುವರು. ಪಾಪಿಗಳು ಶುದ್ಧರಾಗುವರು. ಈ ಅಂಶದಲ್ಲಿ ಸಂದೇಹಬೇಡ.

೪೧. ವಿಷ್ಣುಭಕ್ತಿಯಲ್ಲಿ ಹೇಗೆ ಎಲ್ಲರೂ ಅಧಿಕಾರಿಗಳೋ ಹಾಗೆ ಈ ಯಮುನೆಯಲ್ಲಿ ಸ್ನಾನಮಾಡಲು ಎಲ್ಲರೂ ಅಧಿಕಾರಿಗಳು. ಈ ಯಮುನೆಯು ಎಲ್ಲರ ಪಾಪವನ್ನೂ ಯಾವಾಗಲೂ ನಾಶಮಾಡುವುದು.

ಏಷ ಏವ ಪರೋ ಮನ್ತ್ರಃ ಏತಚ್ಚ ಪರಮಂ ತಪಃ ।
ಪ್ರಾಯಶ್ಚಿತ್ತಂ ಪರಂ ಚೈವ ಯಮುನಾಸ್ನಾನಮುತ್ತಮಂ ॥೪೨॥
ನೃಣಾಂ ಜನ್ಮಾಂತರಾಭ್ಯಾಸಾತ್ ಕಾಲಿನ್ದೀ ಮಜ್ಜನೇ ಮತಿಃ ।
ಅಧ್ಯಾತ್ಮಜ್ಞಾನ ಕೌಶಲ್ಯಂ ಜನ್ಮಾಭ್ಯಾಸಾದ್ಯಥಾ ನೃಪ ॥೪೩॥
ಸಂಸಾರಕರ್ದಮಾಲೇಪಪ್ರಕ್ಷಾಲನವಿಶಾರದಂ ।
ಪಾವನಂ ಪಾವನಾನಾಂ ಚ ಯಮುನಾಸ್ನಾನಮುತ್ತಮಂ ॥೪೪॥
ಸ್ನಾತಾಸ್ತತ್ರ ಚ ಯೇ ರಾಜನ್ ಸರ್ವಕಾಮಫಲಪ್ರದೇ ।
ಶುಭಾಂಶ್ಚ ಭುಂಜತೇ ಭೋಗಾನ್ ಚಂದ್ರಸೂರ್ಯಗ್ರಹೋಪಮಾನ್॥
ಅನ್ಯತ್ರ ಯಮುನಾ ಪುಣ್ಯಾ ಮಹಾಪಾತಕಹಾರಿಣೀ ।
ವಿಷ್ಣುಭಕ್ತಿಪ್ರದಾ ದೇವೀ ಮಥುರಾಸಂಗತಾ ಭವೇತ್ ॥೪೬॥

---

೪೨. ಶ್ರೇಷ್ಠವಾದ ಯಮುನಾಸ್ನಾನವೇ ಉತ್ತಮವಾದ ಮಂತ್ರವು. ಅದೇ ಉತ್ತಮವಾದ ತಪಸ್ಸು. ಅದೇ ಉತ್ತಮ ಪ್ರಾಯಶ್ಚಿತ್ತವು.

೪೩. ಜನ್ಮಾಂತರದ ಅಭ್ಯಾಸ ಬಲದಿಂದ ಆತ್ಮಜ್ಞಾನದಲ್ಲಿ ಕೌಶಲವು ಹುಟ್ಟುವಂತೆ, ಜನ್ಮಾಂತರದ ಅಭ್ಯಾಸದಿಂದ ಮನುಜನಿಗೆ ಯಮುನೆಯಲ್ಲಿ ಸ್ನಾನಮಾಡುವ ಬುದ್ಧಿ ಹುಟ್ಟುತ್ತದೆ.

೪೪. ಪಾವನಕ್ಕೆ ಪಾವನವೂ ಉತ್ತಮವೂ ಆದ ಯಮುನಾಸ್ನಾನವು, ಸಂಸಾರವೆಂಬ ಕೊಚ್ಚೆಯ ಲೇಪವನ್ನು ತೊಳೆದು ಹಾಕುವುದು.

೪೫. ಸಕಲ ಇಷ್ಟಾರ್ಥಗಳನ್ನೂ ಕೊಡುವ ಆ ಯಮುನೆಯಲ್ಲಿ ಸ್ನಾನಮಾಡಿದರೆ ಚಂದ್ರ ಸೂರ್ಯಗ್ರಹಗಳಂತೆ ಒಳ್ಳೆಯ ಭೋಗಗಳನ್ನೇ ಭೋಗಿಸುತ್ತಾರೆ.

೪೬. ಮಿಕ್ಕಸ್ಥಳಗಳಲ್ಲಿ ಯಮುನೆಯು ಮಹಾ ಪಾತಕಗಳನ್ನು ನಾಶಮಾಡಿ ಪುಣ್ಯಪ್ರದಳಾಗುವಳು. ಮಥುರಾನಗರದಲ್ಲಿ ವಿಷ್ಣು ಭಕ್ತಿಯನ್ನೂ ನೀಡುವಳು.

ಭಕ್ತಿಭಾವೇನ ಸಂಯುಕ್ತಾಃ ಕಾಲಿನ್ದ್ಯಾಂ ಯದಿ ಮಜ್ಜಯೇತ್ ।
ಕಲ್ಪಕೋಟಿಸಹಸ್ರಾಣಿ ವಸತೇ ಸನ್ನಿಧೌ ಹರೇಃ ॥೪೭॥

ಮುಕ್ತಿಂ ಪ್ರಯಾನ್ತಿ ಮನುಜಾಃ ನೂನಂ ಸಾಂಖ್ಯೇನ ವರ್ಜಿತಾಃ ।
ಪಿತರಃ ತಸ್ಯ ತೃಪ್ಯನ್ತಿ ತೃಪ್ತಾಃ ಕಲ್ಪಶತೈರ್ದಿವಿ ॥೪೮॥

ಯೇ ಪಿಬನ್ತಿ ನರಾ ರಾಜನ್ ಯಮುನಾ ಸಲಿಲಂ ಶುಭಂ ।
ಪಂಚಗವ್ಯಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ ॥೪೯॥

ಕೋಟಿತೀರ್ಥಸಹಸ್ರೈಸ್ತು ಸೇವಿತೈಃ ಕಿಂಪ್ರಯೋಜನಂ ।
ತತ್ರ ದಾನಂ ಚ ಹೋಮಶ್ಚ ಸರ್ವಂ ಕೋಟಿಗುಣಂ ಭವೇತ್ ॥

ಶ್ರೀ ಇತಿ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕೊನತ್ರಿಂಶೋಽಧ್ಯಾಯಃ

---

೪೭. ಭಕ್ತಿಯಿಂದ ಕಾಲಿನ್ದಿಯಲ್ಲಿ ಸ್ನಾನಮಾಡಿದರೆ ಕೋಟಿಸಾವಿರ ಕಲ್ಪಗಳವರೆಗೂ ಹರಿಯ ಸನ್ನಿಧಿಯಲ್ಲಿ ವಾಸಿಸುತ್ತಾನೆ.

೪೮. ಒಟ್ಟಿನಲ್ಲಿ, ಈ ನೀರಿನಲ್ಲಿ ಸ್ನಾನಮಾಡಿದ ಮನುಜರು ಮುಕ್ತರಾಗುವರಲ್ಲದೆ, ಅನೇಕ ಸಂಖ್ಯರಾದ ಅವರ ಪಿತೃಗಳೂ ನೂರಾರು ಕಲ್ಪಗಳಕಾಲ ಸ್ವರ್ಗದಲ್ಲಿ ವಾಸಿಸುತ್ತಾರೆ.

೪೯. ಯಾರು ಯಮುನೆಯ ನೀರನ್ನು ಕುಡಿಯುತ್ತಾರೋ ಅವರಿಗೆ ಪಂಚಗವ್ಯಗಳ ಸಾವಿರದಿಂದೇನು ?

೫೦. ಅನೇಕ ತೀರ್ಥಗಳನ್ನು ಸೇವಿಸುವುದರಿಂದ ಏನು ಪ್ರಯೋಜನ? ಅಲ್ಲಿ ಮಾಡಿದ ದಾನಗಳೂ ಹೋಮಗಳೂ ಒಂದಕ್ಕೆ ಕೋಟಿಯಷ್ಟು ಹೆಚ್ಚುವುವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ಅತ್ರ ತೇ ವರ್ಣಯಿಷ್ಯಾಮಿ ಇತಿಹಾಸಂ ಪುರಾತನಂ ।
ಪುರಾ ಕೃತಯುಗೇ ರಾಜನ್ ನಿಷಧೇ ನಗರೇ ವರೇ ॥ ೧ ॥

ಆಸೀದ್ವೈಶ್ಯಃ ಕುಬೇರಾಭಃ ನಾಮತೋ ಹೇಮಕುಂಡಲಃ ।
ಕುಲೀನಃ ಸತ್ಕ್ರಿಯೋ ದೇವದ್ವಿಜಪಾವಕಪೂಜಕಃ ॥ ೨ ॥

ಕೃಷಿವಾಣಿಜ್ಯಕರ್ತಾಸೌ ಬಹುಧಾ ಕ್ರಯವಿಕ್ರಯೀ ।
ಗೋಘೋಟಕಮಹಿಷ್ಯಾದಿಪಶುಪೋಷಣತತ್ಪರಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಮುವತ್ತನೆಯ ಅಧ್ಯಾಯವು

೧. ನಾರದನು ಹೇಳಿದನು: ಈ ವಿಷಯದಲ್ಲಿ ನಿನಗೊಂದು ಹಿಂದಿನ ಕಥೆಯನ್ನು ಹೇಳುತ್ತೇನೆ. ಹಿಂದೆ ಕೃತಯುಗದಲ್ಲಿ ನಿಷಧವೆಂಬ ಪಟ್ಟಣದಲ್ಲಿ ಕುಬೇರನಿಗೆ ಸಮನಾದ ಹೇಮಕುಂಡಲನೆಂಬ ವೈಶ್ಯನೊಬ್ಬ ನಿದ್ದನು.

೨. ಅವನು ಒಳ್ಳೆಯ ವಂಶದಲ್ಲಿ ಹುಟ್ಟಿದವನು. ಸತ್ಕರ್ಮಗಳಲ್ಲಿ ನಿರತನಾದವನು. ದೇವ, ಬ್ರಾಹ್ಮಣರ ಪೂಜೆ, ಯಜ್ಞೇಶ್ವರನ ಪೂಜೆ ಇವುಗಳಲ್ಲಿ ತೊಡಗಿದ್ದನು, ವ್ಯವಸಾಯ, ವ್ಯಾಪಾರ, ನಾನಾ ಮುಖವಾಗಿ ಕೊಳ್ಳುವುದು, ಮಾರುವುದು ಇವು ಅವನ ವೃತ್ತಿ.

೩-೪. ಅವನು ದನ, ಎಮ್ಮೆ, ಕುದುರೆ ಮುಂತಾದ ಪಶುಗಳನ್ನು ಸಾಕುತ್ತಿದ್ದನು. ಹಾಲು, ಮೊಸರು, ಮಜ್ಜಿಗೆ, ಬೆರಣಿ, ಹುಲ್ಲು,

ಪಯೋ ದಧೀನಿ ತಕ್ರಾಣಿ ಗೋಮಯಾನಿ ತೃಣಾನಿ ಚ ।
ಕಾಷ್ಠಾನಿ ಫಲಮೂಲಾನಿ ಲವಣಾದ್ರಾರ್ದ್ರಾದಿ ಪಿಪ್ಪಲೀಃ ॥ ೪ ॥
ಧಾನ್ಯಾನಿ ಶಾತತೈಲಾನಿ ವಸ್ತ್ರಾಣಿ ವಿವಿಧಾನಿ ಚ ।
ಧಾತೂನಿಕ್ಷುವಿಕಾರಾಂಶ್ಚ ವಿಕ್ರೀಣೀತೇ ಹಿ ಸರ್ವದಾ ॥ ೫ ॥
ಇತ್ಥಂ ನಾನಾವಿಧೈರ್ವೈಶ್ಯಃ ಉಪಾಯೈರಪರೈಸ್ತಥಾ ।
ಉಪಾರ್ಜಯಾಮಾಸ ಸದಾ ಅಷ್ಟೌ ಹಾಟಕಕೋಟಯಃ ॥ ೬ ॥
ಏವಂ ಮಹಾಧನಸ್ಸೋಽಥ ಹಾ ಕರ್ಣಪಲಿತೋಽಭವತ್ ।
ಪಶ್ಚಾದ್ವಿಚಾರ್ಯ ಸಂಸಾರಕ್ಷಣಿಕತ್ವಂ ಸ್ವಚೇತಸಿ ॥ ೭ ॥
ತದ್ಧನಸ್ಯ ಷಡಂಶೇನ ಧರ್ಮಕಾರ್ಯಂ ಚಕಾರ ಸಃ ॥
ವಿಷ್ಣೋರಾಯತನಂ ಚಕ್ರೇ ಗೃಹಂ ಚಕ್ರೇ ಶಿವಸ್ಯ ಚ ॥ ೮ ॥
ತಟಾಗಂ ಖಾನಯಾಮಾಸ ವಿಪುಲಂ ಸಾಗರೋಪಮಂ ।
ವಾಪ್ಯಶ್ಚ ಪುಷ್ಕರಿಣ್ಯಶ್ಚ ಬಹುಧಾ ತೇನ ಕಾರಿತಾಃ ॥ ೯ ॥

---

ಸೌದೆ, ಗೆಡ್ಡೆಗೆಣಸು, ಹಣ್ಣುಗಳು, ಮತ್ತು ಉಪ್ಪು, ಶುಂಠಿ, ಹಿಪ್ಪಲಿ ಮುಂತಾದ ಹಸಿಯಾದ ಮತ್ತು ಒಣಗಿದ ಪದಾರ್ಥಗಳನ್ನು ಮಾರುತ್ತಿದ್ದನು.

೫. ಧಾನ್ಯಗಳು, ಆಡಿಸಿದಎಣ್ಣೆ, ಬಟ್ಟೆಬರೆ, ಮಣೆಶಿಲೆ ಮುಂತಾದ ಧಾತುಗಳು, ಬೆಲ್ಲ ಸಕ್ಕರೆ ಇವುಗಳನ್ನು ಯಾವಾಗಲೂ ಮಾರುತ್ತಿದ್ದನು.

೬. ಹೀಗೆ ಆ ವೈಶ್ಯನು ವ್ಯಾಪಾರದಲ್ಲಿ ನಾನಾವಿಧ ಉಪಾಯಗಳಿಂದ ಎಂಟುಕೋಟಿ ವರಹಗಳನ್ನು ಸಂಪಾದಿಸಿದನು.

೭. ಹೀಗೆ ಸಾಹುಕಾರನಾದ ಅವನಿಗೆ ಮುಪ್ಪುಕಾಣಿಸಿಕೊಂಡಿತು. ಅನಂತರ ಅವನು ಸಂಸಾರದ ಅನಿತ್ಯತ್ವವನ್ನು ಮನಸ್ಸಿನಲ್ಲಿ ಯೋಚಿಸಿ ಆ ಹಣದಲ್ಲಿ ಆರನೆಯ ಅಂಶವನ್ನು ವ್ಯಯಮಾಡಿ ಧರ್ಮಕಾರ್ಯಗಳನ್ನು ಮಾಡಿದನು.

೮-೯. ವಿಷ್ಣುದೇವಾಲಯ, ಶಿವದೇವಾಲಯಗಳನ್ನು ಕಟ್ಟಿಸಿದನು, ಸಮುದ್ರದಂತಿರುವ ವಿಸ್ತಾರವಾದ ಕೆರೆಯನ್ನು ಕಟ್ಟಿಸಿದನು. ಬಾವಿ, ಕೊಳಗಳನ್ನು ಬಹುವಾಗಿ ತೋಡಿಸಿದನು.

ವಟಾಶ್ವತ್ಥಾಮ್ರಕಂಕೋಲಜಂಬೂನಿಂಬಾದಿ ಕಾನನಂ ।
ಆರೋಪಿತಂ ಸ್ವಸತ್ತ್ವೇನ ತಥಾ ಪುಷ್ಪವನಂ ಶುಭಂ ॥೧೦॥

ಉದಯಾಸ್ತಮನಂ ಯಾವತ್ ಅನ್ನಪಾನಂ ಚಕಾರ ಸಃ ।
ಪುರಾದ್ಬಹಿಶ್ಚತುರ್ದಿಕ್ಷು ಪ್ರಪಾಂ ಚಕ್ರೇಽತಿಶೋಭನಾಂ ॥೧೧॥

ಪುರಾಣೇಷು-ಪ್ರಸಿದ್ಧಾನಿ ಯಾನಿ ದಾನಾನಿ ಭೂಪತೇ ।
ದದೌ ತಾನಿ ಸ ಧರ್ಮಾತ್ಮಾ ನಿತ್ಯಂ ದಾನಪರಸ್ತದಾ ॥೧೨॥

ಯಾವಜ್ಜೀವಕೃತೇ ಪಾಪೇ ಪ್ರಾಯಶ್ಚಿತ್ತಮಥಾಕರೋತ್ ।
ದೇವಪೂಜಾಪರೋನಿತ್ಯಂ ನಿತ್ಯಂ ಚಾತಿಥಿಪೂಜಕಃ ॥೧೩॥

ತಸ್ಯೇತ್ಥಂ ವರ್ತಮಾನಸ್ಯ ಸಂಜಾತೌ ದ್ವೌಸುತೌ ನೃಪ ।
ತೌ ಸುಪ್ರಸಿದ್ಧನಾಮಾನೌ ಶ್ರೀಕುಂಡಲ ವಿಕುಂಡಲೌ ॥೧೪॥

---

೧೦. ಆಲ, ಅರಳಿ, ಮಾವು, ನಿಂಬೆ, ಹಲಸು, ನೇರಳೆ, ಬೇವು ಮೊದಲಾದ, ಹಣ್ಣು, ಹೂಗಳ ಮತ್ತು ನೆರಳು ನೀಡುವ ಮರಗಳನ್ನು ತನ್ನ ದುಡ್ಡನ್ನು ಖರ್ಚುಮಾಡಿ ತೋಪುಗಳನ್ನೂ ಉದ್ಯಾನಗಳನ್ನೂ (ಹೂತೋಟ) ಬೆಳೆಸಿದನು.

೧೧. ಬೆಳಗಿನಿಂದ ಸಂಜೆಯುವರೆಗೂ ಅನ್ನೋದಕಗಳನ್ನು ಕೊಡುವಂತೆ ಸತ್ರಗಳನ್ನು ಏರ್ಪಡಿಸಿದನು. ಊರಿನ ಹೊರಗೆ ನಾಲ್ಕುದಿಕ್ಕುಗಳಲ್ಲಿಯೂ ಸೊಗಸಾದ ಅರವಟ್ಟಿಗೆಗಳನ್ನು ಇಡಿಸಿದನು.

೧೨. ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ಎಲ್ಲಾ ದಾನಗಳನ್ನೂ ಆ ಧರ್ಮಾತ್ಮನು ನಿತ್ಯವೂ ಮುಕ್ತ ಹಸ್ತನಾಗಿ ಕೊಡುತ್ತಿದ್ದನು.

೧೩. ಆಮೇಲೆ, ತಾನು ಜೀವಿಸಿರುವವರೆಗೂ ಮಾಡಿದ ಪಾಪಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡನು. ನಿತ್ಯವೂ ದೇವರನ್ನೂ ಅತಿಥಿಗಳನ್ನೂ ಪೂಜಿಸುತಿದ್ದನು.

೧೪. ಇಂತಿರುತ್ತಿರಲು ಇವನಿಗೆ ಶ್ರೀಕುಂಡಲ, ವಿಕುಂಡಲ, ಎಂಬ ಪ್ರಸಿದ್ಧವಾದ ಹೆಸರುಳ್ಳ ಇಬ್ಬರು ಮಕ್ಕಳು ಹುಟ್ಟಿದರು.

ತಯೋರ್ವಿರ್ಥಿನ್ಯ ಗೃಹಂ ತ್ಯಕ್ತ್ವಾ ಜಗಾಮ ತ ಪಸೇ ವನಂ ।
ತತ್ರಾರಾಧ್ಯ ಪರಂ ದೇವಂ ಗೋವಿಂದಂ ವರದಂ ಪ್ರಭುಂ ॥೧೫॥

ತತಃ ಕ್ಲಿಷ್ಟಶರೀರೋಽಸೌ ವಾಸುದೇವಮನಾಸ್ಸದಾ ।
ಪ್ರಾಪ್ತಸ್ಸವೈಷ್ಣವಂ ಲೋಕಂ ಯತ್ರ ಗತ್ವಾ ನ ಶೋಚತಿ ॥೧೬॥

ಅಥ ತಸ್ಯ ಸುತೌ ರಾಜನ್ ಮಹಾಮಾನಸಮನ್ವಿತೌ ।
ತರುಣೌ ರೂಪಸಂಪನ್ನೌ ಧನಗರ್ವೇಣ ಗರ್ವಿತೌ ॥೧೭॥

ದುಶ್ಶೀಲೌ ವ್ಯಸನಾಸಕ್ತೌ ಧರ್ಮಕರ್ಮಾದ್ಯದರ್ಶಕೌ ।
ನ ವಾಕ್ಯಂ ಚ ಗತೌ ಮಾತುಃ ವೃದ್ಧಾನಾಂ ವಚನಂ ತಥಾ ॥೧೮॥

ಕುಮಾರ್ಗಸ್ಥೌ ದುರಾತ್ಮಾನೌ ಪಿತೃಮಿತ್ರನಿಷೇಧಕೌ ।
ಅಧರ್ಮನಿರತೌ ದುಷ್ಟೌ ಪರದಾರಾಭಿಗಾಮಿನೌ ॥೧೯॥

ಗೀತವಾದಿತ್ರ ನಿರತೌ ವೀಣಾವೇಣುವಿನೋದಿನೌ ।
ವಾರಸ್ತ್ರೀಶತ ಸಂಯುಕ್ತೌ ಗಾಯನ್ತೌ ಚೇರತುಸ್ತದಾ ॥೨೦॥

---

೧೫–೧೬. ಆ ಹುಡುಗರ ಮೇಲೆ ಸಂಸಾರ ಭಾರವನ್ನು ಬಿಟ್ಟು ಕಾಡಿಗೆ, ತಪಸ್ಸು ಮಾಡಲು ಹೋದನು. ಸದಾ ವಿಷ್ಣುವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಈ ಶರೀರವನ್ನು ತೊರೆದು, ಪುಣ್ಯತಮವಾದ ವೈಕುಂಠವನ್ನು ಸೇರಿದನು.

೧೭–೧೮. ಆಮೇಲೆ ಆ ಹುಡುಗರು, ಹೆಮ್ಮೆಯುಳ್ಳವರೂ, ತರುಣರೂ, ರೂಪವಂತರೂ, ಧನಮದದಿಂದ ಮತ್ತರೂ, ಆಗಿ, ಕೆಟ್ಟನಡತೆಗೆ ಬಿದ್ದು, ಜೂಜು ಮೊದಲಾದ ಕೆಟ್ಟಚಾಳಿಗೆ ಸಿಲುಕಿ, ಧರ್ಮಕರ್ಮಗಳನ್ನು ಲೆಕ್ಕಿಸದೆ, ತಾಯಿಯ ಮತ್ತು ಹಿರಿಯರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದವರಾದರು.

೧೯–೨೦. ಅವರು ದುಷ್ಟರಾಗಿ ಕೆಟ್ಟಮಾರ್ಗದಲ್ಲಿ ಬಿದ್ದು ತಂದೆಯ ಮಿತ್ರರ ಮಾತನ್ನು ಲಕ್ಷಿಸದೆ ಅಧರ್ಮಾಸಕ್ತರಾಗಿ ದುಷ್ಟರೂ ಪರಸ್ತ್ರೀಕಾಮುಕರೂ, ಸಂಗೀತದಲ್ಲಿ ಲೋಲುಪರೂ, ಅನೇಕಜನ ಸೂಳೆಯರಲ್ಲಿ ಆಸಕ್ತರೂ ಆಗಿ ಹಾಡುತ್ತಾ ಸುತ್ತುತ್ತಿದ್ದರು.

ಚಾಟುಕಾರಜನೈರ್ಯುಕ್ತೌ ಬಿಂಬೋಷ್ಠೀಷು ವಿಶಾರದೌ ।
ಸುವೇಷೌ ಚಾರುವಸನೌ ಚಾರುಚಂದನಭೂಷಿತೌ ॥೨೧॥

ತಥಾ ಸುಗಂಧಮಾಲ್ಯಾಢ್ಯೌ ಕಸ್ತೂರೀಲಕ್ಷ್ಮಲಕ್ಷಿತೌ ।
ನಾನಾಲಂಕಾರಶೋಭಾಢ್ಯೌ ಮೌಕ್ತಿಕಾಹಾರಹಾರಿಣೌ ॥೨೨॥

ಗಜವಾಜಿರಥೌಘೇನ ಕ್ರೀಡನ್ತೌ ತಾವಿತಸ್ತತಃ ।
ಮಧುಪಾನಸಮಾಯುಕ್ತೌ ಪರಸ್ತ್ರೀರತಮೋಹಿತೌ ॥೨೩॥

ನಾಶಯನ್ತೌ ಪಿತುರ್ದ್ರವ್ಯಂ ಸಹಸ್ರಂ ದದತುಃ ಶತಂ ।
ತಸ್ಥತುಃ ಸ್ವಗೃಹೇ ರಮ್ಯೇ ನಿತ್ಯಂ ಭೋಗಪರಾಯಣೌ ॥೨೪॥

ಇತ್ಥಂತು ತದ್ಧನಂ ತಾಭ್ಯಾಂ ವಿನಿಯುಕ್ತಂ ಮಸದ್ವ್ಯಯೈಃ ।
ವಾರಸ್ತ್ರೀವಿಟಶೈಲೂಷಮಲ್ಲಚಾರಣವನ್ದಿಷು ॥೨೫॥

ಅಪಾತ್ರೇ ತದ್ಧನಂ ದತ್ತಂ ಕ್ಷಿಪ್ತಂಬೀಜಮಿವೋಷರೇ ।
ನ ಸತ್ಪಾತ್ರೇ ಚ ತದ್ದತ್ತಂ ನ ಬ್ರಾಹ್ಮಣಮುಖೇ ಹುತಂ ॥೨೬॥

---

೨೧–೨೪. ಮುಖಸ್ತುತಿ ಮಾಡುವ ಜನರೊಡನೆ ಸೇರಿಕೊಂಡು, ಹೆಂಗಸರಲ್ಲಾಸಕ್ತರಾಗಿ ಸೊಗಸಾದ ಬಟ್ಟೆಗಳನ್ನು ಉಟ್ಟು ಒಳ್ಳೆಯ ವೇಷದಿಂದ, ಗಂಧ ಮೊದಲಾದುವುಗಳನ್ನು ಪೂಸಿಕೊಂಡು ಹೂಮಾಲೆ ಮುಡಿದುಕೊಂಡು, ಕಸ್ತೂರಿಯನ್ನು ಹಚ್ಚಿಕೊಂಡು, ಮುತ್ತಿನಹಾರವೇ ಮುಂತಾದುವುಗಳಿಂದ ಅಲಂಕಾರ ಮಾಡಿಕೊಳ್ಳುತ್ತ ಕುದುರೆ, ಆನೆ, ರಥಗಳನ್ನು ಹತ್ತಿ ಅತ್ತಿತ್ತ ತಿರುಗುತ್ತ ಮದುಪಾನಾಸಕ್ತರೂ ಪರಸ್ತ್ರೀ ಲೋಲುಪರೂ ಆಗಿ ತಂದೆಯ ಹಣವನ್ನು ಸಾವಿರಗಟ್ಟಲೆ ಕೊಟ್ಟು ಹಾಳು ಮಾಡುತ್ತ ನಿತ್ಯವೂ ಭೋಗಾಸಕ್ತರಾಗಿ ರಮ್ಯವಾದಂಥ ತಮ್ಮ ಮನೆ ಯಲ್ಲಿ ಸುಖದಿಂದ ಇದ್ದರು.

೨೫–೨೬. ಹೀಗೆ ತಂದೆಯ ಹಣವನ್ನು ಕೆಟ್ಟ ರೀತಿಯಿಂದ ಹಾಳು ಮಾಡಿದರು. ಅದರಲ್ಲೂ ಸೂಳೆ, ನಟವಿಟರು, ಹೊಗಳು ಭಟ್ಟರು ಜಟ್ಟಿ ಗಳು ಇವರಿಗೆ ಹೆಚ್ಚಾಗಿ ಕೊಟ್ಟರು. ಕರಲು ನೆಲದಲ್ಲಿ ಬಿತ್ತಿದ ಬೀಜದಂತೆ ಅಯೋಗ್ಯರಲ್ಲಿತ್ತರು. ಸತ್ಪಾತ್ರರಾದ ಬ್ರಾಹ್ಮಣರ ಅಥವಾ ಇತರ ಯೋಗ್ಯರಲ್ಲಿ ಕೊಡಲೇ ಇಲ್ಲ.

ನಾರ್ಚಿತೋ ಭೂತಭೃತ್ ವಿಷ್ಣುಃ ಸರ್ವಪಾಪಪ್ರಣಾಶನಃ ।
ಉಭಯೋರೇವ ತದ್ದ್ರವ್ಯಮಚಿರೇಣ ಕ್ಷಯಂ ಯಯೌ ॥೨೭॥

ತತಸ್ತೌ ದುಃಖಮಾಪನ್ನೌ ಕಾರ್ಪಣ್ಯಂ ಪರಮಂ ಗತೌ ।
ಶೋಚಮಾನೌ ತು ಮುಹ್ಯನ್ತೌ ಕ್ಷುತ್ತೃಡಾದುಃಖ ಪೀಡಿತೌ ॥೨೮॥

ತಯೋಸ್ತು ತಿಷ್ಠತೋರ್ಗೇಹೇ ನಾಸ್ತಿಯದ್ಭುಜ್ಯತೇ ತದಾ ।
ಸ್ವಜನೈರ್ಬಾಂಧವೈಸ್ಸರ್ವೈಃ ಸೇವಕೈರುಪಜೀವಿಭಿಃ ॥೨೯॥

ದ್ರವ್ಯಾಭಾವೇ ಪರಿತ್ಯಕ್ತೌ ಚಿನ್ತ್ಯಮಾನೌ ತತಃ ಪುರೇ ।
ಪಶ್ಚಾಚ್ಚೌರ್ಯಂ ಸಮಾರಬ್ಧಂ ತಾಭ್ಯಾಂ ಚ ನಗರೇ ನೃಪ ॥೩೦॥

ರಾಜತೋ ಲೋಕತೋ ಭೀತೌ ಸ್ವಪುರಾನ್ನಿಸ್ಸೃತೌ ತದಾ ।
ಚಕ್ರತುರ್ವನವಾಸಂ ತೌ ಸರ್ವೇಷಾಮುಪಪೀಡಿತೌ ॥೩೧॥

---

೨೭. ಸಮಸ್ತ ಪಾಪವನ್ನೂ ನಾಶಮಾಡುವ, ಪ್ರಪಂಚಧಾರಕ ನಾದ ವಿಷ್ಣುವನ್ನು ಪೂಜಿಸಲೇ ಇಲ್ಲ. ಆ ಇಬ್ಬರಿಂದಲೇ ಈರೀತಿಯಾಗಿ ಆ ಹಣವೆಲ್ಲವೂ ಬೇಗನೆ ವ್ಯಯಮಾಡಲ್ಪಟ್ಟಿತು.

೨೮. ಆ ಮೇಲೆ ಕೆಟ್ಟಸ್ಥಿತಿಗಿಳಿದು ಬಹು ದುಃಖಗೊಂಡರು. ಹಸಿವು ಬಾಯಾರಿಕೆಗಳಿಂದ ದುಃಖಪಡುತ್ತ ಬುದ್ಧಿಶೂನ್ಯರಾದರು.

೨೯–೩೦. ಹೀಗೆ ಮನೆಯಲ್ಲೇ ಇರುತ್ತಿರಲು ತಿನ್ನಲು, ಉಣ್ಣಲು, ಉಡಲು ಏನೂ ಇಲ್ಲದೇ ಹೋಯಿತು. ಸ್ವಜನರು, ಬಂಧುಗಳು, ಸೇವಕರು, ಆಶ್ರಿತರು, ಇವರೆಲ್ಲಾ ದುಡ್ಡಿಲ್ಲದುದರಿಂದ ಕೈಬಿಟ್ಟರು. ಅನಂತರ ಅವರು ಯೋಚಿಸುತ್ತ ಕೊನೆಗೆ ಆ ಊರಿನಲ್ಲಿ ಕದಿಯಲು ಮೊದಲಿಟ್ಟರು.

೩೧. ಕೊನೆಗೆ ದೊರೆಗೂ ಜನರಿಗೂ ಹೆದರಿದವರಾಗಿ, ಅವರುಗಳಿಂದ ತೊಂದರೆ ಪಡಿಸಲ್ಪಟ್ಟವರಾಗಿ ಊರಿಂದ ಹೊರಗೆ, ಕಾಡಿನಲ್ಲಿ ವಾಸಮಾಡುತ್ತಿದ್ದರು.

ಜಘ್ನು ತು ಸ್ಸತತಂ ಮೂಢೌ ಶಿತೈರ್ಬಾಣ ವಿಷಾರ್ಪಿತೈಃ ।
ನಾನಾಪಕ್ಷಿ ವರಾಹಾಂಶ್ಚ ಹರಿಣಾ ರೋಹಿತಾಂ ಸ್ತದಾ ॥೩೨॥

ಶಶಕಾ ಶಲ್ಯಕಾ ಗೋಧಾ ಶ್ವಾಪದಾಂ ಶ್ಚೇತರಾ ಬಹೂ ।
ಮಹಾಬಲೌ ಭಿಲ್ಲಸಂಗೌ ಆಖೇಟಕ ಭುಜೌ ಸದಾ ॥೩೩॥

ಏವಂ ಮಾಂಸ ಮಯಾಹಾತೌ ಪಾಪಾಹಾರೌ ಪರಂತಪ।
ಕದಾಚಿದ್ಭೂಧರಂ ಪ್ರಾಪ್ತೋ ಹ್ಯೇಕೋಽನ್ಯಶ್ಚ ವನಂ ಗತಃ ॥೩೪॥

ಶಾರ್ದೂಲೇನ ಹತೋ ಜ್ಯೇಷ್ಠಃ ಕನಿಷ್ಠ ಸ್ಸರ್ಪ ದಂಶಿತಃ।
ಏಕಸ್ಮಿ ದಿವಸೇ ರಾಜ ಪಾಪಿಷ್ಠೌ ನಿಧನಂ ಗತೌ ॥೩೫॥

ಯಮದೂತೈ ಸ್ತತೋ ಬದ್ಧ್ವಾ ಪಾಶೈರ್ನೀತೌ ಯಮಾಲಯಂ ।
ಗತ್ವಾಭಿಜಗದುಃ ಸರ್ವೇ ತೇ ದೂತಾಃ ಪಾಪಿನಾವುಭೌ ॥೩೬॥

---

೩೨. ಆ ಮೂಢರು ವಿಷವನ್ನು ಬಳಿದ ಬಾಣಗಳಿಂದ ಹಕ್ಕಿಗಳನ್ನೂ ಹಂದಿಗಳನ್ನೂ, ಜಿಂಕೆಗಳನ್ನೂ, ಮೀನುಗಳನ್ನೂ ಕೊಲ್ಲುತ್ತ ಬಂದರು.

೩೩. ಮೊಲ, ಮುಳ್ಳುಹಂದಿ, ಉಡ, ಮೊದಲಾದ, ಕಾಡುಮೃಗ ಗಳನ್ನು ಬೇಡರ ಜೊತೆಯಲ್ಲಿ ಸೇರಿಕೊಂಡು ಕೊಲ್ಲುತ್ತಿದ್ದರು.

೩೪. ಎಲೈ ಶತ್ರುಮರ್ದನನೇ! ಹೀಗೆ ಮಾಂಸಾಹಾರನಿರತರಾದ ಇವರಿಬ್ಬರೂ, ಒಂದುಸಲ, ಒಬ್ಬನು ಬೆಟ್ಟವನ್ನೂ ಮತ್ತೊಬ್ಬನು ಕಾಡನ್ನೂ ಹೊಂದಿದರು.

೩೫. ದೊಡ್ಡವನು ಹುಲಿಯಿಂದ ಕೊಲ್ಲಲ್ಪಟ್ಟು ಚಿಕ್ಕವನು ಸರ್ಪ ದಿಂದ ಕಚ್ಚಲ್ಪಟ್ಟು, ಒಂದೇ ದಿನದಲ್ಲಿ ಇಬ್ಬರೂ ಸತ್ತರು.

೩೬. ಯಮದೂತರು ಅವರನ್ನು ಪಾಶದಿಂದ ಕಟ್ಟಿ ಯಮಲೋಕ ಕ್ಕೊಯ್ದರು. ಆ ದೂತರು, ಯಮನಬಳಿ ಅವರು ಪಾಪಿಗಳೆಂದು ಅರಿಕೆ ಮಾಡಿದರು.

ಧರ್ಮರಾಜ! ನರಾವೇತೌ ಆನೀತೌ ತವ ಶಾಸನಾತ್ ।
ಆಜ್ಞಾಂ ದೇಹಿ ಸ್ವಭೃತ್ಯೇಷು ಪ್ರಸೀದ ಕರವಾಮ ಕಿಂ ॥೩೭॥
ಆಲೋಚ್ಯ ಚಿತ್ರಗುಪ್ತೇನ ತದಾ ದೂತಾನ್ ಜಗೌ ಯಮಃ ।
ಏಕಸ್ತು ನೀಯತಾಂ ವೀರ ನಿರಯಂ ತೀವ್ರವೇದನಂ ॥೩೮॥
ಅಪರಸ್ಸ್ಥಾಪ್ಯತಾಂ ಸ್ವರ್ಗೇ ಯತ್ರ ಭೋಗಾ ಅನುತ್ತಮಾಃ ।
ಕೃತಾನ್ತಾಜ್ಞಾಂ ತತಶ್ಶ್ರುತ್ವಾ ದೂತೈಶ್ಚ ಕ್ಷಿಪ್ರಕಾರಿಭಿಃ ॥೩೯॥
ನಿಕ್ಷಿಪ್ತೋ ರೌರವೇ ಘೋರೇ ಯೋ ಜ್ಯೇಷ್ಠೋ ಹಿ ನರಾಧಿಪ ।
ತೇಷಾಂ ದೂತವರಃ ಕಶ್ಚಿತ್ ಉವಾಚ ಮಧುರಂ ವಚಃ ॥೪೦॥
ವಿಕುಂಡಲ ಮಯಾ ಸಾರ್ಧಂ ಏಹಿ ಸ್ವರ್ಗಂ ದದಾಮಿ ತೇ ।
ಭುಂಕ್ಷ್ವ ಭೋಗಾನ್ ಸುದಿವ್ಯಾಂಸ್ತ್ವಂ ಆರ್ಜಿತಾನ್ ಸ್ವೇನ ಕರ್ಮಣಾ

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ತ್ರಿಂಶೋಽಧ್ಯಾಯಃ

---

೩೭. ಎಲೈ ಧರ್ಮರಾಜನೇ! ನಿನ್ನ ಅಪ್ಪಣೆಯಂತೆ ಈ ಇಬ್ಬರು ಮನುಜರನ್ನು ತಂದಿದ್ದೇವೆ, ಏನು ಮಾಡಬೇಕೆಂದು ದಯವಿಟ್ಟು ಅಪ್ಪಣೆ ಮಾಡು.

೩೮. ಯಮನು ಚಿತ್ರಗುಪ್ತನೊಡನೆ ಆಲೋಚಿಸಿ ಒಬ್ಬನನ್ನು ಅತಿವೇದನೆಕೊಡುವ ನರಕಕ್ಕೊಯ್ಯಿರಿ. ಎಂದು ಅಪ್ಪಣೆ ಮಾಡಿದನು.

೩೯. ಮತ್ತೊಬ್ಬನನ್ನು ಉತ್ತಮೋತ್ತಮವಾದ ಭೋಗಗಳುಳ್ಳ ಸ್ವರ್ಗದಲ್ಲಿ ಇಡಿರಿ ಎನಲು, ಯಮನ ಅಪ್ಪಣೆಯನ್ನು ಶಿರಸಾವಹಿಸಿ ದೂತರು ದೊಡ್ಡವನನ್ನು ರೌರವನರಕದಲ್ಲಿ ಹಾಕಿದರು.

೪೦–೪೧ ಅವರಲ್ಲಿ ಒಬ್ಬಾತನು ಒಳ್ಳೆಯಮಾತಿನಿಂದ ವಿಕುಂಡಲ ನನ್ನೊಡನೆ ಬಾ, ನಿನಗೆ ಸ್ವರ್ಗವನ್ನು ಕೊಡುತ್ತೇನೆ. ನಿನ್ನ ಕರ್ಮದಿಂದ ಸಂಪಾದಿಸಿದ ಅನಂತವಾದ ಉತ್ತಮ ಭೋಗಗಳನ್ನು ಅನುಭವಿಸು, ಎಂದನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಮೂವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಏಕತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ತತೋ ಹೃಷ್ಟಮನಾಸ್ಸೋಽಥ ದೂತಂಪಪ್ರಚ್ಛ ತಂ ಪಥಿ ।
ಸಂದೇಹಂ ಹೃದಿ ಕೃತ್ವಾ ತು ವಿಸ್ಮಯಂ ಪರಮಂ ಗತಃ
ವಿಚಾರರ್ಯ್ ಹೃದಿ ಸ್ವರ್ಗಃ ಕಸ್ಯ ಹೇತೋಃ ಫಲಂ ಮಮ ॥ ೧ ॥

॥ ವಿಕುಂಡಲ ಉವಾಚ॥

ಹೇ ದೂತವರ ಪೃಚ್ಛಾಮಿ ಸಂಶಯಂ ತ್ವಾಮಹಂ ಪರಂ ।
ಆವಾಂ ಜಾತೌ ಕುಲೇ ತುಲ್ಯೇ ತುಲ್ಯಂ ಕರ್ಮ ತಥಾ ಕೃತಂ ॥ ೨ ॥

---

ಪದ್ಮ ಪುರಾಣದ ಆದಿಖಂಡದ ಮೂವತ್ತೊಂದನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ: ಅವನು, ಮನಸ್ಸಿನಲ್ಲಿ ಸ್ವರ್ಗವು ನನಗೆ ಯಾವಕಾರಣದಿಂದ ಬಂದಿತು? ಎಂದು ವಿಚಾರಮಾಡುತ್ತಾ ಸಂದೇಹಿಸಿ, ಆದರೆ ಸ್ವರ್ಗಕ್ಕೋಸ್ಕರ ಸಂತೋಷಪಡುತ್ತಾ ದೂತರನ್ನು ಕುರಿತು ಹೀಗೆ ಕೇಳಿದನು.

೨. ವಿಕುಂಡಲನು ಹೇಳುತ್ತಾನೆ: ಎಲೈ ದೂತಶ್ರೇಷ್ಠನೇ? ಒಂದು ಸಂದೇಹವನ್ನು ಕುರಿತು ನಿನ್ನನ್ನು ಕೇಳುತ್ತೇನೆ, ದಯವಿಟ್ಟು ಹೇಳು. ನಾವಿಬ್ಬರೂ ಜಾತಿ, ಕುಲ ಕರ್ಮಗಳಲ್ಲಿ ಒಂದೇ ರೀತಿಯಾದವರು.

ದುರ್ಮೃತ್ಯುರಪಿ ತುಲ್ಯೋಭೂತ್ ತುಲ್ಯೋ ಪ್ಯೋ ದ್ಯಯಮಸ್ತಥಾ
ಕಥಂ ಸ ನರಕೇ ಕ್ಷಿಪ್ತಃ ತುಲ್ಯಕರ್ಮಾ ಮಮಾಗ್ರಜಃ ॥ ೩ ॥
ಮಮಾಭವತ್ಕಥಂ ನಾಕಂ ಇತಿ ಮೇ ಛಿಂಧಿ ಸಂಶಯಂ ।
ದೇವದೂತ ನ ಪಶ್ಯಾಮಿ ಮಮ ಸ್ವರ್ಗಸ್ಯ ಕಾರಣಂ ॥ ೪ ॥

॥ ದೇವದೂತ ಉವಾಚ ॥

ಮಾತಾ ಪಿತಾ ಸುತೋ ಜಾಯಾ ಸ್ವಸಾ ಭ್ರಾತಾ ವಿಕುಂಡಲ ।
ಜನ್ಮಹೇತೋರಿಯಂ ಸಂಜ್ಞಾ ಜಂತೋಃ ಕರ್ಮೋಪಭುಕ್ತಯೇ ॥
ಏಕಸ್ಮಿನ್ ಪಾದಪೇ ಯದ್ವಚ್ಛಕುನಾನಾಂ ಸಮಾಗಮಃ ।
ಯದ್ಯತ್ಸಮೀಹಿತಂ ಕರ್ಮ ಕುರುತೇ ಪೂರ್ವಭಾವಿತಃ ॥ ೬ ॥
ತಸ್ಯ ತಸ್ಯ ಫಲಂಭುಙ್ಕ್ತೇ ಕರ್ಮಣಃ ಪುರುಷಸ್ಸದಾ ।
ಸತ್ಯಂ ವದಾಮಿ ತೇ ಪ್ರೇತ್ಯಾ ನರೈಃ ಕರ್ಮ ಶುಭಾಶುಭಂ ॥ ೭ ॥

---

೩. ನಮ್ಮಿಬ್ಬರಿಗೂ ಅಪಮೃತ್ಯುವು ಒಂದೇ ರೀತಿಯಾದುದು. ಜೊತೆಯಲ್ಲೇ ಯಮದರ್ಶನವನ್ನೂ ಮಾಡಿದ್ದೇವೆ. ನಾವಿಬ್ಬರೂ ಒಂದೇ ರೀತಿಯಾದ ಕರ್ಮ ಮಾಡಿರುವುದರಿಂದ ನಮ್ಮಣ್ಣನನ್ನು ಮಾತ್ರ ಏತಕ್ಕೆ ನರಕಕ್ಕೆ ಹಾಕಿದಿರಿ?

೪. ನನಗೆ ಸ್ವರ್ಗ ಸಿಕ್ಕಲು ಕಾರಣವೇ ಇಲ್ಲ. ನನಗೆ ಸ್ವರ್ಗವು ಹೇಗೆ ಬಂದಿತು ? ಎಂಬ ಸಂಶಯವನ್ನು ನೀಗಿಸು.

೫. ದೇವದೂತನು ಹೇಳಿದನು: ಎಲೈ, ವಿಕುಂಡಲನೇ: ತಾಯಿ ತಂದೆ, ಮಗ, ಹೆಂಡತಿ, ಅಕ್ಕ, ಅಣ್ಣತಮ್ಮಂದಿರು, ಎಂಬ ಸಂಜ್ಞೆಯು ಪ್ರಾಣಿಗಳಿಗೆ ಕರ್ಮವನ್ನು ಅನುಭವಿಸುವುದಕ್ಕೆ ಕಾರಣವು.

೬–೭. ಒಂದೇ ಮರದಲ್ಲಿ ಅನೇಕ ಹಕ್ಕಿಗಳು ಸೇರಿಕೊಂಡು ತಮ ತಮಗೆಬೇಕಾದ ಕೆಲಸಗಳನ್ನು ಪೂರ್ವಕರ್ಮಾನುಸಾರವಾಗಿ ಹೇಗೆ ಮಾಡಿ ಕೊಳ್ಳುತ್ತವೆಯೋ ಹಾಗೆಯೇ ಮನುಷ್ಯನೂ ಪೂರ್ವಕರ್ಮದ ಶುಭಾಶುಭಗಳನ್ನು ಸಂಸಾರದಲ್ಲಿ ಸೇರಿಕೊಂಡು ಅನುಭವಿಸುತ್ತಾನೆ. ಇದು ಸತ್ಯವು.

ಸ್ವಕೃತಂ ಭುಜ್ಯತೇ ವೈಶ್ಯ ಕಾಲೇಕಾಲೇ ಪುನಃಪುನಃ ।
ಏಕಃ ಕರೋತಿ ಕರ್ಮಾಣಿ ಏಕಸ್ತತ್ಫಲ ಮಶ್ನುತೇ ॥ ೮ ॥
ಅನ್ಯೋ ನ ಲಿಪ್ಯತೇ ವೈಶ್ಯ ಕರ್ಮಣಾನ್ಯಸ್ಯ ಕುತ್ರಚಿತ್ ।
ಅಪತನ್ನರಕೇ ಪಾಪೈಃ ತವ ಭ್ರಾತಾ ಸುದಾರುಣೈಃ।
ತ್ವಂ ಚ ಧರ್ಮೇಣ ಧರ್ಮಜ್ಞ ಸ್ವರ್ಗಂ ಪ್ರಾಪ್ನೋಷಿ ಶಾಶ್ವತಂ॥೯॥

॥ ವಿಕುಂಡಲ ಉವಾಚ ॥

ಆಬಾಲ್ಯಾನ್ಮಮ ಪಾಪೇಷು ನ ಪುಣ್ಯೇಷು ರತಂ ಮನಃ ।
ಅಸ್ಮಿನ್ ಜನ್ಮನಿ ಹೇ ದೂತ ದುಷ್ಕೃತಂ ಹಿ ಕೃತಂ ಮಯಾ ॥೧೦॥
ದೇವದೂತ ನ ಜಾನಾಮಿ ಸುಕೃತಂ ಕರ್ಮ ಚಾತ್ಮನಃ ।
ಯದಿ ಜಾನಾಸಿ ಮತ್ಪುಣ್ಯಂ ತನ್ಮೇ ತ್ವಂ ಕೃಪಯಾ ವದ ॥೧೧॥

---

೮–೯. ತಾನು ಮಾಡಿದುದನ್ನು ಆಯಾಯ ಕಾಲದಲ್ಲಿ ಪದೇಪದೇ ಅವನೊಬ್ಬನೇ ಅನುಭವಿಸುತ್ತಾನೆ. ಒಬ್ಬನೇ ಕರ್ಮಗಳನ್ನು ಮಾಡುತ್ತಾನೆ. ಅವನೊಬ್ಬನೇ ಫಲಗಳನ್ನೂ ಅನುಭವಿಸುತ್ತಾನೆ. ಒಬ್ಬನ ಪಾಪವು ಮತ್ತೊಬ್ಬನಿಗೆ ಖಂಡಿತವಾಗಿಯೂ ಅಂಟುವುದಿಲ್ಲ. ನಿನ್ನ ಸಹೋದರನು ಕ್ರೂರವಾದ ಪಾಪಗಳಿಂದ ನರಕದಲ್ಲಿ ಬಿದ್ದನು. ನೀನು ಧರ್ಮವನ್ನು ಬಲ್ಲವನಾದುದರಿಂದ ಆ ಧರ್ಮದಿಂದ ಶಾಶ್ವತವಾದ ಸ್ವರ್ಗವನ್ನು ಹೊಂದಿದ್ದೀಯೆ.

೧೦. ವಿಕುಂಡಲನು ಹೇಳುತ್ತಾನೆ: ನಾನು ಹುಟ್ಟಿದಂದಿನಿಂದ ನನ್ನ ಮನಸ್ಸು ಪಾಪದಲ್ಲಿ ನಿರತವಾಗಿತ್ತೇ ಹೊರತು ಪುಣ್ಯಕಾರ್ಯಗಳಲ್ಲಿ ಆಸಕ್ತವಾಗಿರಲಿಲ್ಲ. ಎಲೈ ದೂತನೇ! ಈ ಜನ್ಮದಲ್ಲಿ ನಾನು ಪಾಪವನ್ನೇ ಮಾಡಿದ್ದೇನೆ.

೧೧. ಎಲೈ ದೇವದೂತನೆ? ನಾನು ಪುಣ್ಯಕರ್ಮವನ್ನು ಮಾಡಿದ ಜ್ಞಾಪಕವೇ ನನಗಿಲ್ಲ. ನಾನು ಪುಣ್ಯವನ್ನೇನಾದರೂ ಮಾಡಿದ್ದರೆ ದಯವಿಟ್ಟು ಅದನ್ನು ತಿಳಿಸು.

॥ ದೇವದೂತ ಉವಾಚ ॥

ಶೃಣು ವೈಶ್ಯ ಪ್ರವಕ್ಷ್ಯಾಮಿ ಯತ್ತ್ವಯಾ ಪುಣ್ಯಮಾರ್ಜಿತಂ ।
ಜಾನಾಮಿ ತದಹಂ ಸರ್ವಂ ನ ತ್ವಂ ವೇತ್ಸಿ ಸುನಿಶ್ಚಿತಂ ॥೧೨॥

ಹರಿ ಮಿತ್ರಸುತೋ ವಿಪ್ರಃ ಸ್ವಮಿತ್ರೋ ವೇದಪಾರಗಃ ।
ಆಸೀತ್ತಸ್ಯಾಶ್ರಮಃ ಪುಣ್ಯಃ ಯಮುನಾ ದಕ್ಷಿಣೇ ತಟೇ ॥೧೩॥

ತೇನ ಸಖ್ಯಂ ವನೇ ತಸ್ಮಿನ್ ತವ ಜಾತಂ ವಿಶಾಂ ವರ ।
ತತ್ಸಂಗೇನ ತ್ವಯಾ ಸ್ನಾನಂ ಮಾಘಮಾಸದ್ವಯಂ ತಥಾ ॥೧೪॥

ಕಾಳಿಂದೀಪುಣ್ಯಪಾನೀಯೇ ಸರ್ವಪಾಪಹರೇ ವರೇ ।
ತತ್ತೀರ್ಥೇ ಲೋಕವಿಖ್ಯಾತೇ ನಾಮ್ನಾ ಪಾಪಪ್ರಣಾಶನೇ ॥೧೫॥

ಏಕೇನ ಸರ್ವಪಾಪೇಭ್ಯೋ ವಿಮುಕ್ತಸ್ತ್ವಂ ವಿಶಾಂ ಪತೇ ।
ದ್ವಿತೀಯೇ ಮಾಘಪುಣ್ಯೇನ ಪ್ರಾಪ್ತಸ್ಸ್ವರ್ಗಸ್ತ್ವಯಾನಘ ॥೧೬॥

ತ್ವಂ ತತ್ಪುಣ್ಯಪ್ರಭಾವೇನ ಮೋದಸ್ವ ಸತತಂ ದಿವಿ ।
ನರಕೇಷು ತವ ಭ್ರಾತಾ ಮಹತೀಂ ನಾಮ ಯಾತನಾಂ ॥೧೭॥

---

೧೨. ದೇವದೂತನು ಹೇಳಿದನು: ಎಲೈ ವೈಶ್ಯನೇ! ನೀನು ಮಾಡಿದ ಪುಣ್ಯವನ್ನು ಹೇಳುತ್ತೇನೆ ಕೇಳು. ನಿನಗೆ ಅದು ತಿಳಿದಿಲ್ಲ. ನನಗದೆಲ್ಲವೂ ಗೊತ್ತು. ನಿಜ.

೧೩. ನಿನ್ನ ಸ್ನೇಹಿತನಾದ ಹರಿಮಿತ್ರನ ಮಗನ ಆಶ್ರಮವು ಯಮುನಾನದಿಯ ಬಲದಡದಲ್ಲಿದೆ.

೧೪–೧೬. ಅವನೊಡನೆ ನಿನಗೆ ಸ್ನೇಹವಾಯಿತು. ಆತನ ಸಹವಾಸದಿಂದ ಎರಡು ಮಾಘಮಾಸಗಳಲ್ಲಿ ನೀನು ಸ್ನಾನಮಾಡಿದೆ. ಅದೂ ಸರ್ವಪಾಪ ಹಾರಕವಾದ ಕಾಳಿಂದೀನದಿಯ ನೀರಿನಲ್ಲಿ ಒಂದು ಮಾಘಸ್ನಾನದಿಂದ ಸರ್ವಪಾಪಗಳಿಂದಲೂ ಮುಕ್ತನಾದೆ. ಎರಡನೆಯ ಮಾಘಸ್ನಾನದಿಂದ ಸ್ವರ್ಗವು ಸಿಕ್ಕಿತು.

೧೭–೧೮. ನೀನು ಆ ಪುಣ್ಯದ ಪ್ರಭಾವದಿಂದ ಸ್ವರ್ಗದಲ್ಲಿ ಯಾವಾಗಲೂ ಸಂತೋಷದಿಂದಿರು. ನಿನ್ನ ಸೋದರನು ಕತ್ತಿಗಳಿಂದ ಕತ್ತರಿಸಲ್ಪ

ಛಿದ್ಯಮಾನೋಽಸಿಪತ್ರೈಶ್ಚ ಭಿದ್ಯಮಾನಸ್ತು ಮುದ್ಗರೈಃ ।
ಚೂರ್ಣ್ಯಮಾನಶ್ಶಿಲಾಪೃಷ್ಠೇ ತಪ್ತಾಂಗಾರೇಷು ಭರ್ಜಿತಃ ॥೧೮॥

ಇತಿ ದೂತವಚಶ್ಶ್ರುತ್ವಾ ಭ್ರಾತೃದುಃಖೇನ ದುಃಖಿತಃ ।
ಪುಲಕಾಂಕಿತಸರ್ವಾಂಗೋ ದೀನೋಽಸೌ ವಿನಯಾನ್ವಿತಃ ॥೧೯॥

ಉವಾಚ ತಂ ದೇವದೂತಂ ಮಧುರಂ ನಿಪುಣಂ ವಚಃ ।
ಮೈತ್ರೀ ಸಪ್ತಪದೀ ಸಾಧೋ ಸತಾಂ ಭವತಿ ಸತ್ಫಲಾ ॥೨೦॥

ಮಿತ್ರಭಾವಂ ವಿಚಿಂತ್ಯ ತ್ವಂ ಮಾಮುಪಾಕರ್ತುಮರ್ಹಸಿ ।
ತ್ವತ್ತೋ ಹಿ ಶ್ರೋತುಮಿಚ್ಛಾಮಿ ಸರ್ವಜ್ಞಸ್ತ್ವಂ ಮತೋ ಮಮ॥

ಯಮಲೋಕಂ ನ ಪಶ್ಯಂತಿ ಕರ್ಮಣಾ ಕೇನ ಮಾನವಾಃ ।
ಗಚ್ಛಂತಿ ನಿರಯಂ ಯೇನ ತನ್ಮೇ ತ್ವಂ ಕೃಪಯಾ ವದ ॥೨೨॥

---

ಡುತ್ತಲೂ ಒನಕೆಗಳಿಂದ ಚುಚ್ಚಲ್ಪಡುತ್ತಲೂ ಕಲ್ಲಿನಮೇಲೆ ಒಗೆಯಲ್ಪಡುತ್ತಲೂ ಕಾದಿರತಕ್ಕ ಬೆಂಕಿಯಮೇಲೆ ಹುರಿಯಲ್ಪಡುತ್ತಲೂ ನರಕದಲ್ಲಿ ಹೆಚ್ಚಾದ ಯಾತನೆಯನ್ನು ಹೊಂದುತ್ತಿದ್ದಾನೆ.

೧೯. ಆ ದೂತನು ಹೇಳಿದ ಮಾತುಗಳನ್ನು ಕೇಳಿ ಸೋದರನ ದುಃಖದಿಂದ ದುಃಖಗೊಂಡು ಮೈಯೆಲ್ಲವೂ ಬೆವತು ದೀನತೆಯಿಂದ ವಿನಯವಂತನಾಗಿ ಜಾಣತನದಿಂದ ಮೆತ್ತಗೆ ಹೀಗೆಂದು ಕೇಳಿದನು.

೨೦. ಎಲೈ ಸಾಧುವೇ! ಒಳ್ಳೆಯ ಫಲವನ್ನು ಕೊಡುವ ಸತ್ಪುರುಷರೊಡನೆ ಸ್ನೇಹವು ಏಳು ಹೆಜ್ಜೆಗಳಿಂದಾಗಲೀ ಏಳುಮಾತುಗಳಿಂದಾಗಲೀ ಉಂಟಾಗುತ್ತದೆ. ಸಾಧುವಾದ ನೀನು ಸ್ನೇಹಭಾವವನ್ನು ಯೋಚಿಸಿ ನನಗೆ ಉಪಕಾರವನ್ನು ಮಾಡು.

೨೧. ನೀನು ಸರ್ವಜ್ಞನೆಂದು ನನಗೆ ಕಾಣುತ್ತೀಯೆ, ಆದ್ದರಿಂದ ಆ ವಿಷಯವನ್ನು ನಿನ್ನಿಂದ ಕೇಳಲಿಚ್ಛಿಸುತ್ತೇನೆ.

೨೨. ಮನುಷ್ಯರು ಯಾವ ಕೆಲಸವನ್ನು ಮಾಡಿದರೆ ಯಮಲೋಕವನ್ನು ನೋಡುವುದಿಲ್ಲ? ಯಾವ ಕೆಲಸವನ್ನು ಮಾಡಿದರೆ ನರಕವನ್ನು ಹೊಂದುತ್ತಾರೆ? ಎಂಬುದನ್ನು ದಯವಿಟ್ಟು ತಿಳಿಸು.

**॥ ದೇವದೂತ ಉವಾಚ ॥**

**ಸಮ್ಯಕ್ಪೃಷ್ಟಂ ತ್ವಯಾ ವೈಶ್ಯ ನಷ್ಟಪಾಪೋಽಸಿ ಸಾಂಪ್ರತಂ ।**
**ವಿಶುದ್ಧೇ ಹೃದಯೇ ಪುಂಸಾಂ ಬುದ್ಧಿಶ್ಶ್ರೇಯಸಿ ಜಾಯತೇ॥೨೩॥**

**ಯದ್ಯಪ್ಯವಸರೋ ನಾಸ್ತಿ ಮಮ ಸೇವಾಪರಸ್ಯ ವೈ ।**
**ತಥಾಪಿ ಚ ತವ ಸ್ನೇಹಾತ್ಪ್ರವಕ್ಷ್ಯಾಮಿ ಯಥಾಮತಿ ॥೨೪॥**

**ಕರ್ಮಣಾ ಮನಸಾ ವಾಚಾ ಸರ್ವಾವಸ್ಥಾಸು ಸರ್ವದಾ ।**
**ಪರಪೀಡಾಂ ನ ಕುರ್ವಂತಿ ನ ತೇ ಯಾಂತಿ ಯಮಾಲಯಂ ॥೨೫॥**

**ನ ವೇದೈರ್ನ ಚ ದಾನೈಶ್ಚ ನ ತಪೋಭಿರ್ನ ಚಾಧ್ವರೈಃ ।**
**ಕಥಂಚಿತ್ಸ್ವರ್ಗತಿಂ ಯಾಂತಿ ಪುರುಷಾಃ ಪ್ರಾಣಿಹಿಂಸಕಾಃ ॥೨೬॥**

**ಅಹಿಂಸಾ ಪರಮೋ ಧರ್ಮೋ ಹ್ಯಹಿಂಸೈವ ಪರಂ ತಪಃ ।**
**ಅಹಿಂಸಾ ಪರಮಂ ದಾನಮಿತ್ಯಾಹುರ್ಮುನಯಸ್ಸದಾ ॥೨೭॥**

---

೨೩. ದೇವದೂತನು ಹೇಳುತ್ತಾನೆ. ನೀನು ಕೇಳಿದುದು ಸರಿ. ಈಗ ಪಾಪದಿಂದ ಮುಕ್ತನಾಗಿರುವೆ. ಶುದ್ಧರಾದ ಮನುಷ್ಯರಿಗೆ ಒಳ್ಳೆಯ ವಿಷಯದಲ್ಲಿ ಮನಸ್ಸು ಹುಟ್ಟುತ್ತದೆ.

೨೪. ನಾನು ಸೇವಕನು. ಆದುದರಿಂದ ಹೇಳತಕ್ಕ ಕಾರಣ ನನಗಿಲ್ಲ. ಆದರೂ ಕೂಡ ನಿನ್ನಲ್ಲಿರುವ ಸ್ನೇಹದಿಂದ ಹೇಳುತ್ತೇನೆ.

೨೫. ಶರೀರದಿಂದಲೂ ಮಾತಿನಿಂದಲೂ ಮನಸ್ಸಿನಿಂದಲೂ ಯಾರು ಪರರಿಗೆ ಹಿಂಸೆಯನ್ನು ಮಾಡುವುದಿಲ್ಲವೋ ಅವರು ಯಮಾಲಯವನ್ನು ಹೊಂದುವುದಿಲ್ಲ.

೨೬. ಪ್ರಾಣಿಹಿಂಸೆ ಮಾಡುವ ಮಾನವರು ಎಷ್ಟು ವೇದಾಧ್ಯಯನವನ್ನು ಮಾಡಿದರೂ ಎಷ್ಟು ದಾನಗಳನ್ನು ಮಾಡಿದರೂ, ಎಷ್ಟು ಯಜ್ಞಗಳನ್ನು ಮಾಡಿದರೂ ಅವರು ಸ್ವರ್ಗವನ್ನು ಸೇರುವುದಿಲ್ಲ.

೨೭. ಅಹಿಂಸೆಯೇ ದೊಡ್ಡ ಧರ್ಮವು, ಅಹಿಂಸೆಯೇ ದೊಡ್ಡ ತಪಸ್ಸು, ಅಹಿಂಸೆಯೇ ದೊಡ್ಡ ದಾನವೆಂದು ಮುನಿಗಳು ಹೇಳುವರು.

ಮಶಕಾನ್ ಸರೀಸೃಪಾನ್ ದಂಶಾನ್ ಯೂಕಾದ್ಯಾನ್ಮಾನವಾಂಸ್ತಥಾ ।
ಆತ್ಮೌಪಮ್ಯೇನ ಪಶ್ಯಂತಿ ಮಾನವಾ ಯೇ ದಯಾಳವಃ ॥೨೮॥
ತಪ್ತಾಂಗಾರಮಯಸ್ಕೀಲಂ ಹ್ರದಂ ಪ್ರೇತತರಂಗಿಣೀಂ ।
ದುರ್ಗತಿಂ ನೈವ ಗಚ್ಛಂತಿ ಕೃತಾಂತಸ್ಯ ಚ ತೇ ನರಾಃ ॥೨೯॥
ಭೂತಾನಿ ಯೇತ್ರ ಹಿಂಸಂತಿ ಜಲಸ್ಥಲಚರಾಣಿ ಚ ।
ಜೀವನಾರ್ಥಂ ಚ ತೇ ಯಾಂತಿ ಕಾಲಸೂತ್ರಂ ಚ ದುರ್ಗತಿಂ ॥೩೦॥
ಶ್ವಮಾಂಸಭೋಜನಾಸ್ತತ್ರ ಪೂಯಶೋಣಿತಪಾಯಿನಃ ।
ಮಜ್ಜಂತಶ್ಚ ವಸಾ ಪಂಕೇ ದಷ್ಟಾಃ ಕೀಟೈರಧೋಮುಖೈಃ ॥೩೧॥
ಪರಸ್ಪರಂ ಚ ಖಾದಂತೋ ಧ್ವಾಂತೇ ಚಾನ್ಯೋನ್ಯಘಾತಿನಃ ।
ವಸಂತಿಕಲ್ಪಾನೇಕಾಂಸ್ತೇ ರುದಂತೋ ದಾರುಣಂ ಪರಂ ॥೩೨॥

---

೨೮. ಸೊಳ್ಳೆ, ಹಲ್ಲಿ, ನೊಣ, ಹೇನು ಮುಂತಾದ ಸಣ್ಣ ಜಂತುಗಳನ್ನೂ ಕೂಡ ದಯಾವಂತರು ತಮ್ಮಂತೆಯೇ ನೋಡಿಕೊಳ್ಳುತ್ತಾರೆ.

೨೯. ಯಾರು ಭೂತದಯೆಯುಳ್ಳವರೋ ಅವರು ಕೆಂಡ, ಕಬ್ಬಿಣದಶೂಲ ರಕ್ತ ಕೀವುಗಳು ಮೊದಲಾದ ನರಕಗಳನ್ನು ನೋಡುವುದಿಲ್ಲ.

೩೦. ಯಾರು ಜೀವನಾರ್ಥವಾಗಿ ಭೂಮಿಯಲ್ಲಿರುವ ಪ್ರಾಣಿಗಳನ್ನಾಗಲಿ ಜಲದಲ್ಲಿರುವ ಪ್ರಾಣಿಗಳನ್ನಾಗಲಿ ಹಿಂಸಿಸುವರೋ ಅವರು ಕಾಲಸೂತ್ರವೆಂಬ ನರಕವನ್ನು ಸೇರುತ್ತಾರೆ.

೩೧. ಅವರು ಆ ನರಕದಲ್ಲಿ ನಾಯಿಯಮಾಂಸವನ್ನು ತಿನ್ನುತ್ತಾ ಕೀವಿನಲ್ಲಿ ಬಿದ್ದು ಮುಳುಗುತ್ತಾ ರಕ್ತಪಾನಮಾಡಿ ಕೊಬ್ಬಿನ ಕೆಸರಿನಲ್ಲಿ ಹುಳುಗಳಿಂದ ಕಚ್ಚಿಸಿಕೊಂಡು ಬಿದ್ದಿರುತ್ತಾರೆ.

೩೨. ಒಬ್ಬರಮಾಂಸವನ್ನು ಮತ್ತೊಬ್ಬರು ತಿನ್ನುತ್ತಾ ಕತ್ತಲೆಯಲ್ಲಿ ಒಬ್ಬರನ್ನೊಬ್ಬರು ಹೊಡೆಯುತ್ತಾ ಭಯಂಕರವಾಗಿ ಅಳುತ್ತಾ ಅನೇಕ ಕಲ್ಪಗಳವರೆಗೂ ನರಕದಲ್ಲಿ ವಾಸಮಾಡುತ್ತಾರೆ.

ನರಕಾನ್ನಿಸ್ಸೃತಾವೈಶ್ಯ ಸ್ಥಾವರಾಸ್ಸ್ಯುಶ್ಚಿರಂತು ತೇ ।
ತತೋಗಚ್ಛಂತಿ ತೇಕ್ರೂರಾಃ ತಿರ್ಯಗ್ಯೋನಿಶತೇಷುಚ ॥೩೩॥

ಪಶ್ಚಾದ್ಭವಂತಿ ಜಾತಾಂಧಾಃ ಕಾಣಾಃಕುಬ್ಜಾಶ್ಚ ಪಂಗವಃ ।
ದರಿದ್ರಾಶ್ಚಾಂಗಹೀನಾಶ್ಚ ಮಾನುಷಾಃ ಪ್ರಾಣಿಹಿಂಸಕಾಃ ॥೩೪॥

ತಸ್ಮಾದ್ವೈಶ್ಯ ಪರತ್ರೇಹ ಕರ್ಮಣಾಮನಸಾಗಿರಾ ।
ಲೋಕದ್ವಯ ಸುಖಪ್ರೇಪ್ಸುಃ ಧರ್ಮಜ್ಞೋನ ತ ದಾಚರೇತ್ ॥೩೫॥

ಲೋಕದ್ವಯೇ ನವಿಂದಂತಿ ಸುಖಾನಿ ಪ್ರಾಣಿಹಿಂಸಕಾಃ ।
ಯೇನ ಹಿಂಸಂತಿ ಭೂತಾನಿ ನತೇ ಬಿಭ್ಯತಿ ಕುತ್ರಚಿತ್ ॥೩೬॥

ಪ್ರವಿಶಂತಿ ಯಥಾನದ್ಯಃ ಸಮುದ್ರಮೃಜು ವಕ್ರಯಾಃ !
ಸರ್ವೇಧರ್ಮಾ ಅಹಿಂಸಾಯಾಂ ಪ್ರವಿಶಂತಿ ತಥಾದೃಢಂ ॥೩೭॥

---

೩೩. ಅವರು ನರಕದಿಂದ ಬಂದಮೇಲೆ ಮರಗಳಾಗಿ ಹುಟ್ಟುತ್ತಾರೆ. ಆಮೇಲೆ ಕ್ರೂರಮೃಗಗಳಾಗಿಯೂ ಕ್ರೂರಪಕ್ಷಿಗಳಾಗಿಯೂ ಹುಟ್ಟು ತ್ತಾರೆ.

೩೪. ಆಮೇಲೆ ಮನುಷ್ಯಜಾತಿಯಲ್ಲಿ ಹುಟ್ಟುಕುರುಡರಾಗಿಯಾ ಗಲಿ ಕುಂಟರಾಗಿಯಾಗಲಿ ಕುಳ್ಳರಾಗಿಯಾಗಲಿ ಜನಿಸಿ ಪ್ರಾಣಿ ಹಿಂಸೆ ಯನ್ನು ಮಾಡುತ್ತಾ ಹುಟ್ಟುದರಿದ್ರರಾಗುತ್ತಾರೆ.

೩೫. ಎಲೈ ವೈಶ್ಯನೇ! ಆದ್ದರಿಂದ ಮನುಷ್ಯನು ಇಹಪರಗಳಲ್ಲಿ ಸೌಖ್ಯವನ್ನು ಬಯಸುವವನಾದರೆ ಯಾವರೀತಿಯಿಂದಲೂ ಪ್ರಾಣಿಗ ಳನ್ನು ಹಿಂಸಿಸ ಕೂಡದು.

೩೬. ಪ್ರಾಣಿ ಹಿಂಸಕರಿಗೆ ಇಹಪರಗಳಲ್ಲಿ ಸುಖವೆಂಬುದೇ ಇಲ್ಲ. ಪ್ರಾಣಿಹಿಂಸೆಯನ್ನು ಮಾಡದವರು ಎಲ್ಲಿಯೂ ಹೆದರಬೇಕಾದ ಸಂಭವ ವಿಲ್ಲ.

೩೭. ನೇರವಾದ ಮತ್ತು ಡೊಂಕಾದ ಸಮಸ್ತ ನದಿಗಳೂ ಸಮುದ್ರ ವನ್ನು ಹೇಗೆ ಸೇರುವುವೋ ಹಾಗೆಯೇ ಎಲ್ಲಾ ಧರ್ಮಗಳೂ ಅಹಿಂಸೆ ಯಲ್ಲಿ ಸೇರುತ್ತವೆ.

ಸಸ್ನಾತಸ್ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।
ಅಭಯಂಯೇನ ಭೂತೇಭ್ಯಃ ದತ್ತಮತ್ರ ವಿಶಾಂವರ ॥೩೮॥

ಯೇನಿಯೋಗಾಂಶ್ಚ ಶಾಸ್ತ್ರೋಕ್ತಾ೯ ಧರ್ಮಾಧರ್ಮವಿಮಿಶ್ರಿತಾ೯।
ಪಾಲಯಂತೀಹಯೇ ವೈಶ್ಯ ನತೇಯಾಂತಿ ಯಮಾಲಯಂ ॥೩೯॥

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।
ಸ್ವಧರ್ಮನಿರತಾಸ್ಸರ್ವೇ ನಾಕಪೃಷ್ಠೇ ವಸಂತಿ ತೇ ॥೪೦॥

ಯಥೋಕ್ತಚಾರಿಣಸ್ಸರ್ವೇ ವರ್ಣಾಶ್ರಮಸಮನ್ವಿತಾಃ ।
ನರಾಜತೇಂದ್ರಿಯಾ ಯಾಂತಿ ಬ್ರಹ್ಮಲೋಕಂತು ಶಾಶ್ವತಂ ॥೪೧॥

ಇಷ್ಟಾಪೂರ್ತರತಾಯೇಚ ಪಂಚಯಜ್ಞರತಾಶ್ಚಯೇ ।
ದಯಾನ್ವಿತಾಶ್ಚಯೇ ನಿತ್ಯಂ ನೇಕ್ಷಂತೇ ತೇ ಯಮಾಲಯಂ ॥೪೨॥

---

೩೮. ಯಾವನು ಪ್ರಾಣಿಗಳಿಗೆ ಅಭಯವನ್ನು ಕೊಡುತ್ತಾನೋ ಅವನು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದಂತಾಗುತ್ತಾನೆ. ಎಲ್ಲಾ ಯಜ್ಞಗಳನ್ನೂ ನಡೆಸಿದವನಾಗುತ್ತಾನೆ.

೩೯. ಎಲೈ ವೈಶ್ಯನೇ ! ಯಾರು ಶಾಸ್ತ್ರದಲ್ಲಿರುವಂತೆ ಧರ್ಮಾಧರ್ಮಗಳನ್ನು ಅನುಷ್ಠಾನ ಮಾಡುತ್ತಾರೋ ಅವರು ಯಮಲೋಕವನ್ನು ಹೊಂದುವುದಿಲ್ಲ.

೪೦. ತಮ್ಮತಮ್ಮ ಧರ್ಮದಲ್ಲಿರುವ ಬ್ರಹ್ಮಚಾರಿಯಾಗಲೀ ಗೃಹಸ್ಥನಾಗಲೀ ವಾನಪ್ರಸ್ಥನಾಗಲೀ ಸನ್ಯಾಸಿಯಾಗಲೀ ಅವರು ಸ್ವರ್ಗವಾಸವನ್ನು ಪಡೆಯುತ್ತಾರೆ.

೪೧. ವರ್ಣಾಶ್ರಮನಿರತರಾದವರೂ ಕೂಡ ಅವರವರ ಕರ್ಮಗಳ ಜೊತೆಗೆ ಜಿತೇಂದ್ರಿಯರಾಗಿಯೂ ಇದ್ದರೆ ಶಾಶ್ವತವಾದ ಬ್ರಹ್ಮಲೋಕವನ್ನು ಸೇರುತ್ತಾರೆ.

೪೨. ಯಾರು ಪ್ರಾಣಿಗಳ ಇಚ್ಛೆಯನ್ನು ಪೂರ್ತಿಗೊಳಿಸುತ್ತಾರೋ ಯಾರು ಯಜ್ಞಗಳನ್ನು ಮಾಡುವರೋ ತೋಪು, ಕೊಳ, ಅನ್ನಸತ್ರ, ಅರವಟ್ಟಿಗೆ ಮುಂತಾದುವನ್ನು ನಡೆಸುವರೋ ಅವರು ಸರ್ವಕಾಲದಲ್ಲಿಯೂ ದಯೆಯಿಂದ ಕೂಡಿದ್ದರೆ ನರಕವನ್ನು ನೋಡುವುದಿಲ್ಲ.

ಇಂದ್ರಿಯಾರ್ಥನಿವೃತ್ತಾಯೇ ಸಮರ್ಥಾ ವೇದವಾದಿನಃ ।
ಅಗ್ನಿಪೂಜಾರತಾನಿತ್ಯಂ ತೇ ವಿಪ್ರಾಸ್ಸ್ವರ್ಗಗಾಮಿನಃ ॥೪೩॥

ಅದೀನವದನಾಶ್ಶೂರಾಃ ಶತ್ರುಭಿಃಪರಿವೇಷ್ಟಿತಾಃ ।
ಆಹವೇಶು ವಿಪನ್ನಾಯೇ ತೇಷಾಂ ಮಾರ್ಗೋಽದಿವಾಕರಃ ॥೪೪॥

ಅನಾಥಸ್ತ್ರೀ ದ್ವಿಜಾರ್ಥೇಽಚ ಶರಣಾಗತಪಾಲನೇ ।
ಪ್ರಾಣಾಂತ್ಯಜಂತಿಯೇ ವೈಶ್ಯ ನಚ್ಯವಂತಿ ದಿವಶ್ಚತೇ ॥೪೫॥

ಪಂಗ್ವಂಧಬಾಲವೃದ್ಧಾಂಶ್ಚ ರೋಗ್ಯನಾಥದರಿದ್ರಿತಾನ್ ।
ಯೇಪುಷ್ಣಂತಿ ಸದಾವೈಶ್ಯ ತೇ ಮೋದಂತೇ ಸದಾದಿವಿ ॥೪೬॥

ಗಾಂದೃಷ್ಟ್ವಾ ಪಂಕನಿರ್ಮಗ್ನಾಂ ರೋಗಮಗ್ನಂದ್ವಿಜಂತಥಾ।
ಉದ್ಧರಂತಿ ನರಾಯೇಽಚ ತೇಷಾಂಲೋಕೋಽಶ್ವಮೇಧಿನಾಂ ॥೪೭॥

---

೪೩. ಇಂದ್ರಿಯಸುಕ್ಕೆ ವಶರಾಗದೆ ವೇದೋಕ್ತಕರ್ಮಗಳನ್ನು ಮಾಡುತ್ತಾ ಅಗ್ನಿಹೊತ್ರಾದಿಗಳನ್ನು ನಡೆಸಿಕೊಂಡು ಬರುವವರು ಸ್ವರ್ಗ ವನ್ನು ಸೇರುತ್ತಾರೆ.

೪೪. ಹೆದರದೆ ಶತ್ರುಗಳೊಡನೆ ಯುದ್ಧಮಾಡುವವರೂ ಯುದ್ಧ ದಲ್ಲಿ ಮೃತರಾದವರೂ ಸೂರ್ಯಮಂಡಲವನ್ನು ಭೇದಿಸಿ ಸ್ವರ್ಗವನ್ನು ಸೇರುತ್ತಾರೆ.

೪೫. ಅನಾಥರು, ವಿಪ್ರರು, ಹೆಂಗಸರು, ಶರಣಾಗತರು, ಇವ ರನ್ನು ರಕ್ಷಿಸುವ ನಿಮಿತ್ತವಾಗಿ ಪ್ರಾಣಗಳನ್ನು ಬಿಟ್ಟವರು ಸ್ವರ್ಗವಾಸ ದಿಂದ ಹಿಂತಿರುಗುವುದಿಲ್ಲ.

೪೬. ಎಲೈ ವೈಶ್ಯನೇ ಕುಂಟರು, ಕುರುಡರು, ಬಾಲಕರು, ವೃದ್ಧರು, ರೋಗಿಗಳು, ಅನಾಥರು, ದರಿದ್ರರು ಇವರುಗಳನ್ನು ಯಾರು ಕಾಪಾಡುತ್ತಾರೋ ಅವರು ಸ್ವರ್ಗದಲ್ಲಿ ಸುಖಿಸುತ್ತಾರೆ.

೪೭. ಕೆಸರಿನಲ್ಲಿ ಹೂತುಕೊಂಡಿರುವ ಹಸುವನ್ನು ಎತ್ತಿ ಕಷ್ಟದಿಂದ ಬಿಡಿಸಿದವರಿಗೂ ರೋಗದಿಂದ ನರಳುವ ಬ್ರಾಹ್ಮಣನನ್ನು ಕಾಪಾಡುವವ ರಿಗೂ ಅಶ್ವಮೇಧ ಯಾಗಮಾಡಿದವರ ಲೋಕ ಪ್ರಾಪ್ತಿಯಾಗುವುದು.

ಗೋಗ್ರಾಸಂ ಯೇ ಪ್ರಯಚ್ಛಂತಿ ಯೇಶುಶ್ರೂಷಂತಿಚಗಾಸ್ಸದಾ ।
ಯೇ ನಾರೋಹಂತಿ ಗೋಪೃಷ್ಠೇ ತೇ ಸ್ವರ್ಲೋಕನಿವಾಸಿನಃ ॥೪೮॥
ಗರ್ತಮಾತ್ರಂತು ಯೇ ಚಕ್ರುಃ ಯತ್ರಗೌ ರತೃಷಾಭವೇತ್ ।
ಯಮಲೋಕಮದೃಷ್ಟ್ವೈವ ತೇಯಾಂತಿಸ್ವರ್ಗಂತಿಂ ನರಾಃ ॥೪೯॥
ಅಗ್ನಿಪೂಜಾ ದೇವಪೂಜಾ ಗುರುಪೂಜಾರತಾಶ್ಚಯೇ ।
ದ್ವಿಜಪೂಜಾರತಾನಿತ್ಯಂ ತೇ ವಿಪ್ರಾಸ್ಸ್ವರ್ಗಗಾಮಿನಃ ॥೫೦॥
ವಾಪೀಕೂಪತಟಾಕಾದೌ ಧರ್ಮಸ್ಯಾಂತೋ ನವಿದ್ಯತೇ ।
ಪಿಬಂಯಸ್ವೇಚ್ಛಯಾ ಯತ್ರ ಖಲಸ್ಥಳ ಚದಾಸ್ಸದಾ ॥೫೧॥
ನಿತ್ಯಂದಾನಪರಸ್ಸೋತ್ರ ಕಥ್ಯತೇ ವಿಬುಧೈರಪಿ ।
ಯಥಾಯಥಾಚಪಾನೀಯಂ ಪಿಬಂತಿ ಪ್ರಾಣಿನೋ ಭೃಶಂ ॥೫೨॥

---

೪೮. ಯಾರು ಗೋವುಗಳಿಗೆ ಮೇವನ್ನು ಕೊಡುತ್ತಾರೋ, ಯಾರು ಹಸುಗಳ ಶುಶ್ರೂಷೆಯನ್ನು ಮಾಡುತ್ತಾರೋ, ಯಾರು ಎತ್ತಿನಮೇಲೆ ಸವಾರಿ ಮಾಡುವುದಿಲ್ಲವೋ ಅವರು ಸ್ವರ್ಗವನ್ನು ಸೇರುತ್ತಾರೆ.

೪೯. ದನಗಳು ನೀರು ಕುಡಿಯುವುದಕ್ಕೋಸ್ಕರ ಯಾರು ಬಾವಿಗಳನ್ನು ತೋಡಿಸುತ್ತಾರೆಯೋ ಅವರು ಯಮದರ್ಶನವಿಲ್ಲದೆ ಸ್ವರ್ಗಕ್ಕೆ ಹೋಗುವರು.

೫೦. ಯಾವ ಬ್ರಾಹ್ಮಣರು ಅಗ್ನಿಪೂಜೆ, ದೇವರಪೂಜೆ, ಗುರುಪೂಜೆ, ಬ್ರಾಹ್ಮಣರಪೂಜೆಗಳನ್ನು ನಿತ್ಯವೂ ಮಾಡುವರೋ ಅವರು ಸ್ವರ್ಗವನ್ನು ಸೇರುವರು.

೫೧. ಯಾವ ಜಾಗದಲ್ಲಿ ಬಾವಿಯನ್ನು ತೋಡಿದರೆ ಸರ್ವಪ್ರಾಣಿಗಳೂ ನೀರನ್ನು ಕುಡಿಯುವವೋ ಆ ಧರ್ಮಕ್ಕೆ ಕೊನೆಯೇ ಇಲ್ಲ.

೫೨. ಪ್ರಾಣಿಗಳು ನಿತ್ಯವೂ ನೀರುಕುಡಿದ ಹಾಗೆಲ್ಲಾ ಭಾವಿಯನ್ನು ತೆಗೆಸಿದವನು ನಿತ್ಯವೂ ದಾನಮಾಡುತ್ತಿರುವವನಂತೆ ಹಿರಿಯರು ಹೇಳುತ್ತಾರೆ.

ತಥಾ ತಥಾ ಕ್ಷಯಸ್ಸ್ವರ್ಗಃ ಧರ್ಮಬುದ್ಧ್ಯಾವಿಶಾಂವರ ।
ಪ್ರಾಣೀನಾಂಜೀವನಂವಾರಿ ಪ್ರಾಣಾವಾರಿಣಿ ಸಂಸ್ಥಿತಾಃ ॥೫೩॥

ನಿತ್ಯಸ್ನಾನೇನ ಪೂಯಂತೇ ಯೇಽಪಿ ಪಾತಕಿನೋ ನರಾಃ ।
ಪ್ರಾತಸ್ನಾನಂ ಹರೇದ್ವೈಶ್ಯ ಬಾಹ್ಯಾಭ್ಯಂತರಜಂ ಮಲಂ ॥೫೪॥

ಪ್ರಾತಸ್ನಾನೇನ ನಿಷ್ಪಾಪಃ ನರೋ ನ ನಿರಯಂ ವ್ರಜೇತ್ ।
ಸ್ನಾನಂ ವಿನಾ ತು ಯೋಭುಙ್ಕ್ತೇ ಮಲಾಶೀ ಸ ಸದಾ ನರಃ ॥೫೫॥

ಅಸ್ನಾಯೀ ಯೋನರಸ್ತಸ್ಯ ವಿಮುಖಾಃ ಪಿತೃದೇವತಾಃ ।
ಸ್ನಾನಹೀನೋ ನರಃ ಪಾಪಃ ಸ್ನಾನಹೀನೋ ನರೋಽಶುಚಿಃ ॥೫೬॥

ಅಸ್ನಾಯೀ ನರಕಂ ಭುಕ್ತ್ವಾ ಪುಂಸ್ಕೀಟಾದಿಷು ಜಾಯತೇ ।
ಯೇ ಪುನಸ್ಸ್ರೋತಸಿ ಸ್ನಾನಂ ಆಚರಂತೀಹ ಪರ್ವಣಿ ।
ತೇ ನೈವ ನರಕಂ ಯಾಂತಿ ನಜಾಯಂತೇ ಕುಯೋನಿಷು ॥೫೭॥

---

೫೩. ಪ್ರಾಣಿಗಳಿಗೆ ಜೀವನವು ನೀರು. ಪ್ರಾಣವು ನೀರಿನಿಂದಲೇ ನಿಂತಿರುವುದು. ಆದ್ದರಿಂದ ಜಲಾಶಯವನ್ನು ಧರ್ಮಬುದ್ಧಿಯಿಂದ ನಿರ್ಮಿಸಿದವನಿಗೆ ಶಾಶ್ವತವಾದ ಸ್ವರ್ಗವಾಸವು ಲಭಿಸುವುದು

೫೪. ಪಾಪಿಗಳಾದ ಮನುಷ್ಯರು ನಿತ್ಯವೂ ಪ್ರಾತಸ್ನಾನಮಾಡುವುದರಿಂದ ಪವಿತ್ರರಾಗುತ್ತಾರೆ. ಪ್ರಾತಸ್ನಾನವು ಒಳಗಿನ ಮತ್ತು ಹೊರಗಿನ ಕೊಳೆಗಳನ್ನು ನಾಶಮಾಡುತ್ತದೆ.

೫೫. ಪ್ರಾತಸ್ನಾನದಿಂದ ಪಾಪಗಳಿಂದ ಬಿಡಲ್ಪಟ್ಟು ನರಕದಿಂದ ಬಿಡುಗಡೆ ಹೊಂದುವನು ಸ್ನಾನವಿಲ್ಲದೆ ಊಟಮಾಡುವವನು ಸದಾ ಅಮೇಧ್ಯವನ್ನೇ ತಿನ್ನುತ್ತಾನೆ.

೫೬. ಸ್ನಾನಮಾಡದವನ ಪಿತೃಗಳು ವಿಮುಖರಾಗುತ್ತಾರೆ. ಸ್ನಾನ ಮಾಡದವನು ಪಾಪಿಯೂ ಮತ್ತು ಅಶುದ್ಧನೂ ಆಗುವನು.

೫೭. ಸ್ನಾನಮಾಡದ ಮಾನವನು ನರಕವನ್ನು ಅನುಭವಿಸಿ ನೀಚವಾದ ಹುಳುವಾಗಿ ಹುಟ್ಟುತ್ತಾನೆ. ಯಾರು ಪರ್ವದಿನದಲ್ಲಿ ನದಿಯಲ್ಲಿ ಸ್ನಾನಮಾಡುತ್ತಾರೋ ಅವರು ನರಕಭಾಗಿಗಳಾಗುವುದಿಲ್ಲ. ನೀಚಜನ್ಮಗಳಲ್ಲಿ ಹುಟ್ಟುವುದೂ ಇಲ್ಲ.

ದುಸ್ಸ್ವಪ್ನಾ ದುಷ್ಟಚಿಂತಾಶ್ಚ ವಂಧ್ಯಾಭವಂತಿ ಸರ್ವದಾ ।
ಪ್ರಾತಸ್ನಾನೇನ ಶುದ್ಧಾನಾಂ ಪುರುಷಾಣಾಂ ವಿಶಾಂ ವರ ॥೫೮॥

ತಿಲಾಂಶ್ಚ ತಿಲಪಾತ್ರಂ ಚ ತಿಲಪ್ರಸ್ಥಂ ಯಥಾವಿಧಿ ।
ದತ್ವಾ ಪ್ರೇತಪತೇರ್ಭೂಮೌ ನ ವ್ರಜಂತಿ ನರಾಃ ಕ್ವಚಿತ್ ॥೫೯॥

ಪೃಥಿವೀಂ ಕಾಂಚನಂ ಗಾಂಚ ದತ್ವಾ ದಾನಾನಿ ಷೋಡಶ ।
ಗತ್ವಾ ನ ವಿನಿವರ್ತಂತೇ ಸ್ವರ್ಗಲೋಕಾದ್ವಿಕುಂಡಲ ॥೬೦॥

ಪುಣ್ಯಾಸು ತಿಥಿಷು ಪ್ರಾಜ್ಞೋ ವ್ಯತೀಪಾತೇ ಚ ಸಂಕ್ರಮೇ ।
ಸ್ನಾತ್ವಾ ದತ್ವಾ ಚ ಯತ್ಕಿಂಚಿತ್ ನೈವ ಮಜ್ಜತಿ ದುರ್ಗತೌ ॥೬೧॥

ನೈವಾಕ್ರಾಮಂತಿ ದಾತಾರೋ ದಾರುಣಂ ರೌರವಂ ಪಥಂ ।
ಇಹ ಲೋಕೇ ನ ಜಾಯಂತೇ ಕುಲೇ ಧನವಿವರ್ಜಿತೇ ॥೬೨॥

---

೫೮. ಎಲೈ ವೈಶ್ಯಶ್ರೇಷ್ಠನೇ! ಪ್ರಾತಸ್ನಾನದಿಂದ ಶುದ್ಧರಾದ ಮನುಜರಿಗೆ ದುಸ್ಸ್ವಪ್ನಗಳೂ ಕೆಟ್ಟಯೋಚನೆಗಳೂ ಹುಟ್ಟುವುದಿಲ್ಲ.

೫೯. ಎಳ್ಳು, ಎಳ್ಳಿನಪಾತ್ರೆ, ಕೊಳಗದಗಟ್ಟಲೆ ಎಳ್ಳನ್ನು ದಾನ ಮಾಡಿದವರು, ಯಮನ ಪಟ್ಟಣಕ್ಕೆ ಹೋಗುವುದಿಲ್ಲ.

೬೦. ಭೂದಾನ, ಸ್ವರ್ಣದಾನ, ಗೋದಾನವೇ, ಮುಂತಾದ ಹದಿನಾರು ಬಗೆಯ ದಾನಗಳನ್ನು ಮಾಡಿದವರು ಸ್ವರ್ಗದಿಂದ ಹಿಂದಿರುಗುವುದಿಲ್ಲ.

೬೧. ತಿಳಿದವನು ಪುಣ್ಯತಿಥಿಗಳು, ವ್ಯತೀಪಾತ, ಸಂಕ್ರಮಣಗಳು ಈ ದಿನಗಳಲ್ಲಿ ಸ್ನಾನಮಾಡಿ ದಾನಮಾಡಿದರೆ ನರಕವನ್ನು ಹೊಂದುವುದಿಲ್ಲ.

೬೨. ದಾನಿಗಳು ರೌರವಾದಿ ನರಕಗಳ ಮಾರ್ಗವನ್ನು ಸಹ ನೋಡುವುದಿಲ್ಲ. ಭೂಲೋಕದಲ್ಲಿ ಬಡವರಾಗಿ ಹುಟ್ಟುವುದೂ ಇಲ್ಲ.

ಸತ್ಯವಾದೀ ಸದಾ ಮೌನೀ ಪ್ರಿಯವಾದೀ ಚ ಯೋ ನರಃ ।
ಅಕ್ರೋಧನಸ್ಸಮಾಚಾರೋ ನಾತಿವಾದ್ಯನಸೂಯಕಃ ॥೬೩॥

ಸದಾ ದಾಕ್ಷಿಣ್ಯಸಂಪನ್ನಃ ಸದಾಭೂತದಯಾನ್ವಿತಃ ।
ಗೋಪ್ತಾ ಚ ಪರಮರ್ಮಾಣಾಂ ವಕ್ತಾ ಪರಗುಣಸ್ಯ ಚ ॥೬೪॥

ಪರಸ್ವಂ ತೃಣಮಾತ್ರಂಚ ಮನಸಾಪಿ ನ ಯೋ ಹರೇತ್ ।
ನ ಪಶ್ಯಂತಿ ವಿಶಾಂ ಶ್ರೇಷ್ಠ ಹ್ಯೇತೇ ನರಕಯಾತನಾಂ ॥೬೫॥

ಪರಾಪವಾದೀ ಪಾಷಂಡಃ ಪಾಪೇಭ್ಯೋಽಪಿ ಮತೋಽಧಿಕಃ ।
ಪಚ್ಯತೇ ನರಕೇ ತಾವತ್ ಯಾವದಾಭೂತಸಂಭವಂ ॥೬೬॥

ವಕ್ತಾ ಪರುಷವಾಕ್ಯಾನಾಂ ಮಂತವ್ಯೋ ನರಕಾಗತಃ ।
ಸಂದೇಹೋ ನ ವಿಶಾಂ ಶ್ರೇಷ್ಠ ಪುನರ್ಯಾತಿ ಚ ದುರ್ಗತಿಂ ॥೬೭॥

---

೬೩–೬೫. ಸತ್ಯವಾದ ಮಾತುಗಳನ್ನಾಡುವವನೂ, ಮಾತನಾಡದವನೂ, ಪ್ರಿಯವಾದ ಮಾತನ್ನೇ ಆಡುವವನೂ, ಕೋಪವಿಲ್ಲದವನೂ, ಸಮನಾದ ಆಚಾರವುಳ್ಳವನೂ, ಹೆಚ್ಚು ಮಾತಾಡದವನೂ, ಅಸೂಯೆಯಿಲ್ಲದವನೂ, ಪರರ ಮನಸ್ಸಿನಂತೆ ನಡೆಯುವವನೂ, ಸರ್ವಪ್ರಾಣಿಗಳಲ್ಲೂ ದಯೆಯುಳ್ಳವನೂ, ಇತರರ ಗುಟ್ಟನ್ನು ಮುಚ್ಚಿಡುವವನೂ, ಪರರ ಗುಣಗಳನ್ನು ಹೊಗಳುವವನೂ, ಪರರ ಸ್ವತ್ತನ್ನು ಹುಲ್ಲಿನಂತೆ ಕಾಣುವವನೂ, ಇವರೆಲ್ಲರೂ ನರಕಯಾತನೆಯನ್ನು ಹೊಂದುವುದಿಲ್ಲ.

೬೬. ಪರರ ಮೇಲೆ ಅಪವಾದವನ್ನು ಹೊರಿಸುವವನೂ, ನಾಸ್ತಿಕನೂ, ಪಾಪಿಗಳಿಗಿಂತಲೂ ಅಧಮನು. ಈ ಪ್ರಪಂಚವಿರುವವರೆಗೂ ನರಕದಲ್ಲಿರುತ್ತಾನೆ.

೬೭. ಕಠಿನವಾದ ಮಾತನಾಡುವವನನು ನರಕದಿಂದ ಬಂದವನೆಂದು ತಿಳಿಯಬೇಕು. ಸತ್ತಮೇಲೆ ಪುನಃ ನರಕವನ್ನೇ ಹೊಂದುವನು. ಸಂದೇಹವಿಲ್ಲ.

ನ ತೀರ್ಥೈರ್ನತಪೋಭಿಶ್ಚ ಕೃತಘ್ನಸ್ಯ ಚ ನಿಷ್ಕೃತಿಃ ।
ಸಹತೇ ಯಾತನಾಂ ಘೋರಾಂ ಸನರೋ ನರಕೇ ಚಿರಂ ॥೬೮॥

ಪೃಥಿವ್ಯಾಂ ಯಾನಿ ತೀರ್ಥಾನಿ ತೇಷು ಮಜ್ಜತಿ ಯೋ ನರಃ ।
ಜಿತೇಂದ್ರಿಯೋ ಜಿತಾಹಾರೋ ನ ಸ ಯಾತಿ ಯಮಾಲಯಂ॥೬೯॥

ನ ತೀರ್ಥೇ ಪಾತಕಂ ಕುರ್ಯಾತ್ ನ ಚ ತೀರ್ಥೋಪಜೀವನಂ ।
ತೀರ್ಥೇ ಪ್ರತಿಗ್ರಹಸ್ತ್ಯಾಜ್ಯಃ ತ್ಯಾಜ್ಯೋ ಧರ್ಮಸ್ಯ ವಿಕ್ರಯಃ॥೭೦॥

ದುರ್ಜರಂ ಪಾತಕಂ ತೀರ್ಥೇ ದುರ್ಜರಶ್ಚ ಪ್ರತಿಗ್ರಹಃ ।
ತೀರ್ಥೇ ಚ ದುರ್ಜರಂ ಸರ್ವಮೇತತ್ಕಿಂ ನರಕಂ ವ್ರಜೇತ್ ॥೭೧॥

ಸಕೃದ್ಗಂಗಾಂಭಸಿ ಸ್ನಾತಃ ಪೂತೋ ಗಾಂಗೇಯವಾರಿಣಾ ।
ನ ನರೋ ನರಕಂ ಯಾತಿ ಅಪಿಪಾತಕರಾಶಿಕೃತ್ ॥೭೨॥

---

೬೮. ಮಾಡಿದ ಉಪಕಾರವನ್ನು ಸ್ಮರಿಸದವನು ಎಷ್ಟು ತೀರ್ಥಗಳಲ್ಲಿ ಸ್ನಾನಮಾಡಿದರೂ, ಎಷ್ಟು ತಪಸ್ಸುಮಾಡಿದರೂ ಪ್ರಯೋಜನವಿಲ್ಲ. ಅವನು ನರಕದಲ್ಲಿ ಬಹುಕಾಲ ಯಾತನೆಯನ್ನು ಅನುಭವಿಸುತ್ತಾನೆ.

೬೯. ಜಿತೇಂದ್ರಿಯನಾಗಿಯೂ ಆಹಾರದಲ್ಲಿ ನಿಯಮವುಳ್ಳವನಾಗಿಯೂ ಇರುವ ಮನುಷ್ಯನೂ, ಲೋಕದಲ್ಲಿರುವ ಎಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿದವನೂ, ನರಕಭಾಗಿಯಾಗುವುದಿಲ್ಲ.

೭೦. ತೀರ್ಥಕ್ಷೇತ್ರಗಳಲ್ಲಿ ಪಾಪಮಾಡಬಾರದು. ತೀರ್ಥದಿಂದ ಜೀವನವನ್ನು ನಡೆಸಲೂ ಕೂಡದು. ತೀರ್ಥದಲ್ಲಿ ದಾನವನ್ನು ತೆಗದುಕೊಳ್ಳಕೂಡದು. ಧರ್ಮವಿಕ್ರಯವನ್ನು ಮಾಡಲೂ ಕೂಡದು.

೭೧. ತೀರ್ಥದಲ್ಲಿ ಮಾಡಿದ ಪಾಪವು ನಾಶವಾಗುವುದಿಲ್ಲ. ತೀರ್ಥದಲ್ಲಿ ತೆಗೆದುಕೊಂಡ ದಾನಕ್ಕೆ ಪ್ರತೀಕಾರವಿಲ್ಲ. ಹೀಗೆ ತೀರ್ಥದಲ್ಲಿ ಮಾಡಿದ ಕೆಲಸಗಳೆಲ್ಲಾ ಪ್ರತೀಕಾರರಹಿತವಾದುವು. ಇವೆಲ್ಲವೂ ನರಕ ಕಾರಣಗಳು.

೭೨. ಎಷ್ಟು ಪಾಪಗಳನ್ನು ಮಾಡಿದ್ದರೂ ಗಂಗಾನದಿಯಲ್ಲಿ ಸ್ನಾನ ಮಾಡಿ ಪರಿಶುದ್ಧನಾದರೆ ನರಕವನ್ನು ಹೊಂದುವುದಿಲ್ಲ.

ವ್ರತದಾನತಪೋಯಜ್ಞಾಃ ಪವಿತ್ರಾಣೀತರಾಣಿ ಚ ।
ಗಂಗಾಬಿಂದ್ವಭಿಷಿಕ್ತಸ್ಯ ನ ಸಮಾ ಇತಿ ನಶ್ಶ್ರುತಂ ॥೭೩॥

ಅನ್ಯತೀರ್ಥಸಮಾಂ ಗಂಗಾಂ ಯೋ ಬ್ರವೀತಿ ನರಾಧಮಃ ।
ಸ ಯಾತಿ ನರಕಂ ವೈಶ್ಯ ದಾರುಣಂ ರೌರವಂ ಮಹತ್ ॥೭೪॥

ಧರ್ಮದ್ರವಂ ಹ್ಯಪಾಂ ಬೀಜಂ ವೈಕುಂಠಚರಣಚ್ಯುತಂ ।
ಧೃತಂ ಮೂರ್ಧ್ನಿ ಮಹೇಶೇನ ಯದ್ಗಾಂಗಮಮಲಂ ಜಲಂ ॥೭೫॥

ತದ್ಬ್ರಹ್ಮೈವ ನ ಸಂದೇಹೋ ನಿರ್ಗುಣಂ ಪ್ರಕೃತೇಃ ಪರಂ ।
ತೇನ ಕಿಂ ಸಮತಾಂ ಗಚ್ಛೇತ್ ಅಪಿ ಬ್ರಹ್ಮಾಂಡಗೋಚರೇ ॥೭೬॥

ಗಂಗಾಗಂಗೇತಿ ಯೋಬ್ರೂಯಾತ್ ಯೋಜನಾನಾಂ ಶತೈರಪಿ ।
ನರೋ ನ ನರಕಂ ಯಾತಿ ಕಿಂ ತಯಾ ಸದೃಶಂ ಭವೇತ್ ॥೭೭॥

---

೭೩. ವ್ರತ, ದಾನ, ತಪಸ್ಸು, ಯಾಗ ಮತ್ತು ಇತರ ಯಾವ ಸತ್ಕಾರ್ಯಗಳನ್ನು ಮಾಡಿದರೂ, ಗಂಗಾಜಲಬಿಂದುವಿನಿಂದ ಸ್ನಾನಮಾಡಿದವನಿಗೆ ಸಮಾನನಾಗಲಾರನು, ಎಂದು ನಾವು ಕೇಳಿದ್ದೇವೆ.

೭೪. ಯಾವ ಅಯೋಗ್ಯನು ಗಂಗೆಯನ್ನು ಮಿಕ್ಕತೀರ್ಥಗಳಿಗೆ ಸಮವೆಂದೆಣಿಸುವನೋ ಅವನು ಕ್ರೂರವಾದ ನರಕವನ್ನು ಸೇರುತ್ತಾನೆ.

೭೫. ಜಲಕ್ಕೆ ಬೀಜಭೂತವಾದ ಧರ್ಮದ ದ್ರವವಾದ ಪರಿಶುದ್ಧವಾದ ಗಂಗಾಜಲವು ವಿಷ್ಣುವಿನ ಪಾದದಿಂದ ಹೊರಟಿತು. ಮಹೇಶ್ವರನು ತನ್ನ ಶಿರಸ್ಸಿನಲ್ಲಿ ಅದನ್ನು ಧರಿಸಿರುವನು.

೭೬. ಆ ಗಂಗಾಜಲವು ಪ್ರಕೃತಿಗಿಂತಲೂ ಹೆಚ್ಚಾದ ನಿರ್ಗುಣವಾದ ಬ್ರಹ್ಮಸ್ವರೂಪವೇ, ಸಂಶಯವಿಲ್ಲ. ಬ್ರಹ್ಮಾಂಡದೊಳಗೆ ಕಾಣುವ ಪದಾರ್ಥಗಳಲ್ಲೆಲ್ಲಾ ಗಂಗಾಜಲಕ್ಕೆ ಸಮಾನವಾದದ್ದು ಯಾವದಿದೆ?

೭೭. ಅನೇಕಯೋಜನಗಳ ದೂರದಲ್ಲಿದ್ದರೂ ಗಂಗೆ, ಗಂಗೆ, ಎಂದು ಯಾವನು ಹೇಳುವನೋ ಅವನು ನರಕವನ್ನು ಹೊಂದುವುದಿಲ್ಲ. ಆ ಗಂಗೆಗೆ ಸಮಾನವಾದುದು ಮತ್ತೊಂದಿಲ್ಲ.

ನಾನ್ಯೇನ ದಹತೇ ಸದ್ಯಃ ಕ್ರಿಯಾ ನರಕದಾಯಿನೀ ।
ಗಂಗಾಂಭಸಿ ಪ್ರಯತ್ನೇನ ಸ್ನಾತವ್ಯಂ ತೇನ ಮಾನವೈಃ ॥೭೮॥

ಪ್ರತಿಗ್ರಹನಿವೃತ್ತೋ ಯಃ ಪ್ರತಿಗ್ರಹಕ್ಷಮೋಽಪಿ ಸನ್ ।
ಸ ದ್ವಿಜೋ ದ್ಯೋತತೇ ವೈಶ್ಯ ತಾರಾರೂಪಶ್ಚಿರಂ ದಿವಿ ॥೭೯॥

ಗಾಮುದ್ಧರಂತಿ ಯೇ ಪಂಕಾತ್ ಯೇ ರಕ್ಷಂತಿ ಚ ರೋಗಿಣಃ ।
ಮ್ರಿಯಂತೇ ಗೋಗೃಹೇ ಯೇಽಚ ತೇಷಾಂ ನಭಸಿ ತಾರಕಾಃ ॥೮೦॥

ಯಮಲೋಕಂ ನ ಪಶ್ಯಂತಿ ಪ್ರಾಣಾಯಾಮಪರಾಯಣಾಃ ।
ಅಪಿ ದುಷ್ಕೃತಕರ್ಮಾಣಃ ತೈರೇವ ಹತಕಿಲ್ಬಿಷಾಃ ॥೮೧॥

ದಿವಸೇ ದಿವಸೇ ವೈಶ್ಯ ಪ್ರಾಣಾಯಾಮಾಸ್ತು ಷೋಡಶ ।
ಅಪಿ ಬ್ರಹ್ಮಹಣಂ ಸಾಕ್ಷಾತ್ ಪುನಾತ್ಯಹರಹಃ ಕೃತಾಃ ॥೮೨॥

---

೭೮. ನರಕವನ್ನುಂಟುಮಾಡುವ ಪಾಪವನ್ನು ದಹಿಸತಕ್ಕ ವಸ್ತುವು ಮತ್ತೊಂದಿಲ್ಲ. ಆದ್ದರಿಂದ ಮನುಷ್ಯರು ಗಂಗಾಸ್ನಾನವನ್ನು ಮಾಡಬೇಕು.

೭೯. ದಾನವನ್ನು ತೆಗೆದುಕೊಳ್ಳಲು ಸಮರ್ಥನಾಗಿದ್ದರೂ ಯಾವನು ದಾನವನ್ನು ತೆಗೆದುಕೊಳ್ಳುವುದಿಲ್ಲವೋ ಅಂಥಾ ಬ್ರಾಹ್ಮಣನು ನಕ್ಷತ್ರರೂಪದಿಂದ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಾನೆ.

೮೦. ಕೆಸರಿನಿಂದ ಹಸುವನ್ನು ಎತ್ತುವವರೂ ರೋಗಿಗಳನ್ನು ರಕ್ಷಿಸುವವರೂ ಹಸುವಿನ ಕೊಟ್ಟಿಗೆಯಲ್ಲಿ ಸಾಯುವವರೂ ಅಂತರಿಕ್ಷದಲ್ಲಿ ನಕ್ಷತ್ರರೂಪದಿಂದ ಬೆಳಗುತ್ತಾರೆ.

೮೧. ಪಾಪಿಗಳಾದರೂ ಪ್ರಾಣಾಯಾಮವನ್ನು ಮಾಡಿದರೆ ಅವರ ಪಾಪವು ನಾಶವಾಗಿ ಯಮಲೋಕವನ್ನು ನೋಡುವುದಿಲ್ಲ.

೮೨. ಹೇ ವೈಶ್ಯನೇ, ಪ್ರತಿದಿವಸವೂ ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕು. ಹಾಗೆ ಮಾಡಿದ ಪ್ರಾಣಾಯಾಮವು ಬ್ರಹ್ಮಹತ್ಯವನ್ನು ನಾಶಮಾಡುತ್ತದೆ.

ತಪಾಂಸಿ ಯಾನಿ ತಪ್ಯಂತೇ ವ್ರತಾನಿ ನಿಯಮಾಶ್ಚ ಯೇ ।
ಗೋಸಹಸ್ರಪ್ರದಾನಂ ಚ ಪ್ರಾಣಾಯಾಮಸ್ತು ತತ್ಸಮಃ ॥೮೩॥

ಅಬ್ಬಿಂದುಂ ಯಃ ಕುಶಾಗ್ರೇಣ ಮಾಸೇ ಮಾಸೇ ನರಃ ಪಿಬೇತ್ ।
ಸಂವತ್ಸರಶತಂ ಸಾಗ್ರಂ ಪ್ರಾಣಾಯಾಮಸ್ತು ತತ್ಸಮಃ ॥೮೪॥

ಪಾತಕಂ ತು ಮಹದ್ಯಚ್ಚ ತಥಾ ಕ್ಷುದ್ರೋಪಪಾತಕಂ ।
ಪ್ರಾಣಾಯಾಮೈಃ ಕ್ಷಣಾತ್ಸರ್ವಂ ಭಸ್ಮಸಾತ್ಕುರುತೇ ನರಃ ॥೮೫॥

ಮಾತೃವತ್ಪರದಾರಾನ್ಯೇ ಮನ್ಯಂತೇ ವೈ ನರೋತ್ತಮಾಃ ।
ನ ತೇ ಯಾಂತಿ ನರಶ್ರೇಷ್ಠ ಕದಾಚಿದ್ಯಮಯಾತನಾಂ ॥೮೬॥

ಮನಸಾಪಿ ಪರೇಷಾಂ ಯಃ ಕಳತ್ರಾಣಿ ನ ಸೇವತೇ ।
ಸಹ ಲೋಕದ್ವಯೇ ನಾಸ್ತಿ ತೇನ ವೈಶ್ಯ ಧರಾ ಧೃತಾ ॥೮೭॥

---

೮೩. ಮನುಷ್ಯನು ತನ್ನ ಜೀವಮಾನದಲ್ಲಿ ಎಷ್ಟು ತಪಸ್ಸನ್ನು ಮಾಡುತ್ತಾನೋ ಎಷ್ಟು ವ್ರತಗಳನ್ನು ಆಚರಿಸುತ್ತಾನೋ ಅದಕ್ಕೂ ಸಹಸ್ರಗೋದಾನಕ್ಕೂ ಒಂದು ಪ್ರಾಣಾಯಾಮವು ಸಮವಾಗುವುದು.

೮೪. ನೂರುಸಂವತ್ಸಗಳಪರ್ಯಂತ ಪ್ರತಿಮಾಸದಲ್ಲಿಯೂ ದರ್ಭೆಯ ತುದಿಯಿಂದ ಜಲಬಿಂದುವನ್ನು ಪಾನಮಾಡಿದರೆ ಪ್ರಾಣಾಯಾಮ ಸಮವಾಗುವುದು.

೮೫. ಮನುಷ್ಯನು ಮಹಾಪಾತಕ ಉಪಪಾತಕಗಳನ್ನು ಮಾಡಿದ್ದರೂ ಪ್ರಾಣಾಯಾಮಗಳನ್ನು ಮಾಡಿದ ತಕ್ಷಣದಲ್ಲಿ ಆ ಪಾಪವನ್ನು ಸುಟ್ಟು ಬೂದಿಮಾಡುತ್ತಾನೆ.

೮೬. ಎಲೈ ಪುರುಷಶ್ರೇಷ್ಠನೇ! ಪರಸ್ತ್ರೀಯರನ್ನು ಯಾರು ತಮ್ಮ ತಾಯಿಯಂತೆ ನೋಡುವರೋ ಅವರು ಯಾವಾಗಲೂ ನರಕವನ್ನು ಹೊಂದುವುದಿಲ್ಲ.

೮೭. ಹೇ ವೈಶ್ಯನೇ! ಯಾವನು ಪರಸ್ತ್ರೀಯರನ್ನು ಮನಸ್ಸಿನಿಂದಲೂ ಅಪೇಕ್ಷಿಸುವುದಿಲ್ಲವೋ ಅವನಿಗೆ ಸಮಾನನಾದವನು ಇಹಪರಗಳೆರಡಲ್ಲಿಯೂ ಇಲ್ಲ. ಅವನಿಂದಲೇ ಭೂಮಿಯು ಧರಿಸಲ್ಪಟ್ಟಿರುವುದು.

ತಸ್ಮಾದ್ಧರ್ಮಾನ್ವಿತೈಸ್ತ್ಯಾಜ್ಯಂ ಪರದಾರೋಪಸೇವನಂ ।
ನಯಂತಿ ಪರದಾರಾಸ್ತು ನರಕಾನೇಕಂಶತಿಂ ॥೮೮॥

ಲೋಭೋ ನ ಜಾಯತೇ ಯೇಷಾಂ ಪರದಾರೇಷು ಮಾನಸೇ ।
ತೇ ಯಾಂತಿ ದೇವಲೋಕಂ ತು ನ ಯಮಂ ವೈಶ್ಯಸತ್ತಮ ॥೮೯॥

ಶಕ್ಯತ್ಕ್ರೋಧನಿದಾನೇಷು ಯಃ ಕ್ರೋಧೇನ ನ ಜೀಯತೇ ।
ಜಿತಸ್ಸ್ವರ್ಗಸ್ಸ ಮಂತವ್ಯಃ ಪುರುಷೋಽಕ್ರೋಧನೋ ಭುವಿ ॥೯೦॥

ಮಾತರಂ ಪಿತರಂ ಪುತ್ರಃ ಆರಾಧಯತಿ ದೇವವತ್ ।
ಅಪ್ರಾಪ್ತೇ ವಾರ್ಧಕೇ ಕಾಲೇ ನ ಯಾತಿ ಚ ಯಮಾಲಯಂ॥೯೧॥

ಪಿತುಶ್ಚಾಧಿಕಭಾವೇನ ಯೇಽ ರ್ಚಯಂತಿ ಗುರುಂ ನರಾಃ ।
ಭವಂತ್ಯತಿಥಯೋ ಲೋಕೇ ಬ್ರಹ್ಮಣಸ್ತೇ ವಿಶಾಂವರ ॥೯೨॥

---

೮೮. ಆದ್ದರಿಂದ ಧರ್ಮದಲ್ಲಿ ಆಸಕ್ತಿಯುಳ್ಳವರು ಮನಸ್ಸಿನಿಂದಲೂ ಪರಸ್ತ್ರೀಯರನ್ನು ನೆನಸಬಾರದು. ಪರಸ್ತ್ರೀಯರು ಇಪ್ಪತ್ತೊಂದು ನರಕಗಳಿಗೆ ಪುರುಷರನ್ನು ನೂಕುತ್ತಾರೆ.

೮೯. ಎಲೈ ವೈಶ್ಯವರನೇ! ಯಾರ ಮನಸ್ಸಿನಲ್ಲಿ ಪರಸ್ತ್ರೀಯರ ವಿಷಯವಾದ ಆಸೆಯು ಹುಟ್ಟುವುದಿಲ್ಲವೋ ಅವರು ದೇವಲೋಕವನ್ನು ಹೊಂದುತ್ತಾರೆ. ಯಮನನ್ನು ನೋಡುವುದಿಲ್ಲ.

೯೦. ಕ್ರೋಧಕ್ಕೆ ಅನೇಕಕಾರಣಗಳಿದ್ದರೂ ಯಾವನು ಅದಕ್ಕೆ ವಶನಾಗದೆ ಇರುವನೋ ಆ ಪುರುಷನು ಸ್ವರ್ಗವನ್ನು ಜಯಿಸಿದವನೆಂದು ತಿಳಿಯಬೇಕು.

೯೧. ಯಾವ ಮಗನು ಯೌವನಕಾಲದಲ್ಲಿ ತಂದೆತಾಯಿಗಳನ್ನು ದೇವರೆಂದು ತಿಳಿದು ಪೂಜಿಸುವನೋ ಅವನು ಯಮಲೋಕವನ್ನು ಸೇರುವುದಿಲ್ಲ.

೯೨. ಯಾರು ಗುರುಗಳನ್ನು ತಂದೆಗಿಂತಲೂ ಹೆಚ್ಚೆಂದು ತಿಳಿದು ಸೇವಿಸುತ್ತಾರೋ ಅವರು ಬ್ರಹ್ಮನಿಗೂ ಪೂಜ್ಯರಾಗುತ್ತಾರೆ.

ಇಹ ಚೈವ ಸ್ತ್ರಿಯೋ ಧನ್ಯಾಃ ಶೀಲಸ್ಯ ಪರಿರಕ್ಷಣಾತ್ ।
ಶೀಲಭಂಗೇ ಚ ನಾರೀಣಾಂ ಯಮುಲೋಕಸ್ಸುದಾರುಣಃ ॥೯೩॥

ಶೀಲಂ ರಕ್ಷ್ಯಂ ಸದಾ ಸ್ತ್ರೀಭಿಃ ದುಷ್ಟಸಂಗವಿವರ್ಜನಾತ್ ।
ಶೀಲೇನ ಹಿ ಪರಸ್ಸ್ವರ್ಗಃ ಸ್ತ್ರೀಣಾಂ ವೈಶ್ಯ ನ ಸಂಶಯಃ ॥೯೪॥

ಶೂದ್ರಸ್ಯ ಪಾಕಯಜ್ಞೇನ ನಿಷಿದ್ಧಾಚರಣೇನ ಚ ।
ದುರ್ಗತಿರ್ವಿಹಿತಾ ವೈಶ್ಯ ತಸ್ಯ ಸಾ ನಾರಕೀ ಗತಿಃ ॥೯೫॥

ವಿಚಾರಯಂತಿ ಯೇ ಶಾಸ್ತ್ರಂ ವೇದಾಭ್ಯಾಸರತಾಶ್ಚ ಯೇ ।
ಪುರಾಣಂ ಸಂಹಿತಾಂ ಯೇ ಚ ಶ್ರಾವಯಂತಿ ಪಠಂತಿ ಚ ॥೯೬॥

ವ್ಯಾಕುರ್ವಂತಿ ಸ್ಮೃತಿಂ ಯೇ ಚ ಯೇ ಧರ್ಮಪ್ರತಿಬೋಧಕಾಃ ।
ವೇದಾಂತೇಷು ನಿಷಣ್ಣಾ ಯೇ ತೈರಿಯಂ ಜಗತೀ ಧೃತಾ ॥೯೭॥

---

೯೩. ಈ ಲೋಕದಲ್ಲಿ ಶೀಲವನ್ನು ಕಾಪಾಡಿಕೊಳ್ಳುವುದರಿಂದ ಸ್ತ್ರೀಯರು ಧನ್ಯರಾಗುವರು. ಅವರು ಶೀಲಭ್ರಷ್ಟರಾದರೆ ನರಕಕ್ಕೆ ಹೋಗುತ್ತಾರೆ.

೯೪. ಹೇ ವೈಶ್ಯನೇ? ಸ್ತ್ರೀಯರು ಶೀಲವನ್ನು ಕಾಪಾಡಿಕೊಳ್ಳಬೇಕು. ದುಷ್ಟ ಸಹವಾಸವನ್ನು ತ್ಯಜಿಸಬೇಕು. ಶೀಲದಿಂದಲೇ ಸ್ತ್ರೀಯರಿಗೆ ಸ್ವರ್ಗವು. ಸಂಶಯವಿಲ್ಲ.

೯೫. ಶೂದ್ರನು ಪಾಕಯಜ್ಞವನ್ನು ಮಾಡುವುದರಿಂದಲೂ ಅವನಿಗೆ ಕೂಡದೆಂದು ಹೇಳಿರುವ ಕರ್ಮಗಳನ್ನು ಮಾಡುವುದರಿಂದಲೂ ನರಕ ಪ್ರಾಪ್ತಿಯೆಂದು ಹೇಳಿದೆ.

೯೬–೯೭. ಶಾಸ್ತ್ರವನ್ನು ವಿಚಾರಮಾಡುವವರಿಂದಲೂ ವೇದಾಭ್ಯಾಸ ಮಾಡುವವರಿಂದಲೂ ಪುರಾಣವನ್ನು ಹೇಳುವವರಿಂದಲೂ ಓದುವವರಿಂದಲೂ ಸ್ಮೃತಿಯನ್ನು ವ್ಯಾಖ್ಯಾನ ಮಾಡುವವರಿಂದಲೂ ಧರ್ಮವನ್ನು ತಿಳಿಯಪಡಿಸುವವರಿಂದಲೂ ವೇದಾಂತಾಭ್ಯಾಸದಲ್ಲಿ ನಿರತರಾಗಿರುವವರಿಂದಲೂ ಈ ಜಗತ್ತು ಧರಿಸಲ್ಪಟ್ಟಿದೆ.

ತತ್ತದಭ್ಯಾಸಮಾಹಾತ್ಮ್ಯಾತ್ ಸರ್ವೇ ತೇ ಹತಕಿಲ್ಬಿಷಾಃ।
ಗಚ್ಛಂತಿ ಬ್ರಹ್ಮಣೋ ಲೋಕಂ ಯತ್ರ ಮೋಹೋ ನ ವಿದ್ಯತೇ ॥

ಜ್ಞಾನಮಜ್ಞಾಯ ಯೋ ದದ್ಯಾತ್ ವೇದಶಾಸ್ತ್ರಸಮುದ್ಭವಂ।
ಅಪಿ ವೇದಾಸ್ತಮರ್ಚಂತಿ ಭವಬಂಧವಿದಾರಣಂ ॥೯೯॥

ಶ್ರೂಯತಾಮದ್ಭುತಂ ಹ್ಯೇತದ್ರಹಸ್ಯಂ ವೈಶ್ಯಸತ್ತಮ।
ಸಮ್ಮತಂ ಧರ್ಮರಾಜಸ್ಯ ಸರ್ವಲೋಕಾಮೃತಪ್ರದಂ ॥೧೦೦॥

ನ ಯಮಂ ಯಮಲೋಕಂ ಚ ನ ಭೂತಾನ್ ಘೋರದರ್ಶನಾನ್।
ಪಶ್ಯಂತಿ ವೈಷ್ಣವಾ ನೂನಂ ಸತ್ಯಂ ಸತ್ಯಂ ಮಯೋದಿತಂ ॥೧೦೧॥

ಪ್ರಾಹಾಸ್ಮಾನ್ ಯಮುನಾಭ್ರಾತಾ ಸದೈವ ಹಿ ಪುನಃ ಪುನಃ।
ಭವದ್ಭಿರ್ವೈಷ್ಣವಾಸ್ತ್ಯಾಜ್ಯಾಃ ನತೇಸ್ಯುರ್ಮಮಗೋಚರಾಃ ॥

---

೯೮. ಅದರದರ ಅಭ್ಯಾಸಬಲದಿಂದ ಮೇಲೆ ಹೇಳಿದಂಥ ಮಹನೀಯರು ಪಾಪವನ್ನು ನಾಶಮಾಡಿಕೊಳ್ಳುತ್ತಾರೆ. ಮತ್ತು ಮಾಯಾರಹಿತವಾದ ಬ್ರಹ್ಮಲೋಕಕ್ಕೂ ಹೋಗುತ್ತಾರೆ.

೯೯. ಯಾವ ಪ್ರಾಜ್ಞನು ವೇದಶಾಸ್ತ್ರಗಳ ಅರ್ಥವನ್ನು ಅಜ್ಞನಿಗೆ ಹೇಳಿಕೊಡುವನೋ ಅಂಥಾ ಸಂಸಾರ ನಿವರ್ತಕನನ್ನು ವೇದಗಳು ಕೂಡ ಪೂಜಿಸುತ್ತವೆ.

೧೦೦. ಹೇ ವೈಶ್ಯೋತ್ತಮನೆ! ಯಮನಿಗೆ ಸಮ್ಮತವಾದ ಸರ್ವಲೋಕಕ್ಕೂ ಅಮೃತದಾಯಕವಾದ ಆದ್ಭುತವಾದ ಈ ರಹಸ್ಯವನ್ನು ಕೇಳು.

೧೦೧. ವಿಷ್ಣುಭಕ್ತರು ಯಮನನ್ನಾಗಲಿ, ಯಮಲೋಕವನ್ನಾಗಲಿ, ಭಯಂಕರ ರೂಪವುಳ್ಳ ಭೂತಗಳನ್ನಾಗಲಿ ನೋಡುವುದಿಲ್ಲ. ನಾನು ಹೇಳಿದ್ದು ಸತ್ಯ. ಸತ್ಯ.

೧೦೨. ಯಮನು ನಮಗೆ ಪದೇ ಪದೇ ಹೇಳುತ್ತಿರುವನು. "ನೀವು ವೈಷ್ಣವರನ್ನು ಬಿಟ್ಟುಬಿಡಿ. ತರಬೇಡಿ. ಅವರು ನನಗೆ ಗೋಚರರಾಗಕೂಡದು".

ಸ್ಮರಂತಿ ಯೇ ಸಕೃದ್ಭೂತಾಃ ಪ್ರಸಂಗೇನಾಪಿ ಕೇಶವಂ।
ತೇ ವಿಧ್ವಸ್ತಾಖಿಲಾಘೌಘಾಃ ಯಾಂತಿ ವಿಷ್ಣೋಃ ಪರಂ ಪದಂ ॥

ದುರಾಚಾರೋ ದುಷ್ಕೃತೋಽಪಿ ಸದಾಚಾರರತೋಽಪಿ ಯಃ।
ಭವದ್ಭಿಸ್ಸಸ್ಸದಾ ತ್ಯಾಜ್ಯಃ ವಿಷ್ಣುಂ ಚ ಭಜತೇ ನರಃ ॥೧೦೪॥

ವೈಷ್ಣವೋ ಯದ್ಗೃಹೇ ಭುಙ್ಕ್ತೇ ಯೇಷಾಂ ವೈಷ್ಣವಸಂಗತಿಃ।
ತೇಽಪಿ ವಃ ಪರಿಹಾರ್ಯಾಸ್ಸುಃ ತತ್ಸಂಗಹತಕಿಲ್ಬಿಷಾಃ ॥೧೦೫॥

ಇತ್ಥಂ ವೈಶ್ಯಾನುಶಾಸ್ತ್ಯಸ್ಮಾನ್ ದೇವೋ ದಂಡಧರಸ್ಸದಾ।
ಅತೋ ನೋ ವೈಷ್ಣವಾ ಯಾಂತಿ ರಾಜಧಾನೀಂ ಯಮಸ್ಯತು ॥

ವಿಷ್ಣುಭಕ್ತಿಂ ವಿನಾ ನೃಣಾಂ ಪಾಪಿಷ್ಠಾನಾಂ ವಿಶಾಂ ವರ।
ಉಪಾಯೋ ನಾಸ್ತಿ ನಾಸ್ತ್ಯನ್ಯಃ ಸಂತರ್ತುಂ ನರಕಾಂಬುಧಿಂ ॥

---

೧೦೩. ಪ್ರಸಂಗವಶದಿಂದಲಾದರೂ ಯಾರು ವಿಷ್ಣುವನ್ನು ಸ್ಮರಿಸುತ್ತಾರೋ ಅವರ ಪಾಪವೆಲ್ಲವೂ ನಾಶವಾಗುತ್ತದೆ. ಅವರು ವಿಷ್ಣುಲೋಕವನ್ನು ಹೊಂದುತ್ತಾರೆ.

೧೦೪. ದುರಾಚಾರಿಯಾಗಲಿ, ಪಾಪಿಯಾಗಲಿ ಸದಾಚಾರಪರನಾಗಿರಲಿ ವಿಷ್ಣುವನ್ನು ಯಾವನು ಭಜಿಸುವನೋ ಅವನನ್ನು ಬಿಟ್ಟುಬಿಡಿ.

೧೦೫. ವಿಷ್ಣುಭಕ್ತನು ಯಾರಮನೆಯಲ್ಲಿ ಊಟಮಾಡುವನೋ ಯಾರೊಡನೆ ಅವನು ಸಹವಾಸಮಾಡುವನೋ ಅವರು ಆ ವೈಷ್ಣವನ ಸಹವಾಸದಿಂದ ಪಾಪಗಳನ್ನು ಕಳೆದುಕೊಳ್ಳುತ್ತಾರೆ. ಅವರನ್ನು ನೀವು ಬಿಟ್ಟುಬಿಡಿ.

೧೦೬. ಈ ರೀತಿಯಾಗಿ ದಂಡಧಾರಿಯಾದ ಯಮನು ನಮಗೆ ಅಪ್ಪಣೆ ಮಾಡಿರುತ್ತಾನೆ. ಆದ್ದರಿಂದ ವಿಷ್ಣುಭಕ್ತರು ಯಮನ ರಾಜಧಾನಿಗೆ ಬರುವುದಿಲ್ಲ.

೧೦೭. ಎಲೈ ವೈಶ್ಯನೇ! ಪಾಪಿಗಳಿಗೆ ವಿಷ್ಣುಭಕ್ತಿಯೊಂದು ಹೊರತಾಗಿ ನರಕವೆಂಬ ಸಮುದ್ರವನ್ನು ದಾಟಲು ಬೇರೆ ಉಪಾಯವಿಲ್ಲ.

ಶ್ವಪಾಕಮಪಿ ನೇಕ್ಷೇತ ಲೋಕೇಷ್ಟಂ ವೈಶ್ಯ ವೈಷ್ಣವಂ ।
ವೈಷ್ಣವೋ ವರ್ಣಬಾಹ್ಯೋಽಪಿ ಪುನಾತಿ ಭುವನತ್ರಯಂ ॥೧೦೮॥

ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಂ ।
ವಿಕ್ರುಶ್ಯ ಪುತ್ರಮಘವಾನ್ಯದಜಾಮಿಳೋಽಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಂ ॥೧೦೯॥

ನರಕೇತು ಚಿರಂ ಮಗ್ನಾಃ ಪೂರ್ವೇ ಯೇ ಚ ಕುಲದ್ವಯೇ ।
ತದೈವ ಯಾಂತಿ ತೇ ಸ್ವರ್ಗಂ ಯದಾರ್ಚಂತಿ ಮುದಾಹರಿಂ ॥೧೧೦॥

ವಿಷ್ಣುಭಕ್ತಸ್ಯ ಯೇ ದಾಸಾ ವೈಷ್ಣವಾನ್ನಭುಜಶ್ಚ ಯೇ ।
ತೇ ತು ಕ್ರತುಭುಜಾಂ ವೈಶ್ಯ ಗತಿಂ ಯಾಂತಿ ನಿರಾಕುಲಾಃ ॥೧೧೧॥

---

೧೦೮. ವೈಷ್ಣವನು ಅತ್ಯಂತ ದುರಾಚಾರಿಯಾದರೂ ಅವನನ್ನು ಅಯೋಗ್ಯನೆನ್ನದೆ ಅವನ ಸಹವಾಸ ಮಾಡಬೇಕು. ವೈಷ್ಣವನು ನೀಚ ವರ್ಣದಲ್ಲಿ ಹುಟ್ಟಿದ್ದರೂ ಮೂರು ಲೋಕವನ್ನೂ ಪವಿತ್ರಮಾಡುತ್ತಾನೆ.

೧೦೯. ವಿಷ್ಣುವಿನ ಗುಣ, ಕಾರ್ಯ, ಹೆಸರು, ಇವುಗಳ ಸಂಕೀರ್ತನವೇ ಮನುಷ್ಯನಿಗೆ ಸಾಕಾಗಿರವುದು. ಪಾಪಿಯಾದ ಅಜಾಮಿಳನು ಸಾಯುವಾಗ ನಾರಾಯಣ, ಎಂದು ಸ್ವಾಮಿಯ ಹೆಸರಿಟ್ಟುಕೊಂಡಿರುವ ಮಗನನ್ನು ಕರೆದುದರಿಂದಲೇ ಮುಕ್ತಿಯನ್ನು ಹೊಂದಿದನು.

೧೧೦. ಯಾವನು ಸಂತೋಷದಿಂದ ವಿಷ್ಣುವನ್ನು ಪೂಜಿಸುವನೋ ಅವನು ಸ್ವರ್ಗವನ್ನು ಹೊಂದುವುದಲ್ಲದೆ ಅವನ ಮಾತಾಪಿತೃಗಳ ಪೂರ್ವ ಜನರೂ ಸಹ ಬಹುಕಾಲದಿಂದ ನರಕವಾಸದಲ್ಲಿದ್ದರೂ ಸ್ವರ್ಗವನ್ನು ಸೇರುತ್ತಾರೆ.

೧೧೧. ಹರಿಭಕ್ತರ ಸೇವಕರೂ, ವೈಷ್ಣವರ ಮನೆಯಲ್ಲಿ ಊಟ ಮಾಡುವವರೂ ನಿಸ್ಸಂಶಯವಾಗಿ ದೇವಲೋಕಕ್ಕೆ ಹೋಗುವರು.

ಪ್ರಾರ್ಥಯೇದ್ವೈಷ್ಣವಸ್ಯಾನ್ನಂ ಪ್ರಯತ್ನೇನ ವಿಚಕ್ಷಣಃ।
ಸರ್ವಪಾಪವಿಶುದ್ಧ್ಯರ್ಥಂ ತದಭಾವೇ ಜಲಂ ಪಿಬೇತ್ ॥೧೧೨॥

ಗೋವಿಂದೇತಿ ಜಪನ್ಮಂತ್ರಂ ಕುತ್ರಚಿನ್ಮ್ರಿಯತೇ ಯದಿ।
ಸ ನರೋ ನಯಮಂ ಪಶ್ಯೇತ್ತಂ ಚ ನೇಕ್ಷಾಮಹೇ ವಯಂ॥೧೧೩॥

ಸಾಂಗಂ ಸಮುದ್ರಂ ಸಧ್ಯಾನಂ ಸಋಷಿಚ್ಛಂದದೈವತಂ।
ದೀಕ್ಷಯಾ ವಿಧಿವನ್ಮಂತ್ರಂ ಜಪೇದ್ವೈದ್ವಾದಶಾಕ್ಷರೀಂ ॥೧೧೪॥

ಅಷ್ಟಾಕ್ಷರೇಣ ಮಂತ್ರೇಣ ಯೇ ಜಪಂತಿ ನರೋತ್ತಮಾಃ।
ತಾನ್ದೃಷ್ಟ್ವಾ ಬ್ರಹ್ಮಹಾ ಶುಧ್ಯೇದ್ಭ್ರಾಜತೇ ವಿಷ್ಣುವತ್ಸ್ವಯಂ ॥

ಶಂಖಿನಶ್ಚಕ್ರಿಣೋ ಭೂತ್ವಾ ಬ್ರಹ್ಮಾಭ್ಯಂತರ ಗಾಮಿನಃ।
ವಸಂತಿ ವೈಷ್ಣವೇ ಲೋಕೇ ವಿಷ್ಣುರೂಪೇಣ ತೇ ನರಾಃ ॥೧೧೬॥

---

೧೧೨. ಆದ್ದರಿಂದ ಬುದ್ಧಿವಂತನಾದವನು ಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಬಹು ಕಷ್ಟಪಟ್ಟು ವೈಷ್ಣವರನ್ನು ಪ್ರಾರ್ಥಿಸಿ ಅವರ ಮನೆಯಲ್ಲಿ ಊಟಮಾಡಬೇಕು. ಅನ್ನವು ಸಿಕ್ಕದಿದ್ದರೆ ಅವರ ಮನೆಯಲ್ಲಿ ನೀರನ್ನಾದರೂ ಕುಡಿಯಬೇಕು.

೧೧೩. "ಗೋವಿಂದ" ಎಂಬ ಮಂತ್ರವನ್ನು ಜಪಿಸುತ್ತಾ ಮನುಷ್ಯನು ಎಲ್ಲಿ ಸತ್ತರೂ ಅವನು ಯಮನನ್ನು ನೋಡುವುದಿಲ್ಲ. ಯಮದೂತರಾದ ನಾವು ಸಹ ಅವನನ್ನು ನೋಡುವುದಿಲ್ಲ.

೧೧೪. ಅಂಗ, ಮುದ್ರೆ, ಧ್ಯಾನ, ಋಷಿ, ಛಂದಸ್ಸು, ದೇವತೆ, ಇವುಗಳೊಡನೆ ವಿಧ್ಯುಕ್ತವಾಗಿ ದ್ವಾದಶಾಕ್ಷರಮಂತ್ರವನ್ನು ಜಪಿಸಬೇಕು.

೧೧೫. ಬ್ರಹ್ಮಹತ್ಯೆಯನ್ನು ಮಾಡಿದವನು ಅಷ್ಟಾಕ್ಷರಮಂತ್ರ ಜಪವನ್ನು ಮಾಡುವವರನ್ನು ನೋಡಿದ ಮಾತ್ರದಿಂದಲೇ ಆ ಪಾಪದಿಂದ ಮುಕ್ತನಾಗುತ್ತಾನೆ. ಮತ್ತು ವಿಷ್ಣುವಿನಂತೆ ಪ್ರಕಾಶಿಸುತ್ತಾನೆ.

೧೧೬. ಶಂಖಚಕ್ರಧಾರಿಗಳಾಗಿ ಬ್ರಹ್ಮನನ್ನೊಳಗೊಂಡು ವಿಷ್ಣುಸ್ವರೂಪದಿಂದ ವೈಕುಂಠದಲ್ಲಿ ವಾಸಮಾಡುತ್ತಾರೆ.

ಹೃದಿ ಸೂರ್ಯೇ ಜಲೇ ವಾಥ ಪ್ರತಿಮಾಸ್ಥಂಡಿಲೇಪಿ ಚ।
ಸಮಭ್ಯರ್ಚ್ಯ ಹರಿಂ ಯಾಂತಿ ನರಾಸ್ತದ್ವೈಷ್ಣವಂ ಪದಂ ॥೧೧೭॥

ಅಥವಾ ಸರ್ವದಾಪೂಜ್ಯೋ ವಾಸದೇವೋ ಮುಮುಕ್ಷುಭಿಃ।
ಸಾಲಗ್ರಾಮೇ ಮಣೌ ಚಕ್ರೇ ವಜ್ರಕೀಟವಿನಿರ್ಮಿತೇ ॥೧೧೮॥

ಅಧಿಷ್ಠಾನಂ ಹಿ ತದ್ವಿಷ್ಣೋಃ ಸರ್ವಪಾಪಪ್ರಣಾಶನಂ।
ಸರ್ವಪುಣ್ಯಪ್ರದಂ ವೈಶ್ಯ ಸರ್ವೇಷಾಮಪಿ ಮುಕ್ತಿದಂ ॥೧೧೯॥

ಯಃ ಪೂಜಯೇದ್ಧರಿಂ ಚಕ್ರೇ ಸಾಲಗ್ರಾಮಶಿಲೋದ್ಭವೇ।
ರಾಜಸೂಯಸಹಸ್ರೇಣ ತೇನೇಷ್ಟಂ ಪ್ರತಿವಾಸರೇ ॥೧೨೦॥

ಸದಾ ನಮಂತಿ ವೇದಾಂತಾಃ ಬ್ರಹ್ಮನಿರ್ವಾಣಮಚ್ಯುತಂ।
ತತ್ಪ್ರಸಾದೋ ಭವೇನ್ನಣಾಂ ಸಾಲಗ್ರಾಮಶಿಲಾರ್ಚನಾತ್ ॥

---

೧೧೭. ಮಾನವರು ಮನಸ್ಸು, ಸೂರ್ಯ, ನೀರು, ಪ್ರತಿಮೆ, ಮಣ್ಣು, ಇವುಗಳಲ್ಲಿ ವಿಷ್ಣುವನ್ನು ಆವಾಹಿಸಿ ಪೂಜಿಸಿದರೆ ವೈಕುಂಠವನ್ನು ಹೊಂದುತ್ತಾರೆ.

೧೧೮. ಹಾಗಲ್ಲದಿದ್ದರೆ ಮೋಕ್ಷಾಭಿಲಾಷಿಗಳು ವಜ್ರವೆಂಬ ಹುಳುವಿನಿಂದ ಕೊರೆಯಲ್ಪಟ್ಟ ಸಾಲಗ್ರಾಮದಲ್ಲಾಗಲಿ ಮಣಿಯಲ್ಲಾಗಲಿ ಚಕ್ರದಲ್ಲಾಗಲಿ ವಿಷ್ಣುವನ್ನು ಪೂಜಿಸುತ್ತಾರೆ.

೧೧೯. ಎಲೈ ವೈಶ್ಯನೇ: ಮೇಲೆ ಹೇಳಿದವು ವಿಷ್ಣು ಸಾನ್ನಿಧ್ಯವುಳ್ಳ ವಿಷ್ಣುವು ವಾಸಿಸುವ ಪದಾರ್ಥಗಳು. ಸರ್ವಪಾಪವನ್ನು ನಾಶಮಾಡುತ್ತವೆ ಎಲ್ಲಾ ಪುಣ್ಯವನ್ನು ಕೊಡುತ್ತವೆ. ಎಲ್ಲರಿಗೂ ಮುಕ್ತಿಯನ್ನು ಕೊಡುತ್ತದೆ.

೧೨೦. ಯಾವನು ಸಾಲಗ್ರಾಮಶಿಲೆಯಲ್ಲಿ ವಿಷ್ಣುವನ್ನು ಪೂಜಿಸುವನೋ ಅವನು ಪ್ರತಿವಾರದಲ್ಲಿಯೂ ಸಾವಿರ ರಾಜಸೂಯಯಾಗಗಳನ್ನು ಮಾಡಿದವನಾಗುತ್ತಾನೆ.

೧೨೧. ವೇದಾಂತಗಳು ಸರ್ವದಾ ಪರಬ್ರಹ್ಮ ಸ್ವರೂಪನಾದ ವಿಷ್ಣುವನ್ನು ನಮಸ್ಕರಿಸುತ್ತವೆ. ಸಾಲಗ್ರಾಮ ಶಿಲಾರ್ಚನೆಯಿಂದ ಮನುಷ್ಯರಿಗೆ ಮಹಾವಿಷ್ಣುವು ಪ್ರಸನ್ನನಾಗುವನು.

ಮಹಾಕಾಷ್ಠಸ್ಥಿತೋ ವಹ್ನಿಃ ಮುಖಸ್ಥಾನೇ ಪ್ರಕಾಶತೇ ।
ಯಥಾ ತಥಾ ಹರಿರ್ವ್ಯಾಪೀ ಸಾಲಗ್ರಾಮೇ ಪ್ರಕಾಶತೇ ॥೧೨೨॥

ಅಪಿ ಪಾಪಸಮಾಚಾರಾಃ ಕರ್ಮಣ್ಯನಧಿಕಾರಿಣಃ ।
ಸಾಲಗ್ರಾಮಾರ್ಚಕಾ ವೈಶ್ಯ ನೈವ ಯಾಂತಿ ಯಮಾಲಯಂ॥೧೨೩॥

ನ ತಥಾ ರಮತೇ ಲಕ್ಷ್ಮ್ಯಾಂ ನ ತಥಾ ಸ್ವಪುರೇ ಹರಿಃ ।
ಸಾಲಗ್ರಾಮಶಿಲಾಚಕ್ರೇ ಯಥಾ ಸ ರಮತೇ ಸದಾ ॥೧೨೪॥

ಅಗ್ನಿಹೋತ್ರಂ ಕೃತಂ ತೇನ ದತ್ತಾ ಪೃಥ್ವೀ ಸ ಸಾಗರಾ ।
ಯೇನಾರ್ಚಿತೋ ಹರಿಶ್ಚಕ್ರೇ ಸಾಲಗ್ರಾಮಶಿಲೋದ್ಭವೇ ॥೧೨೫॥

ಶಿಲಾ ದ್ವಾದಶ ಭೋ ವೈಶ್ಯ ಸಾಲಗ್ರಾಮಶಿಲೋದ್ಭವಾಃ ।
ವಿಧಿವತ್ಪೂಜಿತಾ ಯೇನ ತಸ್ಯ ಪುಣ್ಯಂ ವದಾಮಿ ತೇ ॥೧೨೬॥

---

೧೨೨. ಕಟ್ಟಿಗೆಯಲ್ಲಿರುವ ಬೆಂಕಿಯು ಹೇಗೆ ಮುಂಭಾಗದಲ್ಲಿ ಪ್ರಕಾಶಿಸುವುದೋ ಹಾಗೆ ಸರ್ವವ್ಯಾಪಿಯಾದ ವಾಸುದೇವನು ಸಾಲಗ್ರಾಮದಲ್ಲಿ ವಿರಾಜಿಸುವನು.

೧೨೩. ಎಲೈ ವೈಶ್ಯನೇ: ಪಾಪಿಗಳಾದರೂ ಕರ್ಮಮಾಡಲು ಅಧಿಕಾರವಿಲ್ಲದೇ ಇದ್ದರೂ ಕೂಡ ಸಾಲಗ್ರಾಮವನ್ನು ಪೂಜಿಸಿದರೆ ಯಮಲೋಕವನ್ನು ಹೊಂದುವುದಿಲ್ಲ.

೧೨೪. ಹರಿಯು ಸಾಲಿಗ್ರಾಮದಲ್ಲಿ ಸನ್ನಿಹಿತನಾಗಿರುವಂತೆ ಲಕ್ಷ್ಮಿಯೊಡನೆಯಾಗಲಿ ತನ್ನ ಸ್ಥಾನವಾದ ವೈಕುಂಠದಲ್ಲಾಗಲಿ ಇರುವುದಿಲ್ಲ.

೧೨೫. ಸಾಲಗ್ರಾಮವನ್ನು ಪೂಜಿಸಿದರೆ ಅಗ್ನಿಹೋತ್ರವನ್ನು ಮಾಡಿದಂತೆ ಆಗುತ್ತದೆ. ಮತ್ತು ಸಮುದ್ರಸಮೇತವಾದ ಭೂಮಿಯನ್ನೂ ದಾನಮಾಡಿದಂತಾಗುತ್ತದೆ.

೧೨೬. ಸಾಲಗ್ರಾಮಸಂಬಂಧವಾದ ಶಿಲೆಗಳು ಹನ್ನೆರಡು ಬಗೆಯಾಗಿವೆ. ಹೇ ವೈಶ್ಯನೇ, ವಿಧಿಪ್ರಕಾರವಾಗಿ ಸಾಲಗ್ರಾಮವನ್ನು ಪೂಜಿಸಿದವನಿಗೆ ಬರುವ ಪುಣ್ಯವನ್ನು ಹೇಳುತ್ತೇನೆ.

ಕೋಟಿದ್ವಾದಶಲಿಂಗೈಸ್ತು ಪೂಜಿತೈಸ್ಸ್ವರ್ಣಪಂಕಜೈಃ ।
ಯತ್ಸ್ಯಾತ್‌ದ್ವಾದಶಕಾಲೇಷು ದಿನೇನೈಕೇನ ತದ್ಭವೇತ್ ॥೧೨೭॥
ಯಃ ಪುನಃ ಪೂಜಯೇದ್ಭಕ್ತ್ಯಾ ಶಾಲಗ್ರಾಮ ಶಿಲಾಶತಂ ।
ಉಷಿತ್ವಾ ಸ ಹರೇರ್ಲೋಕೇ ಚಕ್ರವರ್ತೀಹ ಜಾಯತೇ ॥೧೨೮॥
ಕಾಮೈಃ ಕ್ರೋಧೈಃ ಪ್ರಲೋಭೈಶ್ಚ ವ್ಯಾಪ್ತೋ ಯತ್ರ ನರಾಧಮಃ ।
ಸೋಽಪಿ ಯಾತಿ ಹರೇರ್ಲೋಕಂ ಸಾಲಗ್ರಾಮಶಿಲಾರ್ಚನಾತ್ ॥೧೨೯॥
ಯಃ ಪೂಜಯೇಚ್ಚ ಗೋವಿಂದಂ ಸಾಲಗ್ರಾಮೇ ಮುದಾ ನರಃ ।
ಆಭೂತಸಂಪ್ಲವಂ ಯಾವನ್ನ ಸ ಪ್ರಚ್ಯವತೇ ದಿವಃ ॥೧೩೦॥
ವಿನಾ ತೀರ್ಥೈರ್ವಿನಾದಾನೈರ್ವಿನಾಯಜ್ಞೈರ್ವಿನಾ ಮತಿಂ ।
ಮುಕ್ತಿಂ ಯಾಂತಿ ನರಾ ವೈಶ್ಯ ಸಾಲಗ್ರಾಮಶಿಲಾರ್ಚನಾತ್॥೧೩೧॥

---

೧೨೭. ಹನ್ನೆರಡುಕೋಟಿ ಲಿಂಗಗಳನ್ನು ಚಿನ್ನದ ಕಮಲಗಳಿಂದ ಹನ್ನೆರಡು ಕಾಲಗಳಲ್ಲಿ ಪೂಜಿಸಿದರೆ ಬರುವಷ್ಟು ಪುಣ್ಯವು ಒಂದು ದಿವಸದ ಸಾಲಗ್ರಾಮ ಪೂಜೆಯಿಂದ ಬರುತ್ತದೆ.

೧೨೮. ಯಾವನು ನೂರು ಸಾಲಗ್ರಾಮಶಿಲೆಗಳನ್ನು ಭಕ್ತಿಯಿಂದ ಪೂಜಿಸುವನೋ ಅವನು ವಿಷ್ಣುಲೋಕದಲ್ಲಿ ಬಹುಕಾಲವಿದ್ದು ಆಮೇಲೆ ಈ ಲೋಕದಲ್ಲಿ ಚಕ್ರವರ್ತಿಯಾಗಿ ಜನಿಸುವನು.

೧೨೯. ಕಾಮ ಕ್ರೋಧ ಲೋಭಗಳಿಂದ ಕೂಡಿದ ನರಾಧಮನೂ ಸಹ ಸಾಲಗ್ರಾಮ ಶಿಲಾಪೂಜೆಯಿಂದ ವೈಕುಂಠವನ್ನು ಸೇರುತ್ತಾನೆ.

೧೩೦. ಸಾಲಗ್ರಾಮದಲ್ಲಿ ವಿಷ್ಣುವನ್ನು ಯಾವನು ಸಂತೋಷದಿಂದ ಪೂಜಿಸುವನೋ ಅವನು ಪ್ರಪಂಚವಿರುವ ಪರ್ಯಂತ ಸ್ವರ್ಗದಿಂದ ಬೀಳುವುದಿಲ್ಲ.

೧೩೧. ತೀರ್ಥಸ್ನಾನ, ದಾನ, ಯಜ್ಞ, ಇವುಗಳನ್ನು ಮಾಡದ ಮನುಜರೂ ಕೊನೆಗೆ ಬುದ್ಧಿ ಸಾಲದ ಮನುಷ್ಯರೂ ಸಹ ಸಾಲಗ್ರಾಮ ಪೂಜೆಯಿಂದ ಮೋಕ್ಷವನ್ನು ಹೊಂದುತ್ತಾರೆ.

ನರಕಂ ಗರ್ಭವಾಸಂಚ ತಿರ್ಯಕ್ತ್ವಂ ಕ್ರಿಮಿಯೋನಿತಾಂ।
ನ ಯಾತಿ ವೈಶ್ಯ ಪಾಪೋಽಪಿ ಸಾಲಗ್ರಾಮ ಶಿಲಾರ್ಚಕಃ ॥೧೩೨॥

ದೀಕ್ಷಾವಿಧಾನಮಂತ್ರಜ್ಞೋ ಯಶ್ಚಕ್ರೇ ಬಲೀಮಾಹರೇತ್।
ಗಂಗಾ ಗೋದಾವರೀ ರೇವಾ ನದ್ಯೋ ಮುಕ್ತಿಪ್ರದಾಶ್ಚ ಯಾಃ ॥

ನಿವಸಂತೀಹ ತಾಸ್ಸರ್ವಾಃ ಸಾಲಗ್ರಾಮ ಶಿಲಾಜಲೇ।
ನೈವೇದ್ಯೈರ್ವಿವಿಧೈಃ ಪುಷ್ಪೈಃ ಧೂಪ ದೀಪೈರ್ವಿಲೇಪನೈಃ।
ಗೀತವಾದಿತ್ರ ಸ್ತೋತ್ರಾದ್ಯೈಸ್ಸಾಲಗ್ರಾಮಶಿಲಾರ್ಚನಂ ॥೧೩೪॥

ಕುರುತೇ ಮಾನವೋ ಯಸ್ತು ಕಲೌ ಭಕ್ತಿಪರಾಯಣಃ।
ಕಲ್ಪಕೋಟಿಸಹಸ್ರಾಣಿ ರಮತೇ ಸನ್ನಿಧೌ ಹರೇಃ ॥೧೩೫॥

ಲಿಂಗೈಸ್ತು ಕೋಟಿಭಿರ್ದೃಷ್ಟೈಃ ಯತ್ಫಲಂ ಪೂಜಿತೈಸ್ತು ತೈಃ।
ಸಾಲಗ್ರಾಮಶಿಲಾಯಾಸ್ತು ಹ್ಯೇಕೇನಾಹ್ನಾಹ ತತ್ಫಲಂ ॥೧೩೬॥

---

೧೩೨. ಎಲೈ ವೈಶ್ಯನೇ: ಪಾಪಿಷ್ಟನಾದರೂ ಸಾಲಗ್ರಾಮ ಪೂಜಕನು ನರಕವನ್ನೂ, ಗರ್ಭವಾಸವನ್ನೂ ಮೃಗಜನ್ಮವನ್ನೂ ಕ್ರಿಮಿಜನ್ಮವನ್ನೂ ಹೊಂದುವುದಿಲ್ಲ.

೧೩೩. ದೀಕ್ಷಾವಿಧಾನ ಮಂತ್ರಗಳನ್ನು ತಿಳಿದ ಮನುಜನು ಸಾಲಗ್ರಾಮ ಪೂಜೆಮಾಡಿದ ನೀರಿನಲ್ಲಿ ಮುಕ್ತಿಪ್ರದಗಳಾದ ಗಂಗೆ, ಗೋದಾವರಿ, ನರ್ಮದಾ ಮುಂತಾದ ನದಿಗಳು ವಾಸಮಾಡುತ್ತವೆ.

೧೩೪–೧೩೫. ಕಲಿಯುಗದಲ್ಲಿ ಯಾವ ಮಾನವನು ನೈವೇದ್ಯ, ನಾನಾಜಾತಿಯ ಹೂಗಳು, ಧೂಪ, ದೀಪ, ಗಂಧ, ಗಾನ, ವಾದ್ಯ, ಇವುಗಳಿಂದ ಸಾಲಗ್ರಾಮವನ್ನು ಭಕ್ತಿಯಿಂದ ಪೂಜಿಸುತ್ತಾನೋ ಅವನು ಸಾವಿರಕೋಟಿ ಕಲ್ಪಗಳು ವಿಷ್ಣುವಿನ ಸಮೀಪದಲ್ಲಿ ಸುಖಿಸುತ್ತಾನೆ.

೧೩೬. ಕೋಟಿಲಿಂಗಗಳನ್ನು ದರ್ಶಿಸಿ ಪೂಜಿಸಿದರೆ ಬರುವ ಫಲವು ಒಂದು ದಿನದ ಸಾಲಗ್ರಾಮ ಪೂಜೆಯಿಂದಲೇ ಬರುವುದು.

ಸಕೃದಭ್ಯರ್ಚಿತೇ ಲಿಂಗೇ ಸಾಲಗ್ರಾಮಶಿಲೋದ್ಭವೇ।
ಮುಕ್ತಿಂ ಪ್ರಯಾಂತಿ ಮನುಜಾಃ ನೂನಂ ಸಾಂಖ್ಯೇನ ವರ್ಜಿತಾಃ ॥

ಸಾಲಗ್ರಾಮ ಶಿಲಾರೂಪೀ ಯತ್ರ ತಿಷ್ಠತಿ ಕೇಶವಃ।
ತತ್ರ ದೇವಾಸ್ಸುರಾ ಯಕ್ಷಾಃ ಭುವನಾನಿ ಚತುರ್ದಶ ॥೧೪೮॥

ಯೋ ಪಿಬಂತಿ ನರಾ ನಿತ್ಯಂ ಸಾಲಗ್ರಾಮಶಿಲಾಜಲಂ।
ಪಂಚಗವ್ಯಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ ॥೧೪೯॥

ಕೋಟಿತೀರ್ಥಸಹಸ್ರೈಸ್ತು ಸೇವಿತೈಃ ಕಿಂ ಪ್ರಯೋಜನಂ।
ತೋಯಂ ಯದಿ ಪಿಬೇತ್ಪುಣ್ಯಂ ಸಾಲಗ್ರಾಮಶಿಲಾಂಗಜಂ ॥೧೫೦॥

ಸಾಲಗ್ರಾಮ ಶಿಲಾಯಾಂತುಯಶ್ಶ್ರಾದ್ಧಂ ಕರುತೇ ನರಃ।
ಪಿತರಸ್ತಸ್ಯ ತಿಷ್ಠಂತಿ ತೃಪ್ತಾಃ ಕಲ್ಪಶತಂ ದಿವಿ ॥೧೫೧॥

---

೧೪೭. ಸಾಲಗ್ರಾಮ ಶಿಲಾಲಿಂಗವನ್ನು ಒಂದಾವರ್ತಿ ಪೂಜಿಸಿದರೂ ಮನುಷ್ಯರು ಸಾಂಖ್ಯವನ್ನು ತಿಳಿಯದಿದ್ದರೂ ಮೋಕ್ಷವನ್ನು ಪಡೆಯುತ್ತಾರೆ.

೧೪೮. ಎಲ್ಲಿ ಸಾಲಗ್ರಾಮ ರೂಪಿಯಾದ ವಿಷ್ಣುವಿರುವನೋ ಅಲ್ಲಿ ಸಮಸ್ತ ದೇವತೆಗಳೂ ಯಕ್ಷರೂ ಹದಿನಾಲ್ಕು ಲೋಕಗಳೂ ಇದ್ದಂತೆಯೇ.

೧೪೯. ನಿತ್ಯವೂ ಸಾಲಗ್ರಾಮದ ತೀರ್ಥವನ್ನು ಯಾವನು ಪಾನ ಮಾಡುತ್ತಾನೋ ಅವನಿಗೆ ಸಹಸ್ರಾವರ್ತಿ ಪಂಚಗವ್ಯ ಪ್ರಾಶನವೂ ಸಹ ಏನೂ ಮಾಡಲಾರದು. ಅಂದರೆ ಸಾವಿರಸಲ ಪಂಚಗವ್ಯಪಾನಕ್ಕಿಂತಲೂ ಸಾಲಗ್ರಾಮತೀರ್ಥವೇ ಶ್ರೇಷ್ಠ.

೧೫೦. ಸಾಲಗ್ರಾಮದ ಒಂದು ಬಿಂದು ಜಲವನ್ನು ಕುಡಿದರೆ ಬರುವಷ್ಟು ಪುಣ್ಯವು ಸಾವಿರಕೋಟಿ ತೀರ್ಥಗಳ ಸೇವನೆಯಿಂದಲೂ ಲಭಿಸುವುದಿಲ್ಲ.

೧೫೧. ಸಾಲಗ್ರಾಮ ಶಿಲಾ ಸಮೀಪದಲ್ಲಿ ಯಾವನು ಶ್ರಾದ್ಧ ಮಾಡುವನೋ ಅವನ ಪಿತೃಗಳು ನೂರು ಕಲ್ಪಗಳು ದೇವಲೋಕದಲ್ಲಿ ಇರುತ್ತಾರೆ.

ಸಾಲಗ್ರಾಮಶಿಲಾ ಯತ್ರ ತತ್ತೀರ್ಥಂ ಯೋಜನತ್ರಯಂ ।
ತತ್ರದಾನಂ ಚ ಹೋಮಂ ಚ ಸರ್ವಂ ಕೋಟಿಗುಣಂ ಭವೇತ್ ॥

ಶಾಲಗ್ರಾಮಶಿಲಾ ತೋಯಂ ಯಃ ಪಿಬೇದ್ಬಿಂದುನಾ ಸಮಂ।
ಮಾತೃಸ್ತನ್ಯಂ ಪುನರ್ನೈವ ಸ ಪಿಬೇದ್ವಿಷ್ಣುಭಾಙ್ನರಃ ॥೧೪೩॥

ಸಾಲಗ್ರಾಮಸಮೀಪೇತು ಕ್ರೋಶಮಾತ್ರಸಮಂ ತತಃ।
ಕೀಟಕೋಪಿ ಮೃತೋ ಯಾತಿ ವೈಕುಂಠಂ ಭುವನಂ ಪರಂ ॥೧೪೪॥

ಸಾಲಗ್ರಾಮಶಿಲಾಚಕ್ರಂ ಯೋ ದದ್ಯಾದ್ದಾನಮುತ್ತಮಂ ।
ಭೂಚಕ್ರಂ ತೇನ ದತ್ತಂ ಸ್ಯಾತ್ಸಶೈಲವನಕಾನನಂ ॥೧೪೫॥

ಸಾಲಗ್ರಾಮ ಶಿಲಾಯಾ ಯೋ ಮೂಲ್ಯಮುತ್ಪಾದಯೇನ್ನರಃ ।
ವಿಕ್ರೇತಾ ಚಾನುಮಂತಾ ಯಃ ಪರೀಕ್ಷಾಸು ಚ ಮೋದತೇ ॥೧೪೬॥

---

೧೪೨. ಸಾಲಗ್ರಾಮಶಿಲೆ ಇರುವ ತೀರ್ಥದ ಸುತ್ತಲೂ ಮೂರು ಯೋಜನದಗಲಸ್ಥಳದಲ್ಲಿ ಮಾಡಿದ ದಾನವೂ ಹೋಮವೂ ಕೋಟಿಬಾರಿ ಮಾಡಿದಂತಾಗುವುದು.

೧೪೩. ಒಂದು ಬಿಂದು ಮಾತ್ರ ಸಾಲಗ್ರಾಮ ತೀರ್ಥವನ್ನು ಕುಡಿದರೂ ತಾಯಿಯ ಹಾಲನ್ನು ಕುಡಿಯದೆ ವಿಷ್ಣುವನ್ನೇ ಸೇರುತ್ತಾನೆ.

೧೪೪. ಸಾಲಗ್ರಾಮ ಶಿಲೆಯ ಸುತ್ತಮುತ್ತಲೂ ಒಂದು ಕ್ರೋಶ ಜಾಗದೊಳಗೆ ಮೃತವಾದ ಸಣ್ಣ ಪ್ರಾಣಿಯೂ ಸಹ ವೈಕುಂಠವನ್ನು ಸೇರುತ್ತದೆ.

೧೪೫. ಸಾಲಗ್ರಾಮವನ್ನು ದಾನಮಾಡಿದರೆ ಅರಣ್ಯಪರ್ವತಗಳಿಂದ ಕೂಡಿದ ಸಮಸ್ತ ಭೂಮಿಯನ್ನೇ ದಾನಮಾಡಿದಂತಾಗುತ್ತದೆ.

೧೪೬–೧೪೭. ಎಲೈ ವೈಶ್ಯನೇ: ಸಾಲಗ್ರಾಮವನ್ನು ಮಾರುವವನು, ಅದಕ್ಕೊಪ್ಪುವವನು, ಪರೀಕ್ಷಿಸುವವನು ಪರೀಕ್ಷಿಸಿ ಸಂತೋಷ

ತೇ ಸರ್ವೇ ನರಕಂ ಯಾಂತಿ ಯಾವದಾಭೂತಸಂಪ್ಲವಂ ।
ಅತಸ್ತಂ ವರ್ಜಯೇದ್ವೈಶ್ಯ ಚಕ್ರಸ್ಯ ಕ್ರಯವಿಕ್ರಯಂ ॥೧೪೭॥

ಬಹುನೋಕ್ತೇನ ಕಿಂ ವೈಶ್ಯ ಕರ್ತವ್ಯಂ ಪಾಪಭೀರುಣಾ ।
ಸ್ಮರಣಂ ವಾಸುದೇವಸ್ಯ ಸರ್ವಪಾಪಹರಂ ಹರೇಃ ॥೧೪೮॥

ತಪಸ್ತಪ್ತ್ವಾ ತಪೋ ಘೋರಂ ಅರಣ್ಯೇ ನಿಯತೇಂದ್ರಿಯಃ ।
ಯತ್ಫಲಂ ಸಮವಾಪ್ನೋತಿ ತನ್ನತ್ವಾಗರುಡಧ್ವಜಂ ॥೧೪೯॥

ಕೃತ್ವಾಪಿ ಬಹುಶಃ ಪಾಪಂ ನರೋ ಮೋಹಸಮನ್ವಿತಃ ।
ನ ಯಾತಿ ನರಕಂ ನತ್ವಾ ಸರ್ವಪಾಪಹರಂ ಹರಿಂ ॥೧೫೦॥

ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ತಾನಿ ಸರ್ವಾಣ್ಯವಾಪ್ನೋತಿ ವಿಷ್ಣೋರ್ನಾಮಾನುಕೀರ್ತನಾತ್ ॥

---

ಪಡುವವನೂ ನರಕವನ್ನು ಹೊಂದುತ್ತಾರೆ. ಆದ್ದರಿಂದ ಸಾಲಗ್ರಾಮದ ಕ್ರಯವಿಕ್ರಯವನ್ನು ಮಾಡಬಾರದು.

೧೪೮. ಎಲೈ ವೈಶ್ಯನೇ ? ಹೆಚ್ಚುಹೇಳಿ ಪ್ರಯೋಜನವೇನು ? ಪಾಪದಿಂದ ಮುಕ್ತನಾಗಬೇಕೆನ್ನುವವನು ವಾಸುದೇವನ ಸ್ಮರಣೆಯನ್ನು ಮಾಡಬೇಕು.

೧೪೯. ಮನುಜನು ಅರಣ್ಯದಲ್ಲಿ ಇಂದ್ರಿಯಗಳನ್ನು ಜಯಿಸಿ ಘೋರವಾದ ತಪಸ್ಸನ್ನು ಮಾಡಿದರೆ ಯಾವ ಫಲವೋ ವಿಷ್ಣುವಿಗೆ ನಮಸ್ಕರಿಸಿದರೆ ಅದೇ ಫಲವುಂಟು.

೧೫೦. ಮನುಷ್ಯನು ಅಜ್ಞಾನದಿಂದ ಅನೇಕ ಪಾಪಮಾಡಿದರೂ ಒಂದಾವರ್ತಿ ಹರಿಗೆ ನಮಸ್ಕರಿಸಿದರೆ ನರಕಕ್ಕೆ ಹೋಗುವುದಿಲ್ಲ.

೧೫೧. ಹರಿನಾಮಸ್ಮರಣೆಯಿಂದ ಭೂಮಿಯಲ್ಲಿರುವ ಸರ್ವ ತೀರ್ಥಗಳ ಮತ್ತು ಸರ್ವ ಪುಣ್ಯಕ್ಷೇತ್ರಗಳ ಫಲವನ್ನು ಹೊಂದುತ್ತಾನೆ.

ದೇವಂ ಶಾರ್ಙ್ಗಧರಂ ವಿಷ್ಣುಂ ಯೇ ಪ್ರಪನ್ನಾಃ ಪರಾಯಣಾಃ ।
ನ ತೇಷಾಂ ಯಮಸಾಲೋಕ್ಯಂ ನ ತೇಸ್ಯುರ್ನರಕೌಕಸಃ ॥೧೫೨॥

ವೈಷ್ಣವಃ ಪುರುಷೋ ವೈಶ್ಯ ಶಿವನಿಂದಾಂ ಕರೋತಿ ಯಃ ।
ನ ವಿಂದೇದ್ವೈಷ್ಣವಂ ಲೋಕಂ ಸ ಯಾತಿ ನರಕಂ ಮಹತ್ ॥೧೫೩॥

ಉಪೋಷ್ಯೈಕಾದಶೀಮೇಕಾಂ ಪ್ರಸಂಗೇನಾಪಿ ಮಾನವಃ ।
ನ ಯಾತಿ ಯಾತನಾಂ ಯಾಮೀಂ ಇತಿಲೋಮಶತಶ್ರುತಂ ॥೧೫೪॥

ನೇದೃಶಂ ಪಾವನಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ।
ಉಭಯಂ ಪದ್ಮನಾಭಸ್ಯ ದಿನಂ ಪಾತಕನಾಶನಂ ॥೧೫೫॥

ತಾವತ್ಪಾಪಾನಿ ದೇಹೇಽಸ್ಮಿನ್ ವಸಂತೀಹ ವಿಶಾಂವರ ।
ಯಾವನ್ನೋಪವಸೇಜ್ಜಂತುಃ ಪದ್ಮನಾಭದಿನಂ ಶುಭಂ ॥೧೫೬॥

---

೧೫೨. ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದಿರುವ ಮಹಾವಿಷ್ಣುವಿಗೆ ಯಾರು ಭಕ್ತರೋ ಅವರಿಗೆ ಯಮದರ್ಶನವಿಲ್ಲ. ಯಮಲೋಕವಾಸವೂ ಇಲ್ಲ.

೧೫೩. ಯಾವ ವೈಷ್ಣವನು ಶಿವನಿಂದೆಯನ್ನು ಮಾಡುವನೋ ಅವನು ವಿಷ್ಣುಲೋಕವನ್ನು ಹೊಂದದೆ ನರಕಕ್ಕೆ ಹೋಗುವನು.

೧೫೪. ಯಾವ ಮಾನವನು ಒಂದು ಏಕಾದಶಿಯಾದರೂ ಪ್ರಯತ್ನ ಪಟ್ಟು ಉಪವಾಸಮಾಡುವನೋ ಅವನು ನರಕವನ್ನು ಹೊಂದುವುದಿಲ್ಲ ವೆಂದು ಲೋಮಶರಿಂದ ಕೇಳಿದ್ದೇವೆ.

೧೫೫. ಉಭಯಪಕ್ಷಗಳ ಎರಡು ಏಕಾದಶಿಯೂ ವಿಷ್ಣುವಿಗೆ ಪ್ರೀತಿ ಕರವಾದುದು, ಪವಿತ್ರವಾದುದು. ಪಾಪನಾಶಕವಾದುದು.

೧೫೬. ಹೇ ವೈಶ್ಯನೇ ! ಏಕಾದಶೀ ದಿವಸ ಉಪವಾಸ ಮಾಡುವ ವರೆಗೂ ಪ್ರಾಣಿಯ ದೇಹದಲ್ಲಿ ಪಾಪಗಳು ವಾಸಮಾಡುತ್ತವೆ.

ಅಶ್ವಮೇಧ ಸಹಸ್ರಾಣಿ ರಾಜಸೂಯ ಶತಾನಿ ಚ ।
ಏಕಾದಶ್ಯುಪವಾಸಸ್ಯ ಕಲಾಂ ನಾರ್ಹಂತಿ ಷೋಡಶೀಂ ॥೧೫೭॥

ಏಕಾದಶೇಂದ್ರಿಯೈಃ ಪಾಪಂ ಯತ್ಕೃತಂ ವೈಶ್ಯ ಮಾನವೈಃ ।
ಏಕಾದಶ್ಯುಪವಾಸೇನ ತತ್ಸರ್ವಂ ವಿಲಯಂ ವ್ರಜೇತ್ ॥೧೫೮॥

ಏಕಾದಶೀಸಮಂ ಕಾಚಿತ್ಪುಣ್ಯಂ ಲೋಕೇ ನ ವಿದ್ಯತೇ।
ವ್ಯಾಜೇನಾಪಿ ಕೃತಾ ಯೈಸ್ತು ವಶಂ ಯಾಂತಿ ನ ಭಾಸ್ಕರೇಃ ॥೧೫೯॥

ಸ್ವರ್ಗಮೋಕ್ಷ ಪ್ರದಾಹ್ಯೇಷಾ ಶರೀರಾರೋಗ್ಯದಾಯಿನೀ ।
ಸುಕಳತ್ರಪ್ರದಹ್ಯೇಷಾ ಜೀವತ್ಪುತ್ರ ಪ್ರದಾಯಿನೀ ॥೧೬೦॥

ನ ಗಂಗಾ ನ ಗಯಾ ವೈಶ್ಯ ನ ಕಾಳೀ ನ ಚ ಪುಷ್ಕರಂ।
ನ ಚಾಪಿ ವೈಷ್ಣವಂ ಕ್ಷೇತ್ರಂ ತುಲ್ಯಂ ಹರಿದಿನೇನ ತು ॥೧೬೧॥

---

೧೫೭. ಸಾವಿರ ಅಶ್ವಮೇಧಯಾಗಗಳೂ ನೂರು ರಾಜಸೂಯಗಳೂ ಒಂದು ಏಕಾದಶೀ ಉಪವಾಸದ ಹದಿನಾರನೆಯ ಒಂದು ಭಾಗಕ್ಕೂ ಸರಿಹೋಗುವುದಿಲ್ಲ.

೧೫೮. ಹನ್ನೊಂದು ಇಂದ್ರಿಯಗಳಿಂದಲೂ ಎಷ್ಟು ಪಾಪವನ್ನು ಮಾಡುವನೋ ಅಷ್ಟು ಪಾಪವೂ ಏಕಾದಶ್ಯುಪವಾಸದಿಂದ ನಾಶವನ್ನು ಹೊಂದುತ್ತದೆ.

೧೫೯. ಏಕಾದಶ್ಯುಪವಾಸದ ಪುಣ್ಯಕ್ಕೆ ಸಮವಾದುದು ಬೇರೊಂದು ಯಾವಲೋಕದಲ್ಲಿಯೂ ಇಲ್ಲ. ಯಾವನೆವದಿಂದ ಆ ದಿನ ಉಪವಾಸ ಮಾಡಿದರೂ ಯಮನಿಗೆ ವಶರಾಗುವುದಿಲ್ಲ.

೧೬೦. ಈ ಉಪವಾಸವು ಸ್ವರ್ಗವಾಸ, ಮೋಕ್ಷ, ದೇಹಾರೋಗ್ಯ, ಒಳ್ಳೆಯಹೆಂಡತಿ, ದೀರ್ಘಾಯುಸ್ಸುಳ್ಳ ಮಗ ಇತ್ಯಾದಿ ಸೌಭಾಗ್ಯವನ್ನು ಕೊಡುವಂಥಾದ್ದು.

೧೬೧. ಗಂಗಾ, ಗಯಾ, ಯಮುನಾ, ಪುಷ್ಕರ, ವಿಷ್ಣುಕ್ಷೇತ್ರ, ಇವುಗಳೊಂದೂ ಹರಿದಿನವಾದ ಏಕಾದಶಿಗೆ ಸರಿಹೋಗಲಾರದು.

ಯಮುನಾ ಚಂದ್ರಭಾಗಾ ನ ತುಲ್ಯಾ ಹರಿದಿನೇನ ತು ।
ಅನಾಯಾಸೇನ ಯೇನಾತ್ರ ಪ್ರಾಪ್ಯತೇ ವೈಷ್ಣವಂ ಪದಂ ॥೧೬೨॥

ರಾತ್ರೌ ಜಾಗರಣಂ ಕೃತ್ವಾ ಸಮುಪೋಷ್ಯ ಹರೇರ್ದಿನೇ ।
ದಶ ವೈ ಪೈತೃಕೇ ಪಕ್ಷೇ ಮಾತೃಕೇ ದಶ ಪೂರ್ವಜಾಃ ।
ಪ್ರಿಯಾಯಾ ದಶ ಯೇ ವೈಶ್ಯ ತಾನುದ್ಧರತಿ ನಿಶ್ಚಿತಂ ॥೧೬೩॥

ದ್ವಂದ್ವಸಂಗಂ ಪರಿತ್ಯಕ್ತ್ವಾ ನಾಗಾರಿಕೃತಕೇತನಾಃ ।
ಸ್ರಗ್ವಿಣಃ ಪೀತವಸನಾಃ ಪ್ರಯಾಂತಿ ಹರಿಮಂದಿರಂ ॥೧೬೪॥

ಬಾಲತ್ವೇ ಯೌವನೇ ವಾಪಿ ವಾರ್ಧಕೇವಾ ವಿಶಾಂ ವರ ।
ಉಪೋಷ್ಯೈಕಾದಶೀಂ ನೂನಂ ನೈತಿ ಪಾಪೋಽಪಿ ದುರ್ಗತಿಂ ॥೧೬೫॥

ಉಪೋಷ್ಯೇಹ ತ್ರಿರಾತ್ರಾಣಿ ಕೃತ್ವಾ ವಾ ತೀರ್ಥಮಜ್ಜನಂ ।
ದತ್ವಾ ಹೇಮ ತಿಲಾನ್ ಗಾಂಶ್ಚ ಸ್ವರ್ಗಂ ಯಾಂತೀಹ ಮಾನವಾಃ ॥

---

೧೬೨. ಯಮುನೆಯಾಗಲಿ ಚಂದ್ರಭಾಗೆಯಾಗಲಿ ಹರಿದಿನಕ್ಕೆ ಸಮ ವಾಗಲಾರದು. ಈ ಏಕಾದಶಿಯಿಂದ ಅನಾಯಾಸವಾಗಿ ವೈಕುಂಠವು ದೊರಕುವುದು.

೧೬೩. ಏಕಾದಶ್ಯುಪವಾಸಮಾಡಿ ರಾತ್ರಿ ಜಾಗರಣ ಮಾಡಿದರೆ ತಂದೆಯಕಡೆ ಹತ್ತು ಪಿತೃಗಳನ್ನೂ ತಾಯಿಯಕಡೆ ಹತ್ತು ಪಿತೃಗಳನ್ನೂ ಹೆಂಡತಿಯಕಡೆ ಹತ್ತು ಪಿತೃಗಳನ್ನೂ ನರಕದಿಂದ ಉದ್ಧಾರಮಾಡುತ್ತದೆ.

೧೬೪. ಅವರು ಶೀತೋಷ್ಣಗಳನ್ನು ಜಯಿಸಿ ಗರುಡಧ್ವಜವುಳ್ಳವರಾಗಿ ಹೊಂಬಣ್ಣದ ವಸ್ತ್ರಧಾರಿಗಳಾಗಿ ಪುಷ್ಪಮಾಲೆಯನ್ನು ಧರಿಸಿಕೊಂಡು ವೈಕುಂಠಕ್ಕೆ ಹೋಗುವರು.

೧೬೫. ಹೇ ವೈಶ್ಯವರನೇ! ಪಾಪಿಯು ಬಾಲ್ಯ, ಯೌವನ, ಕೌಮಾರ ವಾರ್ಧಕ ಕಾಲಗಳಲ್ಲಿ ಒಂದುಬಾರಿ ಏಕಾದಶೀ ಉಪವಾಸವನ್ನು ಮಾಡಿ ದರೂ ನರಕಭಾಗಿಯಾಗಲಾರನು.

೧೬೬. ಮನುಷ್ಯರು ತೀರ್ಥಸ್ನಾನಮಾಡಿ ಮೂರುದಿನ ಉಪವಾಸ ವಿದ್ದು ಚಿನ್ನ, ಎಳ್ಳು, ಗೋವು, ಇವುಗಳನ್ನು ದಾನಮಾಡಿದರೆ ಸ್ವರ್ಗಕ್ಕೆ ಹೋಗುತ್ತಾರೆ.

ತೀರ್ಥೇ ಸ್ನಾಂತಿ ನ ಯೇ ವೈಶ್ಯ ನ ದತ್ತಂ ಕಾಂಚನಂ ಚ ಯೈಃ ।
ನೈವ ತಪ್ತಂ ತಪಃ ಕಿಂಚಿತ್ತೇಸ್ಯುಃ ಸರ್ವತ್ರ ದುಃಖಿತಾಃ ॥೧೬೭॥

ಸಂಕ್ಷಿಪ್ಯ ಕಥಿತಂ ಧರ್ಮಂ ನರಕಸ್ಯ ನಿರೂಪಣಂ ।
ಅದ್ರೋಹಸ್ಸರ್ವಭೂತೇಷು ವಾಙ್ಮನಃಕಾಯಕರ್ಮಜಃ ॥೧೬೮॥

ಇಂದ್ರಿಯಾಣಾಂ ನಿರೋಧಶ್ಚ ದಾನಂಚ ಹರಿಸೇವನಂ ।
ವರ್ಣಾಶ್ರಮಕ್ರಿಯಾಣಾಂ ಚ ಪಾಲನಂ ವಿಧಿತಸ್ಸದಾ ॥೧೬೯॥

ಸ್ವರ್ಗಾರ್ಥೀ ಸರ್ವದಾ ವೈಶ್ಯ ತಪೋ ದಾನಂ ನ ಕೀರ್ತಯೇತ್ ।
ಯಥಾಶಕ್ತಿ ತಥಾ ದದ್ಯಾತ್ ಅತ್ಮನೋ ಹಿತಕಾಮ್ಯಯಾ ॥೧೭೦॥

ಉಪಾನದ್ವಸ್ತ್ರಮಾಲ್ಯಾನಿ ಪತ್ರಂ ಮೂಲಂ ಫಲಂ ಜಲಂ ।
ಅವಧ್ಯಂ ದಿವಸಂ ಕುರ್ಯಾತ್ ದರಿದ್ರೇಣಾಪಿ ವೈಶ್ಯಕ ॥೧೭೧॥

---

೧೬೭. ಎಲೈ ವೈಶ್ಯನೇ, ಯಾರು ತೀರ್ಥದಲ್ಲಿ ಸ್ನಾನಮಾಡದೇ ಸುವರ್ಣದಾನಮಾಡದೆ, ತಪಸ್ಸನ್ನೂ ಮಾಡದೇ ಇರುವರೋ ಅವರು ಸರ್ವದಾ ದುಃಖಿಗಳಾಗುವರು.

೧೬೮. ಸಂಕ್ಷೇಪವಾಗಿ ಧರ್ಮವನ್ನು ಹೇಳಿದೆನು. ನರಕದ ವಿಷಯವನ್ನೂ ಹೇಳಿದೆನು. ಮನೋವಾಕ್ಕಾಯಗಳಿಂದ ಪ್ರಾಣಿಗಳಿಗೆ ತೊಂದರೆ ಮಾಡದಿದ್ದರೆ ಅದೇ ಉತ್ತಮವಾದ ಧರ್ಮವು.

೧೬೯. ಮತ್ತು ಇಂದ್ರಿಯನಿಗ್ರಹವೂ, ದಾನವೂ, ಭಗವತ್ಸೇವೆಯೂ ವರ್ಣಾಶ್ರಮಗಳಿಗೆ ತಕ್ಕಂತೆ ವಿಧ್ಯುಕ್ತವಾಗಿ ನಡೆಯುವಿಕೆಯೂ ಧರ್ಮಗಳೆನಿಸುವುವು.

೧೭೦. ಹೇ ವೈಶ್ಯನೇ, ಸ್ವರ್ಗವನ್ನು ಕೋರುವವನು ತಾನುಮಾಡಿದ ದಾನವನ್ನೂ, ತಪಸ್ಸನ್ನೂ, ಹೇಳಿಕೊಳ್ಳಬಾರದು. ತನ್ನ ಮೇಲ್ಮೆಗಾಗಿ ಯೋಗ್ಯತಾನುಸಾರವಾಗಿ ದಾನಮಾಡಬೇಕು.

೧೭೧. ದರಿದ್ರನೂ ಕೂಡ ವಸ್ತ್ರ, ಎಲೆ, ಗೆಡ್ಡೆ, ಹಣ್ಣು, ನೀರು ಇವುಗಳನ್ನು ದಾನಮಾಡುತ್ತಿರಬೇಕು. ವೃಥಾ ದಿನವನ್ನು ಕಳೆಯಕೂಡದು.

ಇಹಲೋಕೇ ಪರೇ ಚೈವ ನ ದತ್ತಂ ನೋಪತಿಷ್ಠತೇ।
ದಾತಾರೋ ನೈವ ಪಶ್ಯಂತಿ ತಾಂ ತಾಂ ವೈ ಯಮಯಾತನಾಂ॥೧೭೨॥

ದೀರ್ಘಾಯುಷೋ ಧನಾಢ್ಯಾಶ್ಚ ಭವಂತೀಹ ಪುನಃ ಪುನಃ।
ಕಿಮತ್ರ ಬಹುನೋಕ್ತೇನ ಯಾಂತ್ಯಧರ್ಮೇಣ ದುರ್ಗತಿಂ।
ಆರೋಹಂತಿ ದಿವಂ ಧರ್ಮೈಃ ನರಾಸ್ಸರ್ವತ್ರ ಸರ್ವದಾ ॥೧೭೩॥

ತೇನ ಬಾಲತ್ವಮಾರಭ್ಯ ಕರ್ತವ್ಯೋ ಧರ್ಮಸಂಗ್ರಹಃ।
ಇತಿ ತೇ ಕಥಿತಂ ಸರ್ವಂ ಕಿಮನ್ಯ ಚ್ಛ್ರೋತುಮಿಚ್ಛಸಿ ॥೧೭೪॥

ವೈಶ್ಯ ಉವಾಚ

ದೃತ್ವಾ ತ್ವ ಚನಂ ಸೌಮ್ಯ ಪ್ರಸನ್ನಂ ಚಿತ್ತಮೇವ ಮೇ।
ಗಂಗೋದಂ ಪಾಪಹಂ ಸದ್ಯಃ ಪಾಪಹಾರೀ ಸತಾಂ ವಚಃ ॥೧೭೫॥

---

೧೭೨. ಈ ಲೋಕಲೋಕಗಳಲ್ಲಿ ನಾವು ಕೊಡದೆ ಇರುವುದು ನಮಗೆ ಸಿಕ್ಕುವುದಿಲ್ಲ. ದಾನಮಾಡಿದವರು ಆ ಯಮಯಾತನೆಯನ್ನು ಅನುಭವಿಸುವುದಿಲ್ಲ.

೧೭೩. ಪುನಃ ಹುಟ್ಟಿದಮೇಲೆ ಧನವಂತರಾಗಿಯೂ ದೀರ್ಘಾಯುಗಳಾಗಿಯೂ ಆಗುತ್ತಾರೆ. ಬಹಳ ಹೇಳಿದ್ದರಿಂದ ಪ್ರಯೋಜನವೇನು ? ಅಧರ್ಮದಿಂದ ಮಾನವರು ನರಕವನ್ನೂ ಧರ್ಮದಿಂದ ಸ್ವರ್ಗವನ್ನೂ ಹೊಂದುತ್ತಾರೆ.

೧೭೪. ಆದ್ದರಿಂದ ಬಾಲ್ಯದಿಂದಲೇ ಧರ್ಮವನ್ನು ಸಂಗ್ರಹಿಸಬೇಕು. ಇದೆಲ್ಲವನ್ನೂ ನಿನಗೆ ತಿಳಿಸಿರುವೆನು. ಇನ್ನೇನನ್ನು ಕೇಳಬೇಕೆಂದಿರುವೆ ?

೧೭೫. ವೈಶ್ಯನು ಹೇಳುತ್ತಾನೆ. ಅಯ್ಯಾ, ನಿನ್ನ ಮಾತನ್ನು ಕೇಳಿ ನನ್ನ ಮನಸ್ಸು ಶಾಂತವಾಯಿತು. ಏಕೆಂದರೆ ಗಂಗೋದಕವು ತನ್ನಲ್ಲಿ ಸ್ನಾನಮಾಡಿದವನ ಪಾಪವನ್ನು ಹೇಗೆ ಹೋಗಲಾಡಿಸುವುದೋ ಹಾಗೆಯೇ ಸತ್ಪುರುಷರ ಮಾತು ಕೂಡ ಕೇಳಿದವರ ಪಾಪವನ್ನು ನಾಶಮಾಡುತ್ತದೆ.

ಉಪಕರ್ತುಂ ಪ್ರಿಯಂ ವಕ್ತುಂ ಗುಣೋ ನೈಸರ್ಗಿಕಸ್ಸತಾಂ।
ಶೀತಾಂಶುಃ ಕ್ರಿಯತೇ ಕೇನ ಶೀತಲೋ ಮೃತಮಂಡಲಃ ॥೧೭೬॥
ದೇವದೂತ ತತೋ ಬ್ರೂಹಿ ಕಾರುಣ್ಯಾನ್ಮಮ ಪೃಚ್ಛತಃ।
ನರಕಾನ್ನಿಷ್ಕೃತಿಸ್ಸದ್ಯಃ ಭ್ರಾತುರ್ಮೇ ಜಾಯತೇ ಕಥಂ ॥೧೭೭॥
ಇತಿ ತಸ್ಯ ವಚಶ್ಶ್ರುತ್ವಾ ದೇವದೂತೋ ಜಗಾದ ಹ।
ಧ್ಯಾನಂ ದೃಷ್ಟ್ವಾ ಕ್ಷಣಂ ಧ್ಯಾತ್ವಾ ತನ್ಮೈತ್ರೀರಜ್ಜುಬಂಧನಃ॥೧೭೮॥
ಯತ್ತ್ವೇ ವೈಶ್ಯಾಷ್ಟಮೇ ಪುಣ್ಯಂ ತ್ವಯಾ ಜನ್ಮನಿ ಸಂಚಿತಂ।
ತ್ವದ್ಭ್ರಾತ್ರೇ ದೀಯತಾಂ ಸರ್ವಂ ಸ್ವರ್ಗಂ ತಸ್ಯ ಯದೀಚ್ಛಸಿ॥೧೭೯॥

ವಿಕುಂಡಲ ಉವಾಚ

ಕಿಂತತ್ಪುಣ್ಯಂ ಕಥಂ ಜಾತಂ ಕಿಂಜನ್ಮ ಚ ಪುರಾತನಂ।
ತತ್ಸರ್ವಂ ಕಥ್ಯತಾಂ ದೂತ ತತೋ ದಾಸ್ಯಾಮಿ ಸತ್ವರಂ ॥೧೮೦॥

---

೧೭೬. ಉಪಕರಿಸುವುದು, ಒಳ್ಳೆ ಮಾತನಾಡುವುದು, ಇವು ಸತ್ಪುರುಷರ ಗುಣಗಳು. ಅಮೃತಮಂಡಲನೂ, ಶೀತಾಂಶವೂ ಆಗಿರುವ ಚಂದ್ರನಿಗೆ ಯಾರುತಾನೆ ಉಪಕಾರಮಾಡೆಂದು ಹೇಳುತ್ತಾರೆ.

೧೭೭. ಎಲೈ ದೇವದೂತನೇ, ನನ್ನ ಸಹೋದರನಿಗೆ ನರಕದಿಂದ ಉದ್ಧಾರವಾಗುವ ರೀತಿಯನ್ನು ದಯವಿಟ್ಟು ನನಗೆ ತಿಳಿಸು.

೧೭೮. ವೈಶ್ಯನ ಸ್ನೇಹಪಾಶದಿಂದ ಕಟ್ಟಲ್ಪಟ್ಟ ಯಮದೂತನು ಧ್ಯಾನ್ಯದಿಂದ ಕ್ಷಣಕಾಲ ವಿಷಯಗಳನ್ನು ಯೋಚಿಸಿ ತಿಳಿದು ವೈಶ್ಯನಿಗೆ ಹೇಳಿದನು.

೧೭೯. ಹೇ ವೈಶ್ಯನೇ, ನೀನು ಇದಕ್ಕೆ ಹಿಂದಿನ ಎಂಟನೇ ಜನ್ಮದಲ್ಲಿ ಗಳಿಸಿದ ಪುಣ್ಯವನ್ನು ನಿನ್ನ ಸಹೋದರನಿಗೆ ಕೊಟ್ಟರೆ ಆಗ ಅವನಿಗೆ ಸ್ವರ್ಗವು ಸಿಕ್ಕುವುದು.

೧೮೦. ವಿಕುಂಡಲನು ಹೇಳುತ್ತಾನೆ. ಎಲೈ ದೂತನೆ, ನನ್ನ ಆ ಹಿಂದಿನ ಜನ್ಮವೇನು, ಆಗ ನಾನು ಯಾವರೀತಿ ಪುಣ್ಯಮಾಡಿದೆನು. ಅದನ್ನು ದಯವಿಟ್ಟು ನನಗೆ ಹೇಳು. ಅನಂತರ ಜಾಗ್ರತೆಯಾಗಿ ನನ್ನ ಸೋದರನಿಗೆ ಪುಣ್ಯವನ್ನು ಕೊಡುತ್ತೇನೆ.

### ದೇವದೂತ ಉವಾಚ

ಶಉಣು ವೈಶ್ಯ ಪ್ರವಕ್ಷ್ಯಾಮಿ ತತ್ಪುಣ್ಯಂ ಚ ಸಹೇತುಕಂ।
ಪುರಾ ಮಧುವನೇ ಪುಣ್ಯೇ ಋಷಿರಾಸೀಚ್ಛ ಶಾಕುನಿಃ ॥೧೮೧॥

ತತೋಽಧ್ಯಯನಸಂಪನ್ನಃ ತೇಜಸಾ ಬ್ರಹ್ಮಣಾ ಸಮಃ।
ಜಜ್ಞಿರೇ ತಸ್ಯ ರೇವತ್ಯಾಂ ನವಪುತ್ರಾ ಗ್ರಹಾ ಇವ ॥೧೮೨॥

ಧ್ರುವಶ್ಶಾಲೀ ಬುಧಸ್ತಾರೋ ಜ್ಯೋತಿಷ್ಮಾನ್ ಉತ ಪಂಚಮಃ।
ಅಗ್ನಿಹೋತ್ರರತಾ ಹ್ಯೇ ತೇಗೃಹಧರ್ಮೇಷು ರೇಮಿರೆ ॥೧೮೩॥

ನಿರ್ಮೋಹೋ ಜಿತಕಾಮಶ್ಚ ಧ್ಯಾನಕಾಷ್ಠೋ ಗುಣಾಧಿಕಃ।
ಏತೇ ಗೃಹವಿರಕ್ತಾಶ್ಚ ಚತ್ವಾರೋ ದ್ವಿಜಸೂನವಃ ॥೧೮೪॥

ಚತುರ್ಥಾಶ್ರಮ ಮಾಪನ್ನಾಃ ಸರ್ವಕಾಮ ವಿನಿಸ್ಪೃಹಾಃ।
ಗ್ರಾಮೈಕವಾಸಿನಸ್ಸರ್ವೇ ನಿಸ್ಸಂಗಾ ನಿಷ್ಪರಿಗ್ರಹಾಃ ॥೧೮೫॥

---

೧೮೧. ದೇವದೂತನು ಹೇಳುತ್ತಾನೆ. ಹೇ ವೈಶ್ಯನೇ, ಆ ಪುಣ್ಯವನ್ನು ಸಕಾರಣವಾಗಿ ಹೇಳುತ್ತೇನೆ ಕೇಳು. ಪೂರ್ವದಲ್ಲಿ ಮಧುವನವೆಂಬ ಅರಣ್ಯದಲ್ಲಿ ಶಾಕುನಿಯೆಂಬ ಋಷಿ ಇದ್ದನು.

೧೮೨. ಅವನು ತಪಸ್ಸು, ಅಧ್ಯಯನ ಇವುಗಳಿಂದ ಕೂಡಿದವನಾಗಿ ತೇಜಸ್ಸಿನಿಂದ ಬ್ರಹ್ಮನಿಗೆ ಸಮನಾಗಿದ್ದನು ಅವನಿಗೆ ತನ್ನ ಭಾರ್ಯೆಯಾದ ರೇವತಿ ಎಂಬುವಳಲ್ಲಿ ನವಗ್ರಹಗಳಂತೆ ಒಂಭತ್ತುಜನ ಪುತ್ರರು ಜನಿಸಿದರು.

೧೮೩. ಈ ಒಂಭತ್ತು ಜನರಲ್ಲಿ ಧ್ರುವ, ಶಾಲೀ, ಬುಧ, ತಾರ, ಜ್ಯೋತಿಷ್ಮಂತ ಎಂಬ ಐವರು ಅಗ್ನಿಹೋತ್ರಿಗಳಾಗಿ ಗೃಹಸ್ಥಾಶ್ರಮಿಗಳಾಗಿ ಸುಖವಾಗಿದ್ದರು.

೧೮೪. ಮತ್ತುಳಿದ ನಿರ್ಮೋಹ, ಜಿತಕಾಮ, ಧ್ಯಾನಕಾಷ್ಠ, ಗುಣಾಧಿಕ ಎಂಬ ನಾಲ್ಕು ಪುತ್ರರು ವೈರಾಗ್ಯವನ್ನು ಹೊಂದಿದರು.

೧೮೫–೧೮೮. ಈ ನಾಲ್ವರೂ ಯತಿಗಳಾಗಿ ಆಶೆಯನ್ನು ಬಿಟ್ಟು ಒಂದುರಾತ್ರಿ ಮಾತ್ರ ಒಂದು ಗ್ರಾಮದಲ್ಲಿರುತ್ತಾ ದಾನವನ್ನು ತೆಗೆದು

ನಿರಾಶಾ ನಿಷ್ಪ್ರಯತ್ನಾಶ್ಚ ಸಮಲೋಷ್ಟಾಶ್ಮಕಾಂಚನಾಃ ।
ಯೇನಕೇನಚಿದಾಚ್ಛನ್ನಾಃ ಯೇನ ಕೇನ ಚಿದಾಶಿತಾಃ ॥೧೮೬॥

ಸಾಯಂಗೃಹಾಸ್ತಥಾ ನಿತ್ಯಂ ನಿತ್ಯಂ ಧ್ಯಾನಪರಾಯಣಾಃ।
ಜಿತನಿದ್ರಾ ಜಿತಾಹಾರಾಃ ವಾತಶೀತ ಸಹಿಷ್ಣವಃ ॥೧೮೭॥

ಪಶ್ಯಂತೋ ವಿಷ್ಣುರೂಪೇಣ ಜಗತ್ಸರ್ವಂ ಚರಾಚರಂ।
ಚರಂತಿ ಲೀಲಯಾ ಪೃಥ್ವೀಂ ತೇ ನ್ಯೋಽನ್ಯಂ ಮೌನಮಾಸ್ಥಿತಾಃ ॥

ನ ಕುರ್ವಂತಿ ಕ್ರಿಯಾಂ ಕಾಚಿದರ್ಥಮಾತ್ರಂ ಹಿ ಯೋಗಿನಃ ।
ದೃಷ್ಟಜ್ಞಾನಾ ಅಸಂದೇಹಾಃ ಚಿದ್ವಿಕಾರವಿಶಾರದಾಃ ॥೧೮೯॥

ಏವಂ ತೇ ತವ ವಿಪ್ರಸ್ಯ ಪೂರ್ವಮಷ್ಟಮ ಜನ್ಮನಿ।
ತಿಷ್ಠಂತೋ ಮಧ್ಯದೇಶೇಷು ಪುತ್ರದಾರಕುಟುಂಬಿನಃ ॥೧೯೦॥

---

ಕೊಳ್ಳದೆ ಯಾವುದಕ್ಕೂ ಪ್ರಯತ್ನಪಡದೆ ಹೊನ್ನುಮಣ್ಣುಗಳನ್ನು ಒಂದಾಗಿನೋಡುತ್ತಾ ಏನು ಸಿಕ್ಕಿದರೆ ಅದರಿಂದ ಮರಿನ ಮುಚ್ಚಿಕೊಂಡು ಯಾವಕಾಲಕ್ಕೆ ಏನು ಸಿಕ್ಕಿದರೂ ಅದನ್ನು ಭುಜಿಸಿ ಸಾಯಂಕಾಲ ದಲ್ಲಿ ಮಾತ್ರ ಮಠಕ್ಕೆ ಬರುತ್ತಾ ಧ್ಯಾನಾಸಕ್ತರಾಗಿ ನಿದ್ರಾಹಾರ ಗಳನ್ನು ಜಯಿಸಿ ಸಮಸ್ತ ಪ್ರಪಂಚವನ್ನೂ ವಿಷ್ಣುರೂಪವೆಂದೇ ತಿಳಿ ಯುತ್ತಾ ಮೌನದಿಂದ ಪ್ರಪಂಚವನ್ನು ಸುತ್ತುತ್ತಿದ್ದರು.

೧೮೯. ಅವರು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಅವರಿಗೆ ಯೋಗಿಗಳೆಂಬ ಹೆಸರು ಮಾತ್ರವಿತ್ತು. ಆದರೆ ಜ್ಞಾನಿಗಳಾಗಿಯೂ ಸಂದೇಹರಹಿತರಾಗಿಯೂ ಪರಮಾತ್ಮನನ್ನು ತಿಳಿದವರಾಗಿಯೂ ಇದ್ದರು.

೧೯೦-೧೯೧. ನಿನ್ನ ಹಿಂದಿನ ಎಂಟನೆಯ ಜನ್ಮದಲ್ಲಿ ನೀನಿದ್ದಾಗ ಮಧ್ಯದೇಶದಿಂದ ನಿನ್ನ ಮನೆಗೆ ಮೇಲೆ ಹೇಳಿದ ಯತಿಗಳು ಬಂದರು.

ಗೇಹಂ ತಾ ವಕಮಾಜಗ್ಮುಃ ಮಧ್ಯಾಹ್ನೇಕ್ಷುತ್ಪಿಪಾಸಿತಾಃ।
ವೈಶ್ವದೇವಾಂತರೇ ಕಾಲೇ ತ್ವಯಾ ದೃಷ್ಟಾ ಗೃಹಾಂಗಣೇ ॥೧೯೧॥
ಸಗದ್ಗದಂ ಸಾಶ್ರುನೇತ್ರಂ ಸಹರ್ಷಂ ಚ ಸಸಂಭ್ರಮಂ।
ದಂಡವತ್ಪ್ರಣಿಪಾತೇನ ಬಹುಮಾನಪುರಸ್ಸರಂ ॥೧೯೨॥
ಪ್ರಣಮ್ಯ ಚರಣೌ ಮೂರ್ಧ್ನಾ ಕೃತ್ವಾ ಪಾಣಿಯುಗಾಂಜಲಿಂ।
ತದಾಭಿನಂದಿತಾಸ್ಸರ್ವೇ ತ್ವಯಾ ಸೂನೃತಯಾ ಗಿರಾ ॥೧೯೩॥
ಅದ್ಯಮೇ ಸಫಲಂ ಜನ್ಮ ಜೀವಿತಂ ಸಫಲಂ ತಥಾ।
ಅದ್ಯ ವಿಷ್ಣುಃ ಪ್ರಸನ್ನೋ ಮೇ ಸನಾಥೋಽದ್ಯಾಸ್ಮಿ ಪಾವನಃ॥೧೯೪॥
ಧನ್ಯೋಽಸ್ಮ್ಯದ್ಯ ಗೃಹಂ ಧನ್ಯಂ ಧನ್ಯಾಅದ್ಯ ಕುಟುಂಬಿನಃ।
ಧನ್ಯಾದ್ಯ ಪಿತರೋ ಧನ್ಯಾಃ ಧನ್ಯಾ ಗಾವಃ ಶ್ರುತಂ ಧನಂ ॥೧೯೫॥
ಯದ್ದೃಷ್ಟೌ ಭವತಾಂ ಪಾದೌ ತಾಪತ್ರಯಹೃತೌ ಮಯಾ।
ಭವತಾಂ ದರ್ಶನಂ ಯಸ್ಮಾದ್ಧನ್ಯೋಽಸ್ಮ್ಯೇವ ಹರೇರಿವ ॥೧೯೬॥

---

ವೈಶ್ವದೇವಕಾಲದಲ್ಲಿ ನೀನು ಅವರು ಮನೆಯ ಅಂಗಳದಲ್ಲಿ ಇರುವುದನ್ನು ಕಂಡೆ.

೧೯೨–೧೯೩. ಆಗ ನೀನು ಹರ್ಷದಿಂದ ಕಣ್ಣೀರುಬಿಡುತ್ತ ಗದ್ಗದ ಧ್ವನಿಯಿಂದ ಸಂಭ್ರಮದಿಂದ ಮಾತನಾಡಿಸಿ ಭೂಮಿಯಲ್ಲಿ ಶಿರಸ್ಸಿನಿಂದ ಸಾಷ್ಟಾಂಗಪ್ರಣಾಮಮಾಡಿ ಎರಡು ಕೈಯನ್ನೂ ಜೋಡಿಸಿ ಆ ಯತಿಗಳನ್ನು ಗೌರವಿಸಿದೆ.

೧೯೪–೧೯೬. ಈಗ ನನ್ನ ಜನ್ಮವು ಸಫಲವಾಯಿತು. ಜೀವಮಾನವೂ ಸಾರ್ಥಕವಾಯಿತು. ಈಗ ವಿಷ್ಣುವು ಪ್ರಸನ್ನನಾದನು. ನಾನು ಸನಾಥನಾದೆನು. ನನ್ನ ಜನ್ಮವು ಸಾರ್ಥಕವಾಯಿತು. ಈಗ ನನ್ನ ಮನೆ, ನಾನು, ನನ್ನ ಕುಟುಂಬದವರು ನನ್ನ ಪಿತೃಗಳೂ ಧನ್ಯರಾದೆವು ನನ್ನ ವಿದ್ಯೆ, ನನ್ನ ಧನ, ಇವೆಲ್ಲವೂ ಕೂಡ ತಾಪತ್ರಯನಾಶಕವಾದ ತಮ್ಮ ಪಾದದರ್ಶನದಿಂದ ಭಕ್ತನಿಗೆ ವಿಷ್ಣುದರ್ಶನನಾದಂತೆಪಾವನನಾಯಿತು.

ಏವಂ ಸಂಪೂಜ್ಯ ಕೃತ್ವಾ ತು ಪಾದಪ್ರಕ್ಷಾಳನಂ ತಥಾ ।
ಧೃತಂ ಮೂರ್ಧ್ನಿ ವಿಶಾಂ ಶ್ರೇಷ್ಠ ಶ್ರದ್ಧಯಾ ಪರಯಾ ಮುದಾ ॥
ಯತ್ರ ಪಾದೋದಕಂ ವೈಶ್ಯ ಶ್ರದ್ಧಯಾ ಶಿರಸಾಧೃತಂ ।
ಗಂಧಪುಷ್ಪಾಕ್ಷತೈರ್ಧೂಪೈರ್ದೀಪೈರ್ಭಾವಪುರಸ್ಸರೈಃ ॥೧೯೮॥
ಸಂಪೂಜ್ಯ ಸುಂದರಾನ್ನೇನ ಭೋಜಿತಾ ಯತಯಸ್ತಥಾ ।
ತೃಪ್ತಾಃ ಪರಮಹಂಸಾಸ್ತೇ ವಿಶ್ರಾಂತಾ ಮಂದಿರೇ ನಿಶಿ ॥೧೯೯॥
ಧ್ಯಾಯಂತಶ್ಚ ಪರಂ ಬ್ರಹ್ಮ ಯಜ್ಜ್ಯೋತಿರ್ಜ್ಯೋತಿಷಾಂ ಮತಂ ।
ತೇಷಾಮಾತಿಥ್ಯಜಂ ಪುಣ್ಯಂ ಜಾತಂ ಯತ್ತೇ ವಿಶಾಂ ವರ ।
ನ ತದ್ವಕ್ತ್ರಸಹಸ್ರೇಣ ವಕ್ತುಂ ಶಕ್ನೋಮ್ಯಹಂ ಖಲು ॥೨೦೦॥
ಭೂತಾನಾಂ ಪ್ರಾಣಿನಶ್ಶ್ರೇಷ್ಠಾಃ ಪ್ರಾಣಿನಾಂ ಮತಿಜೀವಿನಃ ।
ಮತಿಮತ್ಸು ನರಾಶ್ಶ್ರೇಷ್ಠಾಃ ನರೇಷು ಬ್ರಹ್ಮಜಾತಯಃ ॥೨೦೧॥

---

೧೯೭. ಹೇ ವೈಶ್ಯನೇ, ಈ ರೀತಿಯಾಗಿ ಶ್ರದ್ಧೆಯಿಂದಲೂ ಸಂತೋಷದಿಂದಲೂ ಆ ಯತಿಗಳಿಗೆ ನೀನು ಕಾಲುತೊಳೆದು ಅ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದೆ.

೧೯೮–೧೯೯. ಎಲೈ ವೈಶ್ಯನೇ, ನೀನು ಯತಿಗಳ ಚರಣತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿದಮೇಲೆ ಗಂಧ, ಪುಷ್ಪ, ಧೂಪ, ದೀಪಾದಿಗಳಿಂದ ಪೂಜಿಸಿ ಉತ್ತಮವಾದ ಅನ್ನಗಳಿಂದ ಅವರಿಗೆ ಊಟಮಾಡಿಸಿ ತೃಪ್ತಿಯನ್ನುಂಟುಮಾಡಿದೆ. ಅವರು ಅದರಿಂದ ತೃಪ್ತರಾಗಿ ಆ ರಾತ್ರಿ ನಿನ್ನ ಮನೆಯಲ್ಲಿ ವಿಶ್ರಮಿಸಿಕೊಂಡು ಪರಂಜ್ಯೋತಿಯಾದ ಪರಬ್ರಹ್ಮವನ್ನು ಧ್ಯಾನಿಸುತ್ತಿದ್ದರು.

೨೦೦. ಹೇ ವೈಶ್ಯನೇ: ಅವರ ಆತಿಥ್ಯದಿಂದುಂಟಾದ ಪುಣ್ಯವನ್ನು ಸಾವಿರ ಮುಖಗಳಿಂದಲೂ ಹೇಳಲು ನಾನು ಶಕ್ತನಲ್ಲ.

೨೦೧–೨೦೨. ಚರಾಚರಗಳಲ್ಲಿ ಪ್ರಾಣಿಗಳು ಶ್ರೇಷ್ಠವಾದುವು. ಆ ಪ್ರಾಣಿಗಳಲ್ಲಿ ಬುದ್ಧಿಯಿಂದ ಜೀವಿಸತಕ್ಕವು ವುತ್ತಮವು. ಬುದ್ಧಿಶಕ್ತಿ ಉಳ್ಳವುಗಳಲ್ಲಿ ಮನುಷ್ಯರು ಶ್ರೇಷ್ಠರು. ಆ ಮನುಷ್ಯರಲ್ಲಿ ಬ್ರಾಹ್ಮಣರು

ಬ್ರಾಹ್ಮಣೇಷು ಚ ವಿದ್ವಾಂಸಃ ವಿದ್ವತ್ಸು ಕೃತಬುದ್ಧಯಃ।
ಕೃತಬುದ್ಧಿಷು ಕರ್ತಾರಃ ಕರ್ತೃಷು ಬ್ರಹ್ಮವೇದಿನಃ ॥೨೦೨॥

ಅತ ಏವ ಸುಪೂಜ್ಯಾಸ್ತೇ ತಸ್ಮಾಚ್ಛ್ರೇಷ್ಠಾ ಜಗತ್ತ್ರಯೇ।
ತತ್ಸಂಗತಿರ್ವಿಶಾಂ ಶ್ರೇಷ್ಠ ಮಹಾಪಾತಕ ನಾಶಿನಿ ॥೨೦೩॥

ವಿಶ್ರಾಂತಾ ಗೃಹಿಣೋ ಗೇಹೇ ಸಂತುಷ್ಟಾ ಬ್ರಹ್ಮವೇದಿನಃ।
ಆಜನ್ಮ ಸಂಚಿತಂ ಪಾಪಂ ನಾಶಯಂತಿ ಕ್ಷಣೇನ ವೈ ॥೨೦೪॥

ಸಂಚಿತಂ ಯದ್ಗೃಹಸ್ಥಸ್ಯ ಪಾಪಮಾಮರಣಾಂತಿಕಂ।
ವಿನಿರ್ದಹತಿ ತತ್ಸರ್ವಂ ಏಕರಾತ್ರೋಷಿತೋ ಯತಿಃ ॥೨೦೫॥

ಸ್ವಭ್ರಾತ್ರೇ ದೇಹಿ ತತ್ಪುಣ್ಯಂ ನರಕಾದ್ಯೇನ ಮುಚ್ಯತೇ।
ಇತಿ ದೂತವಚಶ್ಶ್ರುತ್ವಾ ದತ್ವಾ ಪುಣ್ಯಂ ಸ ಸತ್ವರಂ॥
ಹೃಷ್ಟೇನ ಚೇತಸಾ ಭ್ರಾತ್ರಾ ನಿರಯಾತ್ಸೋಽಪಿ ನಿರ್ಗತಃ ॥೨೦೬॥

---

ಶ್ರೇಷ್ಠರು. ಆ ಬ್ರಾಹ್ಮಣರಲ್ಲಿ ವಿದ್ವಾಂಸರು ಇನ್ನೂ ಶ್ರೇಷ್ಠರು. ಆ ವಿದ್ವಾಂಸರಲ್ಲಿ ಪರಿಪಕ್ವವಾದ ಜ್ಞಾನಿಗಳು ಉತ್ತಮರು. ಅವರಲ್ಲಿ ಯಥಾಶಾಸ್ತ್ರವಾಗಿ ಆಚರಣೆ ಮಾಡುವವರು ಅಧಿಕರು. ಅವರಲ್ಲಿಯೂ ಬ್ರಹ್ಮಜ್ಞಾನಿಗಳು ಉತ್ತಮೋತ್ತಮರು.

೨೦೩. ಎಲೈ ವೈಶ್ಯಶ್ರೇಷ್ಠನೇ, ಮೂರುಲೋಕದಲ್ಲಿಯೂ ಅವರು ಶ್ರೇಷ್ಠರು. ಅವರ ಸಹವಾಸವು ಮಹಾಪಾಪವನ್ನು ನಾಶಮಾಡತಕ್ಕದ್ದು.

೨೦೪. ಬ್ರಹ್ಮವೇತ್ತರು ಸಂತೋಷದಿಂದ ಗೃಹಸ್ಥನ ಮನೆಯಲ್ಲಿ ವಿಶ್ರಾಂತಿಯನ್ನು ಪಡೆದರೆ ಕ್ಷಣಕಾಲದಲ್ಲಿ ಅವನ ಜನ್ಮದಲ್ಲಿ ಉಂಟಾದ ಪಾಪವನ್ನು ನಾಶಮಾಡುತ್ತಾರೆ.

೨೦೫. ಒಂದು ರಾತ್ರಿ ಯತಿಯು ಗೃಹಸ್ಥನಮನೆಯಲ್ಲಿ ವಿಶ್ರಾಂತಿ ಪಡೆದರೆ ಆ ಯಜಮಾನನು ಮರಣಪರ್ಯಂತವೂ ಮಾಡಿದ ಪಾಪ ವನ್ನು ನಾಶಪಡಿಸುತ್ತಾನೆ.

೨೦೬. ಇಂಥ ಮಹತ್ತರವಾದ ಪುಣ್ಯವನ್ನು ನಿನ್ನ ಸೋದರನಿಗೆ ಕೊಟ್ಟರೆ ನರಕದಿಂದ ಬಿಡಲ್ಪಡುತ್ತಾನೆಂದು ಯಮದೂತನು ವಿಕುಂಡಲ ನಿಗೆ ಹೇಳಲು ಆ ವೈಶ್ಯನು ಜಾಗ್ರತೆಯಾಗಿ ಪುಣ್ಯವನ್ನು ಕೊಟ್ಟನು. ಆಮೇಲೆ ಅವನ ಸಹೋದರನು ಸಂತೋಷಗೊಂಡು ನರಕದಿಂದ ಹೊರಗೆ ಬಂದನು.

ದೇವೈಸ್ತೌ ಪುಷ್ಪವರ್ಷೇಣ ಪೂಜಿತೌ ಚ ದಿವಂ ಗತೌ ।
ತಾಭ್ಯಾಂ ಸಂಪೂಜಿತಸ್ಸಮ್ಯಗ್ಗತೋ ದೂತೋ ಯಥಾಗತಃ ॥೨೦೭॥

ಅಖಿಲಭುವನಬೋಧಂ ದೇವದೂತಸ್ಯ ವಾಕ್ಯಂ
ನಿಗಮವಚನತುಲ್ಯಂ ವೈಶ್ಯಪುತ್ರೋ ನಿಶಮ್ಯ ।
ಸ್ವಕೃತಸುಕೃತದಾನಾದ್ಭ್ರಾತರಂ ತಾರಯಿತ್ವಾ
ಸುರಪತಿವರಲೋಕಂ ತೇನ ಸಾರ್ಧಂ ಜಗಾಮ ॥೨೦೮॥

ಇತಿ ಹಾಸಮಿಮಂ ರಾಜನ್ ಯಃ ಪಠೇಚ್ಛೃಣುಯಾದಪಿ ।
ಸ ಗೋಸಹಸ್ರದಾನಸ್ಯ ವಿಶೋಕೋ ಲಭತೇ ಫಲಂ ॥೨೦೯॥

ಶ್ರೀ ಇತಿ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕತ್ರಿಂಶೋಽಧ್ಯಾಯಃ

---

೨೦೭. ಆ ಇಬ್ಬರು ವೈಶ್ಯರೂ ದೇವತೆಗಳ ಪುಷ್ಪವೃಷ್ಟಿಯಿಂದ ಪೂಜಿತರಾಗಿ ದೇವಲೋಕಕ್ಕೆ ಹೊದರು. ಅನಂತರ ವೈಶ್ಯರಿಂದ ಪೂಜಿತನಾದ ದೇವದೂತನೂ ಹೊರಟು ಹೋದನು.

೨೦೮. ಪ್ರಪಂಚಕ್ಕೆ ಜ್ಞಾನೋದಯವನ್ನುಂಟುಮಾಡುವ ವೇದಕ್ಕೆ ಸಮಾನವಾದ ದೇವದೂತನ ಮಾತನ್ನು ಕೇಳಿ ವೈಶ್ಯನು ತನ್ನ ಹಿಂದಿನ ಜನ್ಮದ ಪುಣ್ಯದ ದೆಸೆಯಿಂದ ಭ್ರಾತೃವನ್ನು ಉದ್ಧಾರಮಾಡಿ ಅವನೊಡನೆ ದೇವಲೋಕವನ್ನು ಸೇರಿದನು.

೨೦೯. ಹೇ ರಾಜನೇ ಈ ಕಥೆಯನ್ನು ಹೇಳಿದವನೂ ಕೇಳಿದವನೂ ದುಃಖರಹಿತನಾಗಿ ಸಹಸ್ರ ಗೋದಾನದ ಫಲವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದ್ವಾತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ತತೋಗಚ್ಛೇತ ರಾಜೇಂದ್ರ ಸುಗಂಧಂಲೋಕವಿಶ್ರುತಂ ।
ಸರ್ವಪಾಪವಿಶುದ್ಧಾತ್ಮಾ ಬ್ರಹ್ಮಲೋಕೇ ಮಹೀಯತೇ ॥ ೧ ॥

ರುದ್ರಾವರ್ತಂ ತತೋಗಚ್ಛೇತ್ತೀರ್ಥಸೇವೀ ನರಾಧಿಪ ।
ತತ್ರಸ್ನಾತ್ವಾ ನರೋ ರಾಜನ್ ಸ್ವರ್ಗಲೋಕೇ ಮಹೀಯತೇ ॥ ೨ ॥

ಗಂಗಾಯಾಶ್ಚ ನರಶ್ರೇಷ್ಠ ಸರಸ್ವತ್ಯಾಶ್ಚ ಸಂಗಮೇ ।
ಸ್ನಾತೋಽಶ್ವಮೇಧಮಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೩ ॥

---

೧. ನಾರದರು ಹೇಳುತ್ತಾರೆ: ಅನಂತರ ಲೋಕಪ್ರಸಿದ್ಧವಾದ ಸುಗಂಧವೆಂಬ ಸ್ಥಳಕ್ಕೆ ಹೋಗಬೇಕು. ಎಲ್ಲಾ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೨. ತೀರ್ಥಯಾತ್ರೆ ಮಾಡುವವನು ಅನಂತರ ರುದ್ರಾವರ್ತಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೩. ಗಂಗಾಸರಸ್ವತೀ ನದಿಗಳ ಸಂಗಮದಲ್ಲಿ ಸ್ನಾನಮಾಡಿದರೆ ಅಶ್ವಮೇಧಯಾಗದ ಫಲವನ್ನು ಹೊಂದಿ ಸ್ವರ್ಗಲೋಕವನ್ನು ಸೇರುತ್ತಾನೆ.

ತತ್ರ ಕರ್ಣಹ್ರದೇ ಸ್ನಾತ್ವಾ ದೇವಮಭ್ಯರ್ಚ್ಯ ಶಂಕರಂ ।
ನ ದುರ್ಗತಿಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೪ ॥

ತತಃ ಕುಬ್ಜಾಮ್ರಕಂ ಗಚ್ಛೇತ್ತೀರ್ಥಸೇವೀ ಯಥಾಕ್ರಮಂ ।
ಗೋಸಹಸ್ರಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೫ ॥

ಅರುಂಧತೀವಟಂ ಗಚ್ಛೇತ್ತೀರ್ಥಸೇವೀ ನರಾಧಿಪ ।
ಸಾಮುದ್ರಕಮುಪಸ್ಪೃಶ್ಯ ತ್ರಿರಾತ್ರೋಪೋಷಿತೋ ನರಃ ।
ಗೋಸಹಸ್ರಫಲಂ ವಿಂದ್ಯಾತ್ಸ್ವರ್ಗಲೋಕಂ ಚ ಗಚ್ಛತಿ ॥ ೬ ॥

ಬ್ರಹ್ಮಾವರ್ತಂ ತತೋ ಗಚ್ಛೇದ್ಬ್ರಹ್ಮಚಾರೀ ಸಮಾಹಿತಃ ।
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೭ ॥

ಯಮುನಾಪ್ರಭವಂ ಗಚ್ಛೇತ್ಸಮುಪಸ್ಪೃಶ್ಯ ಯಾಮುನಂ ।
ಅಶ್ವಮೇಧಫಲಂ ಲಬ್ಧ್ವಾ ಬ್ರಹ್ಮಲೋಕೇ ಮಹೀಯತೇ ॥ ೮ ॥

---

೪. ಅಲ್ಲಿರುವ ಕರ್ಣಗ್ರದವೆಂಬ ತೀರ್ಥದಲ್ಲಿ ಸ್ನಾನಮಾಡಿ ಶಿವನನ್ನು ಪೂಜಿಸಿದರೆ ಅವನಿಗೆ ನರಕಭಯವಿಲ್ಲದೆ ಸ್ವರ್ಗವನ್ನು ಸೇರುತ್ತಾನೆ.

೫. ಆಮೇಲೆ ಕುಬ್ಜಾಮ್ರಕ ಕ್ಷೇತ್ರದಲ್ಲಿ ಸ್ನಾನಮಾಡಿದರೆ ಅನೇಕ ಗೋವುಗಳನ್ನು ಹೊಂದುತ್ತಾನೆ. ಸ್ವರ್ಗವೂ ಲಭಿಸುವುದು.

೬. ಎಲೈ ರಾಜನೇ, ಅರುಂಧತೀವಟವೆಂಬ ಸ್ಥಳಕ್ಕೆ ಹೋಗಿ ಅಲ್ಲಿ ಸಾಮುದ್ರಕವೆಂಬ ತೀರ್ಥದಲ್ಲಿ ಸ್ನಾನಮಾಡಿ ಮೂರು ದಿವಸ ಉಪವಾಸ ವಿದ್ದರೆ ಸಹಸ್ರಗೋವುಗಳನ್ನು ದಾನಮಾಡಿದ ಫಲವನ್ನು ಹೊಂದುವನು ಸ್ವರ್ಗಲೋಕವನ್ನು ಸೇರುತ್ತಾನೆ.

೭. ಜಿತೇಂದ್ರಿಯನಾಗಿ ಬ್ರಹ್ಮಾವರ್ತಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿದರೆ ಅಶ್ವಮೇಧ ಫಲವನ್ನು ಹೊಂದಿ ಸ್ವರ್ಗಲೋಕವನ್ನು ಸೇರುತ್ತಾನೆ.

೮. ಯಮುನಾಮೂಲವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನ ಮಾಡಿದರೆ ಅಶ್ವಮೇಧ ಫಲವು ಲಭಿಸುವುದು. ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

ದರ್ವೀಸಂಕ್ರಮಣಂ ಪ್ರಾಪ್ಯ ತೀರ್ಥಂ ತ್ರೈಲೋಕ್ಯ ವಿಶ್ರುತಂ ।
ಅಶ್ವಮೇಧಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೯ ॥

ಸಿಂಧೋಶ್ಚ ಪ್ರಭವಂ ಗತ್ವಾ ಸಿದ್ಧಗಂಧರ್ವಸೇವಿತಂ ।
ತತ್ರೋಷ್ಯ ರಜನೀಂ ಪಂಚ ದದ್ಯಾದ್ಬಹುಸುವರ್ಣಕಂ ॥೧೦॥

ಅಥ ದೇವೀಂ ಸಮಾಸಾದ್ಯ ನರಃ ಪರಮದುರ್ಗಮಾಂ ।
ಅಶ್ವಮೇಧಮವಾಪ್ನೋತಿ ಗಚ್ಛೇಚ್ಛೌಶನಸೀಂಗತಿಂ ॥೧೧॥

ಋಷಿಕುಲ್ಯಾಂ ಸಮಾಸಾದ್ಯ ವಸಿಷ್ಠಂ ಚೈವಭಾರತಂ ।
ವಸಿಷ್ಠಂ ಸಮತಿಕ್ರಮ್ಯ ಸರ್ವೇ ವರ್ಣಾ ದ್ವಿಜಾತಯಃ ॥೧೨॥

ಋಷಿಕುಲ್ಯಾಂ ನರಸ್ಸ್ನಾತ್ವಾ ಋಷಿಲೋಕಂ ಪ್ರಪದ್ಯತೇ ।
ಯದಿ ತತ್ರ ವಸೇನ್ಮಾಸಂ ಶಾಕಾಹಾರೋ ನರಾಧಿಪ ॥೧೩॥

---

೯. ಮೂರು ಲೋಕದಲ್ಲಿ ಪ್ರಸಿದ್ಧವಾದ ದರ್ವೀಸಂಕ್ರಮಣ ವೆಂಬ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಅಶ್ವಮೇಧಯಾಗಫಲವು ಬರುವುದು. ಸ್ವರ್ಗವನ್ನೂ ಸೇರುತ್ತಾನೆ.

೧೦–೧೧. ಸಿದ್ಧರಿಂದಲೂ ಗಂಧರ್ವರಿಂದಲೂ ಸೇವಿಸಲ್ಪಡುವ ಸಿಂಧುಮೂಲಕ್ಕೆ ಹೋಗಬೇಕು. ಅಲ್ಲಿ ಐದುರಾತ್ರಿಗಳಿದ್ದು ಅನೇಕವಾಗಿ ಸುವರ್ಣವನ್ನು ದಾನಮಾಬೇಕು. ಅನಂತರ ಅಲ್ಲಿರುವ ದೇವಿಯನ್ನು ಪೂಜಿಸಿದರೆ ಅಶ್ವಮೇಧಯಾಗ ಮಾಡಿದ ಫಲವು ಲಭಿಸುತ್ತದೆ. ಶುಕ್ರ ಗ್ರಹದಲೋಕವನ್ನೂ ಹೊಂದುತ್ತಾನೆ.

೧೨–೧೩. ಋಷಿಕುಲ್ಯವೆಂಬ ಸ್ಥಳಕ್ಕೆ ಹೋಗಿ ಅಲ್ಲಿರುವ ವಸಿಷ್ಠ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ವಸಿಷ್ಠನಿಗಿಂತಲೂ ಉತ್ತಮನಾದ ದ್ವಿಜನಾಗುವನು. ಅಲ್ಲಿಯೇ ಶಾಕಾಹಾರಿಯಾಗಿ ಒಂದು ತಿಂಗಳು ಪರ್ಯಂತ ಋಷಿಕುಲ್ಯೆಯಲ್ಲಿ ಸ್ನಾನಮಾಡುತ್ತಿದ್ದರೆ ಋಷಿಲೋಕವನ್ನು ಹೊಂದುತ್ತಾನೆ.

ಭೃಗುತುಂದಂ ಸಮಾಸಾದ್ಯ ವಾಜಿಮೇಧಫಲಂ ಲಭೇತ್ ।
ಗತ್ವಾವೀರಪ್ರಮೋಕ್ಷಂಚ ಸರ್ವಪಾಪೈಃ ಪ್ರಮುಚ್ಯತೇ ॥೧೪॥
ಕೃತ್ತಿಕಾಮಘಯೋಶ್ಚೈವ ತೀರ್ಥಮಾಸಾದ್ಯ ದುರ್ಲಭಂ ।
ಅಗ್ನಿಷ್ಟೋಮಾತಿರಾತ್ರಾಭ್ಯಾಂ ಫಲಂ ಪ್ರಾಪ್ನೋತಿ ಪುಣ್ಯಕೃತ್ ॥೧೫॥
ತತಸ್ಸಂಧ್ಯಾಂ ಸಮಾಸಾದ್ಯ ವಿದ್ಯಾತೀರ್ಥಮನುತ್ತಮಂ ।
ಉಪಸ್ಪೃಶೇತ್ಸವಿದ್ಯಾನಾಂ ಸರ್ವಾಸಾಂ ಪರಮೋ ಭವೇತ್ ॥೧೬॥
ಮಹಾಶ್ರಮೇ ವಸೇದ್ರಾತ್ರಿಂ ಸರ್ವಪಾಪಪ್ರಮೋಚನೇ ।
ಏಕಕಾಲಂ ನಿರಾಹಾರೋ ಲೋಕಾನ್ಸಂವಸತೇ ಶುಭಾನ್ ॥೧೭॥
ಷಷ್ಠಕಾಲೋಪವಾಸೇನ ಮಾಸಂ ಪ್ರೋಷ್ಯ ಮಹಾಲಯೇ ।
ತೀರ್ಥಸ್ತಾರಯತೇ ಜಂತೂನ್ ದಶಪೂರ್ವಾನ್ದಶಾವರಾನ್ ॥೧೮॥

---

೧೪. ಭೃಗುತುಂದದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವು ಲಭಿಸುತ್ತದೆ. ಆಮೇಲೆ ವೀರಪ್ರಮೋಕ್ಷದಲ್ಲಿ ಸ್ನಾನಮಾಡಿದರೆ ಸರ್ವ ಪಾಪವೂ ನಾಶವಾಗುತ್ತದೆ.

೧೫. ಕೃತ್ತಿಕಾ, ಮಘ, ನಕ್ಷತ್ರಗಳಲ್ಲಿ ತೀರ್ಥಸ್ನಾನಮಾಡಿದರೆ ಅಗ್ನಿಷ್ಟೋಮ, ಅತಿರಾತ್ರವೆಂಬ ಯಾಗಗಳ ಫಲವನ್ನು ಹೊಂದು ತ್ತಾನೆ.

೧೬. ಆಮೇಲೆ ಸಂಧ್ಯಾನಾಮಕ ಕ್ಷೇತ್ರದಲ್ಲಿ ವಿದ್ಯಾತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಎಲ್ಲಾ ವಿದ್ಯೆಗಳನ್ನೂ ಹೊಂದಿ ಉತ್ಕೃಷ್ಟ ನಾಗುತ್ತಾನೆ.

೧೭. ಮಹಾಶ್ರಮವೆಂಬ ಸ್ಥಳದಲ್ಲಿ ಒಂದು ರಾತ್ರಿ ವಾಸಮಾಡಿ ದರೆ ಸಮಸ್ತ ಪಾಪವೂ ಹೋಗುವುದು. ಒಂದು ಹೊತ್ತು ನಿರಾಹಾರಿ ಯಾಗಿದ್ದರೂ ಒಳ್ಳೆಯ ಲೋಕಗಳನ್ನು ಹೊಂದುವನು.

೧೮. ಆರು ದಿನಕ್ಕೆ ಒಂದು ಬಾರಿ ಭುಜಿಸುತ್ತಾ ಒಂದು ತಿಂಗಳು ಮಹಾಲಯಕ್ಷೇತ್ರದಲ್ಲಿದ್ದರೆ ಆ ತೀರ್ಥಸೇವೆಯು ಹಿಂದಿನ ಮುಂದಿನ ಹತ್ತು ತಲೆಗಳನ್ನು ಉದ್ಧಾರಮಾಡುವುದು.

ದೃಷ್ಟ್ವಾ ಮಹೇಶ್ವರಂ ಪುಣ್ಯಂ ಪರಂ ಸುರನಮಸ್ಕೃತಂ ।
ಕೃತಾರ್ಥಸ್ಸರ್ವಕೃತ್ಯೇಷು ನ ಶೋಚೇನ್ಮರಣಂ ಕ್ವಚಿತ್ ॥೧೯॥

ಸರ್ವಪಾಪ ವಿಶುದ್ಧಾತ್ಮಾ ವಿಂದ್ಯಾದ್ಬಹುಸುವರ್ಣಕಂ ।
ಅಥವೇತಸಿಕಾಂ ಗಚ್ಛೇತ್ಪಿತಾಮಹ ನಿಷೇವಿತಂ ।
ಅಶ್ವಮೇಧಮವಾಪ್ನೋತಿ ಗತಿಂ ಚ ಪರಮಾಂವ್ರಜೇತ್ ॥೨೦॥

ಅಥ ಸುಂದರಿಕಾಂ ತೀರ್ಥಂ ಪ್ರಾಪ್ಯ ಸಿದ್ಧನಿಷೇವಿತಂ ।
ತತ್ರ ನಿತ್ಯಂ ನಿವಸತಿ ಬ್ರಹ್ಮಾದೇವಗಣೈಸ್ಸಹ ॥೨೧॥

ತತೋ ಬ್ರಾಹ್ಮಣಿಕಾಂ ಗತ್ವಾ ಬ್ರಹ್ಮಚಾರೀ ಸಮಾಹಿತಃ ।
ಪದ್ಮವರ್ಣೇನ ಯಾನೇನ ಬ್ರಹ್ಮಲೋಕಂ ಪ್ರಪದ್ಯತೇ ॥೨೨॥

ತತಶ್ಚ ನೈಮಿಶಂ ಗಚ್ಛೇತ್ಪುಣ್ಯಂ ದ್ವಿಜನಿಷೇವಿತಂ ।
ತತ್ರ ನಿತ್ಯಂ ನಿವಸತಿ ಬ್ರಹ್ಮಾ ದೇವಗಣೈಸ್ಸಹ ॥೨೩॥

---

೧೯. ದೇವಾದಿಗಳಿಂದ ನಮಸ್ಕರಿಸಲ್ಪಟ್ಟ ಮಹೇಶ್ವರನ ದರ್ಶನವನ್ನು ಮಾಡಿದರೆ ಎಲ್ಲಾ ಕೆಲಸಗಳಲ್ಲಿಯೂ ಜಯಶೀಲನಾಗಿ ಪುನರ್ಜನ್ಮವಿಲ್ಲದೇ ಇರುವನು. ಎಲ್ಲಾ ಪಾಪಗಳಿಂದ ಬಿಡಲ್ಪಟ್ಟು ಐಶ್ವರ್ಯವಂತನಾಗುವನು.

೨೦. ಬ್ರಹ್ಮನಿಂದ ಸೇವಿತವಾದ ವೇತಸಿಕವೆಂಬ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಅಶ್ವಮೇಧಯಾಗದ ಫಲವು ಬರುವುದು. ಉತ್ತಮವಾದ ಗತಿಯೂ ಪ್ರಾಪ್ತವಾಗುವುದು.

೨೧. ಆಮೇಲೆ ಸಿದ್ಧರಿಂದ ಸೇವಿತವಾದ ಸುಂದರಿಕಾತೀರ್ಥಕ್ಕೆ ಹೋಗಬೇಕು. ಅದು ನಿತ್ಯವೂ ದೇವತೆಗಳಿಂದ ಕೂಡಿದ ಬ್ರಹ್ಮನಿಂದ ಸೇವಿಸಲ್ಪಡುವುದು.

೨೨. ಬ್ರಾಹ್ಮಣೀ ಎಂಬ ತೀರ್ಥಕ್ಕೆ ಹೋಗಿ ಅಲ್ಲಿ ಇಂದ್ರಿಯನಿಗ್ರಹವುಳ್ಳವನಾಗಿದ್ದರೆ ಪದ್ಮವರ್ಣದ ಯಾನದಿಂದ ಬ್ರಹ್ಮಲೋಕವನ್ನು ಹೊಂದುತ್ತಾನೆ.

೨೩. ಆಮೇಲೆ ಬ್ರಾಹ್ಮಣಸೇವಿತವಾದ ನೈಮಿಷಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ಸದಾ ದೇವಗಣಗಳಿಂದೊಡಗೂಡಿದ ಬ್ರಹ್ಮನು ಆ ಕ್ಷೇತ್ರದಲ್ಲಿರುವನು.

ನೈಮಿಷಂಪ್ರಾರ್ಥಯಾನಸ್ಯ ಪಾಪಸ್ಯಾರ್ಧಂ ಪ್ರಣಶ್ಯತಿ ।
ಪ್ರವಿಷ್ಟಮಾನಸಸ್ತು ನರಃ ಸರ್ವಪಾಪಾತ್ಪ್ರಮುಚ್ಯತೇ ॥೨೪॥

ತತ್ರ ಮಾಸಂ ವಸೇದ್ಧೀರಃ ನೈಮಿಷೇ ತೀರ್ಥತತ್ಪರಃ ।
ಪೃಥಿವ್ಯಾಂ ಯಾನಿ ತೀರ್ಥಾನಿ ನೈಮಿಷೇ ತಾನಿ ಭಾರತ ॥೨೫॥

ಅಭಿಷೇಕಂ ತತ್ರ ಕೃತ್ವಾ ನಿಯತೋ ನಿಯತಾಶನಃ ।
ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೨೬॥

ಪುನಾತ್ಯಾ ಸಪ್ತಮಂ ಚೈವ ಕುಲಂ ಭರತಸತ್ತಮ ।
ಯಸ್ತ್ಯಜೇನ್ನೈಮಿಷೇ ಪ್ರಾಣಾನುಪವಾಸಪರಾಯಣಃ ॥೨೭॥

ಸಮೋದೇತ್ಸ್ವರ್ಗಲೋಕಸ್ಥಃ ಏವಮಾಹುರ್ಮನೀಷಿಣಃ ।
ನಿತ್ಯಂ ಮೇಧ್ಯಂಚ ಪುಣ್ಯಂ ಚ ನೈಮಿಷಂ ನೃಪಸತ್ತಮ ॥೨೮॥

---

೨೪. ನೈಮಿಷತೀರ್ಥವನ್ನು ಕುರಿತು ಪ್ರಾರ್ಥಿಸಿದರೇನೇ ಮಾನವನ ಅರ್ಧ ಪಾಪವು ನಾಶವಾಗುವುದು. ಆ ಕ್ಷೇತ್ರಕ್ಕೆ ಹೋದ ಕೂಡಲೇ ಸರ್ವಪಾಪಗಳಿಂದಲೂ ಬಿಡಲ್ಪಡುವನು.

೨೫. ತೀರ್ಥಸೇವೆಯನ್ನು ಮಾಡುತ್ತಾ ನೈಮಿಷದಲ್ಲಿ ಒಂದು ತಿಂಗಳು ಇರಬೇಕು. ಭೂಮಿಯಲ್ಲಿರುವ ಸಮಸ್ತ ತೀರ್ಥಗಳೂ ಅಲ್ಲಿರುವುವು.

೨೬. ನಿಯಮವಾದ ಆಹಾರವುಳ್ಳವನಾಗಿ ಅಲ್ಲಿ ಸ್ನಾನಮಾಡಿದರೆ ಮಾನವನು ರಾಜಸೂಯ ಯಾಗದ ಫಲವನ್ನು ಹೊಂದುತ್ತಾನೆ.

೨೭–೨೮. ಉಪವಾಸದಿಂದ ನೈಮಿಷಕ್ಷೇತ್ರದಲ್ಲಿ ಪ್ರಾಣಬಿಟ್ಟರೆ ತನ್ನಿಂದ ಮೇಲಕ್ಕೆ ಏಳು ತಲೆಗಳನ್ನು ಉದ್ಧಾರ ಮಾಡುತ್ತಾನೆ. ಅವನು ಸ್ವರ್ಗವನ್ನು ಸೇರುತ್ತಾನೆ. ನೈಮಿಷವು ಯಾವಾಗಲೂ ಪವಿತ್ರವೂ ಪುಣ್ಯಪ್ರದವೂ ಆದುದು.

ಗಂಗೋದ್ಭೇದಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।
ವಾಜಪೇಯಮವಾಪ್ನೋತಿ ಬ್ರಹ್ಮಭೂತೋ ಭವೇತ್ಸದಾ ॥೨೯॥

ಸರಸ್ವತೀಂ ಸಮಾಸಾದ್ಯ ತರ್ಪಯೇತ್ಪಿತೃದೇವತಾಃ ।
ಸಾರಸ್ವತೇಷು ಲೋಕೇಷು ಮೋದತೇ ನಾತ್ರಸಂಶಯಃ ॥೩೦॥

ತತಶ್ಚ ಬಹುದಾಂ ಗಚ್ಛೇತ್ತೀರ್ಥಸೇವೀ ನರಾಧಿಪ ।
ತತ್ರೋಷ್ಯ ರಜನೀಮೇಕಾಂ ಸ್ವರ್ಗಲೋಕೇ ಮಹೀಯತೇ ॥೩೧॥

ದೇವಸತ್ರಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ।
ತತಶ್ಚ ರಜನೀಂ ಗಚ್ಛೇತ್ಪುಣ್ಯಾಂ ಪುಣ್ಯಜನೈರ್ವೃತಾಂ ।
ಪಿತೃದೇವಾರ್ಚನರತೋ ವಾಜಪೇಯಮವಾಪ್ನುಯಾತ್ ॥೩೨॥

ವಿಮಲಾಶೋಕಮಾಸಾದ್ಯ ವಿರಾಜತಿ ಯಥಾ ಶಶೀ ।
ತತ್ರೋಷ್ಯ ರಜನೀಮೇಕಾಂ ಸ್ವರ್ಗಲೋಕೇ ಮಹೀಯತೇ ॥೩೩॥

---

೨೯. ಗಂಗೋದ್ಭೇದಕ್ಕೆ ಹೋಗಿ ಮನುಜನು ಮೂರುದಿನಗಳು ಉಪವಾಸವಿದ್ದು ಸ್ನಾನಮಾಡಿದರೆ ವಾಜಪೇಯ ಯಾಗದ ಫಲವನ್ನು ಹೊಂದುತ್ತಾನೆ. ಮತ್ತು ಬ್ರಹ್ಮನಲ್ಲಿ ಐಕ್ಯವನ್ನೂ ಹೊಂದುತ್ತಾನೆ.

೩೦. ಆಮೇಲೆ ಸರಸ್ವತೀ ತೀರ್ಥಕ್ಕೆ ಹೋಗಿ ಪಿತೃಗಳಿಗೆ ತರ್ಪಣ ವನ್ನು ಮಾಡಿದರೆ ಸರಸ್ವತೀಲೋಕದಲ್ಲಿ ಸುಖಿಸುತ್ತಾನೆ. ಸಂದೇಹವಿಲ್ಲ.

೩೧. ಹೇ ರಾಜನೇ ! ಅನಂತರ ಬಹುದಾ ಎಂಬ ತೀರ್ಥಕ್ಕೆ ಹೋಗಿ ಒಂದು ರಾತ್ರಿಯಿದ್ದರೆ ಸ್ವರ್ಗಲೋಕದಲ್ಲಿ ಮೆರೆಯುತ್ತಾನೆ. ಮತ್ತು ದೇವಸತ್ರಯಾಗದ ಫಲವನ್ನು ಹೊಂದುವನು.

೩೨. ಆಮೇಲೆ ಪುಣ್ಯಜನಗಳಿಂದ ಸೇವಿತವಾದ ರಜನೀತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನಮಾಡಿ ಪಿತೃಗಳನ್ನು ಪೂಜಿಸಿದರೆ ವಾಜಪೇಯ ಯಾಗದ ಫಲವು ಉಂಟಾಗುವುದು.

೩೩. ವಿಮಲಾತೀರ್ಥಕ್ಕೆ ಹೋಗಿ ಒಂದುರಾತ್ರಿ ವಾಸಮಾಡಿದರೆ ಚಂದ್ರನಂತೆ ಪ್ರಕಾಶಿಸುತ್ತಾ ಸ್ವರ್ಗದಲ್ಲಿ ಬೆಳಗುತ್ತಾನೆ.

ಗೋಪ್ರತಾರಂ ತತೋ ಗಚ್ಛೇತ್ ಸರಯೂ ತೀರ್ಥಮುತ್ತಮಂ ।
ಯತ್ರ ರಾಮೋ ಗತಸ್ಸ್ವರ್ಗಂ ಸಭೃತ್ಯ ಬಲವಾಹನಃ ॥೩೪॥

ದೇಹಂತ್ಯಕ್ತ್ವಾ ಪುರಾರಾಜ್ಞ ತಸ್ಯ ತೀರ್ಥಸ್ಯ ತೇಜಸಾ ।
ರಾಮಸ್ಯ ಚ ಪ್ರಸಾದೇನ ವ್ಯವಸಾಯಾಚ್ಚ ಭಾರತ ॥೩೫॥

ತಸ್ಮಿಂಸ್ತೀರ್ಥೇ ನರಸ್ಸ್ನಾತ್ವಾ ಗೋಪ್ರತಾರೇ ನರಾಧಿಪ ।
ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕೇ ಮಹೀಯತೇ ॥೩೬॥

ರಾಮತೀರ್ಥೇ ನರಸ್ಸ್ನಾತ್ವಾ ಗೋಮತ್ಯಾಂ ಕುರುನಂದನ ।
ಅಶ್ವಮೇಧಮವಾಪ್ನೋತಿ ಪುನಾತಿ ಸ್ವಕುಲಂ ನರಃ ॥೩೭॥

ಶತಸಾಹಸ್ರಕಂ ತತ್ರ ತೀರ್ಥಂ ಭರತಸತ್ತಮ ।
ತತ್ರೋಪಸ್ಪರ್ಶನಂ ಕೃತ್ವಾ ನಿಯತೋ ನಿಯತಾಶನಃ ॥
ಗೋ ಸಹಸ್ರಫಲಂ ಪುಣ್ಯಮಾಪ್ನೋತಿ ಭರತರ್ಷಭ ॥೩೮॥

---

೩೪. ಆಮೇಲೆ ಸರಯೂ ತೀರದಲ್ಲಿರುವ ಗೋಪ್ರತಾರವೆಂಬ ತೀರ್ಥಕ್ಕೆ ಹೋಗಬೇಕು. ಅಲ್ಲಿ ಶ್ರೀರಾಮನು, ಪರಿಚಾರಕರು, ವಾಹನ ಸಹಿತನಾಗಿ ಸ್ವರ್ಗವನ್ನು ಸೇರಿದನು.

೩೫–೩೬. ಎಲೈ ರಾಜನೇ : ಮಾನವನು ಗೋಪ್ರಕಾರದಲ್ಲಿ ಸ್ನಾನ ಮಾಡಿದರೆ ಅದರ ಮಹಿಮೆಯಿಂದಲೂ ಶ್ರೀರಾಮಾನುಗ್ರಹದಿಂದಲೂ ತನ್ನ ಕ್ರಿಯೆಯಿಂದಲೂ ಸರ್ವ ಪಾಪಗಳಿಂದಲೂ ಬಿಡಲ್ಪಟ್ಟು ಸ್ವರ್ಗ ಲೋಕದಲ್ಲಿ ವಿರಾಜಿಸುತ್ತಾನೆ.

೩೭. ರಾಮತೀರ್ಥವಾದ ಗೋಮತಿಯಲ್ಲಿ ಸ್ನಾನಮಾಡಿದರೆ ಅಶ್ವ ಮೇಧಯಾಗದ ಫಲವನ್ನು ಹೊಂದಿ ತನ್ನ ವಂಶವನ್ನು ಪವಿತ್ರ ಗೊಳಿಸುತ್ತಾನೆ.

೩೮. ಎಲೈ ಭರತಕುಲ ಸಂಭೂತನೇ! ನಿಯಮನಿಷ್ಠನಾಗಿ ಶತಸಾ ಹಸ್ರಿಕವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಸಹಸ್ರಗೋ ದಾನ ಮಾಡಿದ ಫಲವನ್ನು ಹೊಂದುತ್ತಾನೆ.

ತತೋ ಗಚ್ಛೇತ ಧರ್ಮಜ್ಞ ಊರ್ಧ್ವಸ್ಥಾನ ಮನುತ್ತಮಂ ।
ಕೋಟಿತೀರ್ಥೇ ನರಸ್ನಾತ್ವಾ ಅರ್ಚಯಿತ್ವಾ ಗುಹಂ ನೃಪ ॥೩೯॥

ಗೋಸಹಸ್ರಫಲಂ ವಿಂದ್ಯಾತ್ತೇಜಸ್ವೀ ಚಾಪಿಜಾಯತೇ ।
ತತೋ ವಾರಾಣಸೀಂ ಗತ್ವಾ ಅರ್ಚಯಿತ್ವಾ ವೃಷಧ್ವಜಂ ॥೪೦॥

ಕಪಿಲಾನಾಂ ಹ್ರದೇ ಸ್ನಾತ್ವಾ ರಾಜಸೂಯಫಲಂ ಲಭೇತ್ ।
ಮಾರ್ಕಂಡೇಯಸ್ಯ ರಾಜೇಂದ್ರ ತೀರ್ಥಮಾಸಾದ್ಯ ದುರ್ಲಭಂ ॥

ಗೋಮತೀ ಗಂಗಯೋಶ್ಚೈವ ಸಂಗಮೇ ಲೋಕವಿಶ್ರುತೇ ।
ಅಗ್ನಿಷ್ಟೋಮ ಮವಾಪ್ನೋತಿ ಕುಲಂಚೈವ ಸಮುದ್ಧರೇತ್ ॥೪೨॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಾತ್ರಿಂಶೋಽಧ್ಯಾಯಃ

---

೩೯. ಅಲ್ಲಿಂದಮುಂದೆ ಊರ್ಧ್ವಸ್ಥಾನಕ್ಕೆ ಹೋಗಿ ಅಲ್ಲಿ ಕೋಟಿ ತೀರ್ಥದಲ್ಲಿ ಸ್ನಾನಮಾಡಿ ಗುಹನನ್ನು ಪೂಜಿಸಿದರೆ ಸಾವಿರ ಗೋದಾನದ ಫಲವನ್ನು ಹೊಂದುತ್ತಾನೆ. ಮನುಷ್ಯನು ತೇಜಸ್ವಿಯೂ ಆಗುವನು.

೪೦. ಆಮೇಲೆ ಕಾಶೀಕ್ಷೇತ್ರಕ್ಕೆ ಹೋಗಿ ಕಪಿಲಾತೀರ್ಥದಲ್ಲಿ ಸ್ನಾನ ಮಾಡಿ ಶಿವನನ್ನು ಪೂಜಿಸಿದರೆ ರಾಜಸೂಯ ಯಜ್ಞದ ಫಲವು ಬರುತ್ತದೆ.

೪೧-೪೨. ಗಂಗಾಗೋಮತೀನದಿಗಳ ಸಂಗಮದಲ್ಲಿರುವ ಮಾರ್ಕಂಡೇಯ ತೀರ್ಥದಲ್ಲಿ ಸ್ನಾನಮಾಡಿದರೆ ಅಗ್ನಿಷ್ಟೋಮದ ಫಲವನ್ನು ಹೊಂದಿ ಕುಲವನ್ನು ಉದ್ಧಾರ ಮಾಡುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ತ್ರಯಸ್ತ್ರಿಂಶೋಽಧ್ಯಾಯಃ

**ಯುಧಿಷ್ಠಿರ ಉವಾಚ**

**ವಾರಾಣಸ್ಯಾಶ್ಚ ಮಾಹಾತ್ಮ್ಯಂ ಸಂಕ್ಷೇಪಾತ್ಕಥಿತಂ ತ್ವಯಾ ।**
**ವಿಸ್ತರೇಣ ಮುನೇ ಬ್ರೂಹಿ ತದಾ ಪ್ರೀಣಾತಿ ಮೇ ಮನಃ ॥ ೧ ॥**

**ನಾರದ ಉವಾಚ**

**ಅತ್ರೇತಿಹಾಸಂ ವಕ್ಷ್ಯಾಮಿ ವಾರಾಣಸ್ಯಾ ಗುಣಾಶ್ರಯಂ ।**
**ಯಸ್ಯ ಶ್ರವಣಮಾತ್ರೇಣ ಮುಚ್ಯತೇ ಬ್ರಹ್ಮಹತ್ಯಯಾ ॥ ೨ ॥**

**ಮೇರುಶೃಂಗೇ ಪುರಾದೇವಮೀಶಾನಂ ತ್ರಿಪುರದ್ವಿಷಂ ।**
**ದಿವ್ಯಾಸನಗತಾದೇವೀ ಮಹಾದೇವಮಪೃಚ್ಛತ ॥ ೩ ॥**

**ದೇವ್ಯುವಾಚ**

**ದೇವದೇವ ಮಹಾದೇವ ಭಕ್ತಾನಾಮಾರ್ತಿನಾಶನ ।**
**ಕಥಂ ತ್ವಾಂ ಪುರುಷೋ ದೇವಂ ಅಚಿರಾದೇವ ಪಶ್ಯತಿ ॥ ೪ ॥**

---

ಪದ್ಮಪುರಾಣದ ಆದಿಖಂಡದ ಮೂವತ್ಮೂರನೆಯ ಅಧ್ಯಾಯವು

೧. ಧರ್ಮರಾಯನು ಹೇಳುತ್ತಾನೆ: ವಾರಣಸೀ ಮಹಿಮೆಯನ್ನು ಸೂಕ್ಷ್ಮವಾಗಿ ಹೇಳಿದೆ. ನನಗೆ ವಿಸ್ತಾರವಾಗಿ ಅದರ ಮಹಿಮೆಯನ್ನು ಹೇಳಿದರೆ ನನ್ನ ಮನಸ್ಸು ಸಂತೋಷಗೊಳ್ಳುತ್ತದೆ.

೨. ನಾರದನು ಹೇಳುತ್ತಾನೆ: ಕಾಶಿಗೆ ಸಂಬಂಧಪಟ್ಟ ಒಂದು ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿದ ಮಾತ್ರದಿಂದಲೇ ಬ್ರಹ್ಮಹತ್ಯೆಯು ನಾಶವಾಗುತ್ತದೆ.

೩. ಪೂರ್ವದಲ್ಲಿ ಮೇರುಪರ್ವತದಲ್ಲಿ ಸುಖಾಸೀನಳಾದ ಪಾರ್ವತಿಯು ತ್ರಿಪುರಾಸುರ ಸಂಹಾರಿಯಾದ ಮಹಾದೇವನನ್ನು ಕೇಳಿದಳು.

೪. ಪಾರ್ವತಿಯು ಕೇಳಿದಳು: ಭಕ್ತರ ತೊಂದರೆಯನ್ನು ನಾಶಮಾಡುವ ಸ್ವಾಮಿಯೇ, ಪುರುಷನು ದೇವನಾದ ನಿನ್ನನ್ನು ಜಾಗ್ರತೆಯಾಗಿ ದರ್ಶನ ಮಾಡುವುದು ಹೇಗೆ?

ಸಾಂಖ್ಯಯೋಗಸ್ತಥಾಧ್ಯಾನಂ ಕರ್ಮಯೋಗೋಥ ವೈದಿಕಃ ।
ಆಯಾಸಬಹುಳಾ ಲೋಕೇ ಯಾನಿ ಚಾನ್ಯಾನಿ ಶಂಕರ ॥೫॥

ಯೇನ ವಿಶ್ರಾಂತಚಿತ್ತಾನಾಂ ಯೋಗಿನಾಂ ಕರ್ಮಿಣಾಮಪಿ ।
ದೃಶ್ಯೋಹಿ ಭಗವಾನ್ಸೂಕ್ಷ್ಮಃ ಸರ್ವೇಷಾಮಥ ದೇಹಿನಾಂ ॥೬॥

ಏತದ್ಗುಹ್ಯತಮಂ ಜ್ಞಾನಂ ಗೂಢಂ ಬ್ರಹ್ಮಾದಿಸೇವಿತಂ ।
ಹಿತಾಯ ಸರ್ವಭೂತಾನಾಂ ಬ್ರೂಹಿ ಕಾಮಾಂಗನಾಶನ ॥೭॥

ಈಶ್ವರ ಉವಾಚ

ಅವಾಚ್ಯಂ ಮಂತ್ರ ವಿಜ್ಞಾನಂ ಜ್ಞಾನಮಜ್ಞೈರ್ಬಹಿಷ್ಕೃತಂ ।
ವಕ್ಷ್ಯೇ ತವ ಯಥಾತತ್ತ್ವಂ ಯದುಕ್ತಂ ಪರಮರ್ಷಿಭಿಃ ॥೮॥

ಪರಂ ಗುಹ್ಯತಮಂ ಕ್ಷೇತ್ರಂ ಮಮ ವಾರಾಣಸೀ ಪುರೀ ।
ಸರ್ವೇಷಾಮೇವ ಭೂತಾನಾಂ ಸಂಸಾರಾರ್ಣವತಾರಿಣೀ ॥೯॥

---

೫–೭. ಎಲೈ ಕಾಮಾರಿಯೇ, ಸಾಂಖ್ಯ, ಯೋಗ, ಧ್ಯಾನ ಯಾಗಾದಿಗಳು ಇನ್ನೂ ಇತರವಾದುವುಗಳೂ ಕೂಡ ಬಹು ಶ್ರಮಸಾಧ್ಯವಾದವುಗಳು. ಕಷ್ಟಪಡಲು ಆಗದವನಿಗಾಗಲಿ ಯೋಗಿಗಳಿಗಾಗಲೀ ಕರ್ಮಮಾಡುವವರಿಗಾಗಲೀ ಸುಲಭಮಾರ್ಗದಿಂದ ಆಯಾಸವಿಲ್ಲದಂತೆ ಬ್ರಹ್ಮಾದಿದೇವಸೇವಿತವಾದ ಆ ಜ್ಞಾನವನ್ನು ಸರ್ವಭೂತಗಳಿಗೂ ತಿಳಿಯುವಂತೆ ಹೇಳಬೇಕು.

೮. ಈಶ್ವರನು ಹೇಳುತ್ತಾನೆ. ಮಂತ್ರವನ್ನು ಮತ್ತೊಬ್ಬರಿಗೆ ಹೇಳಕೂಡದು. ಜ್ಞಾನವು ದಡ್ಡರಿಗೆ ತಿಳಿಯುವುದಿಲ್ಲ. ಆದ್ದರಿಂದ ಮಹರ್ಷಿಗಳು ಹೇಳಿರುವ ಒಂದು ತತ್ತ್ವವನ್ನು ಹೇಳುತ್ತೇನೆ.

೯. ಅಂತಹ ಗೋಪ್ಯವಾದ ಉತ್ತಮವಾದ ಕ್ಷೇತ್ರವೇ ವಾರಾಣಸಿಯು (ಕಾಶಿಯು) ಎಲ್ಲಾ ಪ್ರಾಣಿಗಳಿಗೂ ಸಂಸಾರವೆಂಬ ಸಮುದ್ರವನ್ನು ದಾಟಿಸತಕ್ಕದ್ದು.

ತತ್ರ ಭಕ್ತ್ಯಾಮಹಾದೇವಿ ಮದೀಯಂ ವ್ರತಮಾಸ್ಥಿತಾಃ ।
ನಿವಸಂತಿ ಮಹಾತ್ಮಾನಃ ಪರಂ ನಿಯಮಮಾಸ್ಥಿತಾಃ ॥೧೦॥

ಉತ್ತಮಂ ಸರ್ವತೀರ್ಥಾನಾಂ ಸ್ಥಾನಾನಾಮುತ್ತಮಂ ಚ ತತ್ ।
ಜ್ಞಾನಾನಾಮುತ್ತಮಂ ಜ್ಞಾನಂ ಅವಿಮುಕ್ತಂ ಮತಂ ಮಮ॥೧೧॥

ಸ್ಥಾನಾಂತರಪವಿತ್ರಾಣಿ ತೀರ್ಥಾನ್ಯಾಯತನಾನಿ ಚ ।
ಶ್ಮಶಾನಸಂಸ್ಥಿತಾನ್ಯೇವ ದಿವ್ಯಭೂಮಿಗತಾನಿಚ ॥೧೨॥

ಭೂಲೋಕೇ ನೈವಸಂಲಗ್ನಮಂತರಿಕ್ಷೇಮಮಾಲಯಂ।
ಅಮುಕ್ತಾಸ್ತನ್ನಪಶ್ಯಂತಿ ಮುಕ್ತಾ ಪಶ್ಯಂತಿ ಚೇತಸಾ ॥೧೩॥

ಸ್ಮಶಾನಮೇತದ್ವಿಖ್ಯಾತಂ ಅವಿಮುಕ್ತಮಿತಿಶ್ರುತಂ ।
ಕಾಲೋ ಭೂತ್ವಾ ಜಗದಿದಂ ಸಂಹರಾಮ್ಯತ್ರ ಸುಂದರಿ ॥೧೪॥

---

೧೦. ಅಲ್ಲಿ ಮಹಾತ್ಮರು ಪಾಶುಪತವ್ರತವನ್ನು ಕೈಗೊಂಡು ಬಹು ನಿಯಮದಿಂದ ವಾಸಮಾಡಿಕೊಂಡಿರುತ್ತಾರೆ.

೧೧. ಆ ಕಾಶಿಯು ಸರ್ವತೀರ್ಥಗಳಲ್ಲಿಯೂ ಉತ್ತಮವು. ಎಲ್ಲಾ ಸ್ಥಳಗಳಿಗಿಂತಲೂ ಶ್ರೇಷ್ಠವು. ಅವಿಮುಕ್ತವೆಂಬ ಹೆಸರುಳ್ಳ ಕಾಶಿಯೇ ಜ್ಞಾನಗಳಿಗೆಲ್ಲಾ ಉತ್ತಮಜ್ಞಾನವೆನಿಸಿಕೊಳ್ಳುವುದು.

೧೨. ದಿವ್ಯವಾದ ದೇವಸ್ಥಾನಗಳೂ ; ಕ್ಷೇತ್ರಗಳೂ ಶ್ಮಶಾನದಿಂದ ಬೇರೆ ಕಡೆಯಲ್ಲಿದ್ದರೆ ಪವಿತ್ರಗಳು. ಇಲ್ಲಾದರೊ, ಆ ಕ್ಷೇತ್ರಗಳೂ ದೇವಸ್ಥಾನಗಳೂ ಸ್ಮಶಾನದಲ್ಲಿಯೇ ಇವೆ. ಅವು ಸ್ಮಶಾನದಲ್ಲಿದ್ದರೂ (ಕಾಶಿಕ್ಷೇತ್ರಕ್ಕೆ ಮಹಾಸ್ಮಶಾನವೆಂಬ ಹೆಸರುಂಟು) ದೇವಭೂಮಿಯ ಲ್ಲಿರುವುವೆಂದೇ ತಿಳಿ.

೧೩. ಅಲ್ಲಿ ನನ್ನ ವಾಸಸ್ಥಾನವು ಭೂಲೋಕಕ್ಕೆ ಅಂಟಿಕೊಂಡಿಲ್ಲ. ಅಂತರಿಕ್ಷದಲ್ಲಿಯೇ ಇರುವುದು. ಮೋಕ್ಷಾಭಿಲಾಷೆ ಇಲ್ಲದವರು ಅದನ್ನು ನೋಡಲಾರರು. ಮೋಕ್ಷಾಪೇಕ್ಷಿಗಳು ಮಾತ್ರ ಜ್ಞಾನದಿಂದ ತಿಳಿಯುತ್ತಾರೆ.

೧೪. ಈ ಕಾಶಿಗೆ ಮಹಾಶ್ಮಶಾನವೆಂದು ಹೆಸರು. ಅವಿಮುಕ್ತ ವೆಂದೂ ಹೆಸರು. ನಾನು ಇಲ್ಲಿದ್ದುಕೊಂಡು ಯಮಸ್ವರೂಪದಿಂದ ಜಗತ್ತನ್ನು ಸಂಹರಿಸುತ್ತೇನೆ.

ದೇವೀದಂ ಸರ್ವಗುಹ್ಯಾನಾಂ ಸ್ಥಾನಂ ಪ್ರಿಯತಮಂ ಮಮ ।
ಮದ್ಭಕ್ತಾಸ್ತತ್ರ ಗಚ್ಛಂತಿ ಮಾಮೇವ ಪ್ರವಿಶಂತಿ ಚ ॥೧೫॥
ದತ್ತಂ ಜಪ್ತಂ ಹುತಂ ಚೇಷ್ಟಂ ತಪಸ್ತಪ್ತಂ ಕೃತಂ ಚ ಯತ್ ।
ಧ್ಯಾನಮಧ್ಯಯನಂ ಜ್ಞಾನಂ ಸರ್ವಂ ತತ್ರಾಕ್ಷಯಂ ಭವೇತ್ ॥೧೬॥
ಜನ್ಮಾಂತರಸಹಸ್ರೇಷು ಯತ್ಪಾಪಂ ಪೂರ್ವಸಂಚಿತಂ ।
ಅವಿಮುಕ್ತಂ ಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಂ ॥೧೭॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚ ವರ್ಣಸಂಕರಾಃ ।
ಸ್ತ್ರಿಯೋ ಮ್ಲೇಚ್ಛಾಶ್ಚ ಯೇಚಾನ್ಯೇ ಸಂಕೀರ್ಣಾಃ ಪಾಪಯೋನಯಃ
ಕೀಟಾಃ ಪಿಪೀಲಿಕಾಶ್ಚೈವ ಯೇ ಚಾನ್ಯೇ ಮೃಗಪಕ್ಷಿಣಃ ।
ಕಾಲೇ ಸನ್ನಿಧನಂ ಪ್ರಾಪ್ತಾಃ ಅವಿಮುಕ್ತೇ ವರಾನನೇ ॥೧೯॥
ಚಂದ್ರಾರ್ಧಮೌಳಯಸ್ತ್ರ್ಯಕ್ಷಾಃ ಮಹಾವೃಷಭವಾಹನಾಃ ।
ಶಿವೇ ಮಮ ಪುರೇ ದೇವಿ ಜಾಯಂತೇ ತತ್ರ ಮಾನವಾಃ ॥೨೦॥

---

೧೫. ಎಲೈ ದೇವಿಯೇ! ಇದೇ ಕಾಶಿಯೇ ಉತ್ತಮಸ್ಥಾನವು. ನನಗೆ ಬಹು ಪ್ರಿಯವಾದುದು. ನನ್ನ ಭಕ್ತರು ಅಲ್ಲಿಗೆ ಹೋಗುತ್ತಾರೆ. ನನ್ನನ್ನೇ ಸೇರುತ್ತಾರೆ.

೧೬. ಈ ಅವಿಮುಕ್ತ ಕ್ಷೇತ್ರದಲ್ಲಿ ಮಾಡಿದ ದಾನ, ಜಪ, ಹೋಮ, ಯಜ್ಞ, ತಪಸ್ಸು, ಧ್ಯಾನ, ಅಧ್ಯಯನ ಜ್ಞಾನ ಇವುಗಳೆಲ್ಲವೂ ಅಕ್ಷಯವಾಗುತ್ತವೆ.

೧೭. ಹಿಂದೆ ಅನೇಕ ಜನ್ಮಗಳಲ್ಲಿ ಸಂಗ್ರಹಿಸಿದ ಸಮಸ್ತ ಪಾಪಗಳೂ ಕಾಶೀಕ್ಷೇತ್ರವನ್ನು ಪ್ರವೇಶಮಾಡಿದಕೂಡಲೇ ನಾಶವಾಗುವುವು.

೧೮–೨೦. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೂ ಸಂಕರವರ್ಣದವರೂ ಹೆಂಗಸರೂ, ಮ್ಲೇಚ್ಛರೂ, ಸಂಕೀರ್ಣ ಜಾತಿಯ ಪಾಪಿಗಳೂ ಹುಳುಗಳೂ, ಇರುವೆಗಳೂ ಇನ್ನೂ ಉಳಿದ ಮೃಗಪಕ್ಷಿಗಳೂ, ಈ ಕ್ಷೇತ್ರದಲ್ಲಿ ಪ್ರಾಣಬಿಟ್ಟರೆ ತಲೆಯಲ್ಲಿ ಅರ್ಧಚಂದ್ರನನ್ನುಳ್ಳವರಾಗಿಯೂ, ಹಣೆಯಲ್ಲಿ ಮೂರು ಕಣ್ಣುಗಳುಳ್ಳವರಾಗಿಯೂ ವೃಷವಾಹನರಾಗಿಯೂ, ನನ್ನ ಲೋಕದಲ್ಲಿ ಹುಟ್ಟುತ್ತಾರೆ. (ಸಾರೂಪ್ಯವನ್ನು ಹೊಂದುತ್ತಾರೆ).

ಸ್ತ್ವವಿಮುಕ್ತೇ ಮೃತಃ ಕಶ್ಚಿತ್ ನರಕಂ ಯಾತಿ ಕಿಲ್ಬಿಷೀ ।
ಈಶ್ವರಾನುಗ್ರಹೀತಾ ಹಿ ಸರ್ವೇ ಯಾಂತಿ ಪರಾಂ ಗತಿಂ ॥೨೧॥

ಮೋಕ್ಷಂ ಸುದುರ್ಲಭಂ ಮತ್ವಾ ಸಂಸಾರಂ ಚಾತಿಭೀಷಣಂ ।
ಅರ್ಚನಾಽಽಚರಣೇ ಮುಕ್ತ್ವಾ ವಾರಾಣಸ್ಯಾಂ ವಸೇನ್ನರಾಃ ॥೨೨॥

ದುರ್ಲಭಾ ತಪಸಾ ಚಾಪಿ ಮೃತಸ್ಯ ಪರಮೇಶ್ವರಿ ।
ಯತ್ರಯತ್ರ ವಿಪನ್ನಸ್ಯ ಗತಿಸ್ಸಂಸಾರಮೋಕ್ಷಿಣೀ ॥೨೩॥

ಪ್ರಸಾದಾಜ್ಞಾಯತೇ ಸಮ್ಯಙ್ಮಮ ಶೈಲೇಂದ್ರನಂದಿನಿ ।
ಅಪ್ರವೃದ್ಧಾ ನಪಶ್ಯಂತಿ ಮಮ ಮಾಯಾ ವಿಮೋಹಿತಾಃ ॥೨೪॥

ವಿಣ್ಮೂತ್ರರೇತಸಾಂ ಮಧ್ಯೇ ತೇ ವಸಂತಿ ಪುನಃಪುನಃ ।
ಹನ್ಯಮಾನೋಽಪಿ ಯೋ ವಿದ್ವಾನ್ ವಸೇದ್ವಿಘ್ನಶತೈರಪಿ ॥೨೫॥

---

೨೧. ಈ ಕ್ಷೇತ್ರದಲ್ಲಿ ಮೃತನಾದ ಪಾಪಿಯೂ ಕೂಡ ನರಕವನ್ನು ಹೊಂದುವುದಿಲ್ಲ. ಇಲ್ಲಿ ಮೃತರಾದವರೆಲ್ಲರೂ ಈಶ್ವರಾನುಗೃಹೀತರಾಗಿ ಉತ್ತಮಗತಿಯನ್ನು ಹೊಂದುವರು.

೨೨. ಸಂಸಾರವು ಅತಿ ಭಯಂಕರವಾದುದು ಮೋಕ್ಷವು ಕಷ್ಟಸಾಧ್ಯವಾದುದು ಎಂದು ಮಾನವರು ತಿಳಿದು ಆಚಾರ, ಪೂಜೆಗಳನ್ನು (ಕರ್ಮವನ್ನು ತ್ಯಾಗಮಾಡಿ) ಬಿಟ್ಟು ಕಾಶಿಯಲ್ಲಿ ವಾಸಮಾಡಬೇಕು.

೨೩–೨೫. ಎಲೈ ಪರ್ವತರಾಜಪುತ್ರಿಯೇ ತಪಸ್ಸಿನಿಂದಲೂ ಹೊಂದಲಾಗದ, ಮತ್ತಾವ ಸ್ಥಳದಲ್ಲಿ ಸತ್ತರೂ ಸಿಗದ, ಸಂಸಾರ ನಾಶಕವಾದ ಮೋಕ್ಷವು ಇಲ್ಲಿ ಎಲ್ಲಿ ಸತ್ತರೂ ತನ್ನ ಅನುಗ್ರಹದಿಂದ ಸಿಕ್ಕುತ್ತದೆ. ಪರಮೇಶ್ವರಿಯೇ, ನನ್ನ ಮಾಯೆಯಿಂದ ಮೋಹಿತರಾದ ಅಜ್ಞರು ಇದನ್ನು ತಿಳಿಯಲಾರರು. ಅಂತಹವರು ಅಮೇಧ್ಯಮೂತ್ರರೇತಸ್ಸುಗಳ ಮಧ್ಯದಲ್ಲಿ ಮತ್ತೆ ಮತ್ತೆ ವಾಸಿಸುತ್ತಾರೆ.

ಸಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತೇ ।
ಜನ್ಮಮೃತ್ಯುಜರಾಮುಕ್ತಂ ಪರಂ ಯಾಂತಿ ಶಿವಾಲಯಂ ॥೨೬॥
ಅಪುನರ್ಮರಣಾನಾಂ ಹಿ ಸಾ ಗತಿರ್ಮೋಕ್ಷಕಾಂಕ್ಷಿಣಾಂ ।
ಯಾಂ ಪ್ರಾಪ್ಯ ಕೃತಕೃತ್ಯಂ ಸ್ಯಾದಿತಿ ಮನ್ಯಂತಿ ಪಂಡಿತಾಃ ॥೨೭॥
ನ ದಾನೈರ್ನ ತಪೋಭಿಶ್ಚ ನ ಯಜ್ಞೈರ್ನಾಪಿ ವಿದ್ಯಯಾ ।
ಪ್ರಾಪ್ಯತೇ ಗತಿರುತ್ಕೃಷ್ಟಾ ಯಾಽವಿಮುಕ್ತೇ ತು ಲಭ್ಯತೇ ॥೨೮॥
ನಾನಾವರ್ಣಾ ವಿವರ್ಣಾಶ್ಚ ಚಂಡಾಲಾದ್ಯಾ ಜುಗುಪ್ಸಿತಾಃ ।
ಕಿಲ್ಬಿಷೈಃ ಪೂರ್ಣದೇಹಾಶ್ಚ ವಿಶಿಷ್ಟೈಃ ಪಾತಕೈಸ್ತಥಾ ।
ಭೇಷಜಂ ಪರಮಂ ತೇಷಾಂ ಅವಿಮುಕ್ತಂ ವಿದುರ್ಬುಧಾಃ ॥೨೯॥
ಅವಿಮುಕ್ತಂ ಪರಂಜ್ಞಾನಂ ಅವಿಮುಕ್ತಂ ಪರಂ ಪದಂ ।
ಅವಿಮುಕ್ತಂ ಪರಂ ತತ್ವಮವಿಮುಕ್ತಂ ಪರಂ ಶಿವಂ ॥೩೦॥

---

೨೬. ವಿದ್ವಾಂಸನಾದವನು ಎಷ್ಟು ವಿಘ್ನಗಳು ಬಂದರೂ ಅಲ್ಲಿಯೇ ಇರಬೇಕು. ಹಾಗಿದ್ದವನು ಶೋಕರಹಿತವಾದ, ಜನನ, ಮರಣ, ಮುಪ್ಪು, ಇವುಗಳಿಂದ ಬಿಡಲ್ಪಟ್ಟ ಉತ್ತಮ ಸ್ಥಾನವಾದ ಕೈಲಾಸವನ್ನುಸೇರುತ್ತಾನೆ.

೨೭. ಪುನರ್ಮರಣವಿಲ್ಲದ, ಮೋಕ್ಷಾಪೇಕ್ಷಿಗಳಿಗೆ ಬೇಕಾದ ಸ್ಥಾನವು ಸಿಕ್ಕುತ್ತದೆ. ಪಂಡಿತರು ಆ ಜಾಗವನ್ನು ಹೊಂದಿ ಕೃತಕೃತ್ಯರಾದೆವೆನ್ನುತ್ತಾರೆ.

೨೮. ಕಾಶಿಯಲ್ಲಿ ಮೃತನಾದವನಿಗೆ ಸಿಕ್ಕುವ ಗತಿಯು ದಾನ, ತಪಸ್ಸು, ಯಜ್ಞ ವಿದ್ಯೆಗಳಿಂದ ಕೂಡ ಸಿಕ್ಕುವುದಿಲ್ಲ. ಅಂಥ ಶ್ರೇಷ್ಠವಾದ ಗತಿಯು ಸಿಕ್ಕುವುದು.

೨೯. ನಾನಾ ಜಾತಿಯವರಿಗೂ, ವಿಜಾತಿಯವರಿಗೂ, ನೀಚವಾದ ಚಂಡಾಲ ಜಾತಿಯವರಿಗೂ ಮಹಾಪಾತಕ ಉಪಪಾತಕ ಇವುಗಳಿಂದ ಪೂರ್ಣವಾದ ದೇಹಿಗಳಿಗೂ ಈ ಅವಿಮುಕ್ತ ಕ್ಷೇತ್ರವು ಔಷಧವೆಂದು ವಿದ್ವಾಂಸರು ತಿಳಿದಿದ್ದಾರೆ.

೩೦. ಅವಿಮುಕ್ತಕ್ಷೇತ್ರವೇ ಶ್ರೇಷ್ಠವಾದ ಜ್ಞಾನವು, ಅದೇ ಉತ್ತಮಸ್ಥಾನವು. ಅದೇ ಉತ್ತಮವಾದ ತತ್ವವು. ಅದೇ ಉತ್ತಮವಾದ ಕಲ್ಯಾಣವು.

ಕೃತ್ವಾವೈ ನೈಷ್ಠಿಕೀಂ ದೀಕ್ಷಾಂ ಅವಿಮುಕ್ತೇ ವಸಂತಿ ಯೇ।
ತೇಷಾಂ ತತ್ಪರಮಂ ಜ್ಞಾನಂ ದದಾಮ್ಯಂತೇ ಪರಂ ಪದಂ ॥೩೧॥

ಪ್ರಯಾಗಂ ನೈಮಿಷಾರಣ್ಯಂ ಶ್ರೀಶೈಲೋಽಥಮಹಾಬಲಂ।
ಕೇದಾರಂ ಭದ್ರಕರ್ಣಂ ತು ಗಯಾ ಪುಷ್ಕರಮೇವ ಚ।
ಕುರುಕ್ಷೇತ್ರಂ ಭದ್ರಕೋಟಿಃ ನರ್ಮದಾಽಽಮ್ರಾತಕೇಶ್ವರೀ ॥೩೨॥

ಸಾಲಗ್ರಾಮಂ ಚ ಕುಬ್ಜಾಗ್ರಂ ಕೋಕಾಮುಖಮನುತ್ತಮಂ।
ಪ್ರಭಾಸಂ ವಿಜಯೇಶಾನಂ ಗೋಕರ್ಣಂ ಭದ್ರಕರ್ಣಕಂ ॥೩೩॥

ಏತಾನಿ ಪುಣ್ಯಸ್ಥಾನಾನಿ ತ್ರೈಲೋಕ್ಯೇ ವಿಶ್ರುತಾನಿ ಹಿ।
ನ ಯಾಸ್ಯಂತಿ ಪರಂ ತತ್ವಂ ವಾರಾಣಸ್ಯಾಂ ಯಥಾ ಮೃತಾಃ ॥೩೪॥

ವಾರಾಣಸ್ಯಾಂ ವಿಶೇಷೇಣ ಗಂಗಾ ತ್ರಿಪಥಗಾಮಿನೀ।
ಪ್ರವಿಷ್ಟಾ ನಾಶಯೇತ್ಪಾಪಂ ಜನ್ಮಾಂತರಶತೈಃ ಕೃತಂ ॥ ॥೩೫॥

---

೩೧. ಯಾರು ನಿಯಮದಿಂದ ದೀಕ್ಷೆಯನ್ನು ಕೈಗೊಂಡು ಅವಿಮುಕ್ತದಲ್ಲಿ ವಾಸಮಾಡುವರೋ ಅವರಿಗೆ ಕೊನೆಯಲ್ಲಿ ಪರಮಪದದಾಯಕವಾದ ಜ್ಞಾನವನ್ನು ಕೊಡುತ್ತೇನೆ ಮತ್ತು ಪರಮಪದವೂ ಸಿಕ್ಕುತ್ತದೆ.

೩೨–೩೪. ಪ್ರಯಾಗ, ನೈಮಿಷಾರಣ್ಯ, ಶ್ರೀಶೈಲ, ಮಹಾಬಲ, ಕೇದಾರ, ಭದ್ರಕರ್ಣ, ಗಯಾ, ಪುಷ್ಕರ, ಕುರುಕ್ಷೇತ್ರ, ಭದ್ರಕೋಟಿ, ನರ್ಮದಾ, ಆಮ್ರಾತಕೇಶ್ವರ, ಸಾಲಗ್ರಾಮ, ಕುಬ್ಜಾಗ್ರ, ಕೋಕಾಮುಖ ಪ್ರಭಾಸ, ವಿಜಯ, ಈಶಾನ, ಗೋಕರ್ಣ, ಭದ್ರಕರ್ಣಕ, ಇವು ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಪುಣ್ಯಕ್ಷೇತ್ರಗಳು ಕಾಶಿಯಲ್ಲಿ ಮೃತನಾದವನು ಹೊಂದತಕ್ಕ ಉತ್ತಮಗತಿಯನ್ನು ಮೇಲೆ ಹೇಳಿದ ಯಾವ ಕ್ಷೇತ್ರದಲ್ಲಿ ಮೃತನಾದರೂ ಹೊಂದುವುದಿಲ್ಲ.

೩೫. ವಾರಾಣಾಸಿಯಲ್ಲಿ ಇರತಕ್ಕ ಗಂಗಾನದಿಯು ಸ್ವರ್ಗ, ಮರ್ತ್ಯ ಪಾತಾಳಲೋಕಗಳಲ್ಲಿ ಹರಿಯೋಣದರಿಂದ ಆ ಕ್ಷೇತ್ರಕ್ಕೆ ಹೋದೊಡನೆಯೇ ಅನೇಕ ಜನ್ಮಾರ್ಜಿತವಾದ ಪಾಪವು ನಾಶವಾಗುವುದು.

ಅನ್ಯತ್ರ ಸುಲಭಾ ಗಂಗಾ ಶ್ರಾದ್ಧಂ ದಾನಂ ತಪೋ ಜಪಃ ।
ವ್ರತಾನಿಸರ್ವಮೇವೈತತ್ ವಾರಾಣಸ್ಯಾಂ ಸುದರ್ಲಭಂ ॥೩೬॥
ಜಪೇಚ್ಚ ಜುಹುಯಾನ್ನಿತ್ಯಂ ದದಾ ತ್ಯರ್ಚಯತೇಽಮರ್ರಾ ।
ವಾಯುಭಕ್ಷಶ್ಚ ಸತತಂ ವಾರಾಣಸ್ಯಾಂಸ್ಥಿತೋ ನರಃ ॥೩೭॥
ಯದಿ ಪಾಪೋ ಯದಿ ಶಠೋ ಯದಿ ವಾಧಾರ್ಮಿಕೋ ನರಃ ।
ವಾರಾಣಸೀಂ ಸಮಾಸಾದ್ಯ ಪುನಾತಿ ಸಕಲಂ ಕುಲಂ ॥೩೮॥
ವಾರಾಣಸ್ಯಾಂ ಯೇಽರ್ಚಯಂತಿ ಮಹಾದೇವಂಸ್ತುವಂತಿ ವೈ ।
ಸರ್ವಪಾಪವಿನಿರ್ಮುಕ್ತಾಸ್ತೇ ವಿಜ್ಞೇಯಾ ಗಣೇಶ್ವರಾಃ ॥೩೯॥
ಅನ್ಯತ್ರ ಯೋಗಜ್ಞಾನಾಭ್ಯಾಂ ಸಂನ್ಯಾಸಾದಥವಾಽನ್ಯತಃ ।
ಪ್ರಾಪ್ಯತೇ ತತ್ಪರಂ ಸ್ಥಾನಂ ಸಹಸ್ರೇಣೈವ ಜನ್ಮನಾಂ ॥೪೦॥

---

೩೬. ಕಾಶಿಯನ್ನು ಬಿಟ್ಟು ಬೇರೆ ಜಾಗದಲ್ಲಿ ಗಂಗಾಸ್ನಾನ, ತೀರ್ಥ ಶ್ರಾದ್ಧ, ದಾನ, ತಪಸ್ಸು, ಜಪ, ವ್ರತ ಇವುಗಳನ್ನು ಸುಲಭವಾಗಿ ಮಾಡಬಹುದು, ಇಷ್ಟನ್ನೂ ಕಾಶೀ ಕ್ಷೇತ್ರದಲ್ಲಿ ಮಾಡುವುದು ಬಹುಕಷ್ಟ ಸಾಧ್ಯವು.

೩೭. ಕಾಶಿಯಲ್ಲಿ ವಾಸಮಾಡುವವನು ಅವನು ಹೇಗಿದ್ದರೂ ಜಪ, ತಪಸ್ಸು, ಪೂಜೆಗಳನ್ನು ಮಾಡುತ್ತ ಗಾಳಿಯೇ ಆಹಾರವುಳ್ಳವನಾಗಿದ್ದಂತೆ ಇರುತ್ತಾನೆ.

೩೮. ಪಾಪಿಯಾಗಲಿ, ದುಷ್ಟನಾಗಲಿ, ಧರ್ಮಾತ್ಮನಾಗಲಿ, ಕಾಶಿಯಲ್ಲಿ ವಾಸಮಾಡಿದರೆ ತನ್ನ ಅಖಿಲವಾದ ವಂಶವನ್ನೂ ಪವಿತ್ರಗೊಳಿಸುವನು.

೩೯. ವಾರಣಾಸಿಯಲ್ಲಿ ಯಾರು ವಿಶ್ವನಾಥನನ್ನು ಪೂಜಿಸಿ ಸ್ತೋತ್ರ ಮಾಡುವರೋ ಅವರು ಸಮಸ್ತ ಪಾಪಗಳಿಂದ ಮುಕ್ತರಾಗಿ ಗಣಗಳಲ್ಲಿ ಪ್ರಧಾನರಾಗುತ್ತಾರೆ.

೪೦. ಬೇರೆಬೇರೆ ಕ್ಷೇತ್ರದಲ್ಲಿ ಯೋಗ, ಜ್ಞಾನ, ಸನ್ಯಾಸ ಇತ್ಯಾದಿಗಳಿಂದ ಮೋಕ್ಷವನ್ನು ದೊರಕಿಸಿಕೊಳ್ಳುತ್ತಾನೆ. ಆದರೆ ಅದಕ್ಕೂ ಸಾವಿರಾರು ಜನ್ಮಗಳು ಬೇಕು.

ಯೇ ಭಕ್ತ್ಯಾ ದೇವದೇವೇ ವಾರಾಣಸ್ಯಾಂ ವಸಂತಿ ವೈ ।
ತೇ ವಿಂದಂತಿ ಪರಂ ಮೋಕ್ಷಂ ಏಕೇನೈವ ತು ಜನ್ಮನಾ ॥೪೧॥

ಯತ್ರ ಯೋಗಸ್ತಥಾಜ್ಞಾನಂ ಮುಕ್ತಿರೇಕೇನ ಜನ್ಮನಾ ।
ಅವಿಮುಕ್ತಂ ತದಾಸಾದ್ಯ ನಾನ್ಯದಿಚ್ಛೇತ್ತಪೋವನಂ ॥೪೨॥

ಯತೋ ಮಯಾವಿಮುಕ್ತಂ ತದವಿಮುಕ್ತಂ ತತಸ್ಸ್ಮೃತಂ ।
ತದೇವ ಗುಹ್ಯಂ ಗುಹ್ಯಾನಾಂ ಏತದ್ವಿಜ್ಞಾನಮುಚ್ಯತೇ ॥೪೩॥

ಜ್ಞಾನಾಜ್ಞಾನಾಭಿನಿಷ್ಠಾನಾಂ ಪರಮಾನಂದಮಿಚ್ಛತಾಂ ।
ಯಾಗತಿರ್ವಿದಿತಾ ಸುಭ್ರೂಃ ಸಾಽವಿಮುಕ್ತೇ ಮೃತಸ್ಯತು ॥೪೪॥

ಯಾನಿಚೈವಾಽವಿಮುಕ್ತಾನ್ಯೇದೇಶೇದೃಷ್ಟಾನಿ ಕೃತ್ಸ್ನಶಃ ।
ಪುರೀ ವಾರಾಣಸೀತೇಭ್ಯಃ ಸ್ಥಾನೇಭ್ಯೋಽಪ್ಯಧಿಕಾಶುಭಾ ॥೪೫॥

---

೪೧. ವಾರಣಾಸಿಯಲ್ಲಿ ವಾಸಮಾಡುವ ಭಗವದ್ಭಕ್ತರು ಒಂದೇ ಜನ್ಮದಲ್ಲಿ ಶಾಶ್ವತವಾದ ಮೋಕ್ಷವನ್ನು ಹೊಂದುತ್ತಾರೆ.

೪೨. ಯಾವ ಕಾಶೀಕ್ಷೇತ್ರವನ್ನು ಹೊಂದಿ ಯೋಗ, ಜ್ಞಾನ, ಮೋಕ್ಷ ಇವುಗಳನ್ನು ಒಂದೇಜನ್ಮದಲ್ಲಿ ಪೊಂದುತ್ತಾನೋ ಅಂಥ ಕಾಶೀ ವಾಸಿಯು ಬೇರೆಯಾದ ತಪೋವನವನ್ನು ಇಚ್ಛಿಸುವುದಿಲ್ಲ.

೪೩. ಈ ಜಾಗವನ್ನು ನಾನು ಬಿಡದೇ ಇರುವುದರಿಂದ ಈ ಕ್ಷೇತ್ರಕ್ಕೆ ಅನ್ವರ್ಥವಾಗಿ ಅವಿಮುಕ್ತ ಎಂಬ ಹೆಸರು ಬಂತು. ಆ ಕ್ಷೇತ್ರವೇ ಗೋಪ್ಯವಾದುದು ಜ್ಞಾನಸಾಧಕವಾದುದು.

೪೪. ಜ್ಞಾನ, ಅಜ್ಞಾನ, ಇವುಗಳ ಗುಣಗಳನ್ನು ತಿಳಿದು ಪರಮಾನಂದರೂಪವಾದ ಮೋಕ್ಷವನ್ನು ಇಚ್ಛಿಸುವವನಿಗೆ ಬರುವ ಮೋಕ್ಷವು ಅವಿಮುಕ್ತದಲ್ಲಿ ಮೃತನಾದವನಿಗೆ ಬರುವುದು.

೪೫. ಯಾವ ಯಾವ ದೇಶದಲ್ಲಿರುವ ತೀರ್ಥಗಳು ಮುಕ್ತಿಯನ್ನು ಕೊಡುತ್ತವೆ ಎಂದು ತಿಳಿದಿದೆಯೋ ಅದೆಲ್ಲಕ್ಕಿಂತಲೂ ಕಾಶಿಯು ಅಧಿಕವಾದುದು.

ಯತ್ರ ಸಾಕ್ಷಾನ್ಮಹಾದೇವಃ ದೇಹಾಂತೇಸ್ವಯಮೀಶ್ವರಃ।
ವ್ಯಾಚಷ್ಟೇ ತಾರಕಂ ಬ್ರಹ್ಮ ತತ್ರೈವಹ್ಯವಿಮುಕ್ತಕೇ ॥೪೬॥

ಯತ್ತತ್ಸರತರಂ ತತ್ತ್ವಂ ಅವಿಮುಕ್ತಮಿತಿಶ್ರುತಂ।
ಏಕೇನ ಜನ್ಮನಾ ದೇವಿ ವಾರಾಣಸ್ಯಾಂ ತದಾಪ್ನುಯಾತ್ ॥೪೭॥

ಭ್ರೂಮಧ್ಯೇ ನಾಭಿಮಧ್ಯೇ ಚ ಹೃದಯೇಚೈವ ಮೂರ್ಧನಿ।
ಯಥಾವಿಮುಕ್ತಮಾದಿತ್ಯೇ ವಾರಾಣಸ್ಯಾಂ ವ್ಯವಸ್ಥಿತಂ ॥೪೮॥

ವರಣಾಯಾ ಸ್ತಥಾಚಾಸ್ಯಾ ಮಧ್ಯೇ ವಾರಣಸೀ ಪುರೀ।
ತತ್ರೈವ ಸಂಸ್ಥಿತಂ ತತ್ತ್ವಂ ನಿತ್ಯಮೇವಂ ವಿಮುಕ್ತಿಕಂ ॥೪೯॥

ವಾರಾಣಸ್ಯಾಃ ಪರಂ ಸ್ಥಾನಂ ನ ಭೂತಂ ನ ಭವಿಷ್ಯತಿ।
ಯತ್ರ ನಾರಾಯಣೋ ದೇವಃ ಮಹಾದೇವೋ ದಿವೀಶ್ವರಃ ॥೫೦॥

---

೪೬. ಯಾವ ಕ್ಷೇತ್ರದಲ್ಲಿ ಶ್ರೀ ಮಹಾದೇವನು ಮರಣಕಾಲದಲ್ಲಿ ತಾರಕಮಂತ್ರವನ್ನು ಉಪದೇಶಮಾಡುವನೋ ಆ ಕ್ಷೇತ್ರವೇ ಈ ಅವಿಮುಕ್ತಕವು.

೪೭. ಉತ್ತಮವಾದ ತತ್ವಜ್ಞಾನದಾಯಕವು ಅವಿಮುಕ್ತ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಕಾಶಿಯಲ್ಲಿ ಇರುವುದರಿಂದ ಒಂದೇ ಜನ್ಮದಲ್ಲಿ ಆ ಜ್ಞಾನವನ್ನು ಪಡೆಯುತ್ತಾನೆ.

೪೮. ಪ್ರಾಣವಾಯುವು ನಾಭಿ ಹದಯ ಭ್ರೂಮಧ್ಯ ಮೂರ್ಧ ಪ್ರದೇಶ ಇವುಗಳನ್ನು ಭೇದಿಸಿ ಪರಬ್ರಹ್ಮರೂಪವಾದ ಆದಿತ್ಯಮಂಡಲದಲ್ಲಿ ಹೇಗೆ ಸೇರುವುದೋ ಅದೇ ರೀತಿ ವಾರಾಣಸಿಯಲ್ಲಿಯೂ ಮೃತನಾಗಲು ಆದಿತ್ಯನನ್ನು ಸೇರುವನು.

೪೯. ವರಣಾ ಅಸಿ ಎಂಬ ಎರಡು ನದಿಗಳ ಮಧ್ಯೆ ಇರುವ ಪ್ರದೇಶವೇ ವಾರಾಣಸೀ ಪಟ್ಟಣವು. ಅಲ್ಲೇ ಅವಿಮುಕ್ತವೆಂಬ ತತ್ವವಿರುವುದು. ಅಂದರೆ ಆ ಕ್ಷೇತ್ರವು ಜ್ಞಾನದಾಯಕವೆಂದು ತಾತ್ಪರ್ಯವು.

೫೦. ವಾರಾಣಸಿಗಿಂತಲೂ ಉತ್ತಮ ಕ್ಷೇತ್ರವು ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ. ಯಾತಕ್ಕೆಂದರೆ ಅಲ್ಲಿ ಮಹಾವಿಷ್ಣುವು ಬಂದು ಮಾಧವಸ್ವರೂಪದಿಂದಲೂ ಪರಮೇಶ್ವರನು ವಿಶ್ವನಾಥಸ್ವರೂಪದಿಂದಲೂ ನೆಲಸಿರುವದೇ ಕಾರಣ

ಯತ್ರ ದೇವಾಸ್ಸ ಗಂಧರ್ವಾಃ ಸಯಕ್ಷೋರಗರಾಕ್ಷಸಾಃ ।
ಉಪಾಸತೇ ಮಾಂ ಸತತಂ ದೇವದೇವಃ ಪಿತಾಮಹಃ ॥೫೧॥

ಮಹಾಪಾತಕಿನೋ ದೇವಿ ಯೇ ತೇಭ್ಯಃ ಪಾಪಕೃತ್ತಮಾಃ ॥
ವಾರಾಣಸೀಂ ಸಮಾಸಾಧ್ಯ ತೇ ಯಾಂತಿ ಪರಮಂ ಪದಂ ॥೫೨॥

ತಸ್ಮಾನ್ಮುಮುಕ್ಷುರ್ನಿಯತೋ ವಸೇದ್ವೈ ಮರಣಾಂತಿಕಂ ॥
ವಾರಾಣಸ್ಯಾಂ ಮಹಾದೇವಾಜ್ಞಾನಂ ಲಭ್ಧ್ವಾ ವಿಮುಚ್ಯತೇ॥೫೩॥

ಕಿಂತು ವಿಘ್ನಾಭವಿಷ್ಯಂತಿ ಪಾಪೋಪಹತಚೇತಸಃ ।
ತತೋ ನೈವಾಚರೇತ್ಪಾಪಂ ಕಾಯೇನ ಮನಸಾ ಗಿರಾ ॥೫೪॥

ಏತದ್ರಹಸ್ಯಂ ದೇವಾನಾಂ ಪುರಾಣಾನಾಂ ಚ ಸುವ್ರತೇ ।
ಅವಿಮುಕ್ತಾಶ್ರಯಜ್ಞಾನಂ ನ ಕಶ್ಚಿದ್ವೇತ್ತಿ ತತ್ವತಃ ॥೫೫॥

---

೫೧. ಅಲ್ಲಿ ನನ್ನನ್ನು ದೇವತೆಗಳು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು ಸಮಸ್ತದೇವಾಧಿಪತಿಯಾದ ಬ್ರಹ್ಮನೂ ಸಹ ಸೇವಿಸುತ್ತಾರೆ.

೫೨. ಎಲೈ ದೇವಿ! ಮಹಾಪಾಪಿಗಳೂ ಅವರಿಗಿಂತಲೂ ಪಾಪಿಗಳಾದವರೂ ಕೂಡ ಕಾಶೀಕ್ಷೇತ್ರವನ್ನು ಹೊಂದಿದರೆ ಉತ್ತಮ ಗತಿಯನ್ನು ಹೊಂದುತ್ತಾರೆ.

೫೩. ಆದ್ದರಿಂದ ಮೋಕ್ಷವನ್ನು ಅಪೇಕ್ಷಿಸುವವನು ಸಾಯುವವರೆಗೂ ವಾರಣಾಸಿಯಲ್ಲಿ ವಾಸಮಾಡಬೇಕು. ಅಲ್ಲಿ ಪರಮೇಶ್ವರನಿಂದ ಜ್ಞಾನವನ್ನು ಪಡೆದು ಸಂಸಾರದಿಂದ ಬಿಡುಗಡೆ ಹೊಂದುತ್ತಾನೆ.

೫೪. ಮತ್ತೇನೆಂದರೆ, ಕಾಶಿಯಲ್ಲಿ ವಾಸಮಾಡಬೇಕೆಂದಿರುವ ಪಾಪಿಗಳಿಗೆ ಆ ಕ್ಷೇತ್ರಕ್ಕೆ ಹೋಗದೆ ಇರುವಂತೆ ನಾನಾ ವಿಘ್ನಗಳು ಬರುತ್ತವೆ. ಆದ್ದರಿಂದ ಶರೀರದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ಪಾಪವನ್ನು ನಡೆಸಕೂಡದು.

೫೫. ಎಲೈ ವ್ರತನಿಷ್ಠಳೇ ನಾನು ಹೇಳಿದ ಕಾಶೀ ಕ್ಷೇತ್ರದ ವಿಷಯವೇ ಪುರಾಣಗಳ ಗುಟ್ಟು, ದೇವತೆಗಳ ರಹಸ್ಯ, ಈ ಕ್ಷೇತ್ರವಿಷಯಿಕವಾದ ಜ್ಞಾನವನ್ನು ಸರಿಯಾಗಿ ಬೇರೊಬ್ಬರು ತಿಳಿದಿಲ್ಲ.

ದೇವತಾನಾಮೃಷೀಣಾಂ ಚ ಶೃಣ್ವತಾಂ ಪರಮೇಷ್ಠಿನಾಂ ।
ದೇವದೇವೇನ ಕಥಿತಂ ಸರ್ವಪಾಪವಿನಾಶನಂ ॥೫೬॥

ಯಥಾ ನಾರಾಯಣಶ್ಶ್ರೇಷ್ಠೋ ದೇವಾನಾಂ ಪುರುಷೋತ್ತಮಃ ।
ಯಥೇಶ್ವರಾಣಾಂ ಗಿರಿಶಃ ಸ್ಥಾನಾನಾಮೇತದುತ್ತಮಂ ॥೫೭॥

ಯೈಸ್ಸಮಾರಾಧಿತೋ ರುದ್ರಃ ಪೂರ್ವಸ್ಮಿನ್ನೇಕಜನ್ಮನಿ ।
ತೇ ವಿಂದಂತಿ ಪರಂ ಕ್ಷೇತ್ರಂ ಅವಿಮುಕ್ತಂ ಶಿವಾಲಯಂ ॥೫೮॥

ಕಲಿಕಲ್ಮಷ ಸಂಭೂತಾ ಯೇಷಾನುಪಹತಾ ಮತಿಃ ।
ನ ತೇಷಾಂ ವೇದಿತುಂ ಶಕ್ಯಂ ಸ್ಥಾನಂ ತತ್ಪರಮೇಷ್ಠಿನಃ ॥೫೯॥

ಯೇ ಸ್ಮರಂತಿ ಸದಾಕಾಲಂ ವಸಂತಿ ಚ ಪುರೀಮಿಮಾಂ ।
ತೇಷಾಂ ವಿನಶ್ಯತಿ ಕ್ಷಿಪ್ರಂ ಇಹಾಮುತ್ರ ಚ ಪಾತಕಂ ॥೬೦॥

---

೫೬–೫೭ ನಾರದರು ಹೇಳುತ್ತಾರೆ: ದೇವತೆಗಳು, ಋಷಿಗಳು, ಪರಮೇಷ್ಠಿಗಳು ಇವರುಗಳೆದುರಿಗೆ ಸರ್ವಪಾಪನಾಶಕವಾದ ಈ ಮಾತನ್ನು ಪರಮೇಶ್ವರನು ಹೇಳಿದನು. ಹೇಗೆಂದರೆ ದೇವತೆಗಳಲ್ಲಿ ಪುರುಷೋತ್ತಮನಾದ ನಾರಾಯಣನೂ ಈಶ್ವರಲ್ಲಿ ಶಂಕರನೂ ಹೇಗೆ ಶ್ರೇಷ್ಠರೋ ಹಾಗೆಯೇ ಈ ಕಾಶೀಕ್ಷೇತ್ರವು ಉತ್ತಮವಾದುದು.

೫೮. ಪೂರ್ವಜನ್ಮದಲ್ಲಿ ಯಾರು ಈಶ್ವರಾರಾಧನೆಯನ್ನು ಒಂದು ಬಾರಿಯಾದರೂ ಮಾಡಿರುತ್ತಾರೋ ಅವರು ಶಿವನ ಸ್ಥಾನವಾದ ಅವಿಮುಕ್ತ ಕ್ಷೇತ್ರವನ್ನು ಸೇರುತ್ತಾರೆ.

೫೯. ಯಾರ ಬುದ್ಧಿಯು ಕಲಿದೋಷದಿಂದ ಕೆಟ್ಟುಹೋಗಿರುವುದೋ ಅವರಿಗೆ ಉತ್ಕೃಷ್ಟವಾದ ಪರಶಿವನ ಸ್ಥಾನವನ್ನು ತಿಳಿಯಲು ಸಾಧ್ಯವಿಲ್ಲ.

೬೦. ಯಾರು ಸರ್ವಕಾಲದಲ್ಲಿಯೂ ಕಾಶೀ ಕ್ಷೇತ್ರವನ್ನು ಸ್ಮರಿಸುತ್ತಾ ಅದರ ಮಹಿಮೆಯನ್ನು ಹೇಳುತ್ತಿರುವರೋ ಅವರ ಸಮಸ್ತ ಪಾಪವೂ ನಾಶವಾಗುವುದು.

ಯಾನಿ ಚೇಹ ಪ್ರಕುರ್ವಂತಿ ಪಾತಕಾನಿ ಕೃತಾಲಯಾಃ ।
ನಾಶಯೇತ್ತಾನಿ ಸರ್ವಾಣಿ ದೇವಃ ಕಾಲತನುಶ್ಶಿವಃ ॥೬೧॥

ಆಗಚ್ಛೇತ್ತದಿದಂ ಸ್ಥಾನಂ ಸೇವಿತಂ ಮೋಕ್ಷಕಾಂಕ್ಷಿಭಿಃ ।
ಮೃತಾನಾಂ ಚ ಪುನರ್ಜನ್ಮ ನ ಭೂಯೋ ಭವಸಾಗರೇ ॥೬೨॥

ತಸ್ಮಾತ್ಸರ್ವ ಪ್ರಯತ್ನೇನ ವಾರಾಣಸ್ಯಾಂ ವಸೇನ್ನರಃ ।
ಯೋಗೀವಾಪ್ಯಥವಾಯೋಗೀ ಪಾಪೀವಾ ಪುಣ್ಯಕೃತ್ತಮಃ ॥೬೩॥

ನ ಲೋಕವಚನಾತ್ಪಿತ್ರೋರ್ನಚೈವ ಗುರುವಾದತಃ ।
ಮತಿರ್ನಕ್ರಮಣೀಯಾಸ್ಯಾತ್ ಅವಿಮುಕ್ತಗತಿಂ ಪ್ರತಿ ॥೬೪॥

ಶ್ರೀ ಇತಿ ಮಹಾಪುರಾಣೇ ಪಾದ್ಮೇ
ಆದಿಖಂಡೇ ವಾರಣಸಿ ಮಹಾತ್ಮ್ಯೇ ತ್ರಯಸ್ತ್ರಿಂಶೋಽಧ್ಯಾಯಃ

---

೬೧. ಈ ಅವಿಮುಕ್ತ ಕ್ಷೇತ್ರದಲ್ಲಿ ಮನೆಮಾಡಿಕೊಂಡಿರುವವರು ಎಷ್ಟು ಪಾಪವನ್ನು ಮಾಡಿದರೂ ಕಾಲಶರೀರಕನಾದ ಪರಶಿವನು ಅವೆಲ್ಲ ವನ್ನೂ ನಾಶಪಡಿಸುತ್ತಾನೆ.

೬೨. ಮೋಕ್ಷವನ್ನು ಅಪೇಕ್ಷಿಸುವವರು ಈ ಕ್ಷೇತ್ರಕ್ಕೆ ಬಂದು ಪರಶಿವನನ್ನು ಸೇವಿಸಬೇಕು. ಇಲ್ಲಿ ಸತ್ತರೆ ಸಂಸಾರಸಾಗರದಲ್ಲಿ ಪುನ ರ್ಜನ್ಮವಿಲ್ಲ.

೬೩. ಅದ್ದರಿಂದ ಕಾಶಿಯಲ್ಲಿ ಮಾನವನು ಯೋಗಿಯಾಗಿಯಾಗಲಿ ಯೋಗಿಯಾಗಿಲ್ಲದೇ ಇರಲಿ ಪಾಪಿಯಾಗಿಯಾಗಲೀ ಪುಣ್ಯವಂತನಾಗಿ ಯಾಗಲೀ ವಾಸವನ್ನು ಮಾಡಲೇಬೇಕು.

೬೪. ಅವಿಮುಕ್ತಕ್ಕೆ ಹೋಗಬೇಡವೆಂದು ಜನರು ಹೇಳಿದರೂ ತಾಯಿತಂದೆಗಳು ನಿಷೇಧಿಸಿದರೂ, ಗುರುಗಳು ಬೋಧಿಸಿದರೂ, ಬುದ್ಧಿ ಯನ್ನು ಬದಲಾಯಿಸದೆ ಆ ಕ್ಷೇತ್ರಕ್ಕೆ ಹೋಗಲೇಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ವಾರಣಸಿ ಮಹಾತ್ಮೆಯಲ್ಲಿ ಮೂವತ್ಮೂರನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಚತುಸ್ತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ತತ್ರೇದಂ ವಿಮಲಂ ಲಿಂಗಂ ಓಂಕಾರಂ ನಾಮ ಶೋಭನಂ ।
ಯಸ್ಯ ಸ್ಮರಣಮಾತ್ರೇಣ ಮುಚ್ಯತೇ ಸರ್ವ ಪಾತಕೈಃ ॥ ೧ ॥

ಏತತ್ಪರತರಂ ಜ್ಞಾನಂ ಪಂಚಾಯತನಮುತ್ತಮಂ ।
ಸೇವಿತಂ ಮುನಿಭಿರ್ನಿತ್ಯಂ ವಾರಾಣಸ್ಯಾಂ ವಿಮೋಕ್ಷಣಂ ॥ ೨ ॥

ತತ್ರ ಸಾಕ್ಷಾನ್ಮಹಾದೇವಃ ಪಂಚಾಯತನ ವಿಗ್ರಹಃ ।
ರಮತೇ ಭಗವಾನ್ರುದ್ರಃ ಜಂತೂನಾಮಪವರ್ಗದಃ ॥ ೩ ॥

---

### ಪದ್ಮಪುರಾಣದ ಆದಿಖಂಡದ ಮೂವತ್ತನಾಲ್ಕನೆಯ ಅಧ್ಯಾಯವು

೧. ನಾರದರು ಹೇಳುತ್ತಾರೆ: ಆ ಕಾಶಿಯಲ್ಲಿ ಪರಮಪವಿತ್ರವಾದ ಓಂಕಾರೇಶ್ವರನೆಂದು ಪ್ರಸಿದ್ಧವಾದ ಲಿಂಗವಿರುವುದು. ಅದನ್ನು ಸ್ಮರಿಸಿದ ಮಾತ್ರದಿಂದಲೇ ಸಮಸ್ತ ಪಾತಕಗಳೂ ಹೋಗುತ್ತವೆ.

೨. ಕಾಶಿಕ್ಷೇತ್ರದಲ್ಲಿ ಇದು ಉತ್ತಮವಾದ ಜ್ಞಾನವನ್ನು ಕೊಡುವ ಪಂಚಾಯತನವು. ಇದು ಮಹರ್ಷಿಗಳಿಂದ ಸೇವಿಸಲ್ಪಟ್ಟದ್ದು. ಮೋಕ್ಷದಾಯಕವು.

೩. ಅಲ್ಲಿ ಇರುವ ಪಂಚಾಯತನವು ಮಹಾದೇವನನ್ನೇ ಮುಖ್ಯವಾಗಿ ಉಳ್ಳ ಶಿವಪಂಚಾಯತನವು. ಪ್ರಾಣಿಗಳಿಗೆ ಮೋಕ್ಷವನ್ನು ಕೊಡುವ ರುದ್ರನು ಅಲ್ಲಿ ಕ್ರೀಡಿಸುತ್ತಾನೆ.

ಯತ್ತತ್ಪಾಶುಪತಂ ಜ್ಞಾನಂ ಪಂಚಾಯತನಮುಚ್ಯತೇ ।
ತದೇತದ್ವಿಮಲಂ ಲಿಂಗಂ ಓಂಕಾರಂ ಸಮುಪಸ್ಥಿತಂ ॥ ೪ ॥

ಶಾಂತ್ಯತೀತಾ ಯಥಾ ಶಾಂತಿಃ ವಿದ್ಯಾಚೈವಾಪರಾವರಾ ।
ಪ್ರತಿಷ್ಠಾ ಚ ನಿವೃತ್ತಿಶ್ಚ ಪಂಚಾತ್ಮಂ ಲಿಂಗಮೈಶ್ವರಂ ॥ ೫ ॥

ಪಂಚಾನಾಮಪಿದೇವಾನಾಂ ಬ್ರಹ್ಮಾದೀನಾಂ ಸಮಾಶ್ರಯಂ ।
ಓಂಕಾರಬೋಧಕಂ ಲಿಂಗಂ ಪಂಚಾಯತನಮುಚ್ಯತೇ ॥ ೬ ॥

ಸಂಸ್ಮರೇದೈಶ್ವರಂ ಲಿಂಗಂ ಪಂಚಾಯತನಮವ್ಯಯಂ ।
ದೇಹಾಂತೇ ತತ್ಪರಂಜ್ಯೋತಿರಾನಂದಂ ವಿಶತೇ ಬುಧಃ ॥ ೭ ॥

ತತ್ರ ದೇವರ್ಷಯಃ ಪೂರ್ವಂ ಸಿದ್ಧಾ ಬ್ರಹ್ಮರ್ಷಯಸ್ತಥಾ ।
ಉಪಾಸ್ಯ ದೇವಮೀಶಾನಂ ಆಪುರಂ ತೇ ಪರಂ ಪದಂ ॥ ೮ ॥

---

೪. ಪಶುಪತಿಯ ಸಂಬಂಧವಾದ ಜ್ಞಾನವೇ ಪಂಚಾಯತನವೆಂದು ಹೇಳಲ್ಪಡುವುದು. ಓಂಕಾರವೇ ಪವಿತ್ರವಾದ ಲಿಂಗವಾಗಿ ಪರಿವರ್ತಿಕವಾಗಿದೆ.

೫. ಶಾಂತಿಗೆ ಮೀರಿದ ಶಾಂತಿ, ಅಪರವಿದ್ಯೆ, ಅವರವಿದ್ಯೆ, ಪ್ರತಿಷ್ಠಾ ಮತ್ತು ನಿವೃತ್ತಿ ಈ ಐದೂ ಸೇರಿದರೆ ಪಂಚಾತ್ಮಕವಾದ ಓಂಕಾರೇಶ್ವರ ಲಿಂಗವು.

೬. ಬ್ರಹ್ಮಾದಿ ಐದು ದೇವತೆಗಳ ಸೇರುವಿಕೆಯೇ ಓಂಕಾರಪ್ರತಿಪಾದ್ಯವಾದ ಲಿಂಗವೆಂದೂ ಪಂಚಾಯತನವೆಂದೂ ಹೇಳಲ್ಪಡುತ್ತದೆ.

೭. ಈಶ್ವರ ಸಂಬಂಧವಾದ ಲಿಂಗಪಂಚಾಯತನವನ್ನು ಸ್ಮರಿಸುತ್ತಿರಬೇಕು. ವಿದ್ವಾಂಸನು ಮೃತನಾದಮೇಲೆ ಆನಂದಮಯವಾದ ಜ್ಯೋತಿಸ್ಸ್ವರೂಪವನ್ನು ಹೊಂದುತ್ತಾನೆ.

೮. ಅಲ್ಲಿ ಮೊದಲು ದೇವರ್ಷಿಗಳು ಸಿದ್ಧರು ಬ್ರಹ್ಮರ್ಷಿಗಳು ಈಶ್ವರನನ್ನು ಉಪಾಸನೆ ಮಾಡಿ ಕಡೆಯಲ್ಲಿ ಮೋಕ್ಷವನ್ನು ಹೊಂದಿದರು.

**ಮತ್ಸ್ಯೋದರ್ಯಾಸ್ತಟೇ ಪುಣ್ಯೇ ಸ್ಥಾನಂ ಗುಹ್ಯತಮಂ ಶುಭಂ।**
**ಗೋಚರ್ಮಮಾತ್ರಂ ರಾಜೇಂದ್ರ ಓಂಕಾರೇಶ್ವರಮೀಡಿತಂ ॥ ೯ ॥**

**ಕೃತ್ತಿವಾಸೇಶ್ವರಂ ಲಿಂಗಂ ಮಧ್ಯಮೇಶ್ವರಮುತ್ತಮಂ।**
**ವಿಶ್ವೇಶ್ವರಂ ತಥೋಂಕಾರಂ ಕಂದರ್ಪೇಶ್ವರಮೇವ ಚ ॥ ೧೦ ॥**

**ಏತಾನಿ ಗುಹ್ಯಲಿಂಗಾನಿ ವಾರಾಣಸ್ಯಾಂ ಯುಧಿಷ್ಠಿರ।**
**ನ ಕಶ್ಚಿದಿಹ ಜಾನಾತಿ ವಿನಾ ಶಂಭೋರನುಗ್ರಹಾತ್ ॥ ೧೧ ॥**

**ಕೃತ್ತಿವಾಸೇಶ್ವರಸ್ಯೈವ ಮಾಹಾತ್ಮ್ಯಂ ಶೃಣು ಪಾರ್ಥಿವ।**
**ತಸ್ಮಿನ್ ಸ್ಥಾನೇ ಪುರಾ ದೈತ್ಯೋ ಹಸ್ತೀಭೂತ್ವಾ ಶಿವಾಂತಕಂ ॥೧೨॥**

**ಬ್ರಾಹ್ಮಣಾನ್ ಹಂತುಮಾಯಾತೋ ಯತ್ರ ನಿತ್ಯಮುಪಾಸತೇ।**
**ತೇಷಾಂ ಲಿಂಗಾನ್ಮಹಾದೇವಃ ಪ್ರಾದುರಾಸೀತ್ತ್ರಿಲೋಚನಃ ॥೧೩॥**

---

೯ ಗಂಗೆಯ ಮತ್ಸ್ಯೋದರೀ ತೀರ್ಥದ ದಡದಲ್ಲಿ ಗೋಚರ್ಮ ಪ್ರಮಾಣ ಭೂಮಿಯಲ್ಲಿ ಗೋಪ್ಯವಾದ ಮಂಗಳಕರವಾದ ಓಂಕಾರೇಶ್ವರ ಲಿಂಗವಿರುವುದು.

೧೦–೧೧. ಎಲೈ ಧರ್ಮರಾಜನೇ, ಕೃತ್ತಿವಾಸೇಶ್ವರ, ಮಧ್ಯಮೇಶ್ವರ, ವಿಶ್ವೇಶ್ವರ, ಓಂಕಾರೇಶ್ವರ, ಕಂದರ್ಪೇಶ್ವರ ಎಂಬ ಲಿಂಗಗಳು ಕಾಶಿಯಲ್ಲಿ ಗೂಢವಾಗಿರುವುವು. ಶಂಕರಾನುಗ್ರಹವಿಲ್ಲದೇ ಇವು ಯಾರಿಗೂ ತಿಳಿಯುವುದಿಲ್ಲ.

೧೨–೧೩. ಎಲೈ ಯುಧಿಷ್ಠಿರನೇ! ಕೃತ್ತಿವಾಸೇಶ್ವರನ ಮಾಹಾತ್ಮ್ಯವನ್ನು ಹೇಳುತ್ತೇನೆ, ಕೇಳು. ಪೂರ್ವದಲ್ಲಿ ಆ ಕ್ಷೇತ್ರದಲ್ಲಿ ಒಬ್ಬ ದೈತ್ಯನು ಆನೆಯಸ್ವರೂಪದಿಂದ ಶಿವನನ್ನು ಆರಾಧಿಸುತ್ತಿರುವ ಬ್ರಾಹ್ಮಣರನ್ನು ಕೊಲ್ಲಲು ಬಂದನು. ಕೂಡಲೇ ಆ ಲಿಂಗದಿಂದ ತ್ರಿಲೋಚನನಾದ ಮಹಾದೇವನು ಆವಿರ್ಭವಿಸಿದನು. ಭಕ್ತಪರಾಧೀನನಾದ ಶಿವನು ಭಕ್ತರನ್ನು ಕಾಪಾಡುವುದಕ್ಕೋಸ್ಕರ ಆನೆಯ ರೂಪದಿಂದಿರುವ ಆ ದೈತ್ಯನನ್ನು

ರಕ್ಷಣಾರ್ಥಂ ಮಹಾದೇವಃ ಭಕ್ತಾನಾಂ ಭಕ್ತವತ್ಸಲಃ ।
ಹತ್ವಾ ಗಜಾಕೃತಿಂ ದೈತ್ಯಂ ಶೂಲೇನಾವಜ್ಞಯಾ ಹರಃ ॥೧೪॥
ವಾಸಸ್ತಸ್ಯಾಂ ಕರೋತ್ಕೃತ್ತಿಂ ಕೃತ್ತಿವಾಸೇಶ್ವರಸ್ತತಃ ।
ತತ್ರ ಸಿದ್ಧಿಂ ಪರಾಂ ಪ್ರಾಪ್ತಾಃ ಮುನಯೋ ಹಿ ಯುಧಿಷ್ಠಿರ ॥೧೫॥
ತೇನೈವಂ ಚ ಶರೀರೇಣ ಪ್ರಾಪ್ತಾಸ್ತತ್ಪರಮಂ ಪದಂ
ವಿದ್ಯಾ ವಿದ್ಯೇಶ್ವರಾ ರುದ್ರಾ ಶ್ಶಿವಾ ಯೇ ಚ ಪ್ರಕೀರ್ತಿತಾಃ ।
ಕೃತ್ತಿವಾಸೇಶ್ವರಂ ಲಿಂಗಂ ನಿತ್ಯಮಾಶ್ರಿತ್ಯ ಸಂಸ್ಥಿತಾಃ ॥೧೬॥
ಜ್ಞಾತ್ವಾ ಕಲಿಯುಗಂ ಘೋರಂ ಅಧರ್ಮಬಹುಳಂ ಜನಾಃ ।
ಕೃತ್ತಿವಾಸಂ ನ ಮುಂಚಂತಿ ಕೃತಾರ್ಥಾಸ್ತೇ ನ ಸಂಶಯಃ ॥೧೭॥
ಜನ್ಮಾಂತರಸಹಸ್ರೇಣ ಮೋಕ್ಷೋಽನ್ಯತ್ರಾಽಽಪ್ಯತೇ ನ ವಾ ।
ಏಕೇನ ಜನ್ಮನಾ ಮೋಕ್ಷಃ ಕೃತ್ತಿವಾಸೇಽತ್ರ ಲಭ್ಯತೇ ॥೧೮॥

---

ಲೀಲಾ ಜಾಲವಾಗಿ ಶೂಲಾಯುಧದಿಂದ ಕೊಂದು ಆ ಆನೆಯ ಚರ್ಮವನ್ನು ಹೊದೆದುಕೊಂಡ ಪ್ರಯುಕ್ತ ಕೃತ್ತಿವಾಸೇಶ್ವರನೆಂಬ ಹೆಸರಿನಿಂದ ಪ್ರಸಿದ್ಧನಾದನು. ಅಲ್ಲಿ ಅನೇಕ ಮುನಿಗಳು ಸಿದ್ಧಿಯನ್ನು ಹೊಂದಿ ಅದೇ ಶರೀರದಿಂದ ಪರಮಪದವನ್ನೂ ಹೊಂದಿದರು.

೧೬. ಸಮಸ್ತ ವಿದ್ಯೆಗಳೂ, ವಿದ್ಯಾಧಿಪತಿಗಳೂ, ಏಕಾದಶರುದ್ರರೂ ಸಹ ಕೃತ್ತಿವಾಸೇಶ್ವರನನ್ನು ಯಾವಾಗಲೂ ಆಶ್ರಯಿಸಿಕೊಂಡು ಇರುವರು.

೧೭. ಜನಗಳು ಕಲಿಯುಗವನ್ನು ಘೋರವೆಂದೂ, ಅಧರ್ಮವು ಬಹಳ ಹೆಚ್ಚುವುದೆಂದೂ ತಿಳಿದು, ಕೃತ್ತಿವಾಸೇಶ್ವರನನ್ನು ಬಿಡದೆ ಇರುತ್ತಾರೆ. ಅವರು ಕೃತಾರ್ಥರಾಗುತ್ತಾರೆ. ಇದರಲ್ಲಿ ಸಂಶಯವಿಲ್ಲ.

೧೮. ಬೇರೆ ಸ್ಥಳದಲ್ಲಿ ಸಾವಿರಜನ್ಮಗಳ ಕಾಲ ತೀರ್ಥಯಾತ್ರೆ ಮಾಡಿದರೂ ಮೋಕ್ಷವು ದೊರೆಯುವುದೋ ಇಲ್ಲವೋ ಗೊತ್ತಿಲ್ಲ. ಈ ಕೃತ್ತಿವಾಸೇಶ್ವರನ ಸೇವೆಯಿಂದ ಒಂದೇ ಜನ್ಮದಲ್ಲಿ ಮೋಕ್ಷವು ಲಭ್ಯವಾಗುವುದು.

ಆಲಯಂ ಸರ್ವಸಿದ್ಧಾನಾಂ ಏತತ್ಸ್ಥಾನಂ ವದಂತಿ ಹಿ ।
ಗೋಪಿತಂ ದೇವದೇವೇನ ಮಹಾದೇವೇನ ಶಂಭುನಾ ॥೧೯॥

ಯುಗೇ ಯುಗೇ ಹ್ಯತ್ರ ದಾಂತಾಃ ಬ್ರಾಹ್ಮಣಾ ವೇದಪಾರಗಾಃ।
ಉಪಾಸತೇ ಮಹಾತ್ಮಾನಂ ಜಪಂತಿ ಶತರುದ್ರಿಯಂ ॥೨೦॥

ಸ್ತುವಂತಿ ಸತತಂ ದೇವಂ ತ್ರ್ಯಂಬಕಂ ಕೃತ್ತಿವಾಸಸಂ ।
ಧ್ಯಾಯಂತಿ ಹೃದಯೇ ದೇವಂ ಸ್ಥಾಣುಂ ಸರ್ವಾಂತರಂ ಶಿವಂ॥೨೧॥

ಗಾಯಂತಿ ಸಿದ್ಧಾಃ ಕಿಲ ಗೀತಕಾನಿ।
ವಾರಾಣಸೀಂ ಯೇ ನಿವಸಂತಿ ವಿಪ್ರಾಃ ॥
ತೇಷಾಮಥೈಕೇನ ಭವೇನ ಮುಕ್ತಿಃ
ಯೇ ಕೃತ್ತಿವಾಸಂ ಶರಣಂ ಪ್ರಪನ್ನಾಃ ॥೨೨॥

---

೧೯. ಈ ಕ್ಷೇತ್ರವು ಸರ್ವಸಿದ್ಧಿಗಳಿಗೂ ಮನೆಯೆಂದು ಹೇಳುತ್ತಾರೆ. ದೇವದೇವನೂ ಮಹಾದೇವನೂ ಆದ ಶಂಭುವಿನಿಂದ ಈ ಸ್ಥಳವು ಗೋಪ್ಯವಾಗಿಡಲ್ಪಟ್ಟಿದೆ. ಅಂದರೆ ಕ್ರೂರಕರ್ಮನಿರತರಾದವರಿಗೆ ಈ ಕ್ಷೇತ್ರವು ಗೋಚರವಾಗುವುದಿಲ್ಲ.

೨೦. ಪ್ರತಿಯುಗದಲ್ಲಿಯೂ ನಿಯಮವುಳ್ಳ, ವೇದಪಾರಂಗತರಾದ ಬ್ರಾಹ್ಮಣರು ಈ ಕೃತ್ತಿವಾಸೇಶ್ವರನನ್ನು ಉಪಾಸನೆ ಮಾಡುತ್ತಾ ಶತ ರುದ್ರೀಯಯನ್ನು ಜಪಿಸುತ್ತಾ ಇರುತ್ತಾರೆ.

೨೧. ಅಲ್ಲಿ ಯಾವಾಗಲೂ ಸರ್ವಾಂತರ್ಯಾಮಿಯಾದ ತ್ರಿಲೋಚನ ನಾದ ಸ್ಥಾಣುವೆಂದೂ ಕೃತ್ತಿವಾಸನೆಂಗೂ ಹೆಸರುಳ್ಳ ಶಿವನನ್ನು ವಿಪ್ರರು ಸ್ತುತಿಸುತ್ತಾ ಹೃದಯದಲ್ಲಿ ಧ್ಯಾನಿಸುತ್ತಿರುತ್ತಾರೆ.

೨೨. ಯಾವ ಬ್ರಾಹ್ಮಣರು ಕಾಶೀಕ್ಷೇತ್ರವಾಸಿಗಳಾಗಿ ಕೃತ್ತಿವಾಸೇ ಶ್ವರನನ್ನು ಅನನ್ಯ ಶರಣನನ್ನಾಗಿ ತಿಳಿದುಕೊಂಡು ಇದ್ದಾರೋ ಅವರಿಗೆ ಒಂದೇ ಜನ್ಮದಲ್ಲಿ ಮುಕ್ತಿಯುಂಟಾಗುತ್ತದೆ, ಎಂದು ಸಿದ್ಧರು ಗಾನ ಮಾಡುತ್ತಿರುವರು.

ಸಂಪ್ರಾಪ್ಯ ಲೋಕೇ ಜಗತಾಮಭೀಷ್ಟಂ ।
ಸುದುರ್ಲಭಂ ವಿಪ್ರಕುಲೇಷು ಜನ್ಮ ॥
ಧ್ಯಾನೇ ಸಮಾಧಾಯ ಜಪಂತಿ ರುದ್ರಂ ।
ಧ್ಯಾಯಂತಿ ಚಿತ್ತೇ ಯತಯೋ ಮಹೇಶಂ ॥೨೩॥

ಆರಾಧಯಂತಿ ಪ್ರಭುಮೀಶಿತಾರಂ ।
ವಾರಾಣಸೀ ಮಧ್ಯಗತಾ ಮುನೀಂದ್ರಾಃ ॥
ಯಜಂತಿ ಯಜ್ಞೈರಭಿಸಂಧಿಹೀನಾಃ ।
ಸ್ತುವಂತಿ ರುದ್ರಂ ಪ್ರಣಮಂತಿ ಶಂಭುಂ ॥೨೪॥

ನಮೋಭವಾಯಾಽಮಲಯೋಗಧಾಮ್ನೇ ।
ಸ್ಥಾಣುಂ ಪ್ರಪದ್ಯೇ ಗಿರಿಶಂ ಪುರಾಣಂ ॥
ಸ್ಮರಾಮಿ ರುದ್ರಂ ಹೃದಯೇ ನಿವಿಷ್ಟಂ ।
ಜಾನೇ ಮಹಾದೇವಮನಂತರೂಪಂ ॥೨೫॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ವಾರಣಸಿ ಮಹಾತ್ಮ್ಯೇ ಚತುಸ್ತ್ರಿಂಶೋಽಧ್ಯಾಯಃ

---

೨೩. ಲೋಕದಲ್ಲಿ ಎಲ್ಲರೂ ಅಪೇಕ್ಷಿಸುವ ಮತ್ತು ದುರ್ಲಭವಾದ ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಯತಿಗಳಾಗಿ ಹೃದಯದಲ್ಲಿ ಮಹೇಶ್ವರನನ್ನು ಧ್ಯಾನಿಸುತ್ತಾ ಶ್ರೀ ರುದ್ರವನ್ನು ಜಪ ಮಾಡುತ್ತಾ ಈಶನನ್ನು ಧ್ಯಾನಿಸುವರು.

೨೪. ವಾರಣಸೀ ಕ್ಷೇತ್ರದಲ್ಲಿ ಮುನೀಂದ್ರರು ವಾಸಮಾಡಿಕೊಂಡು ಪ್ರಭುವಾದ ಈಶ್ವರನನ್ನು ಆರಾಧನೆ ಮಾಡುತ್ತಾರೆ. ಶಿವನನ್ನುದ್ದೇಶಿಸಿ ನಿಷ್ಕಾಮರಾಗಿ ಯಜ್ಞಗಳನ್ನು ಮಾಡುತ್ತಾರೆ. ಶಂಭುವನ್ನು ಸ್ತುತಿಸಿ ನಮಸ್ಕರಿಸುತ್ತಾರೆ.

೨೫. ಶುಭ್ರವಾದ ಯೋಗ ನಿರತನಾದ ಭವನಿಗೆ ನಮಸ್ಕಾರವು. ಪುರಾತನನಾದ ಗಿರಿಶನಾದ ಸ್ಥಾಣುವನ್ನು ಮರೆಹೊಗುವೆನು. ನನ್ನ ಹೃದಯಾಂತರ್ಯಾಮಿಯಾದ ರುದ್ರನನ್ನು ಸ್ಮರಿಸುವೆನು. ಮಹಾದೇವನನ್ನು ನಾನಾ ರೂಪಗಳುಳ್ಳವನೆಂದು ನಾನು ತಿಳಿದುಕೊಂಡಿರುವೆನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ವಾರಣಸಿ ಮಹಾತ್ಮೆಯಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಪಂಚತ್ರಿಂಶೋಽಧ್ಯಾಯಃ

### ॥ ನಾರದ ಉವಾಚ ॥

ಅಥಾನ್ಯತ್ತತ್ರವೈಲಿಂಗಂ ಕಪರ್ದೀಶ್ವರಮವ್ಯಯಂ ।
ಸ್ನಾತ್ವಾ ತತ್ರ ವಿಧಾನೇನ ತರ್ಪಯಿತ್ವಾ ಪಿತೄನ್ನೃಪ ॥ ೧ ॥

ಮುಚ್ಯತೇ ಸರ್ವಪಾಪೇಭ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ।
ಪಿಶಾಚಮೋಚನಂ ನಾಮ ತೀರ್ಥಮನ್ಯತ್ತತಸ್ಸ್ಥಿತಂ ॥ ೨ ॥

ತತ್ರಾಶ್ಚರ್ಯಮಯೋ ದೇವೋ ಮುಕ್ತಿದಸ್ಸರ್ವದೋಷಹಾ ।
ಕಶ್ಚಿದ್ದೈತ್ಯೋ ಜಗಾಮೇದಂ ಶಾರ್ದೂಲೋ ಘೋರರೂಪಧೃತ್ ।
ಮೃಗೀಮೇಕಾಂಭಕ್ಷಯಿತುಂ ಕಪರ್ದೀಶ್ವರ ಮುತ್ತಮಂ ॥ ೩ ॥

---

ಪದ್ಮ ಪುರಾಣದ ಆದಿಖಂಡದ ಮೂವತ್ತೈದನೆಯ ಅಧ್ಯಾಯವು

೧. ನಾರದರು ಹೇಳುತ್ತಾರೆ. ಆಮೇಲೆ ಆ ಕಾಶಿಯಲ್ಲಿ ನಾಶ ರಹಿತವಾದ ಕಪರ್ದೀಶ್ವರನೆಂದು ಪ್ರಸಿದ್ಧವಾದ ಒಂದು ಲಿಂಗವಿರುವುದು. ಅಲ್ಲಿ ಗಂಗೆಯಲ್ಲಿ ಸ್ನಾನಮಾಡಿ ಪಿತೃಗಳನ್ನು ತರ್ಪಣದಿಂದ ತೃಪ್ತಿಪಡಿಸಿದರೆ ಇಹಲೋಕದಲ್ಲಿ ಭುಕ್ತಿಯೂ (ಅನ್ನವೂ) ಪರಲೋಕದಲ್ಲಿ ಮುಕ್ತಿಯೂ ಲಭಿಸುವುದು.

೨. ಪಿಶಾಚಮೋಚನವೆಂಬ ಮತ್ತೊಂದು ತೀರ್ಥವು ಆ ಕಾಶಿಯಲ್ಲಿರುವುದು. ಅಲ್ಲಿರತಕ್ಕ ಸ್ವಾಮಿಯು ತುಂಬಾ ಆಶ್ಚರ್ಯವನ್ನುಂಟು ಮಾಡುವವನಾಗಿಯೂ ಸಮಸ್ತ ದೋಷಗಳನ್ನೂ ನೀಗಿಸುವವನಾಗಿಯೂ ಮೋಕ್ಷವನ್ನು ಕೊಡುವವನಾಗಿಯೂ ಇರುತ್ತಾನೆ.

೩–೪. ಒಬ್ಬಾನೊಬ್ಬ ರಾಕ್ಷಸನು ಕ್ರೂರವಾದ ಹುಲಿಯ ರೂಪವನ್ನು ಧರಿಸಿ ಒಂದು ಹೆಣ್ಣುಜಿಂಕೆಯನ್ನು ತಿನ್ನಲು ಹೊರಟನು. ಆ

ತತ್ರ ಸಾ ಭೀತಹೃದಯಾ ಕೃತ್ವಾ ಕೃತ್ವಾ ಪ್ರದಕ್ಷಿಣಂ ।
ಧಾವಮಾನಾ ಸುಸಂಭ್ರಾಂತಾ ವ್ಯಾಘ್ರಸ್ಯ ವಶಮಾಗತಾ ॥ ೪ ॥

ತಾಂ ವಿದಾರ್ಯ ನಖೈಸ್ತೀಕ್ಷ್ಣೈಃ ಶಾರ್ದೂಲಸ್ಸುಮಹಾಬಲಃ ।
ಜಗಾಮ ಚಾನ್ಯವಿಜನಂ ದೇಶಂ ದೃಷ್ಟ್ವಾ ಮುನೀಶ್ವರಾನ್ ॥ ೫ ॥

ಮೃತಮಾತ್ರಾ ಚ ಸಾ ಬಾಲ ಕಪರ್ದೀಶಾಗ್ರತೋ ಮೃಗೀ ।
ಅದೃಶ್ಯತ ಮಹಾಜ್ವಾಲಾ ವ್ಯೋಮ್ನಿ ಸೂರ್ಯಸಮಪ್ರಭಾ ॥ ೬ ॥

ತ್ರಿನೇತ್ರಾ ನೀಲಕಂಠಾ ಚ ಶಶಾಂಕಾಂಕಿತ ಮೂರ್ಧಜಾ ।
ವೃಷಾಧಿರೂಢಾ ಪುರುಷೈಃ ತಾದೃಶೈರೇವ ಸಂವೃತಾ ॥ ೭ ॥

ಪುಷ್ಪವೃಷ್ಟಿಂ ವಿಮುಂಚಂತಿ ಖೇಚರಾಸ್ತತ್ರಮಂ ತತಃ ।
ಗಣೇಶ್ವರೀ ಸ್ವಯಂಭೂತ್ವಾ ನ ದೃಷ್ಟಾ ತತ್ಕ್ಷಣಾತ್ತತಃ ॥ ೮ ॥

---

ಜಿಂಕೆಯು ಭೀತಿಗೊಂಡು ಅಲ್ಲಿದ್ದ ಕಪರ್ದೀಶ್ವರನನ್ನು ಕುರಿತು ಓಡಿ ಬಂದು ಪುನಃ ಪುನಃ ಪ್ರದಕ್ಷಿಣ ಮಾಡುತ್ತಿರುವಾಗ ದಿಕ್ಕುತೋರದೆ ಕೊನೆಗೆ ಹುಲಿಯ ವಶವಾಯಿತು.

೫. ಬಲಶಾಲಿಯಾದ ಹುಲಿಯು ನಖಗಳಿಂದ ಜಿಂಕೆಯನ್ನು ಸೀಳಿ ಅಲ್ಲಿರುವ ಮುನಿಜನಗಳನ್ನು ನೋಡಿ ಭೀತಿಪಟ್ಟು ಬೇರೆ ನಿರ್ಜನ ಪ್ರದೇಶಕ್ಕೆ ಹೊರಟಿತು.

೬-೭. ಆ ಕಪರ್ದೀಶ್ವರನ ಮುಂಭಾಗದಲ್ಲಿ ಎಳೆಯ ವಯಸ್ಸುಳ್ಳ ಹೆಣ್ಣು ಜಿಂಕೆಯು ಸತ್ತಕೂಡಲೇ ಅಂತರಿಕ್ಷದಲ್ಲಿ ಒಂದು ಮಹಾ ಜಾಜ್ವಲ್ಯಮಾನವಾದ ಸೂರ್ಯಸಮವಾದ ಕಾಂತಿಯು ಕಂಡಿತು. ಅದು ಮೂರು ಕಣ್ಣುಳ್ಳದ್ದಾಗಿಯೂ ನೀಲಕಂಠವುಳ್ಳದ್ದಾಗಿಯೂ ತಲೆಯಲ್ಲಿ ಚಂದ್ರನನ್ನುಳ್ಳದಾಗಿಯೂ ವೃಷಭದಮೇಲೆ ಕೂತುಕೊಂಡು ಶಿವಗಣಗಳಿಂದ ಅನುಸರಿಸಲ್ಪಡುತ್ತಲೂ ಕಾಣಲ್ಪಟ್ಟಿತು.

೮. ದೇವತೆಗಳು ಅದರಸುತ್ತಲೂ ಪುಷ್ಪವರ್ಷಣವನ್ನು ಮಾಡಿದರು. ಅದು ಸುತ್ತಲೂ ಇದ್ದ ಗಣಗಳಿಗೆ ಈಶ್ವರಿಯಾಗಿ ಅಂತರ್ಧಾನವಾಯಿತು.

ದೃಷ್ಟ್ವಾ ತದಾಶ್ಚರ್ಯವರಂ ಪ್ರಶಶಂಸುಸ್ಸುರಾದಯಃ ।
ತನ್ಮಹೇಶಸ್ಯ ವೈಲಿಂಗಂ ಕಪರ್ದೀಶ್ವರ ಮುತ್ತಮಂ ॥ ೯ ॥

ಸ್ಮೃತ್ವೈನಾಶೇಷ ಪಾಪೌಘಾತ್ ಕ್ಷಿಪ್ರಮೇವ ವಿಮುಚ್ಯತೇ ।
ಕಾಮಕ್ರೋಧಾದಯೋ ದೋಷಾ ವಾರಾಣಸಿ ನಿವಾಸಿನಾಂ ॥೧೦॥

ವಿಘ್ನಾಸ್ಸರ್ವೇ ವಿನಶ್ಯಂತಿ ಕಪರ್ದೀಶ್ವರ ಪೂಜನಾತ್ ।
ತಸ್ಮಾತ್ಸದೈವ ದ್ರಷ್ಟವ್ಯಂ ಕಪರ್ದೀಶ್ವರ ಮುತ್ತಮಂ ॥೧೧॥

ಪೂಜಿತವ್ಯಂ ಪ್ರಯತ್ನೇನ ಸ್ತೋತವ್ಯ ವೈದಿಕೈಸ್ತ್ವೈಃ ।
ಧ್ಯಾಯತಾಂ ಚಾತ್ರನಿಯತಂ ಯೋಗಿನಾಂ ಶಾಂತಚೇತಸಾಂ ॥೧೨॥

ಜಾಯತೇ ಯೋಗಸಿದ್ಧಿಸ್ಸ್ಯಾತ್ ಷಣ್ಮಾಸೇನ ನಸಂಶಯಃ ।
ಬ್ರಹ್ಮಹತ್ಯಾದಯಃ ಪಾಪಾಃ ವಿನಶ್ಯಂತ್ಯಸ್ಯ ಪೂಜನಾತ್ ॥೧೩॥

---

೯. ಈ ಆಶ್ಚರ್ಯವನ್ನು ಕಂಡು ದೇವತೆಗಳೆಲ್ಲರೂ ಹೊಗಳಿದರು. ಇಷ್ಟು ಮಹಾಮಹಿಮೆಗೆ ಕಾರಣವಾದ ಮಹೇಶಲಿಂಗವನ್ನು ಕಪರ್ದೀಶ್ವರನೆಂದು ಕರೆಯುತ್ತಾರೆ.

೧೦. ಕಾಶಿಯಲ್ಲಿದ್ದುಕೊಂಡು ಕಪರ್ದೀಶ್ವರನನ್ನು ಸ್ಮರಿಸಿದರೆ ಎಲ್ಲಾ ಪಾಪಗಳೂ ನಾಶವಾಗುವುದಲ್ಲದೆ ಕಾಮಕ್ರೋಧಾದಿ ದೋಷಗಳೂ ನಾಶವಾಗುತ್ತವೆ.

೧೧. ಕಪರ್ದೀಶ್ವರನ ದರ್ಶನದಿಂದ ಸಮಸ್ತ ವಿಘ್ನಗಳೂ ನಾಶವಾಗುವುವು. ಆದ್ದರಿಂದ ಸರ್ವದಾ ಕಪರ್ದೀಶ್ವರನನ್ನು ನೋಡುತ್ತಿರಬೇಕು. ಪ್ರಯತ್ನದಿಂದ ಪೂಜಿಸಬೇಕು. ವೈದಿಕ ಮಂತ್ರಗಳಿಂದ ಸ್ತೋತ್ರಮಾಡಬೇಕು.

೧೨-೧೩. ಶಾಂತಚಿತ್ತರಾಗಿ ಇಲ್ಲಿ ನಿಯಮದಿಂದ ಧ್ಯಾನಮಾಡುವವರಿಗೆ ಆರು ತಿಂಗಳಲ್ಲಿ ಯೋಗಸಿದ್ಧಿಯುಂಟಾಗುತ್ತದೆ. ಈ ಈಶ್ವರನ ಪೂಜೆಯಿಂದ ದೋಷಗಳು ನಾಶವಾಗುತ್ತವೆ.

ಪಿಶಾಚಮೋಚನೇ ಕುಂಡೇ ಸ್ನಾತಸ್ಯ ತು ಸಮಾಸತಃ ।
ತಸ್ಮಿನ್ ಕ್ಷೇತ್ರೇ ಪುರಾ ವಿಪ್ರಃ ತಪಸ್ವೀ ಸಂಶಿತವ್ರತಃ ॥೧೪॥
ಶಂಖಕರ್ಣ ಇತಿಖ್ಯಾತಃ ಪೂಜಯಾಮಾಸ ಶಂಕರಂ ।
ಜಜಾಪ ರುದ್ರಮನಿಶಂ ಪ್ರಣವಂ ಬ್ರಹ್ಮರೂಪಿಣಂ ॥೧೫॥
ಪುಷ್ಪಧೂಪಾದಿಭಿಸ್ತೋತ್ರೈಃ ನಮಸ್ಕಾರೈಃ ಪ್ರದಕ್ಷಿಣೈಃ ।
ಉಪಾಸೀತಾತ್ರ ಯೋಗಾತ್ಮಾ ಕೃತ್ವಾ ದೀಕ್ಷಾಂತು ನೈಷ್ಠಿಕೀಂ॥೧೬॥
ಕದಾಚಿದಾಗತಂ ಪ್ರೇತಂ ಪಶ್ಯತಿ ಸ್ಮ ಕ್ಷುಧಾನ್ವಿತಂ ।
ಅಸ್ಥಿಚರ್ಮ ಪಿನದ್ಧಾಂಗಂ ನಿಶ್ವಸಂತಂ ಮುಹುರ್ಮುಹುಃ ॥೧೭॥
ತಂ ದೃಷ್ಟ್ವಾ ಸ ಮುನಿಶ್ರೇಷ್ಠೋ ಕೃಪಯಾ ಪರಯಾ ಯುತಃ ।
ಪ್ರೋವಾಚ ಕೋ ಭವಾನ್ಕಸ್ಮಾದ್ದೇಶಾದ್ದೇಶಮಿಮಂಶ್ರಿತಃ ॥೧೮॥

---

೧೪. ಪಿಶಾಚಮೋಚನವೆಂಬ ಒಂದು ತೀರ್ಥಕುಂಡವಿದೆ. ಅದರಲ್ಲಿ ಸ್ನಾನಮಾಡಿದರೆ ಉಂಟಾಗುವ ಮಹಿಮೆಯನ್ನು ಹೇಳುವೆನು ಕೇಳು. ಆ ಕ್ಷೇತ್ರದಲ್ಲಿ ಒಬ್ಬ ತಪಸ್ವಿಯು ಮಹಾ ನಿಯಮದಿಂದಿದ್ದನು.

೧೫. ಅವನ ಹೆಸರು ಶಂಖಕರ್ಣನೆಂದು. ಆತನು ಪ್ರಣವಸ್ವರೂಪಿಯಾದ ಆ ರುದ್ರನನ್ನು ಪೂಜಿಸುತ್ತ ಶತರುದ್ರಿಯವನ್ನು ಪಾರಾಯಣ ಮಾಡುತ್ತ ಧ್ಯಾನಿಸುತ್ತಿದ್ದನು.

೧೬. ಆತನು ಶಿವದೀಕ್ಷೆಯನ್ನು ಹೊಂದಿ ಪುಷ್ಪ, ಧೂಪ, ಸ್ತೋತ್ರ ಪ್ರದಕ್ಷಿಣ, ನಮಸ್ಕಾರಗಳಿಂದ ಆ ದೇವನನ್ನು ಉಪಾಸನೆ ಮಾಡುತ್ತಿದ್ದನು.

೧೭. ಅವನು ಒಂದುಸಾರಿ ಮೂಳೆ, ಚರ್ಮ ಮಾತ್ರವಿದ್ದು ಹಸಿವುಗೊಂಡ, ಪುನಃ ಪುನಃ ನಿಟ್ಟುಸಿರುಬಿಡುತ್ತಿರುವ ಒಂದು ಪ್ರೇತವನ್ನು ನೋಡಿದನು.

೧೮. ಆ ಮುನಿಯು ಆ ಪ್ರೇತವನ್ನು ನೋಡಿ ಅತ್ಯಂತ ದಯೆಯಿಂದ ಕೂಡಿದವನಾಗಿ ನೀನು ಯಾರು? ಎಲ್ಲಿಂದ ಬಂದೆ? ಎಂದು ಕೇಳಿದನು.

ತಸ್ಮೈ ಪಿಶಾಚಃ ಕ್ಷುಧಯಾ ಪೀಡ್ಯಮಾನೋಽಬ್ರವೀದ್ವಚಃ ।
ಪೂರ್ವಜನ್ಮನ್ಯಹಂ ವಿಪ್ರಃ ಧನಧಾನ್ಯಸಮನ್ವಿತಃ ॥೧೯॥
ಪುತ್ರಪೌತ್ರಾದಿಭಿರ್ಯುಕ್ತಃ ಕುಟುಂಬಭರಣೋತ್ಸುಕಃ ।
ನ ಪೂಜಿತಾ ಮಯಾದೇವಾಃ ಗಾವೋಽಪ್ಯತಿಥಯಸ್ತಥಾ ।
ನ ಕದಾಚಿತ್ಕೃತಂ ಪುಣ್ಯಂ ಅಲ್ಪಂ ವಾ ಸ್ವಲ್ಪಮೇವ ವಾ ॥೨೦॥
ಏಕದಾ ಭಗವಾನ್ ದೇವೋ ಗೋವೃಷೇಶ್ವರವಾಹನಃ ।
ವಿಶ್ವೇಶ್ವರೋ ವಾರಣಸ್ಯಾಂ ದೃಷ್ಟಸ್ಸ್ಪೃಷ್ಟೋ ನಮಸ್ಕೃತಃ ॥೨೧॥
ತದಾಽಚಿರೇಣ ಕಾಲೇನ ಪಂಚತ್ವಮುಪಮಾಗತಃ ।
ನ ದೃಷ್ಟಂ ತನ್ಮಹಾಘೋರಂ ಯಮಸ್ಯ ಸದನಂ ಮುನೇ ॥೨೨॥
ಪಿಪಾಸಯಾಧುನಾ ಕ್ರಾಂತಃ ನ ಜಾನಾಮಿ ಹಿತಾಹಿತಂ ।
ಯದಿ ಕಂಚಿತ್ಸಮುದ್ಧರ್ತುಂ ಉಪಾಯಂ ಪಶ್ಯಸಿ ಪ್ರಭೋ ॥೨೩॥

---

೧೯. ಹಸಿವಿನಿಂದ ಬಾಧಿತವಾದ ಆ ಪಿಶಾಚವು ಆ ಮುನಿಗೆ ಹೇಳಿತು. ಪೂರ್ವಜನ್ಮದಲ್ಲಿ ಧನಧಾನ್ಯದಿಂದ ಕೂಡಿದ ಒಬ್ಬ ಬ್ರಾಹ್ಮಣನಾಗಿದ್ದೆನು.

೨೦. ಮಕ್ಕಳು ಮೊಮ್ಮಕ್ಕಳು ಇವುಗಳಿಂದ ತುಂಬಿರುವ ಕುಟುಂಬವನ್ನು ಕಾಪಾಡುವುದರಲ್ಲಿ ಮಾತ್ರ ನಿರತನಾಗಿದ್ದೆನು. ನಾನು ಒಂದು ಸಾರಿಯಾದರೂ ದೇವರನ್ನು ಪೂಜಿಸಲಿಲ್ಲ. ಗೋ ಶುಶ್ರೂಷೆಯನ್ನು ಮಾಡಲಿಲ್ಲ. ಅತಿಥಿಗಳಿಗೆ ಅನ್ನವನ್ನಿಡಲಿಲ್ಲ. ಪುಣ್ಯಕಾರ್ಯವನ್ನು ಹೆಚ್ಚಾಗಿಯಾಗಲಿ ಸ್ವಲ್ಪವಾಗಲೀ ಮಾಡಲೇ ಇಲ್ಲ.

೨೧. ಒಂದುಬಾರಿ ಕಾಶಿಯಲ್ಲಿ ನಾನು ವೃಷಭವಾಹನನಾದ ವಿಶ್ವೇಶ್ವರನನ್ನು ದರ್ಶನಮಾಡಿ ಸ್ಪರ್ಶಿಸಿ ನಮಸ್ಕಾರವನ್ನು ಮಾಡಿದೆನು.

೨೨. ಅದಾದ ಸ್ವಲ್ಪಕಾಲಕ್ಕೆ ನಾನು ಮೃತನಾದೆನು. ವಿಶ್ವೇಶ್ವರನ ಮಹಿಮೆಯಿಂದ ನನಗೆ ಯಮಲೋಕದ ದರ್ಶನವಾಗಲಿಲ್ಲ.

೨೩.–೨೪. ಈಗ ನಾನು ಬಾಯಾರಿಕೆಯಿಂದ ಕೂಡಿದವನಾಗಿ ಒಳ್ಳೆಯದು ಕೆಟ್ಟದು ಎಂಬುದನ್ನೂ ತಿಳಿಯಲಾರೆ. ಎಲೈ ಪ್ರಭುವೇ ನಿನ

ಕುರುಷ್ವ ತಂ ನಮಸ್ತುಭ್ಯಂ ತ್ವಾಮಹಂ ಶರಣಂ ಗತಃ ।
ಇತ್ಯುಕ್ತಶ್ಶಂಕುಕರ್ಣೋಽಥ ಪಿಶಾಚಮಿದಮಬ್ರವೀತ್ ॥೨೪॥

ತ್ವಾದೃಶೋ ನ ಹಿ ಲೋಕೇಽಸ್ಮಿನ್ ವಿದ್ಯತೇ ಪುಣ್ಯಕೃತ್ತಮಃ ।
ಯತ್ತ್ವಯಾ ಭಗವಾನ್ ಪೂರ್ವಂ ದೃಷ್ಟೋ ವಿಶ್ವೇಶ್ವರಶ್ಶಿವಃ॥೨೫॥

ಸಂಸ್ಪೃಷ್ಟೋ ವಂದಿತೋ ಭೂಯಃ ಕೋಽನ್ಯಸ್ತ್ವತ್ಸದೃಶೋ ಭುವಿ।
ಕೇನ ಕರ್ಮ ವಿಪಾಕೇನ ದೇಶಮೇತಂ ಸಮಾಗತಃ ॥೨೬॥

ಸ್ನಾನಂ ಕುರುಷ್ವ ಶೀಘ್ರಂ ತ್ವಂ ಅಸ್ಮಿನ್ಕುಂಡೇ ಸಮಾಹಿತಃ ।
ಯೇನೇಮಾಂ ಕುತ್ಸಿತಾಂ ಯೋನಿಂ ಕ್ಷಿಪ್ರಮೇವ ಪ್ರಹಾಸ್ಯಸಿ॥೨೭॥

ಸ ಏವಮುಕ್ತೋ ಮುನಿನಾ ಪಿಶಾಚೋ ದಯಾಳುನಾ ದೇವವರಂತ್ರಿ ಣೇತ್ರಂ ।
ಸ್ಮೃತ್ವಾ ಕಪರ್ದೀಶ್ವರಮೀಶಿತಾರಂ ಚಕ್ರೇ ಸಮಾಧಾಯ ಮನೋವ ಗಾಹಂ ॥೨೮॥

---

ಗೇನಾದರೂ ನನ್ನನ್ನು ಉದ್ಧರಿಸುವ ಉಪಾಯವು ತಿಳಿದಿದ್ದರೆ ದಯವಿಟ್ಟು ಕಾಪಾಡು. ನಿನ್ನನ್ನು ನಾನು ಮರೆಹೊಕ್ಕಿದೇನೆ. ಎಂದು ಹೇಳಲು ಇದನ್ನು ಕೇಳಿದ ಶಂಕುಕರ್ಣನು ಪಿಶಾಚಿಯನ್ನು ಕುರಿತು ಈ ರೀತಿ ಹೇಳಿದನು.

೨೫-೨೭. ಅಯ್ಯಾ ನಿನ್ನಂತಹ ಪುಣ್ಯಶಾಲಿಯು ಈ ಲೋಕದಲ್ಲಿಲ್ಲ. ಏಕೆಂದರೆ ಭಗವಂತನಾದ ವಿಶ್ವೇಶ್ವರನನ್ನು ದರ್ಶನಮಾಡಿ ಮುಟ್ಟಿ ಪೂಜಿಸಿರುವೆ, ಆ ಪುಣ್ಯವಿಶೇಷದಿಂದ ಈ ಸ್ಥಳಕ್ಕೆ ಬಂದಿರುವೆ. ಈ ಕುಂಡದಲ್ಲಿ (ತೀರ್ಥದಲ್ಲಿ) ಜಾಗ್ರತೆಯಾಗಿ ಸ್ನಾನಮಾಡು. ಕೂಡಲೆ ಈ ನಿಂದಿತವಾದ ಪ್ರೇತಜನ್ಮದಿಂದ ಮುಕ್ತನಾಗುವಿ.

೨೮. ದಯಾಳುವಾದ ಮುನಿಯಿಂದ ಈ ರೀತಿ ಹೇಳಲ್ಪಟ್ಟ ಪಿಶಾಚನು ದೇವಶ್ರೇಷ್ಠನೂ ತ್ರಿನೇತ್ರನೂ ಆದ ಕಪರ್ದೀಶ್ವರನನ್ನು ಸ್ಮರಿಸಿ ಮನಸ್ಸನ್ನು ಸಮಾಧಾನಮಾಡಿಕೊಂಡು ಆ ತೀರ್ಥದಲ್ಲಿ ಸ್ನಾನ ಮಾಡಿದನು.

ತದಾವಗಾಢೋ ಮುನಿಸನ್ನಿಧಾನೇ ಪುಮಾರ ದಿವ್ಯಾಭರಣೋಪ
ಪನ್ನಃ ।
ಅದೃಶ್ಯತಾರ್ಕಪ್ರತಿಮೋವಿ ಮಾನೇ ಶಶಾಂಕಚಿಹ್ನೀಕೃತಚಾರು
ಮೌಳಿಃ ॥೨೯॥

ವಿಭಾತಿರುದ್ರೈಸ್ಸಹಿತೋ ದಿವಿಷ್ಠೈಃ ಸಮಾವೃತೋ ಯೋಗಿಭಿರ
ಪ್ರಮೇಯೈಃ ।
ಸವಾಲಖಿಲ್ಯಾದಿ ಭಿರೇಷ ದೇವೋ ಯಥೋದಯೇ ಭಾನುರಶೇಷ
ದೇವಃ ॥೩೦॥

ಸ್ತುವಂತಿ ಸಿದ್ಧಾ ದಿವಿ ದೇವಸಂಘಾ ನೃತ್ಯಂತಿ ದಿವ್ಯಾಪ್ಸರಸೋಭಿ
ರಾಮಾಃ ।
ಮುಂಚಂತಿ ವೃಷ್ಟಿಂ ಕುಸುಮಾಂಬುಮಿಶ್ರಾಂ ಗಂಧರ್ವವಿದ್ಯಾಧರ
ಕಿನ್ನರಾದ್ಯಾಃ ॥೩೧॥

---

೨೯. ಈ ಪಿಶಾಚನು ಮುನಿಯ ಬಳಿಯಲ್ಲಿ ಸ್ನಾನಮಾಡಿ ಮೃತನಾದನು. ಕೂಡಲೇ ಆತನು ಸೂರ್ಯಸಮಾನ ತೇಜಸ್ಸುಳ್ಳವನಾಗಿ ಚಂದ್ರಾಲಂಕೃತ ಶಿರವುಳ್ಳವನಾಗಿ ದಿವ್ಯಾಭರಣಗಳಿಂದ ಕೂಡಿದವನಾಗಿ ವಿಮಾನದಲ್ಲಿ ಕಾಣಲ್ಪಟ್ಟನು.

೩೦. ಉದಯಕಾಲದಲ್ಲಿ ಸೂರ್ಯನು ವಾಲಖಿಲ್ಯಾದಿಗಳಿಂದ ಯಾವರೀತಿ ಸೇವಿಸಲ್ಪಡುವನೋ ಅದೇ ರೀತಿ ಈ ಪಿಶಾಚನು ದಿವ್ಯ ದೇಹಧಾರಿಯಾಗಿ ಯೋಗಿಗಳಿಂದಲೂ ಏಕಾದಶರುದ್ರರಿಂದಲೂ ಪರಿವೃತನಾಗಿ ಪ್ರಕಾಶಿಸುತ್ತಿದ್ದನು.

೩೧. ಅವನನ್ನು ದೇವಸಂಘಗಳೂ ಸಿದ್ಧರೂ ಸ್ತುತಿಸುತ್ತಿದ್ದರು. ಅಪ್ಸರ ಸ್ತ್ರೀಯರು ನರ್ತನ ಮಾಡುತ್ತಿದ್ದರು. ಗಂಧರ್ವ, ವಿಧ್ಯಾಧರ, ಕಿನ್ನರ, ಮೊದಲಾದ ದೇವಜಾತಿಗಳು ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು.

ಸಂಸ್ತೂಯಮಾನೋಥ ಮುನೀಂದ್ರಸಂಘೈಃ ಅವಾಪ್ತಬೋಧಂ
ಭಗವತ್ಪ್ರಸಾದಾತ್ ।
ಸಮಾವಿಶನ್ಮಂಡಲಮೇತದಗ್ರ್ಯಂ ತ್ರಯೀಮಯಂ ಯತ್ರ ವಿಭಾತಿ
ರುದ್ರಃ ॥೩೨॥
ದೃಷ್ಟ್ವಾವಿಮುಕ್ತಂ ಸ ಪಿಶಾಚಭೂತಂ ಮುನಿಃ ಪ್ರಹೃಷ್ಟೋಮನ
ಸಾ ಮಹೇಶಂ ।
ವಿಚಿಂತ್ಯ ರುದ್ರಂಕವಿಮೇಕಮಗ್ನಿಂ ಪ್ರಣಮ್ಯತುಷ್ಟಾವಕಪರ್ದಿ
ನಂತಂ ॥೩೩॥

ಶಂಕುಕರ್ಣ ಉವಾಚ

ಕಪರ್ದಿನಂ ತ್ವಾಂ ಪರತಃ ಪರಸ್ತಾದ್ಗೋಪ್ತಾರಮೇಕಂ ಪುರುಷಂ
ಪುರಾಣಂ ।
ವ್ರಜಾಮಿ ಯೋಗೇಶ್ವರಮೀಶಿತಾರಂ ಆದಿತ್ಯಮಗ್ನಿಂ ಕಪಿಲಾಧಿ
ರೂಢಂ ॥೩೪॥

---

೩೨. ಮುನಿಸಮೂಹದಿಂದ ಹೊಗಳಲ್ಪಟ್ಟವನಾಗಿ ಭಗವದನು ಗ್ರಹದಿಂದ ದಿವ್ಯಜ್ಞಾನ ಸಂಪನ್ನನಾಗಿ ರುದ್ರನು ಪ್ರಕಾಶಿಸುತ್ತಿರುವ ವೇದರೂಪನಾದ ಸೂರ್ಯಮಂಡಲವನ್ನು ಪ್ರವೇಶಿಸಿದನು.

೩೩. ಆ ಪಿಶಾಚನು ಮುಕ್ತಿ ಹೊಂದಿದುದನ್ನು ನೋಡಿ ಆ ಮುನಿಯು ಸಂತುಷ್ಟನಾಗಿ ಮನಸ್ಸಿನಲ್ಲಿ ಯೋಚಿಸಿ ಎಲ್ಲವನ್ನೂ ಬಲ್ಲ, ಪ್ರಪಂಚಕ್ಕೆಲ್ಲಾ ಒಬ್ಬನಾದ ಅಗ್ನಿಯ ರೂಪನಾದ ಆ ಕಪರ್ದೀಶ್ವರನನ್ನು ಸ್ತೋತ್ರಮಾಡಿದನು.

೩೪. ಶಂಕು ಕರ್ಣನು ಹೇಳುತ್ತಾನೆ. ಪರಾಪರವಸ್ತುವೂ ಗೋಪ್ಯವೂ ಪುರುಷ ಶಬ್ದವಾಚ್ಯನೂ ಪುರಾತನನೂ ಯೋಗಿಗಳಿಗೆ ಅಧಿಪತಿಯೂ ಪ್ರಭುವೂ ಸೂರ್ಯ, ಅಗ್ನಿ ಸ್ವರೂಪನೂ, ಕಪಿಲೆಯಲ್ಲಿರುವವನೂ ಕಪರ್ದೀಶ್ವರನೂ ಆದ ನಿನ್ನನ್ನು ಶರಣು ಹೊಗುವೆನು.

ತ್ವಾಂಬ್ರಹ್ಮಸಾರಂ ಹೃದಿಸನ್ನಿವಿಷ್ಟಂ ಹಿರಣ್ಮಯಂ ಯೋಗಿನಮಾದಿ
ಮಂತ್ಯಂ ।
ವ್ರಜಾಮಿ ರುದ್ರಂ ಶರಣಂ ದಿವಿಷ್ಠಂ ಮಹಾಮುನಿಂ ಬ್ರಹ್ಮಮಯಂ
ಪವಿತ್ರಂ ॥೩೫॥
ಸಹಸ್ರಪಾದಾಕ್ಷಿಶಿರೋಭಿಯುಕ್ತಂ ಸಹಸ್ರರೂಪಂ ತಮಸಃ ಪರ
ಸ್ತಾತ್ ।
ತಂ ಬ್ರಹ್ಮಸಾರಂ ಪ್ರಣಮಾಮಿಶಂಭುಂ ಹಿರಣ್ಯಗರ್ಭಾಧಿಪತಿಂ
ತ್ರಿಣೇತ್ರಂ ॥೩೬॥
ಯತ್ರ ಪ್ರಸೂತಿರ್ಜಗತೋ ವಿನಾಶಂ ಯೇನಾವೃತಂ ಸರ್ವಮಿದಂ
ಶಿವೇನ ।
ತಂ ಬ್ರಹ್ಮಸಾರಂ ಭಗವಂತಮೀಶಂ ಪ್ರಣಮ್ಯ ನಿತ್ಯಂ ಶರಣಂ
ಪ್ರಪದ್ಯೇ ॥ ೩೭ ॥

---

೩೫. ಬ್ರಹ್ಮಸಾರನೂ ಹೃದಯದಲ್ಲಿರತಕ್ಕವನೂ ಸುವರ್ಣವರ್ಣನೂ ಯೋಗಿಯೂ ಆದ್ಯಂತರೂಪನೂ ದೇವಲೋಕದಲ್ಲಿರತಕ್ಕವನೂ ಮಹಾಮುನಿಯೂ, ಪವಿತ್ರವಾದವನೂ ವೇದಮಯನೂ ರುದ್ರನಾಮಕನೂ ಆದ ನಿನ್ನನ್ನು ಶರಣುಹೊಗುವೆನು.

೩೬. ಸಹಸ್ರಪಾದ, ಸಹಸ್ರನೇತ್ರ, ಸಹಸ್ರ ಶಿರಗಳುಳ್ಳವನೂ, ಸಹಸ್ರ ರೂಪನೂ ಜ್ಯೋತಿಸ್ಸ್ವರೂಪನೂ ಬ್ರಹ್ಮಸಾರನೂ ಬ್ರಹ್ಮನಿಗೂ ನಿಯಾಮಕನೂ ತ್ರಿನೇತ್ರನೂ ಆದ, ಶಂಭು ಎಂದು ಹೆಸರುಳ್ಳ ನಿನ್ನನ್ನು ನಮಸ್ಕರಿಸುತ್ತೇನೆ.

೩೭. ಯಾವ ಶಿವನಿಂದ ಪ್ರಪಂಚದ ಉತ್ಪತ್ತಿವಿನಾಶಗಳು ಉಂಟಾಗುವುವೋ ಯಾವನಿಂದ ಪ್ರಪಂಚವೆಲ್ಲವೂ ತುಂಬಲ್ಪಟ್ಟಿರುವುದೋ ಅಂಥ ಭಗವಂತನಾದ ಬ್ರಹ್ಮರೂಪನಾದ ಈಶ್ವರನನ್ನು ನಮಸ್ಕರಿಸಿ ನಿತ್ಯವೂ ಮರೆಹೊಗುವೆನು.

ಅಲಿಂಗಮಾಲೋಕವಿಹೀನರೂಪಂ ।
ಸ್ವಯಂ ಪ್ರಭುಂ ಚಿತ್ಪತಿಮೇಕರೂಪಂ ॥
ತಂ ಬ್ರಹ್ಮಸಾರಂ ಪರಮೇಶ್ವರಂ ತ್ವಾಂ ।
ನಮಸ್ಕರಿಷ್ಯೇ ನಯತೋನ್ಯದಸ್ತಿ ॥೩೮॥

ಯಂ ಯೋಗಿನಸ್ತ್ಯಕ್ತಸಬೀಜಯೋಗಾಃ ।
ಲಬ್ಧ್ವಾ ಸಮಾಧಿಂ ಪರಮಾತ್ಮಭೂತಾಃ ॥
ಪಶ್ಯಂತಿ ದೇವಂ ಪ್ರಣತೋಸ್ಮಿ ನಿತ್ಯಂ ।
ತಂ ಬ್ರಹ್ಮಸಾರಂ ಭವತಸ್ಸ್ವರೂಪಂ ॥೩೯॥

ನ ಯತ್ರ ನಾಮಾದಿ ವಿಶೇಷ ಕ್ಲ್ಪಪ್ತಿಃ ।
ನ ಸಂದೃಶೇ ತಿಷ್ಠತಿ ಯತ್ಸ್ವರೂಪಂ ॥
ತಂ ಬ್ರಹ್ಮಸಾರಂ ಪ್ರಣತೋಸ್ಮಿ ನಿತ್ಯಂ ।
ಸ್ವಯಂಭುವಂ ತ್ವಾಂ ಶರಣಂ ಪ್ರಪದ್ಯೇ ॥೪೦॥

---

೩೮. ಚಿಹ್ನೆ ಇಲ್ಲದವನೂ, ಸೂಕ್ಷ್ಮರೂಪನೂ ತಾನಾಗಿಯೇ ಪ್ರಭುವಾದವನೂ ಚೇತನಸ್ವರೂಪನೂ ಪರಮೇಶ್ವರನೂ ವಿಕಾರಶೂನ್ಯನೂ ತನಗಿಂತಲೂ ಬೇರೆಯಾದ ವಸ್ತುವಿಲ್ಲದವನೂ ಬ್ರಹ್ಮಮಯನೂ ಆದ ನಿನ್ನನ್ನು ನಮಸ್ಕರಿಸುವೆನು.

೩೯. ಕರ್ಮವಾಸನೆಯಿಂದ ಬಿಡುಗಡೆ ಹೊಂದಿದ ಯೋಗಿಗಳು ಸಮಾಧಿಯಲ್ಲಿ ಕುಳಿತು ಬ್ರಹ್ಮವೇತಾವೆಂದು ತಿಳಿದುಕೊಂಡವರಾಗಿ ಬ್ರಹ್ಮಧ್ಯಾನದಿಂದ ತಿಳಿಯಲು ಸುಲಭವಾದ ನಿನ್ನ ರೂಪವನ್ನು ನೋಡುತ್ತಾರೆಯೋ ಅಂಥ ದೇವನನ್ನು ಸರ್ವದಾ ನಮಸ್ಕರಿಸುತ್ತೇನೆ.

೪೦. ವಿಚಾರಮಾಡಿದರೆ, ಯಾವಪರಮಾತ್ಮನಲ್ಲಿ ನಾಮ ರೂಪಗಳು ಕಾಣುವುದಿಲ್ಲವೋ ಬಾಹ್ಯದೃಷ್ಟಿಗೆ ಯಾವನ ಸ್ವರೂಪವು ಕಾಣುವುದಿಲ್ಲವೋ ಅಂಥ ಬ್ರಹ್ಮಧ್ಯಾನದಿಂದ ತಿಳಿಯಲು ಸುಲಭನೂ ತಾನಾಗಿಯೇ ಹುಟ್ಟಿದವನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ. ಮತ್ತು ಮರೆಹೊಗುತ್ತೇನೆ.

ಯದ್ವೇದವಾದಾಭಿರತಾ ವಿದೇಹಂ ।
ಸಬ್ರಹ್ಮವಿಜ್ಞಾನಮಭೇದಮೇಕಂ ॥
ಪಶ್ಯಂತ್ಯನೇಕಂ ಭವತಸ್ಸ್ವರೂಪಂ ।
ತಂ ಬ್ರಹ್ಮಪಾದಂ ಪ್ರಣತೋಸ್ಮಿ ನಿತ್ಯಂ ॥೪೧॥

ಯತಃ ಪ್ರಧಾನಂ ಪುರುಷಃ ಪುರಾಣೋ ।
ಬಿಭರ್ತಿ ತೇಜಃ ಪ್ರಣಮಂತಿ ದೇವಾಃ ॥
ನಮಾಮಿ ತಂ ಜ್ಯೋತಿಷಿ ಸನ್ನಿವಿಷ್ಟಂ ।
ಕಾಲಂ ಬೃಹಂತಂ ಭವತಸ್ಸ್ವರೂಪಂ ॥೪೨॥

ವ್ರಜಾಮಿ ನಿತ್ಯಂ ಶರಣಂ ಗುಹೇಶಂ !
ಸ್ಥಾಣುಂ ಪ್ರಪದ್ಯೇ ಪುರುಷಂ ಪುರಾಣಂ ॥
ಶಿವಂ ಪ್ರಪದ್ಯೇ ಹರಮಿಂದುಮೌಳಿಂ ।
ಪಿನಾಕಿನಂ ತ್ವಾಂ ಶರಣಂ ವ್ರಜಾಮಿ ॥೪೩॥

---

೪೧. ವೇದವಾದಿಗಳೂ ವೇದಾಂತಿಗಳೂ ಕೂಡ ಯಾವ ನಿನ್ನ ಸ್ವರೂಪವನ್ನು ಆ ಶರೀರವೆಂದೂ ಬ್ರಹ್ಮಮಯವೆಂದೂ ವಿಜ್ಞಾನಗಮ್ಯವೆಂದೂ ಭೇದರಹಿತವೆಂದೂ ಒಂದೇವಸ್ತುವೆಂದೂ ನಾನಾರೂಪವೆಂದೂ ನೋಡುತ್ತಾರೋ ಅಂಥ ಬ್ರಹ್ಮಧ್ಯಾನದಿಂದ ತಿಳಿಯಲು ಸುಲಭವಾದ ನಿನ್ನ ರೂಪವನ್ನು ಸರ್ವದಾ ನಮಸ್ಕರಿಸುವೆನು.

೪೨. ಯಾವ ಕಾರಣದಿಂದ ಪ್ರಧಾನನೂ ಪುರಾಣಪುರುಷನೂ ತೇಜೋಮಯನೂ ಆದ ನಿನ್ನನ್ನು ದೇವತೆಗಳೂ ನಮಸ್ಕರಿಸುವರೋ ಅಂಥ ಜ್ಯೋತಿಸ್ವರೂಪವಾದ ಅನಂತ ಕಾಲಮಯವಾದ ನಿನ್ನ ಸ್ವರೂಪವನ್ನು ನಮಿಸುತ್ತೇನೆ.

೪೩. ಗುಹೇಶ್ವರನನ್ನು ಯಾವಾಗಲೂ ಮರೆ ಹೊಗುತ್ತೇನೆ. ಪುರಾಣಪುರುಷನಾದ ಸ್ಥಾಣುವನ್ನು ರಕ್ಷಕನನ್ನು ಸೇರುವೆನು. ಚಂದ್ರಚೂಡನಾದ ಹರನನ್ನು ಮರೆ ಸೇರುವೆನು. ಪಿನಾಕಧನುರ್ಧಾರಿಯಾದ ನಿನ್ನನ್ನು ಮರೆಹೊಗುವೆನು.

ಸ್ತುತ್ವೈವಂ ಶಂಕುಕರ್ಣೋಽಪಿ ಭಗವಂತಂ ಕಪರ್ದಿನಂ ।
ಪಪಾತ ದಂಡವದ್ಭೂಮೌ ಪ್ರೋಚ್ಚರ್ನ್ ಪ್ರಣವಂ ಪರಂ ॥೪೪॥

ತತ್ಕ್ಷಣಾತ್ಪರಮಂ ಲಿಂಗಂ ಪ್ರಾದುರ್ಭೂತಂ ಶಿವಾತ್ಮಕಂ ।
ಜ್ಞಾನಮಾನಂದಮತ್ಯಂತಂ ಕೋಟಿಜ್ವಾಲಾಗ್ನಿಸನ್ನಿಭಂ ॥೪೫॥

ಶಂಕು ಕರ್ಣೋಽಥ ಮುಕ್ತಾತ್ಮಾ ತದಾತ್ಮಾ ಸರ್ವಗೋಽಮಲಃ ।
ವಿಲಿಲ್ಯೇ ವಿಮಲೇ ಲಿಂಗೇ ತದದ್ಭುತಮಿವಾ ಭವತ್ ॥೪೬॥

ಏತದ್ರಹಸ್ಯಮಾಖ್ಯಾತಂ ಮಾಹಾತ್ಮ್ಯಂ ತೇ ಕಪರ್ದಿನಃ ।
ನ ಕಶ್ಚಿದ್ವೇತ್ತಿ ತಮಸಾ ವಿದ್ವಾನಪ್ಯತ್ರ ಮುಹ್ಯತಿ ॥೪೭॥

---

೪೪. ಈರೀತಿಯಾಗಿ ಶಂಕುಕರ್ಣನು ಭಗವಂತನಾದ ಕಪರ್ದೀಶ್ವರನನ್ನು ಸ್ತುತಿಸಿ ಪ್ರಣವ ಮಂತ್ರವನ್ನು ಜಪಿಸುತ್ತಾ ಭೂಮಿಯಲ್ಲಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು.

೪೫. ತಕ್ಷಣದಲ್ಲಿಯೇ ಜ್ಞಾನಾನಂದ ಸ್ವರೂಪವಾದ ಕೋಟಿಜ್ವಾಲೆಗಳುಳ್ಳ ಅಗ್ನಿಗೆ ಸಮಾನವಾದ ತೇಜಸ್ಸುಳ್ಳ ಅತ್ಯಂತ ಶ್ರೇಷ್ಠವಾದ ಶಿವಲಿಂಗವು ಗೋಚರಿಸಿತು.

೪೬. ಪರಿಶುದ್ಧನಾದ ಶಂಕುಕರ್ಣನು ಭಗವಂತನೇ ತಾನೆಂದು ತಿಳಿದುಕೊಂಡು ದೇಹವನ್ನು ಬಿಡಲು ಅಪೂರ್ವೋಕ್ತವಾದ ಲಿಂಗದಲ್ಲಿ ಐಕ್ಯ ಹೊಂದಿದನು. ಅದು ಅದ್ಭುತವಾಯಿತು.

೪೭. ರಹಸ್ಯವಾದ ಕಪರ್ದೀಶ್ವರಮಹಿಮೆಯು ನಿನಗೆ ನನ್ನಿಂದ ಹೇಳಲ್ಪಟ್ಟಿತು, ಅಜ್ಞಾನಿಯಾದವನು ಇದನ್ನು ತಿಳಿಯಲಾರನು. ವಿದ್ವಾಂಸನಾದರೂ ಮೋಹಗೊಳ್ಳುವನು.

**ಯ ಇಮಂ ಶೃಣುಯಾನ್ನಿತ್ಯಂ ಕಥಾಂ ಪಾಪಪ್ರಣಾಶಿನೀಂ।**
**ತ್ಯಕ್ತಪಾಪೋ ವಿಶುದ್ಧಾತ್ಮಾ ರುದ್ರ ಸಾಮೀಪ್ಯಮಾಪ್ನುಯಾತ್॥**
**ಪಠೇಚ್ಚ ಸತತಂ ಶುದ್ಧೋ ಬ್ರಹ್ಮಪಾದಂ ಮಹಾಸ್ತವಂ ।**
**ಪ್ರಾತರ್ಮಧ್ಯಾಹ್ನಸಮಯೇ ಸ ಯೋಗಂ ಪ್ರಾಪ್ನುಯಾತ್ಪರಂ ॥**

ಶ್ರೀ ಇತಿ ಮಹಾಪುರಾಣೇ ಪಾದ್ಮೇ
ಆದಿಖಂಡೇ ವಾರಣಸಿ ಮಹಾತ್ಮ್ಯೇ ಪಂಚತ್ರಿಂಶೋಽಧ್ಯಾಯಃ

---

೪೮. ಯಾವನು ಪಾಪನಾಶಕವಾದ ಈ ಆಖ್ಯಾನವನ್ನು ಕೇಳು ತ್ತಾನೋ ಅವನು ಪಾಪದಿಂದ ಬಿಡಲ್ಪಟ್ಟು ಪರಿಶುದ್ಧನಾಗಿ ಪರಮಾತ್ಮ ನಸನ್ನಿಧಿಯನ್ನು ಸೇರುತ್ತಾನೆ.

೪೯. ಬ್ರಹ್ಮಪ್ರತಿಪಾದ್ಯವಾದ ಈ ಸ್ತೋತ್ರವನ್ನು ಯಾವನು ಪರಿ ಶುದ್ಧನಾಗಿ ಪ್ರಾತರ್ಮಧ್ಯಾಹ್ನ ಕಾಲಗಳಲ್ಲಿ ಪಠಿಸುವನೋ ಅವನು ಶ್ರೇಷ್ಠವಾದ ಯೋಗವನ್ನು ಹೊಂದುತ್ತಾನೆ ಅಂದರೆ ಜ್ಞಾನಿಯಾಗು ತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ವಾರಣಸಿ ಮಹಾತ್ಮೆಯಲ್ಲಿ ಮೂವತ್ತೈದನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಷಟ್ತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ವಾರಾಣಸ್ಯಾಂ ಮಹಾರಾಜ ಮಧ್ಯದೇಶಂ ಪರಾತ್ಪರಂ।
ತಸ್ಮಿನ್ ಸ್ಥಾನೇ ಮಹಾದೇವೋ ದೇವ್ಯಾ ಸಹ ಮಹೇಶ್ವರಃ ॥ ೧ ॥

ರಮತೇ ಭಗವನ್ನಿತ್ಯಂ ರುದ್ರೈಶ್ಚ ಪರಿವಾರಿತಃ।
ತತ್ರ ಪೂರ್ವಂ ಹೃಷೀಕೇಶೋ ವಿಶ್ವಾತ್ಮಾ ದೇವಕೀಸುತಃ ॥ ೨ ॥

ಉವಾಸ ವತ್ಸರಂ ಕೃಷ್ಣಃ ಸದಾ ಪಾಶುಪತೈರ್ಯುತಃ।
ಭಸ್ಮೋದ್ಧೂಳಿತಸರ್ವಾಂಗೋ ರುದ್ರಾಧ್ಯಯನತತ್ಪರಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಮೂವತ್ತಾರನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ: ಎಲೈ ಧರ್ಮಜನೇ, ಕಾಶಿಯಲ್ಲಿ ಮಧ್ಯ ದೇಶವು ಉತ್ತಮೋತ್ತಮವಾದುದು. ಆ ಜಾಗದಲ್ಲಿ ಮಹಾದೇವನು ಪಾರ್ವತಿಯೊಡನೆಯೂ ರುದ್ರರೊಡನೆಯೂ ಯಾವಾಗಲೂ ವಿಹರಿಸುತ್ತಿರುತ್ತಾನೆ.

೨-೩. ಈ ಕಾಶಿಯಲ್ಲಿ ವಿಷ್ಣುವು ರುದ್ರನ ಸೇವಕರೊಡನೆ ಕೂಡಿಕೊಂಡು ಸರ್ವಾಂಗಗಳಲ್ಲಿಯೂ ಭಸ್ಮಧಾರಣವನ್ನು ಮಾಡಿ, ರುದ್ರಾಧ್ಯಾಯ ಮೊದಲಾದ ವೇದಮಂತ್ರಗಳನ್ನು ಪಠಿಸುತ್ತಾ ಪಾಶುಪತವ್ರತವನ್ನು ಹಿಡಿದು ಶಂಭುವನ್ನು ಆರಾಧಿಸುತ್ತಿದ್ದನು.

ಆರಾಧಯನ್ ಹರಿಶ್ಶಂಭುಂ ಕೃತ್ವಾ ಪಾಶುಪತಂ ವ್ರತಂ।
ತತ್ರ ತೇ ಬಹವಶ್ಶಿಷ್ಯಾ ಬ್ರಹ್ಮಚರ್ಯಪರಾಯಣಾಃ।
ಲಬ್ಧ್ವಾ ತದ್ವದನಾಜ್ಞಾನಂ ದೃಷ್ಟವಂತೋ ಮಹೇಶ್ವರಂ ॥ ೪ ॥
ತಸ್ಯ ದೇವೋ ಮಹಾದೇವಃ ಪ್ರತ್ಯಕ್ಷಂ ನೀಲಲೋಹಿತಃ।
ದದೌ ಕೃಷ್ಣಸ್ಯ ಭಗವಾನ್ ವರದೋ ವರಮುತ್ತಮಂ ॥ ೫ ॥
ಯೇಽರ್ಚಯಂತಿ ಚ ಗೋವಿಂದಂ ಮದ್ಭಕ್ತಾ ವಿಧಿಪೂರ್ವಕಂ।
ತೇಷಾಂ ತದೈಶ್ವರಂ ಜ್ಞಾನಮುತ್ಪತ್ಸ್ಯತಿ ಜಗನ್ಮಯಂ ॥ ೬ ॥
ನಮಸ್ಯೋಽರ್ಚಯಿತವ್ಯಶ್ಚ ಧ್ಯಾತವ್ಯೋಽಮತ್ಪರೈರ್ಜನೈಃ।
ಭವಿಷ್ಯಂತಿ ನ ಸಂದೇಹೋ ಮತ್ಪ್ರಸಾದ್ದ್ವಿಜಾತಯಃ ॥ ೭ ॥
ಯೇಽತ್ರ ದ್ರಕ್ಷ್ಯಂತಿ ದೇವೇಶಂ ಸ್ನಾತ್ವಾ ದೇವಂ ಪಿನಾಕಿನಂ।
ಬ್ರಹ್ಮಹತ್ಯಾದಿಕಂ ಪಾಪಂ ತೇಷಾಮಾಶು ವಿನಶ್ಯತಿ ॥ ೮ ॥

---

೪. ಅಲ್ಲಿ ಅವನ ಶಿಷ್ಯರನೇಕರು ಬ್ರಹ್ಮಚರ್ಯವ್ರತನಿಷ್ಠರಾಗಿ ಆ ವಿಷ್ಣುವಿನ ಮುಖದಿಂದ (ಉಪದೇಶವಾಕ್ಯಗಳಿಂದ) ಉತ್ತಮವಾದ ಜ್ಞಾನವನ್ನು ಪಡೆದು ಮಹೇಶ್ವರನ ದರ್ಶನವನ್ನು ಮಾಡಿದರು.

೫. ಅಲ್ಲಿ ಭಗವಂತನಾದ ಮಹಾದೇವನು ಕೃಷ್ಣನಿಗೆ ಪ್ರತ್ಯಕ್ಷನಾಗಿ ಉತ್ತಮವಾದ ವರಗಳನ್ನು ಕೊಟ್ಟನು.

೬. ನನಗೆ ಭಕ್ತರಾಗಿರುವವರು ಯಾರು ಗೋವಿಂದನನ್ನು ಅರ್ಚಿಸುತ್ತಾರೆಯೋ ಅವರಿಗೆ ಈಶ್ವರನ ಜ್ಞಾನವು ಹುಟ್ಟುತ್ತದೆ.

೭. ಯಾರು ಧ್ಯಾನಾರ್ಚನಾದಿಗಳಿಂದ ಈಶ್ವರನನ್ನು ಭಜಿಸುತ್ತಾರೋ ಅವರು ಖಂಡಿತವಾಗಿಯೂ ದ್ವಿಜರಾಗಿ ಹುಟ್ಟುತ್ತಾರೆ.

೮. ಯಾರು ಅಲ್ಲಿ (ಕಾಶಿಯಲ್ಲಿ) ಸ್ನಾನಮಾಡಿ ಮಹೇಶ್ವರನನ್ನು ದರ್ಶನಮಾಡುತ್ತಾರೆಯೋ ಅವರ ಬಹ್ಮಹತ್ಯಾದಿಪಾಪಗಳು ಜಾಗ್ರತೆಯಾಗಿ ನಾಶವಾಗುತ್ತವೆ.

ಪ್ರಾಣಾನ್ ತ್ಯಕ್ಷ್ಯಂತಿ ಯೇ ಮರ್ತ್ಯಾಃ ಪಾಪಕರ್ಮರತಾ ಅಪಿ।
ತೇ ಯಾಂತಿ ತತ್ಪರಂ ಸ್ಥಾನಂ ನಾತ್ರ ಕಾರ್ಯಾ ವಿಚಾರಣಾ ॥ ೯ ॥

ಧನ್ಯಾಸ್ತು ಖಲು ತೇ ವಿಜ್ಞಾ ಮಂದಾಕಿನ್ಯಾಂ ಕೃತೋದಕಾಃ।
ಅರ್ಚಯಿತ್ವಾ ಮಹಾದೇವಂ ಮಧ್ಯಮೇಶ್ವರಮೀಶ್ವರಂ ॥ ೧೦ ॥

ಜ್ಞಾನಂ ದಾನಂ ತಪಃ ಶ್ರಾದ್ಧಂ ಪಿಂಡನಿರ್ವಪಣಂ ತ್ವಿಹ।
ಏಕೈಕಶಃ ಕೃತಂ ಕರ್ಮ ಪುನಾತ್ಯಾಸಪ್ತಮಂ ಕುಲಂ ॥ ೧೧ ॥

ಸನ್ನಿಹತ್ಯಾಮುಪಸ್ಪೃಶ್ಯ ರಾಹುಗ್ರಸ್ತೇ ದಿವಾಕರೇ।
ಯತ್ಫಲಂ ಲಭತೇ ಮರ್ತ್ಯಃ ತಸ್ಮಾದ್ದಶಗುಣಂ ತ್ವಿಹ ॥ ೧೨ ॥

ಏವಮುಕ್ತಂ ಮಹಾರಾಜ ಮಾಹಾತ್ಮ್ಯಂ ಮಧ್ಯಮೇಶ್ವರೇ।
ಯಃ ಶೃಣೋತಿ ಪರಂ ಭಕ್ತ್ಯಾ ಸ ಯಾತಿ ಪರಮಂ ಪದಂ ॥ ೧೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ವಾರಣಸಿ ಮಹಾತ್ಮ್ಯೇ ಷಟ್ತ್ರಿಂಶೋಧ್ಯಾಯಃ

---

೯. ಪಾಪಿಗಳಾದರೂ ಯಾರು ಇಲ್ಲಿ ಪ್ರಾಣಬಿಡುತ್ತಾರೆಯೋ ಅವರು ಉತ್ತಮಪದವನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಸಂದೇಹವಿಲ್ಲ.

೧೦. ಯಾರು ಗಂಗೆಯಲ್ಲಿ ಸ್ನಾನಮಾಡಿ ತರ್ಪಣಾದಿಗಳನ್ನು ಆಚರಿಸಿ ಮಹಾದೇವನಾದ ಮಧ್ಯಮೇಶ್ವರನನ್ನು ಅರ್ಚಿಸುತ್ತಾರೆಯೋ ಅವರೇ ಧನ್ಯರು.

೧೧. ಈ ಜಾಗದಲ್ಲಿ ಆಚರಿಸಿದ ದಾನ, ತಪಸ್ಸು, ಶ್ರಾದ್ಧ, ಪಿಂಡಪ್ರದಾನ ಈ ಕರ್ಮಗಳಲ್ಲಿ ಒಂದೊಂದೂ ಏಳು ಕುಲಗಳನ್ನು ಉದ್ಧರಿಸುವುದು.

೧೨. ಸನ್ನಿಹತ್ಯೆಯಲ್ಲಿ ಸೂರ್ಯಗ್ರಹಣಕಾಲದಲ್ಲಿ ಸ್ನಾನಮಾಡಿದರೆ ಮನುಷ್ಯನು ಹೊಂದುವ ಫಲದ ಹತ್ತರಷ್ಟನ್ನು ಇಲ್ಲಿ ಸ್ನಾನಮಾಡಿದ ಮನುಜನು ಹೊಂದುತ್ತಾನೆ.

೧೩. ಮಧ್ಯಮೇಶ್ವರನ ಮಾಹಾತ್ಮ್ಯೆಯನ್ನು ಈ ರೀತಿ ಹೇಳಿದ್ದಾಯಿತು. ಇದನ್ನು ಭಕ್ತಿಯಿಂದ ಕೇಳಿದವನು ಉತ್ತಮಪದವಿಯನ್ನು ಹೊಂದುತ್ತಾನೆ.

ಪದ್ಮಪುರಾಣದ ವಾರಣಸಿ ಮಹಾತ್ಮೆಯ ಮೂವತ್ತಾರನೆ ಅಧ್ಯಾಯ ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಸಪ್ತತ್ರಿಂಶೋಽಧ್ಯಾಯಃ

॥ ನಾರದ ಉವಾಚ ॥

ಅನ್ಯಾನಿ ಚ ಮಹಾರಾಜ ತೀರ್ಥಾನಿ ಪಾವನಾನಿ ಚ।
ವಾರಾಣಸ್ಯಾಂ ಸ್ಥಿತಾನೀಹ ಸಂಶೃಣುಷ್ವ ಯುಧಿಷ್ಠಿರ ॥ ೧ ॥
ಪ್ರಯಾಗಾದಧಿಕಂ ತೀರ್ಥಂ ಪ್ರಯಾಗಂ ಪರಮಂ ಶುಭಂ।
ವಿಶ್ವರೂಪಂ ತಥಾ ತೀರ್ಥಂ ಕಾಲತೀರ್ಥಮನುತ್ತಮಂ ॥ ೨ ॥
ಆಕಾಶಾಖ್ಯಂ ಮಹಾತೀರ್ಥಂ ತೀರ್ಥಂ ಚೈವಾರ್ಷಭಂ ಪರಂ।
ಸುನೀಲಂ ಚ ಮಹಾತೀರ್ಥಂ ಗೌರೀತೀರ್ಥಮನುತ್ತಮಂ ॥ ೩ ॥
ಪ್ರಾಜಾಪತ್ಯಂ ತಥಾ ತೀರ್ಥಂ ಸ್ವರ್ಗದ್ವಾರಂ ತಥೈವ ಚ।
ಜಂಬುಕೇಶ್ವರಮಿತ್ಯುಕ್ತಂ ಧರ್ಮಾಖ್ಯಂ ತೀರ್ಥಮುತ್ತಮಂ ॥ ೪ ॥

---

### ಪದ್ಮಪುರಾಣದ ಆದಿಖಂಡದ ಮೂವತ್ತೇಳನೆಯ ಅಧ್ಯಾಯವು.

೧. ನಾರದನು ಹೇಳುತ್ತಾನೆ: ಪಾವನವಾದ ಇನ್ನೂ ಅನೇಕ ಬೇರೆ ಬೇರೆ ತೀರ್ಥಗಳು ಕಾಶಿಯಲ್ಲಿವೆ. ಅವುಗಳನ್ನು ಹೇಳುತ್ತೇನೆ, ಕೇಳು.

೨. ಪ್ರಯಾಗಕ್ಕಿಂತಲೂ ಉತ್ತಮವಾದ ಪ್ರಯಾಗತೀರ್ಥವೊಂದಿವೆ. ಮತ್ತು ಉತ್ತಮವಾದ ವಿಶ್ವರೂಪತೀರ್ಥ, ಕಾಲತೀರ್ಥಗಳೂ ಇವೆ.

೩. ಶ್ರೇಷ್ಠವಾದ ಆಕಾಶತೀರ್ಥ, ಆರ್ಷಭತೀರ್ಥ, ಸುನೀಲ ತೀರ್ಥ, ಗೌರೀತೀರ್ಥ ಎಂಬ ಮಹಾತೀರ್ಥಗಳೂ ಇವೆ.

೪. ಪ್ರಾಜಾಪತ್ಯ, ಸ್ವರ್ಗದ್ವಾರ, ಜಂಬುಕೇಶ್ವರ ಧರ್ಮತೀರ್ಥ ಎಂಬ ಉತ್ತಮತೀರ್ಥಗಳೂ ಅಲ್ಲಿವೆ.

ಗಯಾತೀರ್ಥಂ ಪರಂ ತೀರ್ಥಂ ತೀರ್ಥಂ ಚೈವ ಮಹಾನದೀ ।
ನಾರಾಯಣಂ ಪರಂ ತೀರ್ಥಂ ವಾಯುತೀರ್ಥಮನುತ್ತಮಂ ॥ ೫ ॥

ಜ್ಞಾನತೀರ್ಥಂ ಪರಂ ಗುಹ್ಯಂ ವಾರಾಹಂ ತೀರ್ಥಮುತ್ತಮಂ ।
ಯಮತೀರ್ಥಂ ಮಹಾಪುಣ್ಯಂ ತೀರ್ಥಂ ಸಂಮಾರ್ತಿಂ ಶುಭಂ ॥

ಅಗ್ನಿತೀರ್ಥಂ ಮಹಾರಾಜ ಕಲಶೇಶ್ವರಮುತ್ತಮಂ ।
ನಾಗತೀರ್ಥಂ ಸೋಮತೀರ್ಥಂ ಸೂರ್ಯತೀರ್ಥಂ ತಥೈವ ಚ ॥ ೭ ॥

ಪರ್ವತಾಖ್ಯಂ ಮಹಾಗುಹ್ಯಂ ಮಣಿಕರ್ಣ್ಯಮನುತ್ತಮಂ ।
ಘಟೋತ್ಕಚಂ ತೀರ್ಥವರಂ ಶ್ರೀತೀರ್ಥಂ ಚ ಪಿತಾಮಹಂ ॥ ೮ ॥

ಗಂಗಾತೀರ್ಥಂ ತು ದೇವೇಶಂ ಯಯಾತೇಸ್ತೀರ್ಥಮುತ್ತಮಂ ।
ಕಾಪಿಲಂ ಚೈವ ಸೋಮೇಶಂ ಬ್ರಹ್ಮತೀರ್ಥಮನುತ್ತಮಂ ॥ ೯ ॥

ತತ್ರಲಿಂಗಂ ಪುರಾಣೀಯಂ ಸ್ನಾತುಂ ಬ್ರಹ್ಮಾ ಯದಾಽಽಗತಃ ।
ತದಾನೀಂ ಸ್ಥಾಪಯಾಮಾಸ ವಿಷ್ಣುಸ್ತಲ್ಲಿಂಗಮೈಶ್ವರಂ ॥ ೧೦ ॥

---

೫. ಗಯಾತೀರ್ಥ, ಮಹಾನದೀತೀರ್ಥ ನಾರಾಯಣತೀರ್ಥ, ವಾಯುತೀರ್ಥ ಇವುಗಳೂ ಅಲ್ಲಿವೆ.

೬. ಜ್ಞಾನತೀರ್ಥ, ವಾರಾಹತೀರ್ಥ, ಯಮತೀರ್ಥ ಸಂಮಾರ್ತಿಕ ತೀರ್ಥಗಳೆಂಬ ಮಂಗಳಕರವೂ ಮಹಾಪುಣ್ಯಪ್ರದವೂ ಆದ ತೀರ್ಥ ಗಳುಂಟು.

೭–೯. ಅಗ್ನಿತೀರ್ಥ, ಕಲಶೇಶ್ವರತೀರ್ಥ, ನಾಗತೀರ್ಥ, ಸೋಮ ತೀರ್ಥ, ಸೂರ್ಯತೀರ್ಥ, ಪರ್ವತತೀರ್ಥ, ಮಣಿಕರ್ಣತೀರ್ಥ, ಘಟೋ ತ್ಕಜತೀರ್ಥ, ಶ್ರೀತೀರ್ಥ, ಪಿತಾಮಹತೀರ್ಥ, ಗಂಗಾತೀರ್ಥ, ಯಯಾತಿ ತೀರ್ಥ, ಕಾಪಿಲತೀರ್ಥ, ಸೋಮೇಶತೀರ್ಥ, ಬ್ರಹ್ಮತೀರ್ಥವೆಂಬುವೂ ಇವೆ.

೧೦–೧೧. ಅಲ್ಲಿಗೆ ಬ್ರಹ್ಮನು ಸ್ನಾನಮಾಡಲು ಬಂದಾಗ ವಿಷ್ಣುವು ಆ ಲಿಂಗವನ್ನು ಅಲ್ಲಿ ಸ್ಥಾಪಿಸಿದನು. ಬ್ರಹ್ಮನು ವಿಷ್ಣುವನ್ನು ಕುರಿತು.

ತತಃ ಸ್ನಾತ್ವಾ ಸಮಾಗಮ್ಯ ಬ್ರಹ್ಮಾ ಪ್ರೋವಾಚ ತಂ ಹರಿಂ ।
ಮಯಾಽಽನೀತಮಿದಂ ಲಿಂಗಂ ತಸ್ಮಾತ್ಸ್ಥಾಪಿತವಾನಸಿ ॥ ೧೧ ॥

ತಮಾಹ ವಿಷ್ಣುಸ್ತ್ವತ್ತೋಽಪಿ ರುದ್ರೇ ಭಕ್ತಿರ್ದೃಢಾ ಮಮ ।
ತಸ್ಮಾತ್ಪ್ರತಿಷ್ಠಿತಂ ಲಿಂಗಂ ನಾಮ್ನಾ ತತ್ರ ಭವಿಷ್ಯತಿ ॥ ೧೨ ॥

ಭೂತೇಶ್ವರಂ ತಥಾ ತೀರ್ಥಂ ತೀರ್ಥಂ ಧರ್ಮಸಮುದ್ಭವಂ ।
ಗಂಧರ್ವತೀರ್ಥಂ ಸುಶುಭಂ ವಾಹ್ನೇಯಂ ತೀರ್ಥಮುತ್ತಮಂ ॥ ೧೩ ॥

ದೌರ್ವಾಸಿಕಂ ವ್ಯೋಮತೀರ್ಥಂ ಚಂದ್ರತೀರ್ಥಂ ಯುಧಿಷ್ಠಿರ ।
ಚಿಂತಾಂಗದೇಶ್ವರಂ ತೀರ್ಥಂ ಪುಣ್ಯಂ ವಿದ್ಯಾಧರೇಶ್ವರಂ ॥ ೧೪ ॥

ಕೇದಾರಂ ತೀರ್ಥಮುಗ್ರಾಖ್ಯಂ ಕಾಲಂಜರಮನುತ್ತಮಂ ।
ಸಾರಸ್ವತಂ ಪ್ರಭಾಸಂ ಚ ರುದ್ರಕರ್ಣಹ್ರದಂ ಶುಭಂ ॥ ೧೫ ॥

ಕೋಕಿಲಾಖ್ಯಂ ಮಹಾತೀರ್ಥಂ ತೀರ್ಥಂ ಚೈವ ಮಹಾಲಯಂ ।
ಹಿರಣ್ಯಗರ್ಭಂ ಗೋಪ್ರೇಕ್ಷಂ ತೀರ್ಥಂ ಚೈವಮನುತ್ತಮಂ ॥ ೧೬ ॥

---

ಎಲೈ ವಿಷ್ಣುವೇ ಆ ಲಿಂಗವನ್ನು ನಾನು ತಂದಿದ್ದೇನೆ. ನಾನು ಬರುವಷ್ಟ ರಲ್ಲಿಯೇ ಅದನ್ನು ನೀನೇಕೆ ಸ್ಥಾಪಿಸಿದೆ ? ಎಂದು ಕೇಳಿದನು.

೧೨. ವಿಷ್ಣುವು ಬ್ರಹ್ಮನನ್ನು ಕುರಿತು ಅಯ್ಯಾ, ನಿನಗಿಂತಲೂ ನನಗೆ ಶಿವನಲ್ಲಿ ಭಕ್ತಿ ಹೆಚ್ಚು. ಆದುದರಿಂದ ನಾನೇ ಅದನ್ನು ಸ್ಥಾಪಿಸಿದೆ. ಅದು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗಿ ಆಗಲಿ ಎಂದನು.

೧೩–೧೪. ಭೂತೇಶ್ವರತೀರ್ಥ, ಧರ್ಮತೀರ್ಥ, ಗಂಧರ್ವತೀರ್ಥ ವಹ್ನಿತೀರ್ಥ, ದೂರ್ವಾಸತೀರ್ಥ, ವ್ಯೋಮತೀರ್ಥ, ಚಂದ್ರತೀರ್ಥ, ಚಿಂತಾಂಗದೇಶ್ವರತೀರ್ಥ, ವಿಧ್ಯಾಧರೇಶ್ವರತೀರ್ಥವೆಂಬುವೂ ಇವೆ.

೧೫–೧೬. ಕೇದಾರತೀರ್ಥ, ಉಗ್ರ, ಕಾಲಚರ, ಸಾರಸ್ವತ, ಪ್ರಭಾಸ ರುದ್ರಕರ್ಣ, ಕೋಕಿಲಾ, ಮಹಾಲಯ, ಹಿರಣ್ಯಗರ್ಭ, ಗೋಪ್ರೇಕ್ಷ ಎಂಬ ತೀರ್ಥಗಳೂ ಅಲ್ಲಿವೆ.

ಉಪಶಾಂತಂ ಶಿವಂ ಚೈವ ವ್ಯಾಘ್ರೇಶ್ವರಮನುತ್ತಮಂ ।
ತ್ರಿಲೋಚನಂ ಮಹಾತೀರ್ಥಂ ಲೋಕಾರ್ಕಂ ಚೋತ್ತರಾಹ್ವಯಂ ॥
ಕಪಾಲಮೋಚನಂ ತೀರ್ಥಂ ಬ್ರಹ್ಮಹತ್ಯಾವಿನಾಶನಂ ।
ಶುಕ್ರೇಶ್ವರಂ ಮಹಾಪುಣ್ಯಂ ಆನಂದಪುರಮುತ್ತಮಂ ॥ ೧೮ ॥
ಏವಮಾದೀನಿ ತೀರ್ಥಾನಿ ವಾರಾಣಸ್ಯಾಂ ಸ್ಥಿತಾನಿ ವೈ ।
ನ ಶಕ್ಯಂ ವಿಸ್ತರಾದ್ವಕ್ತುಂ ಕಲ್ಪಕೋಟಿಶತೈರಪಿ ॥ ೧೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ವಾರಣಸಿ ಮಹಾತ್ಮ್ಯೇ ಸಪ್ತತ್ರಿಂಶೋಽಧ್ಯಾಯಃ

---

೧೭-೧೮. ಉಪಶಾಂತ, ಶಿವ, ವ್ಯಾಘ್ರೇಶ್ವರ, ತ್ರಿಲೋಚನ, ಲೋಕಾರ್ಕ, ಉತ್ತರ, ಕಪಾಲಮೋಚನ, ಶುಕ್ರೇಶ್ವರ ಎಂಬ ಪಾಪಪರಿಹಾರಕಗಳಾದ ಮಹಾತೀರ್ಥಗಳುಂಟು.

೧೯. ಇವೇ ಮುಂತಾದ ತೀರ್ಥಗಳು ವಾರಾಣಸಿಯಲ್ಲಿವೆ. ಇವುಗಳ ಮಾಹಾತ್ಮ್ಯೆಯನ್ನು ಕೋಟಿಕಲ್ಪಗಳ ಪರ್ಯಂತವಾದರೂ ವರ್ಣಿಸಲು ಅಸಾಧ್ಯವು.

ಇಲ್ಲಿಗೆ ಶ್ರೀ ಪದ್ಮಪುರಾಣದ ಆದಿಖಂಡದ
ವಾರಣಸಿ ಮಹಾತ್ಮ್ಯೆಯಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಅಷ್ಟತ್ರಿಂಶೋಽಧ್ಯಾಯಃ

### ॥ ನಾರದ ಉವಾಚ ॥

ವಾರಾಣಸ್ಯಾಶ್ಚ ಮಾಹಾತ್ಮ್ಯಂ ತಸ್ಯಾಂ ತೀರ್ಥಾನಿ ಚ ಪ್ರಭೋ ।
ಕಥಿತಾನಿ ಸಮಾಸೇನ ತೀರ್ಥಾನ್ಯನ್ಯಾನಿ ಸಂಶೃಣು ॥ ೧ ॥

ತತೋ ಗಯಾಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।
ಅಶ್ವಮೇಧಮವಾಪ್ನೋತಿ ಗಮನಾದೇವ ಭಾರತ ॥ ೨ ॥

ಯತ್ರಾಕ್ಷಯ್ಯವಟೋ ನಾಮ ತ್ರಿಷುಲೋಕೇಷು ವಿಶ್ರುತಃ ॥
ಪಿತೄಣಾಂ ತತ್ರ ವೈ ದತ್ತಮಕ್ಷಯಂ ಭವತಿ ಪ್ರಭೋ ॥ ೩ ॥

ಮಹಾನದ್ಯಾಮುಪಸ್ಪೃಶ್ಯ ತರ್ಪಯೇತ್ಪಿತೃದೇವತಾಃ ।
ಅಕ್ಷಯಾನಾಪ್ನುಯಾಲ್ಲೋಕಾನ್ ಕುಲಂ ಚೈವ ಸಮುದ್ಧರೇತ್ ॥

---

ಪದ್ಮ ಪುರಾಣದ ಆದಿಖಂಡದ ಮೂವತ್ತೆಂಟನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ: ವಾರಾಣಸಿಯ ಮಾಹಾತ್ಮ್ಯೆಯನ್ನೂ ಅದರಲ್ಲಿನ ತೀರ್ಥಗಳನ್ನೂ ವಿವರಿಸಿದೆನು. ಇನ್ನೂ ಕೆಲವು ತೀರ್ಥಗಳನ್ನೂ ಹೇಳುವೆನು, ಕೇಳು.

೨. ಬ್ರಹ್ಮಚಾರಿಯಾಗಿ ಗಯೆಗೆ ಹೋಗಬೇಕು. ಹೀಗೆ ಹೋಗುವುದರಿಂದಲೇ ಅಶ್ವಮೇಧಯಾಗಫಲವನ್ನು ಹೊಂದುತ್ತಾನೆ.

೩. ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯಾದ ಅಕ್ಷಯವಟವೆಂಬ ಆಲದಮರವು ಅಲ್ಲಿರುವುದು. ಅಲ್ಲಿ ಪಿತೃಗಳಿಗೆ ಕೊಟ್ಟ ತರ್ಪಣವು ಅಕ್ಷಯವಾಗುತ್ತದೆ.

೪. ಮಹಾನದಿಯಲ್ಲಿ ಸ್ನಾನಮಾಡಿ ಪಿತೃಗಳಿಗೆ ತರ್ಪಣವನ್ನು ಕೊಟ್ಟದ್ದೇ ಆದರೆ ಶಾಶ್ವತವಾದ ಪುಣ್ಯಲೋಕಗಳನ್ನು ಹೊಂದುವುದಲ್ಲದೆ ತನ್ನ ಕುಲವನ್ನೂ ಉದ್ಧಾರಮಾಡಿಕೊಳ್ಳುತ್ತಾನೆ.

ತತೋ ಬ್ರಹ್ಮಸರೋ ಗಚ್ಛೇದ್ಬ್ರಹ್ಮಾರಣ್ಯೋಪಸೇವಿತಂ।
ಪುಂಡರೀಕಮವಾಪ್ನೋತಿ ಪ್ರಭಾತಮಿವ ಶರ್ವರೀ ॥ ೫ ॥

ಸರಸಿ ಬ್ರಹ್ಮಣಾ ತತ್ರ ಯೂಪಶ್ರೇಷ್ಠಃ ಸಮುಚ್ಛ್ರಿತಃ।
ಯೂಪಂ ಪ್ರದಕ್ಷಿಣಂ ಕೃತ್ವಾ ವಾಜಪೇಯಫಲಂ ಲಭೇತ್ ॥ ೬ ॥

ತತೋ ಗಚ್ಛೇತ ರಾಜೇಂದ್ರ ಧೇನುಕಂ ಲೋಕವಿಶ್ರುತಂ।
ಏಕರಾತ್ರೋಷಿತೋ ರಾಜನ್ ಪ್ರಯಚ್ಛೇತ್ತಿಲಧೇನುಕಂ ॥ ೭ ॥

ಸರ್ವಪಾಪವಿಶುದ್ಧಾತ್ಮಾ ಸೋಮಲೋಕಂ ವ್ರಜೇದ್ಧ್ರುವಂ।
ತತ್ರ ಚಿಹ್ನಂ ಮಹಾರಾಜ ಅದ್ಯಾಪಿ ನ ಹಿ ಸಂಶಯಃ ॥ ೮ ॥

ಕಪಿಲಾ ಸಹವತ್ಸಾ ವೈ ಪರ್ವತೇ ವಿಚರತ್ಯುತ।
ಸವತ್ಸಾಯಾಃ ಪದಾನ್ಯಸ್ಯಾ ದೃಶ್ಯಂತೇಽದ್ಯಾಪಿ ಭಾರತ ॥ ೯ ॥

---

೫. ಬ್ರಹ್ಮಾದಿಗಳಿಂದ ಸೇವಿಸಲ್ಪಟ್ಟ ಬ್ರಹ್ಮಸರಸ್ಸಿಗೆ ಹೋಗಿ ಅಲ್ಲಿ ಸ್ನಾನಮಾಡಿದರೆ, ರಾತ್ರಿಯು ಬೆಳಕನ್ನು ಕಂಡಂತೆ ಪುಂಡರೀಕ ಯಜ್ಞದ ಫಲವನ್ನು ಹೊಂದುತ್ತಾನೆ.

೬. ಆ ಸರೋವರದಲ್ಲಿ ಬಹ್ಮನು ಯಾಗಮಾಡಿ ಯೂಪಸ್ತಂಭವನ್ನು ನೆಟ್ಟಿದ್ದಾನೆ. ಆ ಯೂಪವನ್ನು ಪ್ರದಕ್ಷಿಣೆಮಾಡಿದರೆ ವಾಜಪೇಯವೆಂಬ ಯಾಗವನ್ನು ಮಾಡಿದ ಫಲವು ಲಭಿಸುತ್ತದೆ.

೭–೮. ಆ ಮೇಲೆ ಪ್ರಸಿದ್ಧವಾದ ಧೇನುಕವೆಂಬ ತೀರ್ಥವನ್ನು ಹೊಂದಬೇಕು. ಅಲ್ಲಿ ಸ್ನಾನಮಾಡಿ ಒಂದು ರಾತ್ರಿ ಉಪವಾಸಮಾಡಿ ಎಳ್ಳಿನಲ್ಲಿ ಹಸುವನ್ನು ಮಾಡಿ ಧಾನಮಾಡಿದರೆ ಸರ್ವಪಾಪಗಳೂ ಹೋಗಿ ಸೋಮಲೋಕವನ್ನು ಹೊಂದುತ್ತಾನೆ. ಸಂಶಯವಿಲ್ಲ. ಅಲ್ಲಿ ಒಂದು ಗುರುತಿದೆ. ಅದನ್ನು ಹೇಳುತ್ತೇನೆ.

೯. ಕಪಿಲೆಯು ಕರುವಿನೊಡನೆ ಪರ್ವತದಲ್ಲಿ ಸಂಚರಿಸುತ್ತಿದ್ದಿತು. ಈಗಲೂ ಕೂಡ ಅದರ ಕಾಲುಗೊರಸಿನ ಗುರುತು ಕಾಣುತ್ತದೆ.

ತೇಷೂಪಸ್ಪೃಶ್ಯ ರಾಜೇಂದ್ರ ಪದೇಷು ನೃಪಸತ್ತಮ ।
ಯತ್ಕಿಂಚಿದಶುಭಂ ಪಾಪಂ ತತ್ಪ್ರಣಶ್ಯತಿ ಭಾರತ ॥ ೧೦ ॥

ತತೋ ಗೃಧ್ರವಟಂ ಗಚ್ಛೇತ್ಸ್ಥಾನಂ ದೇವಸ್ಯ ಶೂಲಿನಃ ।
ಸ್ನಾಯಾತ್ತು ಭಸ್ಮನಾ ತತ್ರ ಸಂಗಮ್ಯ ವೃಷಭಧ್ವಜಂ ॥ ೧೧ ॥

ಬ್ರಾಹ್ಮಣೇನ ಭವೇಚ್ಚೀರ್ಣಂ ವ್ರತಂ ದ್ವಾದಶವಾರ್ಷಿಕಂ ।
ಇತರೇಷಾಂ ತು ವರ್ಣಾನಾಂ ಸರ್ವಪಾಪಂ ಪ್ರಣಶ್ಯತಿ ॥ ೧೨ ॥

ಗಚ್ಛೇತ ತತ ಉದ್ಯಂತಂ ಪರ್ವತಂ ಗೀತನಾದಿತಂ ।
ಸಾವಿತ್ರಂ ತು ಪದಂ ತತ್ರ ದೃಶ್ಯತೇ ಭರತರ್ಷಭ ॥ ೧೩ ॥

ತತ್ರ ಸಂಧ್ಯಾಮುಪಾಸೀತ ಬ್ರಾಹ್ಮಣಸ್ಸಂಶಿತವ್ರತಃ ।
ಉಪಾಸ್ತಾ ಹಿ ಭವೇತ್ಸಂಧ್ಯಾ ತೇನ ದ್ವಾದಶವಾರ್ಷಿಕೀ ॥ ೧೪ ॥

---

೧೦. ಆ ಗೊರಸಿನಲ್ಲಿರುವ ತೀರ್ಥವನ್ನು ತಂದು ಸ್ನಾನಮಾಡಿದರೆ, ಪಾಪವೇನಿದ್ದರೂ ನಾಶವಾಗುತ್ತದೆ.

೧೧. ಆ ಮೇಲೆ ಗೃಧ್ರವಟಕ್ಕೆ ಹೋಗಬೇಕು. ಅದು ಶೂಲಿಯ ಸ್ಥಾನವು. ಅಲ್ಲಿ ಭಸ್ಮಸ್ನಾನಮಾಡಿಕೊಂಡು ವೃಷಭಧ್ವಜನ ದರ್ಶನ ಮಾಡಬೇಕು.

೧೨. ಬ್ರಾಹ್ಮಣನು ದ್ವಾದಶವಾರ್ಷಿಯಾಗವನ್ನು ಮಾಡಿದರೆ ಬರುವಷ್ಟು ಪುಣ್ಯವು ಅಲ್ಲಿಗೆ ಹೋದರೆ ಬರುತ್ತದೆ. ಇತರವರ್ಣಗಳಿಗೂ ಕೂಡ ಎಲ್ಲ ಪಾಪವೂ ಹೋಗುತ್ತದೆ.

೧೩. ಆ ಮೇಲೆ ಗೀತಾದಿಗಳಿಂದ ಕೂಡಿರುವ ಉದ್ಯಂತವೆಂಬ ಪರ್ವತಕ್ಕೆ ಹೋಗಬೇಕು. ಅಲ್ಲಿ ಸಾವಿತ್ರವೆಂಬ ಸ್ಥಾನವಿದೆ. ಅದು ಕಾಣುತ್ತದೆ.

೧೪. ಬ್ರಾಹ್ಮಣನಾದವನು ಅಲ್ಲಿ ನಿಯಮದಿಂದ ಸಂಧ್ಯಾವಂದನೆಯನ್ನು ಮಾಡಬೇಕು. ಅಲ್ಲಿ ಮಾಡಿದ ಸಂಧ್ಯಾವಂದನೆಯು ಹನ್ನೆರಡು ವರ್ಷಗಳ ಸಂಧ್ಯೋಪಾಸನೆಯ ಫಲವನ್ನು ಕೊಡುತ್ತದೆ.

ಯೋನಿದ್ವಾರಂ ತು ತತ್ರೈವ ವಿಶ್ರುತಂ ಭರತರ್ಷಭ।
ತತ್ರಾಭಿಗಮ್ಯ ಮುಚ್ಯೇತ ಪುರುಷೋ ಯೋನಿಸಂಕಟಾತ್ ॥ ೧೫ ॥
ಶುಕ್ಲಕೃಷ್ಣಾವುಭೌ ಪಕ್ಷೌ ಗಯಾಯಾಂ ಯೋ ವಸೇನ್ನರಃ।
ಪುನಾತ್ಯಾಸಪ್ತಮಂ ರಾಜನ್ ಕುಲಂ ನಾಸ್ತ್ಯತ್ರ ಸಂಶಯಃ ॥ ೧೬ ॥
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್
ಯಜೇತವಾಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೧೭ ॥
ತತಃ ಫಲ್ಗುಂ ವ್ರಜೇದ್ರಾಜನ್ ತೀರ್ಥಸೇವೀ ನರಾಧಿಪ।
ಅಶ್ವಮೇಧಮವಾಪ್ನೋತಿ ಸಿದ್ಧಿಂ ಚ ಪರಮಾಂ ವ್ರಜೇತ್ ॥ ೧೮ ॥
ತತೋ ಗಚ್ಛೇತ ರಾಜೇಂದ್ರ ಧರ್ಮಪೃಷ್ಠಂ ಸಮಾಹಿತಃ।
ಯತ್ರ ಧರ್ಮೋ ಮಹಾರಾಜ ನಿತ್ಯಮಾಸ್ತೇ ಯುಧಿಷ್ಠಿರ ॥ ೧೯ ॥

---

೧೫. ಅಲ್ಲೇ ಯೋನಿದ್ವಾರವೆಂಬ ತೀರ್ಥವಿದೆ. ಅಲ್ಲಿ ಹೋಗಿ ಸ್ನಾನಮಾಡಿದರೆ ಅವನಿಗೆ ಜನನಮರಣಗಳಿಲ್ಲ.

೧೬. ಶುಕ್ಲಕೃಷ್ಣಪಕ್ಷಗಳು ಪೂರ್ತ ಒಂದು ತಿಂಗಳು ಗಯೆಯಲ್ಲಿ ಯಾರು ವಾಸಮಾಡುತ್ತಾರೋ ಅವರು ತಮ್ಮ ಏಳುಕುಲಗಳನ್ನು ಪವಿತ್ರ ವನ್ನಾಗಿಮಾಡುತ್ತಾರೆ.

೧೭. ಮನುಷ್ಯನಿಗೆ ಬಹಳ ಮಕ್ಕಳಾಗಬೇಕೆಂಬುದೇತಕ್ಕೆಂದರೆ ಅವ ರಲ್ಲಿ ಯಾರಾವರೂ ಒಬ್ಬರಾದರೂ ಗಯೆಗೆ ಹೋಗಲೆಂದು. ಅದಿಲ್ಲದಿದ್ದರೆ ಅಶ್ವಮೇಧಯಾಗಮಾಡಬೇಕು. ಅದಿಲ್ಲದಿದ್ದರೆ ಕಪ್ಪಗಿರುವ ಕರುವನ್ನು (ನಿಲಸಂಜ್ಞೆಯುಳ್ಳ) ವೃಷೋತ್ಸರ್ಗಮಾಡಬೇಕು. ಇವೆಲ್ಲವೂ ಸಮ ನಾದವು.

೧೮. ಆ ಮೇಲೆ ಫಲ್ಗುತೀರ್ಥಕ್ಕೆ ಹೋಗಬೇಕು. ಅಶ್ವಮೇಧ ಫಲವನ್ನು ಹೊಂದಿ ಉತ್ತಮವಾದ ಸಿದ್ಧಿಯನ್ನು ಹೊಂದುತ್ತಾನೆ.

೧೯. ಆ ಮೇಲೆ ಧರ್ಮಪೃಷ್ಠವೆಂಬ ಸ್ಥಾನಕ್ಕೆ ಹೋಗಬೇಕು. ಅಲ್ಲಿ ಧರ್ಮನು ಯಾವಾಗಲೂ ನೆಲಸಿರುತ್ತಾನೆ. ಅಲ್ಲಿ ಧರ್ಮದೇವನ ದರ್ಶನ ಮಾಡಿದರೆ ಅಶ್ವಮೇಧಫಲವು ಬರುತ್ತದೆ.

ಧರ್ಮಂ ತತ್ರಾಭಿಸಂಗಮ್ಯ ವಾಜಿಮೇಧಫಲಂ ಲಭೇತ್ ।
ತತೋ ಗಚ್ಛೇತ ರಾಜೇಂದ್ರ ಬ್ರಹ್ಮಣಸ್ತೀರ್ಥಮುತ್ತಮಂ ॥ ೨೦ ॥

ತತ್ರಾಭಿಗಮ್ಯ ಬ್ರಹ್ಮಾಣಮರ್ಚಯೇನ್ನಿಯತವ್ರತಃ ।
ರಾಜಸೂಯಾಶ್ವಮೇಧಾಭ್ಯಾಂ ಫಲಂ ಪ್ರಾಪ್ನೋತಿ ಭಾರತ ॥ ೨೧ ॥

ತತೋ ರಾಜಗೃಹಂ ಗಚ್ಛೇತ್ತೀರ್ಥಸೇವೀ ನರಾಧಿಪ ।
ಉಪಸ್ಪೃಶ್ಯ ತತಸ್ತತ್ರ ಕಕ್ಷೀವಾನಿನ ಮೋದತೇ ॥ ೨೨ ॥

ಯಕ್ಷಿಣ್ಯಾ ನೈತ್ಯಕಂ ತತ್ರ ಪ್ರಾಗಗ್ನಿಃ ಪುರುಷಃ ಶುಚಿಃ ।
ಯಕ್ಷಿಣ್ಯಾಸ್ತು ಪ್ರಸಾದೇನ ಮುಚ್ಯತೇ ಬ್ರಹ್ಮಹತ್ಯಯಾ ॥ ೨೩ ॥

ಮಣಿನಾಗಂ ತತೋ ಗಚ್ಛೇದ್ಗೋಸಹಸ್ರಫಲಂ ಲಭೇತ್ ।
ನೈತ್ಯಕಂ ಭುಂಜತೇ ಯಸ್ತು ಮಣಿನಾಗಸ್ಯ ಮಾನವಃ ॥ ೨೪ ॥

ದಷ್ಟಸ್ಯಾಶೀವಿಷೇಣಾಸ್ಯ ನ ವಿಷಂ ಕ್ರಮತೇ ನೃಪ ।
ತತ್ರೋಷ್ಯ ರಜನೀಮೇಕಾಂ ಸರ್ವಪಾಪೈಃ ಪ್ರಮುಚ್ಯತೇ ॥ ೨೫ ॥

---

೨೦–೨೧. ಆ ಮೇಲೆ ಬ್ರಹ್ಮತೀರ್ಥಕ್ಕೆ ಹೋಗಬೇಕು. ಅಲ್ಲಿ ಸ್ನಾನ ಮಾಡಿ ಬಹ್ಮನನ್ನು ಪೂಜಿಸಿದರೆ ರಾಜಸೂಯಾಶ್ವಮೇಧಯಾಗಗಳ ಫಲವು ಲಭಿಸುತ್ತದೆ.

೨೨. ಆ ಮೇಲೆ ರಾಜಗೃಹತೀರ್ಥವನ್ನು ಹೊಂದಿ ಸ್ನಾನಮಾಡಿ ದರೆ ಅಗ್ನಿಯಂತೆ ಸುಖಪಡುತ್ತಾನೆ.

೨೩. ಯಕ್ಷಿಣಿಯು ಅಲ್ಲಿ ಯಾವಾಗಲೂ ಪ್ರತಿಮೆಯಾಗಿ ಇರುವಳು. ಶುಚಿಯಾದ ಅಗ್ನಿಯೂ ಸನ್ನಿಧಾನ ಹೊಂದಿರುವುದು. ಅಲ್ಲಿ ಯಕ್ಷಿಣಿಯ ಪ್ರಸಾದದಿಂದ ಬಹ್ಮಹತ್ಯೆಪಾಪವು ಹೋಗುತ್ತದೆ.

೨೪–೨೫. ಮುಂದೆ ಮಣಿನಾಗವೆಂಬ ಮತ್ತೊಂದು ತೀರ್ಥವಿರುವುದು. ಅಲ್ಲಿಗೆ ಹೋಗಿ ಅಲ್ಲಿ ಸ್ನಾನಮಾಡಿ ಮಣಿನಾಗನ ಪ್ರಸಾದವನ್ನು ತಿಂದರೆ ಹಾವು ಕಚ್ಚಿದರೂ, ಅವನ ಅನುಗ್ರಹದಿಂದ ವಿಷವೇರುವುದಿಲ್ಲ ಅಲ್ಲಿ ಒಂದು ರಾತ್ರಿ ಇದ್ದರೆ ಎಲ್ಲ ಪಾಪಗಳೂ ನಾಶವಾಗುತ್ತವೆ.

ತತೋ ಗಚ್ಛೇತ ಬ್ರಹ್ಮರ್ಷೇರ್ಗೌತಮಸ್ಯ ವನಂ ನೃಪ।
ಅಹಲ್ಯಾಯಾ ಹ್ರದೇ ಸ್ನಾತ್ವಾ ವ್ರಜೇತ ಪರಮಾಂ ಗತಿಂ ॥ ೨೬ ॥

ಅಭಿಗಮ್ಯ ಶ್ರಿಯಂ ರಾಜನ್ ವಿಂದತೇ ಶ್ರಿಯಮುತ್ತಮಾಂ ।
ತತ್ರೋದಪಾನೋ ಧರ್ಮಜ್ಞ ತ್ರಿಷು ಲೋಕೇಷು ವಿಶ್ರುತಃ॥೨೭॥

ತತ್ರಾಭಿಷೇಕಂ ಕುರ್ವೀತ ವಾಜಿಮೇಧಮವಾಪ್ನುಯಾತ್ ।
ಜನಕಸ್ಯ ತು ರಾಜರ್ಷೇಃ ಕೂಪಸ್ತ್ರಿದಶಪೂಜಿತಃ।
ತತ್ರಾಭಿಷೇಕಂ ಕೃತ್ವಾ ತು ವಿಷ್ಣುಲೋಕಮವಾಪ್ನುಯಾತ್॥ ೨೮ ॥

ತತೋ ವಿನಾಶನಂ ಗಚ್ಛೇತ್ಸರ್ವಪಾಪಪ್ರಮೋಚನಂ।
ವಾಜಿಮೇಧಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥ ೨೯ ॥

ಗಂಡಕೀಂ ಚ ಸಮಾಸಾದ್ಯ ಸರ್ವತೀರ್ಥಜಲೋದ್ಭವಾಂ।
ವಾಜಪೇಯಮವಾಪ್ನೋತಿ ಸೂರ್ಯಲೋಕಂ ಚ ಗಚ್ಛತಿ ॥ ೩೦ ॥

---

೨೬. ಆ ಮೇಲೆ ಗೌತಮವನಕ್ಕೆ ಹೋಗಿ ಅಲ್ಲಿರುವ ಅಹಲ್ಯಾ ಹ್ರದವೆಂಬ ಸರಸ್ಸಿನಲ್ಲಿ ಸ್ನಾನಮಾಡಿದರೆ ಸ್ವರ್ಗಭಾಗಿಯಾಗುತ್ತಾನೆ.

೨೭. ಶ್ರೀ ತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಐಶ್ವರ್ಯವು ಪ್ರಾಪ್ತವಾಗುವುದು. ಅಲ್ಲಿ ಜಲಪಾನವು ಬಹು ಪ್ರಸಿದ್ಧಿಯಾದುದು. ಅಲ್ಲಿ ಸ್ನಾನಮಾಡಿದರೆ ಅಶ್ವಮೇಧಯಾಗದ ಫಲವು ಬರುತ್ತದೆ.

೨೮. ಅಲ್ಲಿ ಜನಕಕೂಪವೆಂಬ ತೀರ್ಥವಿರುವುದು. ಅಲ್ಲಿ ಸ್ನಾನ ಮಾಡಿದರೆ ವಿಷ್ಣುಲೋಕಪ್ರಾಪ್ತಿಯಾಗುವುದು.

೨೯. ಸರ್ವಪಾಪನಾಶಕವಾದ ವಿನಾಶನವೆಂಬ ತೀರ್ಥಕ್ಕೆ ಹೋಗಿ ಸಾನ್ನಮಾಡಿದರೆ ಅಶ್ವಮೇಧಫಲವು ಬರುತ್ತದೆ. ಮತ್ತು ಚಂದ್ರಲೋಕ ಪ್ರಾಪ್ತಿಯಾಗುವುದು.

೩೦. ಸರ್ವತೀರ್ಥಗಳಿಂದುತ್ಪನ್ನವಾದ ಗಂಡಕೀನದಿಗೆ ಹೋಗಿ ಸ್ನಾನಮಾಡಿದರೆ ಅಶ್ವಮೇಧಫಲವನ್ನು ಹೊಂದಿ ಸೂರ್ಯಲೋಕವನ್ನು ಸೇರುವನು.

ತತೋ ಧ್ರುವಸ್ಯ ಧರ್ಮಜ್ಞ ಸಮಾವಿಶ್ಯ ತಪೋವನಂ ।
ಗುಹ್ಯಕೇಷು ಮಹಾಭಾಗ ಮೋದತೇ ನಾತ್ರ ಸಂಶಯಃ ॥ ೩೧ ॥

ನರ್ಮದಾಂ ತು ಸಮಾಸಾದ್ಯ ನದೀಂ ಸಿದ್ಧನಿಷೇವಿತಾಂ।
ಪುಂಡರೀಕಮವಾಪ್ನೋತಿ ಸೋಮಲೋಕಂ ಚ ಗಚ್ಛತಿ ॥ ೩೨ ॥

ತತೋ ವಿಶಾಲಾಮಾಸಾದ್ಯ ನದೀಂ ತ್ರೈಲೋಕ್ಯವಿಶ್ರುತಾಂ।
ಅಗ್ನಿಷ್ಟೋಮಮವಾಪ್ನೋತಿ ಸ್ವರ್ಗಲೋಕಂ ಚ ಗಚ್ಛತಿ ॥ ೩೩ ॥

ಅಥ ಮಾಹೇಶ್ವರೀಂ ಧಾರಾಂ ಸಮಾಸಾದ್ಯ ನರಾಧಿಪ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೩೪ ॥

ದಿವೌಕಸಾಂ ಪುಷ್ಕರಿಣೀಂ ಸಮಾಸಾದ್ಯ ನರಃ ಶುಚಿಃ।
ನ ದುರ್ಗತಿಮವಾಪ್ನೋತಿ ವಾಜಪೇಯಂ ಚ ವಿಂದತಿ ॥ ೩೫ ॥

---

೩೧. ಆ ಮೇಲೆ ಧ್ರುವನ ತಪೋವನವನ್ನು ಹೊಂದಿ ಅಲ್ಲಿ ಸ್ನಾನ ಮಾಡಿದರೆ ಗುಹ್ಯಕಲೋಕದಲ್ಲಿ ಸುಖಿಸುತ್ತಾನೆ, ಸಂಶಯವಿಲ್ಲ.

೩೨. ಸಿದ್ಧಸೇವಿತವಾದ ನರ್ಮದೆಗೆ ಹೋಗಿ ಸ್ನಾನಮಾಡಿದರೆ ಪುಂಡರೀಕಯಜ್ಞದ ಫಲಬರುತ್ತದೆ. ಚಂದ್ರಲೋಕಪ್ರಾಪ್ತಿಯಾಗುವುದು.

೩೩. ಲೋಕಪ್ರಸಿದ್ಧವಾದ ವಿಶಾಲಾನದಿಯನ್ನು ಹೊಂದಿ ಸ್ನಾನ ಮಾಡಿದರೆ ಅಗ್ನಿಷ್ಟೋಮವೆಂಬ ಯಜ್ಞದ ಫಲವು ಬರುತ್ತದೆ. ಸ್ವರ್ಗವನ್ನು ಹೊಂದುತ್ತಾನೆ.

೩೪. ಮಾಹೇಶ್ವರೀಧಾರೆಗೆ ಹೋಗಿ ಸ್ನಾನಮಾಡಿದರೆ ಅಶ್ವಮೇಧಯಾಗದ ಪುಣ್ಯವುಬರುತ್ತದೆ. ಕುಲವನ್ನು ಉದ್ಧಾರಮಾಡುತ್ತಾನೆ.

೩೫. ಶುಚಿರ್ಭೂತನಾಗಿ ದೇವಪುಷ್ಕರಿಣಿಯಲ್ಲಿ ಸ್ನಾನಮಾಡಿದ ಮನುಷ್ಯನಿಗೆ ನರಕಪ್ರಾಪ್ತಿಯಿಲ್ಲ ಮತ್ತು ವಾಜಪೇಯಯಾಗದ ಫಲವನ್ನು ಹೊಂದುತ್ತಾನೆ.

ಮಾಹೇಶ್ವರಂ ಪದಂ ಗಚ್ಛೇತ್ ಬ್ರಹ್ಮಚಾರೀ ಸಮಾಹಿತಃ।
ಮಾಹೇಶ್ವರಪದೇ ಸ್ನಾತ್ವಾ ವಾಜಿಮೇಧಫಲಂ ಲಭೇತ್ ॥ ೩೬ ॥

ತತ್ರ ಕೋಟಿಸ್ತು ತೀರ್ಥಾನಾಂ ವಿಶ್ರುತಾ ಭರತರ್ಷಭ।
ಕೂರ್ಮರೂಪೇಣ ರಾಜೇಂದ್ರ ಅಸುರೇಣ ದುರಾತ್ಮನಾ ॥ ೩೭ ॥

ಹ್ರಿಯಮಾಣಾ ಹೃತಾ ರಾಜನ್ ವಿಷ್ಣುನಾ ಪ್ರಭವಿಷ್ಣುನಾ।
ತತ್ರಾಭಿಷೇಕಂ ಕುರ್ವೀತ ತೀರ್ಥಕೋಟ್ಯಾಂ ನರಾಧಿಪ॥
ಪುಂಡರೀಕಮವಾಪ್ನೋತಿ ವಿಷ್ಣುಲೋಕಂ ಚ ವಿಂದತಿ ॥ ೩೮ ॥

ತತೋ ಗಚ್ಛೇತ ರಾಜೇಂದ್ರ ಸ್ಥಾನಂ ನಾರಾಯಣಸ್ಯ ಚ।
ಸದಾ ಸಂನಿಹಿತೋ ಯತ್ರ ಹರಿರ್ವಸತಿ ಭಾರತ ॥ ೩೯ ॥

ಯತ್ರ ಬ್ರಹ್ಮಾದಯೋ ದೇವಾ ಋಷಯಶ್ಚ ತಪೋಧನಾಃ।
ಆದಿತ್ಯಾ ವಸವೋ ರುದ್ರಾ ಜನಾರ್ದನಮುಪಾಸತೇ ॥ ೪೦ ॥

---

೩೬. ಅನಂತರ ಮಾಹೇಶ್ವರಪದವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಿದರೆ ಅಶ್ವಮೇಧಫಲವು ಬರುತ್ತದೆ.

೩೭–೩೮. ಅಲ್ಲಿ ತೀರ್ಥಕೋಟಿಯೆಂಬ ಉತ್ತಮತೀರ್ಥವಿದೆ. ಅದನ್ನು ಒಬ್ಬ ರಾಕ್ಷಸನು ಆಮೆಯ ರೂಪದಿಂದ ಅಪಹರಿಸುತ್ತಿರಲು ವಿಷ್ಣುವು ಅದನ್ನು ಪುನಃ ತಂದನು. ಅಂತಹ ಆ ತೀರ್ಥದಲ್ಲಿ ಸ್ನಾನ ಮಾಡಿದರೆ ಪುಂಡರೀಕವೆಂಬ ಯಾಗದ ಫಲವನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾನೆ.

೩೯. ಬಳಿಕ ನಾರಾಯಣಸ್ಥಾನವೆಂಬ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡಬೇಕು. ವಿಷ್ಣುವು ಅಲ್ಲಿ ಯಾವಾಗಲೂ ನೆಲಸಿರುವನು.

೪೦. ಅಲ್ಲಿ ಬ್ರಹ್ಮಾದಿಯಾದ ದೇವತೆಗಳೂ ತಪಸ್ವಿಗಳಾದ ಋಷಿಗಳೂ ವಸುರುದ್ರಾದಿತ್ಯರೂ ವಿಷ್ಣುವನ್ನು ಸೇವಿಸುತ್ತಿರುತ್ತಾರೆ.

ಸಾಲಗ್ರಾಮ ಇತಿ ಖ್ಯಾತೋ ವಿಷ್ಣೋರದ್ಭುತಕರ್ಮಣಃ।
ಅಭಿಗಮ್ಯ ತ್ರಿಲೋಕೇಶಂ ವರದಂ ವಿಷ್ಣುಮಚ್ಯುತಂ ॥ ೪೧ ॥

ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ।
ತತ್ರೋದಪಾನೋ ಧರ್ಮಜ್ಞ ಸರ್ವಪಾಪವಿಮೋಚನಃ ॥ ೪೨ ॥

ಸಮುದ್ರಾಸ್ತತ್ರ ಚತ್ವಾರಃ ಕೂಪೇ ಸನ್ನಿಹಿತಾಸ್ಸದಾ।
ತತ್ರೋಪಸ್ಪೃಶ್ಯ ರಾಜೇಂದ್ರ ನ ದುರ್ಗತಿಮವಾಪ್ನುಯಾತ್ ॥ ೪೩ ॥

ಅಭಿಗಮ್ಯ ಮಹಾದೇವಂ ವರದಂ ವಿಷ್ಣುಮಚ್ಯುತಂ।
ವಿರಾಜತೇ ಯಥಾ ಸೋಮೋ ಋಣೈರ್ಮುಕ್ತೋ ಯುಧಿಷ್ಠಿರ ॥

ಜಾತಿಸ್ಮರ ಉಪಸ್ಪೃಶ್ಯ ಶುಚಿಃ ಪ್ರಯತಮಾನಸಃ।
ಜಾತಿಸ್ಮರತ್ವಂ ಪ್ರಾಪ್ನೋತಿ ಸ್ನಾತ್ವಾ ತತ್ರ ನ ಸಂಶಯಃ। ॥ ೪೫ ॥

---

೪೧-೪೨. ಅಲ್ಲಿನ ತೀರ್ಥಕ್ಕೆ ಸಾಲಗ್ರಾಮತೀರ್ಥವೆಂದು ಹೆಸರು. ಅಲ್ಲಿ ಸ್ನಾನಮಾಡಿದರೆ ಅಶ್ವಮೇಧಫಲವು ಬರುತ್ತದೆ. ವಿಷ್ಣುಲೋಕವೂ ಪ್ರಾಪ್ತವಾಗುತ್ತದೆ. ಅಲ್ಲಿ ನೀರನ್ನು ಕುಡಿದರೆ ಸಮಸ್ತಪಾಪವೂ ನಾಶವಾಗುತ್ತದೆ.

೪೩. ಆ ತೀರ್ಥದಲ್ಲಿ ನಾಲ್ಕು ಸಮುದ್ರಗಳೂ ಬಂದು ನೆಲಸಿರುತ್ತದೆ. ಆದುದರಿಂದ ಅದರಲ್ಲಿ ಸ್ನಾನಮಾಡಿದರೆ ನರಕಭಯವಿಲ್ಲ.

೪೪. ಅಲ್ಲಿರುವ ವಿಷ್ಣುಮಹೇಶ್ವರರನ್ನು ಸೇವಿಸಿದರೆ ಋಣತ್ರಯದಿಂದ ಮುಕ್ತನಾಗುತ್ತಾನೆ. ಮತ್ತು ಚಂದ್ರನಂತೆ ಕಾಂತಿಯುಕ್ತನಾಗುತ್ತಾನೆ.

೪೫. ಜಾತಿಸ್ಮರವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಹಿಂದಿನ ಜನ್ಮಗಳ ಸ್ಮರಣಶಕ್ತಿಯು ಉಂಟಾಗುವುದು. ಸಂಶಯವಿಲ್ಲ.

ವಟೇಶ್ವರಪುರಂ ಗತ್ವಾ ಅರ್ಚಯಿತ್ವಾ ಚ ಕೇಶವಂ।
ಈಪ್ಸಿತಾಂಲ್ಲಭತೇ ಲೋಕಾನುಪವಾಸಾನ್ನ ಸಂಶಯಃ ॥ ೪೬ ॥

ತತಸ್ತು ವಾಮನಂ ಗತ್ವಾ ಸರ್ವಪಾಪಪ್ರಮೋಚನಂ।
ಅಭಿವಾದ್ಯ ಹರಿಂ ದೇವಂ ನ ದುರ್ಗತಿಮವಾಪ್ನುಯಾತ್ ॥ ೪೭ ॥

ಭರತಸ್ಯಾಶ್ರಮಂ ಗತ್ವಾ ಸರ್ವಪಾಪಪ್ರಮೋಚನಂ।
ಕೌಶಿಕೀಂ ತತ್ರ ಸೇವೇತ ಮಹಾಪಾತಕನಾಶಿನೀಂ ॥ ೪೮ ॥

ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ॥
ತತೋ ಗಚ್ಛೇತ ಧರ್ಮಜ್ಞ ಚಂಪಕಾರಣ್ಯಮುತ್ತಮಂ।
ತತ್ರೋಷ್ಯ ರಜನಿಮೇಕಾಂ ಗೋಸಹಸ್ರಫಲಂ ಲಭೇತ್ ॥ ೪೯ ॥

ಅಥ ಗೋವಿಂದಮಾಸಾದ್ಯ ತೀರ್ಥಂ ಪರಮಸಂಮತಂ।
ಉಪೋಷ್ಯ ರಜನೀಮೇಕಾಮಗ್ನಿಷ್ಟೋಮಫಲಂ ಲಭೇತ್ ॥ ೫೦ ॥

---

೪೬. ವಟೇಶ್ವರಪುರಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಕೇಶವನನ್ನು ಅರ್ಚಿಸಿದರೆ ಅವನಿಗೆ ಇಷ್ಟಲೋಕಪ್ರಾಪ್ತಿಯಾಗುವುದರಲ್ಲಿ ಸಂದೇಹವಿಲ್ಲ.

೪೭. ಅನಂತರ ವಾಮನ ತೀರ್ಥಕ್ಕೆ ಹೋಗಿ ಪಾಪನಾಶಕರವಾದ ಆ ತೀರ್ಥದಲ್ಲಿ ಸ್ನಾನಮಾಡಿ ಹರಿಯನ್ನು ಸೇವಿಸಿದರೆ ನರಕಪ್ರಾಪ್ತಿಯಿಲ್ಲ.

೪೮. ಆಮೇಲೆ ಭರತಾಶ್ರಮಕ್ಕೆ ಹೋಗಬೇಕು. ಅದು ಸರ್ವಪಾಪ ಹರವಾದುದು. ಅಲ್ಲಿ ಕೌಶಿಕೀನದಿಯಲ್ಲಿ ಸ್ನಾನಮಾಡಿದರೆ ರಾಜಸೂಯ ಯಜ್ಞಮಾಡಿದ ಫಲವು ಬರುತ್ತದೆ.

೪೯. ಚಂಪಕಾರಣ್ಯಕ್ಕೆ ಹೋಗಿ ಅಲ್ಲಿ ಒಂದು ರಾತ್ರಿ ಉಪವಾಸ ವಿದ್ದರೆ ಸಹಸ್ರ ಗೋವುಗಳನ್ನು ದಾನಮಾಡಿದ ಪುಣ್ಯವು ಬರುತ್ತದೆ.

೫೦. ಗೋವಿಂದತೀರ್ಥಕ್ಕೆ ಹೋಗಿ ಅಲ್ಲಿ ಉಪವಾಸವಿದ್ದು ಸ್ನಾನ ಮಾಡಿದರೆ ಅಗ್ನಿಷ್ಟೋಮಯಾಗದ ಫಲವು ಬರುತ್ತದೆ.

ತತ್ರ ವಿಶ್ವೇಶ್ವರಂ ದೃಷ್ಟ್ವಾ ದೇವ್ಯಾ ಸಹ ಮಹಾದ್ಯುತಿಂ।
ಮಿತ್ರಾವರುಣಯೋರ್ಲೋಕಾನ್ ಪ್ರಾಪ್ನುಯಾದ್ಭರತರ್ಷಭ ॥

ತ್ರಿರಾತ್ರೋಪೋಷಿತಸ್ತತ್ರ ಅಗ್ನಿಷ್ಟೋಮಫಲಂ ಲಭೇತ್ ।
ಕನ್ಯಾಸಂವೇದ್ಯಮಾಸಾದ್ಯ ನಿಯತೋ ನಿಯತಾಶನಃ।
ಮನೋಃ ಪ್ರಜಾಪತೇರ್ಲೋಕಾನಾಪ್ನೋತಿ ಭರತರ್ಷಭ ॥ ೫೨ ॥

ಕನ್ಯಾಯಾಂ ಯೇ ಪ್ರಯಚ್ಛಂತಿ ದಾನಮಣ್ವಪಿ ಭಾರತ।
ತದಕ್ಷಯಮಿತಿ ಪ್ರಾಹುಃ ಋಷಯಃ ಸಂಶಿತವ್ರತಾಃ ॥ ೫೩ ॥

ನಿಷ್ಠಾವಾಸಂ ಸಮಾಸಾದ್ಯ ತ್ರಿಷು ಲೋಕೇಷು ವಿಶ್ರುತಂ।
ಅಶ್ವಮೇಧಮವಾಪ್ನೋತಿ ವಿಷ್ಣುಲೋಕಂ ಚ ಗಚ್ಛತಿ ॥ ೫೪ ॥

ಯೇ ತು ದಾನಂ ಪ್ರಯಚ್ಛಂತಿ ನಿಷ್ಠಾಯಾಃ ಸಂಗಮೇ ನರಃ।
ತೇ ಯಾಂತಿ ನರಶಾರ್ದೂಲ ಬ್ರಹ್ಮಲೋಕಮನಾಮಯಂ ॥ ೫೫ ॥

---

೫೧. ಅಲ್ಲಿರುವ ವಿಶ್ವೇಶ್ವರನನ್ನೂ, ದೇವಿಯನ್ನೂ, ದರ್ಶನಮಾಡಿದರೆ ಮಿತ್ರಾವರುಣದೇವತೆಗಳ ಲೋಕವು ಪ್ರಾಪ್ತವಾಗುವುದು. ಮೂರುದಿನ ಉಪವಾಸವಿದ್ದರೆ ಅಗ್ನಿಷ್ಟೋಮಯಜ್ಞದ ಫಲವುಂಟು.

೫೨. ಕನ್ಯಾಸಂವೇದ್ಯಕ್ಕೆ ಹೋಗಿ ಅಲ್ಲಿ ನಿಯಮದಿಂದ ಉಪವಾಸ ವಿದ್ದರೆ ಮನುಲೋಕಪ್ರಾಪ್ತಿಯಾಗುವುದು.

೫೩. ಕನ್ಯೆ ತೀರ್ಥದಲ್ಲಿ ಯಾರು ಸ್ವಲ್ಪವಾದರೂ ದಾನಮಾಡುತ್ತಾರೆಯೋ ಅವರಿಗೆ ಅದು ಅಕ್ಷಯವಾಗುತ್ತದೆ.

೫೪. ಪ್ರಸಿದ್ಧವಾದ ನಿಷ್ಠಾವಾಸತೀರ್ಥಕ್ಕೆ ಹೋಗಿ ಅದನ್ನು ಸೇವಿಸಿದರೆ ಅಶ್ವಮೇಧಯಜ್ಞಫಲವನ್ನು ಹೊಂದಿ ವಿಷ್ಣುಲೋಕವನ್ನು ಪಡೆಯುತ್ತಾನೆ.

೫೫. ನಿಷ್ಠಾತೀರ್ಥಸಂಗಮದಲ್ಲಿ ಯಾರು ದಾನಮಾಡುತ್ತಾರೋ ಅವರು ಬ್ರಹ್ಮಲೋಕವನ್ನು ಹೊಂದುತ್ತಾರೆ.

ತತ್ರಾಶ್ರಮೋ ವಸಿಷ್ಠಸ್ಯ ತ್ರಿಷು ಲೋಕೇಷು ವಿಶ್ರುತಃ ।
ತತ್ರಾಭಿಷೇಕಂ ಕುರ್ವಾಣೋ ವಾಜಪೇಯಮವಾಪ್ನುಯಾತ್ ॥

ದೇವಕೂಟಂ ಸಮಾಸಾದ್ಯ ದೇವರ್ಷಿಗಣಸೇವಿತಂ ।
ಅಶ್ವಮೇಧಮವಾಪ್ನೋತಿ ಕುಲಂ ಚೈವ ಸಮುದ್ಧರೇತ್ ॥ ೫೭ ॥

ತತೋ ಗಚ್ಛೇತ ರಾಜೇಂದ್ರ ಕೌಶಿಕಸ್ಯ ಮುನೇರ್ಹ್ರದಂ ।
ಯತ್ರ ಸಿದ್ಧಿಂ ಪರಾಂ ಪ್ರಾಪ ವಿಶ್ವಾಮಿತ್ರೋಽಥ ಕೌಶಿಕಃ ॥ ೫೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಗಯಾದಿತೀರ್ಥ ಮಹಾತ್ಮ್ಯ ಕಥನಂ ಅಷ್ಟತ್ರಿಂಶೋಽಧ್ಯಾಯಃ

---

೫೬. ಅಲ್ಲಿ ವಸಿಷ್ಠಋಷಿಯ ಆಶ್ರಮವಿದೆ. ಅದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದುದು. ಅಲ್ಲಿ ಸ್ನಾನಮಾಡಿದರೆ ವಾಜಪೇಯ ಯಾಗ ಮಾಡಿದ ಫಲವು ಬರುತ್ತದೆ.

೫೭. ದೇವರ್ಷಿಗಳಿಂದ ಸೇವಿಸಲ್ಪಟ್ಟ ದೇವಕೂಟತೀರ್ಥಕ್ಕೆ ಹೋಗಿ ಸ್ನಾನಮಾಡಿದರೆ ಅಶ್ವಮೇಧಫಲವು ಬರುವುದಲ್ಲದೆ ತನ್ನ ಕುಲವನ್ನು ಉದ್ಧಾರಮಾಡಿಕೊಳ್ಳುತ್ತಾನೆ.

೫೮. ಬಳಿಕ ಕೌಶಿಕಮುನಿಯ ತೀರ್ಥಕ್ಕೆ ಹೋಗಬೇಕು. ಅಲ್ಲೇ ವಿಶ್ವಾಮಿತ್ರ ಋಷಿಯು ತಪಸ್ಸನ್ನು ಮಾಡಿ ಸಿದ್ಧಿಯನ್ನು ಹೊಂದಿದುದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಗಯಾದಿತೀರ್ಥ ಮಹಾತ್ಮ್ಯೆಯಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕೋನಚತ್ವಾರಿಂಶೋಽಧ್ಯಾಯಃ

॥ ನಾರದ ಉವಾಚ ॥

ಅಥ ಸಂಧ್ಯಾಂ ಸಮಾಸಾದ್ಯ ಸವಿದ್ಯಾಂ ತೀರ್ಥಮುತ್ತಮಂ ।
ಉಪಸ್ಪೃಶ್ಯ ನರೋ ವಿದ್ವಾನ್ ಭವೇನ್ನಾಸ್ತ್ಯತ್ರ ಸಂಶಯಃ ॥೧॥

ರಾಮಸ್ಯ ಚ ಪ್ರಸಾದೇನ ತೀರ್ಥರಾಜಂ ಕೃತಂ ಪುರಾ ।
ತಲ್ಲೌಹಿತ್ಯಂ ಸಮಾಸಾದ್ಯ ವಿಂಧ್ಯಾದ್ಬಹುಸುವರ್ಣಕಂ ॥೨॥

ಕರತೋಯಾಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।
ಅಶ್ವಮೇಧಮವಾಪ್ನೋತಿ ಶಕ್ರಲೋಕಂ ಚ ಗಚ್ಛತಿ ॥ ॥೩॥

---

### ಪದ್ಮಪುರಾಣದ ಆದಿಖಂಡದ ಮೂವತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಹೇಳುತ್ತಾನೆ: ಬಳಿಕ ಸವಿದ್ಯವೆಂಬ ತೀರ್ಥದಲ್ಲಿ ಸಂಧ್ಯಾವಂದನೆಯನ್ನು ಮಾಡಿಕೊಂಡು ಹೋದಲ್ಲಿ ವಿದ್ಯಾವಂತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೨. ಶ್ರೀರಾಮನ ಪ್ರಸಾದದಿಂದ ತೀರ್ಥಗಳಲ್ಲಿ ಶ್ರೇಷ್ಠವೆನಿಸಿದ ಲೌಹಿತ್ಯವೆಂಬ ತೀರ್ಥವು ನಿರ್ಮಿಸಲ್ಪಟ್ಟಿತು. ಅಲ್ಲಿ ಸ್ನಾನಮಾಡಿದರೆ ಧನವಂತನಾಗುತ್ತಾನೆ.

೩. ಕರತೋಯ ತೀರ್ಥವನ್ನು ಹೊಂದಿ ಸ್ನಾನಮಾಡಿ ಮೂರು ರಾತ್ರಿ ಉಪವಾಸವಿದ್ದರೆ ಅಶ್ವಮೇಧಯಾಗದ ಫಲವನ್ನು ಹೊಂದಿ ಇಂದ್ರ ಲೋಕವನ್ನು ಪಡೆಯುತ್ತಾನೆ.

ಗಂಗಾಯಾಸ್ತ್ವತ ರಾಜೇಂದ್ರ ಸಾಗರಸ್ಯ ಚ ಸಂಗಮೇ ।
ಅಶ್ವಮೇಧಂ ದಶಗುಣಂ ಪ್ರವದಂತಿ ಮನೀಷಿಣಃ ॥೪॥

ಗಂಗಾಯಾಸ್ತು ಪರಂ ದ್ವೀಪಂ ಪ್ರಾಪ್ಯ ಯಸ್ನಾತಿ ಭಾರತ ।
ತ್ರಿರಾತ್ರೋಪೋಷಿತೋ ರಾಜನ್ ಸರ್ವಕಾಮಮವಾಪ್ನುಯಾತ್ ॥

ತತೋ ವೈತರಣೀಂಗತ್ವಾ ನದೀಂ ಪಾಪಪ್ರಮೋಚನೀಂ ।
ವಿರಾಜಂ ತೀರ್ಥಮಾಸಾದ್ಯ ವಿರಾಜತಿ ಯಥಾ ಶಶೀ ॥೬॥

ಪ್ರಭಾಸೇ ಚ ಕುಲಂ ಗತ್ವಾ ಸರ್ವಪಾಪಂ ವ್ಯಪೋಹತಿ ।
ಗೋಸಹಸ್ರಫಲಂ ಲಬ್ಧ್ವಾ ಪುನಾತಿ ಸ್ವಕುಲಂ ನರಃ ॥೭॥

ಶೋಣಸ್ಯ ಜ್ಯೋತಿರಥ್ಯಾಶ್ಚ ಸಂಗಮೇ ನಿವಸನ್ ಶುಚಿಃ ।
ತರ್ಪಯಿತ್ವಾ ಪಿತೄನ್ದೇವಾನಗ್ನಿಷ್ಟೋಮಫಲಂ ಲಭೇತ್ ॥೮॥

---

೪. ಗಂಗಾಸಾಗರಗಳ ಸಂಗಮದಲ್ಲಿ ಸ್ನಾನಮಾಡಿದರೆ ಅಶ್ವಮೇಧದ ಹತ್ತರಷ್ಟು ಫಲವು ಲಭಿಸುವುದೆಂದು ತಿಳಿದವರು ಹೇಳುತ್ತಾರೆ.

೫. ಗಂಗಾದ್ವೀಪಕ್ಕೆ ಹೋಗಿ ಅಲ್ಲಿ ಸ್ನಾನಮಾಡಿ ಮೂರುದಿನ ರಾತ್ರಿ ಉಪವಾಸವಿದ್ದರೆ ಸಕಲೇಷ್ಟಾರ್ಥಗಳೂ ಲಭಿಸುತ್ತವೆ.

೬. ಆಮೇಲೆ ವೈತರಣೀ ನದಿಗೆ ಹೋಗಿ ವಿರಾಜತೀರ್ಥದಲ್ಲಿ ಸ್ನಾನಮಾಡಿದರೆ ಚಂದ್ರನಂತೆ ಪ್ರಕಾಶಿಸುತ್ತಾನೆ.

೭. ಪ್ರಭಾಸದಲ್ಲಿ ಕುಲತೀರ್ಥವನ್ನು ಹೊಂದಿ ಸ್ನಾನಮಾಡಿದರೆ ಸರ್ವಪಾಪವೂ ಹೋಗುತ್ತದೆ. ಸಹಸ್ರಗೋದಾನಫಲವನ್ನು ಹೊಂದಿ ತನ್ನ ವಂಶವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ.

೮. ಶೋಣಜ್ಯೋತಿರಥಿಗಳ ಸಂಗಮದಲ್ಲಿ ವಾಸಮಾಡುತ್ತಾ ಪಿತೃದೇವತೆಗಳನ್ನು ತರ್ಪಣದಿಂದ ತೃಪ್ತಿಪಡಿಸಿದರೆ ಅಗ್ನಿಷ್ಟೋಮ ಯಜ್ಞಮಾಡಿದ ಫಲವನ್ನು ಹೊಂದುತ್ತಾನೆ.

ಶೋಣಸ್ಯ ನರ್ಮದಾಯಾಶ್ಚ ಪ್ರಭವೇ ಕುರುಪುಂಗವ ।
ವಂಶಗುಲ್ಮಮುಪಸ್ಪೃಶ್ಯ ವಾಜಿಮೇಧಫಲಂ ಲಭೇತ್ ॥೯॥

ಋಷಭಂ ತೀರ್ಥಮಾಸಾದ್ಯ ಕೋಸಲಾಯಾಂ ನರಾಧಿಪ ।
ವಾಜಿಮೇಧಮವಾಪ್ನೋತಿ ತ್ರಿರಾತ್ರೋಪೋಷಿತೋ ನರಃ ॥೧೦॥

ಕೋಶಲಾಯಾಂ ಸಮಾಸಾದ್ಯ ಕಾಲತೀರ್ಥಮುಪಸ್ಪೃಶೇತ್ ।
ವೃಷಭೈಕಾದಶಗುಣಂ ಲಭತೇ ನಾತ್ರ ಸಂಶಯಃ ॥೧೧॥

ಪುಷ್ಪವತ್ಯಾಮುಪಸ್ಪೃಶ್ಯ ತ್ರಿರಾತ್ರೋಪೋಷಿತೋ ನರಃ ।
ಗೋಸಹಸ್ರಫಲಂ ವಿಂದ್ಯಾತ್ಕುಲಂ ಚೈವ ಸಮುದ್ಧರೇತ್ ॥೧೨॥

ತತೋ ಬದರಿಕಾತೀರ್ಥೇ ಸ್ನಾತ್ವಾ ಪ್ರಯತಮಾನಸಃ ।
ದೀರ್ಘಾಯುಷ್ಯಮವಾಪ್ನೋತಿ ಸ್ವರ್ಗಲೋಕಂ ಚ ವಿಂದತಿ ॥೧೩॥

---

೯. ಶೋಣನರ್ಮದೆಗಳ ಸಂಗಮದಲ್ಲಿ ವಂಶಗುಲ್ಮವೆಂಬ ತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧಫಲವನ್ನು ಹೊಂದುತ್ತಾನೆ.

೧೦. ಕೋಸಲೆಯಲ್ಲಿ ಋಷಭತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಯಜ್ಞಮಾಡಿದ ಫಲವನ್ನು ಹೊಂದುತ್ತಾನೆ.

೧೧. ಕೋಸಲದಲ್ಲಿ ಕಾಲತೀರ್ಥವನ್ನು ಸೇವಿಸಿದರೆ ವೃಷಭತೀರ್ಥದ ಹನ್ನೊಂದರಷ್ಟು ಫಲವನ್ನು ಹೊಂದುತ್ತಾನೆ.

೧೨. ಪುಷ್ಪವತಿಯಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸವಿದ್ದರೆ ಸಾವಿರಗೋದಾನ ಮಾಡಿದ ಫಲವನ್ನು ಹೊಂದಿ ವಂಶೋದ್ಧಾರಕನಾಗುತ್ತಾನೆ.

೧೩. ಬದರಿಕಾ ತೀರ್ಥದಲ್ಲಿ ಸ್ನಾನಮಾಡಿದರೆ ದೀರ್ಘಾಯುವಾಗಿ ಬದುಕಿ ಸ್ವರ್ಗಲೋಕವನ್ನು ಹೊಂದುತ್ತಾನೆ.

ತತೋ ಮಹೇಂದ್ರಮಾಸಾದ್ಯ ಜಾಮದಗ್ನ್ಯನಿಷೇವಿತಂ ।
ರಾಮತೀರ್ಥೇ ನರಃ ಸ್ನಾತ್ವಾ ವಾಜಿಮೇಧಫಲಂ ಲಭೇತ್ ॥೧೪॥

ಮತಂಗಸ್ಯ ತು ಕೇದಾರಂ ತತ್ರೈವ ಭರತರ್ಷಭ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥೧೫॥

ಶ್ರೀಪರ್ವತಂ ಸಮಾಸಾದ್ಯ ನದೀತೀರ್ಥಮುಪಸ್ಪೃಶೇತ್ ।
ಅಶ್ವಮೇಧಮವಾಪ್ನೋತಿ ಪರಾಂ ಸಿದ್ಧಿಂ ಚ ಗಚ್ಛತಿ ॥೧೬॥

ಶ್ರೀಪರ್ವತೇ ಮಹಾದೇವೋ ದೇವ್ಯಾ ಸಹ ಮಹದ್ಯುತಿಃ ।
ನ್ಯವಸತ್ಪರಮಪ್ರೀತೋ ಬ್ರಹ್ಮಾ ಚ ತ್ರಿದಶೈರ್ವೃತಃ ॥೧೭॥

ತತ್ರ ದೇವಹ್ರದೇ ಸ್ನಾತ್ವಾ ಶುಚಿಃ ಪ್ರಯತಮಾನಸಃ ।
ಅಶ್ವಮೇಧಮವಾಪ್ನೋತಿ ಪರಾಂ ಸಿದ್ಧಿಂ ಚ ಗಚ್ಛತಿ ॥೧೮॥

---

೧೪. ಮಹೇಂದ್ರದಲ್ಲಿರುವ ರಾಮತೀರ್ಥದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವು ಬರುತ್ತದೆ.

೧೫. ಮತಂಗಋಷಿಯ ಕೇದಾರತೀರ್ಥದಲ್ಲಿ ಸ್ನಾನಮಾಡಿದರೆ ಗೋಸಹಸ್ರದಾನದ ಫಲವನ್ನು ಹೊಂದುತ್ತಾನೆ.

೧೬. ಶ್ರೀಪರ್ವತದಲ್ಲಿರುವ ನದಿಯಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವನ್ನು ಹೊಂದಿ ಉತ್ತಮವಾದ ಸಿದ್ಧಿಯನ್ನು ಹೊಂದುತ್ತಾನೆ.

೧೭. ಶ್ರೀಪರ್ವತದಲ್ಲಿ ಮಹಾದೇವನೂ ಬ್ರಹ್ಮನೂ ದೇವತೆಗಳೊಡನೆ ವಾಸಿಸುತ್ತಾರೆ.

೧೮. ಅಲ್ಲಿರುವ ದೇವಹ್ರದದಲ್ಲಿ ಸ್ನಾನಮಾಡಿದರೆ ಅಶ್ವಮೇಧ ಫಲವನ್ನು ಹೊಂದಿ ಉತ್ತಮಸಿದ್ಧಿಯನ್ನು ಪಡೆಯುತ್ತಾನೆ.

ಋಷಭಂ ಪರ್ವತಂ ಗತ್ವಾ ಪಾಂಡೇಷು ಸುರಪೂಜಿತಂ ।
ವಾಜಪೇಯಮವಾಪ್ನೋತಿ ನಾಕಪೃಷ್ಠೇ ಚ ಮೋದತೇ ॥೧೯॥

ತತೋ ಗಚ್ಛೇತ ಕಾವೇರೀಂ ವೃತಾಮಪ್ಸರಸಾಂ ಗಣೈಃ ।
ತತ್ರ ಸ್ನಾತ್ವಾ ನರೋ ರಾಜನ್ ಗೋಸಹಸ್ರಫಲಂ ಲಭೇತ್ ॥೨೦॥

ತತ್ರ ತೀರ್ಥೇ ಸಮುದ್ರಸ್ಯ ಕನ್ಯಾತೀರ್ಥಮುಪಸ್ಪೃಶೇತ್ ।
ತತ್ರೋಪಸ್ಪೃಶ್ಯ ರಾಜೇಂದ್ರ ಸರ್ವಪಾಪೈಃ ಪ್ರಮುಚ್ಯತೇ ॥೨೧॥

ಅಥ ಗೋಕರ್ಣಮಾಸಾದ್ಯ ತ್ರಿಷು ಲೋಕೇಷು ವಿಶ್ರುತಂ ।
ಸಮುದ್ರಮಧ್ಯೇ ರಾಜೇಂದ್ರ ಸರ್ವಲೋಕನಮಸ್ಕೃತಂ ॥೨೨॥

ಯತ್ರ ಬ್ರಹ್ಮಾದಯೋ ದೇವಾ ಮುನಯಶ್ಚ ತಪೋಧನಾಃ ।
ಭೂತಯಕ್ಷಾ ಪಿಶಾಚಾಶ್ಚ ಕಿನ್ನರಾಸ್ಸಮಹೋರಗಾಃ ॥೨೩॥

ಸಿದ್ಧಚಾರಣಗಂಧರ್ವಾ ಮಾನುಷಾ ಪನ್ನಗಾಸ್ತಥಾ ।
ಸರಿತಃ ಸಾಗರಾಃ ಶೈಲಾಃ ಉಪಾಸತ ಉಮಾಪತಿಂ ॥೨೪॥

---

೧೯. ಪಾಂಡುದೇಶದಲ್ಲಿ ಋಷಭಪರ್ವತದಲ್ಲಿ ಸ್ನಾನಮಾಡಿದರೆ ವಾಜಪೇಯ ಯಾಗಮಾಡಿದ ಫಲವು ಬರುತ್ತದೆ. ಸ್ವರ್ಗವನ್ನು ಹೊಂದುತ್ತಾನೆ.

೨೦. ಅಪ್ಸರೋಗಣಗಳಿಂದ ಸೇವಿಸಲ್ಪಟ್ಟ ಕಾವೇರೀನದಿಯಲ್ಲಿ ಸ್ನಾನಮಾಡಿದರೆ ಸಾವಿರ ಗೋದಾನಮಾಡಿದ ಫಲವು ಬರುತ್ತದೆ.

೨೧. ಸಮುದ್ರಸಮೀಪದ ಕನ್ಯಾತೀರ್ಥದಲ್ಲಿ ಸ್ನಾನಮಾಡಿದರೆ ಸರ್ವಪಾಪವೂ ಹೋಗುತ್ತದೆ.

೨೨. ಆಮೇಲೆ ಸಮುದ್ರಮಧ್ಯದಲ್ಲಿರುವ ಪ್ರಸಿದ್ಧಿಯಾದ ಮತ್ತು ಸರ್ವಜನಪೂಜ್ಯವಾದ ಗೋಕರ್ಣವನ್ನು ಹೊಂದಬೇಕು.

೨೩–೨೪. ಅಲ್ಲಿ ಬ್ರಹ್ಮಾದಿದೇವತೆಗಳೂ ತಪಸ್ವಿಗಳೂ ಭೂತಯಕ್ಷ ಪಿಶಾಚಗಳೂ ಕಿನ್ನರಮಹೋರಗರೂ, ಸಿದ್ಧಚಾರಣಗಂಧರ್ವರೂ, ಮನುಷ್ಯಪನ್ನಗರೂ, ನದೀಸಮುದ್ರಪರ್ವತಗಳೂ, ಈಶ್ವರನನ್ನು ಸೇವಿಸುತ್ತವೆ.

ತತ್ರೇಶಾನಂ ಸಮಭ್ಯರ್ಚ್ಯ ತ್ರಿರಾತ್ರೋಪೋಷಿತೋ ನರಃ।
ದಶಾಶ್ವಮೇಧಾನಾಪ್ನೋತಿ ಗಾಣಪತ್ಯಂ ಚ ವಿಂದತಿ ॥೨೫॥
ಉಪೋಷ್ಯ ದ್ವಾದಶಂ ರಾತ್ರಂ ಕೃತಾರ್ಥೋ ಜಾಯತೇ ನರಃ।
ತಸ್ಮಿನ್ನೇವ ತು ಗಾಯತ್ರ್ಯಾಃ ಸ್ಥಾನಂ ತ್ರೈಲೋಕ್ಯವಿಶ್ರುತಂ ॥೨೬॥
ತ್ರಿರಾತ್ರಮುಷಿತಸ್ತತ್ರ ಗೋಸಹಸ್ರಫಲಂ ಲಭೇತ್ ।
ನಿದರ್ಶನಂ ಚ ಪ್ರತ್ಯಕ್ಷಂ ಬ್ರಾಹ್ಮಣಾನಾಂ ನರಾಧಿಪ ॥೨೭॥
ಗಾಯತ್ರೀಂ ಪಠತೇ ಯಸ್ತು ಯೋನಿಸಂಕರಜೋ ದ್ವಿಜಃ।
ಗಾಥಾ ವಾ ಗೀತಿಕಾ ವಾಣೀ ತಸ್ಯ ಸಂಪದ್ಯತೇ ನೃಪ ॥೨೮॥
ಅಬ್ರಾಹ್ಮಣಸ್ಯ ಪಠತಃ ಸಾವಿತ್ರೀ ತೂಪನಶ್ಯತಿ ।
ಸಂವರ್ತಸ್ಯ ತು ವಿಪ್ರರ್ಷೇಃ ವಾಪೀಮಾಸಾದ್ಯ ದುರ್ಲಭಂ ॥೨೯॥

---

೨೫. ಅಲ್ಲಿ ಈಶ್ವರನನ್ನು ಪೂಜಿಸಿ ಮೂರು ರಾತ್ರಿ ಉಪವಾಸ ಮಾಡಿದರೆ ಹತ್ತು ಅಶ್ವಮೇಧಗಳ ಫಲವನ್ನು ಹೊಂದಿ ಗಣಾಧಿಪತ್ಯ ವನ್ನೂ ಹೊಂದುತ್ತಾನೆ.

೨೬. ಹನ್ನೆರಡು ರಾತ್ರಿ ಅಲ್ಲಿ ಉಪವಾಸಮಾಡಿದರೆ ಮನುಜನು ಕೃತಾರ್ಥನಾಗುತ್ತಾನೆ. ಅಲ್ಲಿಯೇ ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಗಾಯತ್ರೀಸ್ಥಾನವಿದೆ.

೨೭. ಮೂರು ರಾತ್ರಿ ವಾಸಮಾಡಿದರೆ ಸಾವಿರ ಗೋದಾನಗಳನ್ನು ಮಾಡಿದ ಫಲವು ಬರುತ್ತದೆ. ಬ್ರಾಹ್ಮಣನಿಗೆ ಇದು ನಿದರ್ಶನವಾಗಿದೆ.

೨೮. ಸಾಂಕರ್ಯವನ್ನು ಹೊಂದಿದ ಬ್ರಾಹ್ಮಣನು ಅಲ್ಲಿ ಗಾಯತ್ರಿ ಯನ್ನು ಪಠಿಸಿದರೆ ಗಾಥೆಯನ್ನಾಗಲೀ, ಗೀತಿಕೆಯನ್ನಾಗಲೀ ಹಾಡು ವಷ್ಟು ಯೋಗ್ಯತೆಯು ಬರುತ್ತದೆ.

೨೯. ಬ್ರಾಹ್ಮಣನಲ್ಲದವನು ಪಠಿಸಿದರೆ ಸಾವಿತ್ರಿಯು ನಾಶವಾಗು ತ್ತದೆ. ಅಲ್ಲೇ ಸಂವರ್ತಋಷಿಯ ವಾಪಿಯೊಂದಿದೆ. ಅಲ್ಲಿ ಸ್ನಾನ ಮಾಡಿದರೆ ಸುರೂಪವನ್ನು ಹೊಂದಿ ನೋಡಲು ಚೆನ್ನಾಗಿರುತ್ತಾನೆ.

ರೂಪಸ್ಯ ಭಾಗೀ ಭವತಿ ಸುಭಗಶ್ಚಾಭಿಜಾಯತೇ ॥
ತತೋ ವರ್ಣೋದ್ಯಮಾಸಾದ್ಯ ತರ್ಪಯೇತ್ಪಿತೃದೇವತಾಃ ।
ಮಯೂರ ಹಂಸಸಂಯುಕ್ತಂ ವಿಮಾನಂ ಲಭತೇ ನರಃ ॥೩೦॥

ತತೋ ಗೋದಾವರೀಂ ಪ್ರಾಪ್ಯ ನಿತ್ಯಸಿದ್ಧನಿಷೇವಿತಾಂ ।
ಗವಾಮಯಮವಾಪ್ನೋತಿ ವಾಯುಲೋಕಂ ಚ ಗಚ್ಛತಿ ॥೩೧॥

ವೇಣಾಯಾಃ ಸಂಗಮೇ ಸ್ನಾತ್ವಾ ವಾಜಪೇಯಫಲಂ ಲಭೇತ್ ।
ವರದಾಸಂಗಮೇ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೩೨॥

ಬ್ರಹ್ಮಸ್ಥೂಣಾಂ ಸಮಾಸಾದ್ಯ ತ್ರಿರಾತ್ರೋಪೋಷಿತೋ ನರಃ ।
ಗೋಸಹಸ್ರಫಲಂ ವಿಂದ್ಯಾತ್ಸ್ವರ್ಗಲೋಕಂ ಚ ಗಚ್ಛತಿ ॥೩೩॥

ಕುಬ್ಜಾವನಂ ಸಮಾಸಾದ್ಯ ಬ್ರಹ್ಮಚಾರೀ ಸಮಾಹಿತಃ ।
ತ್ರಿರಾತ್ರೋಪೋಷಿತಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥೩೪॥

---

೩೦. ವರ್ಣೋದ್ಯವೆಂಬ ತೀರ್ಥದಲ್ಲಿ ಸ್ನಾನಮಾಡಿ ತರ್ಪಣ ಮಾಡಿದರೆ ಮಯೂರಹಂಸಗಳಿಂದ ಕೂಡಿದ ವಿಮಾನವನ್ನು ಹೊಂದುತ್ತಾನೆ.

೩೧. ಗೋದಾವರಿಗೆ ಹೋಗಿ ಅಲ್ಲಿ ಸ್ನಾನಮಾಡಿದರೆ ಗೋಗಳನ್ನು ಹೊಂದುತ್ತಾನೆ. ವಾಯುಲೋಕವು ಲಭಿಸುತ್ತದೆ.

೩೨. ವೇಣಾ ಸಂಗಮದಲ್ಲಿ ಸ್ನಾನಮಾಡಿದರೆ ವಾಜಪೇಯಯಾಗದ ಫಲವನ್ನೂ, ವರದಾ ಸಂಗಮದಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನ ಫಲವನ್ನೂ ಹೊಂದುತ್ತಾನೆ.

೩೩. ಬ್ರಹ್ಮಸ್ಥೂಣದಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸ ಮಾಡಿದರೆ ಸಹಸ್ರ ಗೋದಾನಮಾಡಿದ ಫಲವನ್ನು ಹೊಂದಿ ಸ್ವರ್ಗಭಾಗಿಯಾಗುತ್ತಾನೆ.

೩೪. ಕುಬ್ಜಾವನದಲ್ಲಿ ನಿಯಮದಿಂದ ಸ್ನಾನಮಾಡಿ ಮೂರು ರಾತ್ರಿ ಉಪವಾಸಮಾಡಿದರೆ ಸಹಸ್ರ ಗೋದಾನ ಫಲವನ್ನು ಹೊಂದುತ್ತಾನೆ.

ತತೋ ದೇವಹ್ರದೇ ಸ್ನಾತ್ವಾ ಕೃಷ್ಣವರ್ಣಜಲೋದ್ಧರೇ ।
ಜ್ಯೋತಿರ್ಮಾತ್ರಹ್ರದೇ ಚೈವ ತಥಾ ಕನ್ಯಾಶ್ರಮೇ ನೃಪ ॥೩೫॥

ಯತ್ರ ಕ್ರತುಶತೈರಿಷ್ಟ್ವಾ ದೇವರಾಜೋ ದಿವಂಗತಃ ।
ಅಗ್ನಿಷ್ಟೋಮಶತಂ ವಿಂದ್ಯಾದ್ಗಮನಾದೇವ ತತ್ರ ತು ॥೩೬॥

ಸರ್ವದೇವಹ್ರದೇ ಸ್ನಾತ್ವಾ ಗೋಸಹಸ್ರ ಫಲಂ ಲಭೇತ್ ।
ಜಾತಿಮಾತ್ರಹ್ರದೇ ಸ್ನಾತ್ವಾ ಭವೇಜ್ಜಾತಿಸ್ಮರೋ ನರಃ ॥೩೭॥

ತತೋ ವಾಪೀಂ ಮಹಾಪುಣ್ಯಾಂ ಪಯೋಷ್ಣೀಂ ಸರಿತಾಂ ವರಾಂ ।
ಪಿತೃದೇವಾರ್ಚನರತೋ ಗೋಸಹಸ್ರಫಲಂ ಲಭೇತ್ ॥೩೮॥

ದಂಡಕಾರಣ್ಯಮಾಸಾದ್ಯ ಮಹಾರಾಜ ಉಪಸ್ಪೃಶೇತ್ ।
ಶರಭಂಗಾಶ್ರಮಂ ಗತ್ವಾ ಶುಕ್ರಸ್ಯ ಚ ಮಹಾತ್ಮನಃ ॥೩೯॥

---

೩೫.-೩೬. ಅನಂತರ ದೇವಹ್ರದದಲ್ಲೂ, ಜ್ಯೋತಿರ್ವಣಹ್ರದದಲ್ಲೂ ಸ್ನಾನಮಾಡಿ ಬಳಿಕ ಕನ್ಯಾಶ್ರಮಕ್ಕೆ ಹೋಗಬೇಕು. ಆ ಆಶ್ರಮದಲ್ಲಿ ಇಂದ್ರನು ನೂರು ಯಾಗಗಳನ್ನು ಮಾಡಿ ಸ್ವರ್ಗಾಧಿಪತಿಯಾಗಿರುವನು. ಆ ಪವಿತ್ರಸ್ಥಳಕ್ಕೆ ಹೋಗುವುದರಿಂದಲೇ ನೂರು ಅಗ್ನಿಷ್ಟೋಮ ಯಾಗ ಗಳನ್ನು ಮಾಡಿದ ಫಲವು ಬರುವುದು.

೩೭. ಸರ್ವದೇವಹ್ರದದಲ್ಲಿ ಸ್ನಾನಮಾಡಿದರೆ ಸಹಸ್ರ ಗೋದಾನ ಫಲವು ಬರುವುದು. ಜಾತಿಮಾತ್ರಹ್ರದದಲ್ಲಿ ಸ್ನಾನಮಾಡಿದರೆ ಪೂರ್ವ ಜನ್ಮ ಸ್ಮರಣೆಯುಂಟಾಗುವುದು.

೩೮. ಪಯೋಷ್ಣಿಯಲ್ಲಿ ಸ್ನಾನಮಾಡಿ ಪಿತೃಗಳ, ದೇವತೆಗಳ ಅರ್ಚನೆಯನ್ನು ಮಾಡಿದರೆ ಸಹಸ್ರ ಗೋದಾನಫಲವನ್ನು ಹೊಂದುವನು.

೩೯. ದಂಡಕಾರಣ್ಯಕ್ಕೆ ಹೋಗಿ ಸ್ನಾನಮಾಡಬೇಕು. ಬಳಿಕ ಶರಭಂಗಾಶ್ರಮಕ್ಕೆ ಹೋಗಿ ಅಲ್ಲಿ ಶುಕ್ರತೀರ್ಥದಲ್ಲಿ ಸ್ನಾನಮಾಡಿದರೆ ನರಕಭಾಗಿಯಾಗುವುದಿಲ್ಲ. ತನ್ನ ಕುಲವನ್ನು ಉದ್ಧಾರ ಮಾಡುತ್ತಾನೆ.

ನ ದುರ್ಗತಿಮವಾಪ್ನೋತಿ ಪುನಾತಿ ಸ್ವಕುಲಂ ನರಃ ॥
ತತಃ ಸೂರ್ಯಾರಕಂ ಗಚ್ಛೇಜ್ಜಮದಗ್ನಿನಿಷೇವಿತಂ ।
ರಾಮತೀರ್ಥೇ ನರಃ ಸ್ನಾತ್ವಾ ವಿಂದ್ಯಾದ್ಬಹುಸುವರ್ಣಕಂ ॥೪೦॥

ಸಪ್ತಗೋದಾವರೀಂ ಸ್ನಾತ್ವಾ ನಿಯತೋ ನಿಯತಾಶನಃ ।
ಮಹಾಪುಣ್ಯಮವಾಪ್ನೋತಿ ದೇವಲೋಕಂ ಚ ಗಚ್ಛತಿ ॥೪೧॥

ತತೋ ದೇವಪಥಂ ಗಚ್ಛೇನ್ನಿಯತೋ ನಿಯತಾಶನಃ ।
ದೇವಸತ್ರಸ್ಯ ಯತ್ಪುಣ್ಯಂ ತದವಾಪ್ನೋತಿ ಮಾನವಃ ॥೪೨॥

ತುಂಗಕಾರಣ್ಯಮಾಸಾದ್ಯ ಬ್ರಹ್ಮಚಾರೀ ಜಿತೇಂದ್ರಿಯಃ ।
ವೇದಾನಧ್ಯಾಪಯತ್ತತ್ರ ಮುನೀನ್ ಸಾರಸ್ವತಃ ಪುರಾ ॥೪೩॥

ತತ್ರ ವೇದಾನ್ ಪ್ರಣಷ್ಟಾಂಸ್ತು ಮುನೇರಂಗಿರಸಃ ಸುತಃ ।
ಉಪವಿಷ್ಟೋ ಮಹರ್ಷೀಣಾಮುತ್ತರೀಯೇಷು ಭಾರತ ॥೪೪॥

ಓಂಕಾರೇಣ ಯಥಾನ್ಯಾಯಂ ಸಮ್ಯಗುಚ್ಚಾರಿತೇನ ಹ ।
ಯೇನ ಯತ್ಪೂರ್ವಮಭ್ಯಸ್ತಂ ತಸ್ಯ ತತ್ಸಮುಪಸ್ಥಿತಂ ॥೪೫॥

---

೪೦. ಜಮದಗ್ನಿಋಷಿಯು ಸೇವಿಸಿದ ಸೂರ್ಯಾರಕಕ್ಕೆ ಹೋಗಿ ಅಲ್ಲಿ ರಾಮತೀರ್ಥದಲ್ಲಿ ಸ್ನಾನಮಾಡಿದರೆ ಬಹಳ ಐಶ್ವರ್ಯ ಪ್ರಾಪ್ತಿಯಾಗುತ್ತದೆ.

೪೧. ಸಪ್ತ ಗೋದಾವರಿಯಲ್ಲಿ ನಿಯಮದಿಂದ ಸ್ನಾನಮಾಡಿದರೆ ಮಹಾಪುಣ್ಯವನ್ನು ಹೊಂದಿ ದೇವಲೋಕವನ್ನು ಪಡೆಯುತ್ತಾನೆ.

೪೨. ದೇವಪಥಕ್ಕೆ ಹೋಗಿ ಅಲ್ಲಿ ನಿಯತೇಂದ್ರಿಯನಾಗಿ ಸ್ನಾನ ಮಾಡಿದರೆ ದೇವಯಜ್ಞದ ಪುಣ್ಯವು ಬರುತ್ತದೆ.

೪೩. ಬ್ರಹ್ಮಚಾರಿಯಾಗಿ ತುಂಗಕಾರಣ್ಯಕ್ಕೆ ಹೋಗಿ ಸ್ನಾನಮಾಡಬೇಕು. ಅದು ಸಾರಸ್ವತರು ಮುನಿಗಳಿಗೆ ವೇದಗಳನ್ನು ಹೇಳಿಕೊಟ್ಟ ಜಾಗವು.

೪೪-೪೫ ಆ ಜಾಗದಲ್ಲಿ ನಷ್ಟವಾದ ವೇದಗಳನ್ನು ಆಂಗಿರಸ ಮುನಿಯು ಉತ್ತರೀಯದಮೇಲೆ ಕುಳಿತುಕೊಂಡು ಓಂಕಾರದಿಂದ ಸರಿಯಾಗಿ ಉಚ್ಚರಿಸಿ ಮೊದಲಿನಂತೆ ಅಭ್ಯಾಸಮಾಡಿದನು.

ಋಷಯಸ್ತತ್ರ ದೇವಾಶ್ಚ ವರುಣೋಽಗ್ನಿಃ ಪ್ರಜಾಪತಿಃ ।
ಹರಿರ್ನಾರಾಯಣೋ ದೇವೋ ಮಹಾದೇವಸ್ತಥೈವ ಚ ॥೪೬॥

ಪಿತಾಮಹಶ್ಚ ಭಗವಾನ್ ದೇವೈಸ್ಸಹ ಮಹಾದ್ಯುತಿಃ ।
ಭೃಗುಂ ನಿಯೋಜಯಾಮಾಸ ಯಾಜನಾರ್ಥೇ ಮಹಾದ್ಯುತಿಂ॥೪೭॥

ತತಃ ಸ ಚಕ್ರೇ ಭಗವಾನ್ ಋಷೀಣಾಂ ವಿಧಿವತ್ತದಾ ।
ಸರ್ವೇಷಾಂ ಪುನರಾಧಾನಂ ವೇದದೃಷ್ಟೇನ ಕರ್ಮಣಾ ॥೪೮॥

ಆಜ್ಯಭಾಗೇನ ವೈ ತತ್ರ ತರ್ಪಿತಾಸ್ತು ಯಥಾವಿಧಿ ।
ದೇವಾಸ್ತ್ರಿಭುವನಂ ಯಾತಾ ಋಷಯಶ್ಚ ಯಥಾಸುಖಂ ॥೪೯॥

ತದರಣ್ಯಂ ಪ್ರವಿಷ್ಟಸ್ಯ ತುಂಗಕಂ ರಾಜಸತ್ತಮ ।
ಪಾಪಂ ವಿನಶ್ಯತೇ ಸದ್ಯಃ ಸ್ತ್ರಿಯೋ ವಾ ಪುರುಷಸ್ಯ ವಾ ॥೫೦॥

ತತ್ರ ಮಾಸಂ ವಸೇದ್ಧೀರೋ ನಿಯತೋ ನಿಯತಾಶನಃ ।
ಬ್ರಹ್ಮಲೋಕಂ ವಸೇದ್ರಾಜನ್ ಪುನೀತೇ ಚ ಕುಲಂ ಪುನಃ ॥೫೧॥

---

೪೬-೪೭. ಅಲ್ಲಿ ಋಷಿಗಳೂ, ದೇವತೆಗಳೂ, ವರುಣ, ಅಗ್ನಿ, ಬ್ರಹ್ಮ, ನಾರಾಯಣ, ಈಶ್ವರ ಇವರುಗಳು ಭೃಗುಋಷಿಯನ್ನು ಯಜ್ಞಮಾಡುವಂತೆ ನಿಯಮಿಸಿದರು.

೪೮-೪೯. ಆಗ ಆ ಋಷಿಯು ವಿಧಿವತ್ತಾಗಿ ಯಾಗಮಾಡಿ ಎಲ್ಲರಿಗೂ ಭಾಗ ಕೊಟ್ಟನು. ಅನಂತರ ಸಂತುಷ್ಟರಾದ ಋಷಿಗಳೂ ದೇವತೆಗಳೂ ತಮ್ಮ ತಮ್ಮ ಸ್ಥಳಗಳಿಗೆ ಹೋದರು.

೫೦. ಆ ತುಂಗಾರಣ್ಯಕ್ಕೆ ಪ್ರವೇಶಮಾಡಿದರೇನೆ ಹೆಂಗಸರಿಗಾಗಲಿ, ಗಂಡಸರಿಗಾಗಲಿ ಪಾಪವು ನಾಶಹೊಂದುತ್ತದೆ.

೫೧. ಅಲ್ಲಿ ಒಂದು ತಿಂಗಳು ಇದ್ದರೆ ಬ್ರಹ್ಮಲೋಕವನ್ನು ಹೊಂದುತ್ತಾನೆ. ತನ್ನ ವಂಶವನ್ನು ಪವಿತ್ರವಾದುದನ್ನಾಗಿಯೂ ಮಾಡಿಕೊಳ್ಳುತ್ತಾನೆ.

ಮೇಧಾವನಂ ಸಮಾಸಾದ್ಯ ಪಿತೃದೇವಾಂಶ್ಚ ತರ್ಪಯೇತ್ ।
ಅಗ್ನಿಷ್ಟೋಮಮವಾಪ್ನೋತಿ ಸ್ಮೃತಿಂ ಮೇಧಾಂ ಚ ವಿಂದತಿ॥ ೫೨ ॥

ತತ್ರ ಕಾಲಂಜರಂ ಗತ್ವಾ ಗೋಸಹಸ್ರಫಲಂ ಲಭೇತ್ ।
ಆತ್ಮಾನಂ ಸಾಧಯೇತ್ತತ್ರ ಗಿರೌ ಕಾಲಂಜರೇ ನೃಪ ॥ ೫೩ ॥

ಸ್ವರ್ಗೇ ಲೋಕೇ ಮಹೀಯೇತ ನರೋ ನಾಸ್ತ್ಯತ್ರಸಂಶಯಃ ।
ತತೋ ಗಿರಿವರಶ್ರೇಷ್ಠೇ ಚಿತ್ರಕೂಟೇ ವಿಶಾಂಪತೇ ।
ಮಂದಾಕಿನೀಂ ಸಮಾಸಾದ್ಯ ನದೀಂ ಪಾಪಪ್ರಮೋಚಿನೀಂ ॥ ೫೪ ॥

ಅತ್ರಾಭಿಷೇಕಂ ಕುರ್ವಾಣಃ ಪಿತೃದೇವಾರ್ಚನೇ ರತಃ ।
ಅಶ್ವಮೇಧಮವಾಪ್ನೋತಿ ಗತಿಂ ಚ ಪರಮಾಂ ವ್ರಜೇತ್ ॥ ೫೫ ॥

ತತೋ ಗಚ್ಛೇತ ರಾಜೇಂದ್ರ ಭರ್ತೃಸ್ಥಾನಮನುತ್ತಮಂ ।
ಯತ್ರ ದೇವೋ ಮಹಾಸೇನೋ ನಿತ್ಯಂ ಸಂನಿಹಿತೋ ನೃಪ ॥ ೫೬ ॥

---

೫೨. ಮೇಧಾವನಕ್ಕೆ ಹೋಗಿ ಪಿತೃದೇವತೆಗಳನ್ನು ತೃಪ್ತಿಪಡಿಸಬೇಕು. ಅಗ್ನಿಷ್ಟೋಮದ ಫಲವು ಬರುತ್ತದೆ. ಸ್ಮೃತಿಯನ್ನೂ, ಮೇಧೆಯನ್ನೂ ಹೊಂದುತ್ತಾನೆ.

೫೩. ಕಾಲಂಜರ ಪರ್ವತಕ್ಕೆ ಹೋದರೆ ಗೋಸಹಸ್ರದಾನಫಲವು ಬರುತ್ತದೆ. ಅಲ್ಲಿ ಜಪತಪಾದ್ಯನುಷ್ಠಾನಾದಿಗಳನ್ನು ಮಾಡಿದರೆ ಸ್ವರ್ಗಲೋಕವನ್ನು ಹೊಂದುತ್ತಾನೆ. ಸಂಶಯವಿಲ್ಲ.

೫೪–೫೫. ಚಿತ್ರಕೂಟಪರ್ವತಕ್ಕೆ ಹೋಗಿ ಮಂದಾಕಿನೀನದಿಯಲ್ಲಿ ಸ್ನಾನಮಾಡಿ ತರ್ಪಣಾದಿಗಳನ್ನು ಮಾಡಿದರೆ ಅಶ್ವಮೇಧಯಾಗಫಲವೂ . ಸ್ವರ್ಗಲೋಕಪ್ರಾಪ್ತಿಯೂ ಸಹ ಲಭಿಸುವುವು.

೫೬. ಅಲ್ಲಿಂದ ಮುಂದೆ ಭರ್ತೃಸ್ಥಾನಕ್ಕೆ ಹೋಗಬೇಕು. ಅಲ್ಲಿ ಮಹಾಸೇನನು ಯಾವಾಗಲೂ ನೆಲಸಿರುತ್ತಾನೆ.

ಪುಮಾಂಸ್ತತ್ರ ನರಶ್ರೇಷ್ಠ ಗಮನಾದೇವ ಸಿಧ್ಯತಿ ।
ಕೋಟಿತೀರ್ಥೇ ನರಃ ಸ್ನಾತ್ವಾ ಗೋಸಹಸ್ರಫಲಂ ಲಭೇತ್ ॥ ೫೭ ॥

ಪ್ರದಕ್ಷಿಣಮುಪಾವೃತ್ಯ ಶಿವಸ್ಥಾನಂ ವ್ರಜೇನ್ನರಃ ।
ಅಭಿಗಮ್ಯ ಮಹಾದೇವಂ ವಿರಾಜತಿ ಯಥಾ ಶಶೀ ॥ ೫೮ ॥

ತತ್ರ ಕೂಪೋ ಮಹಾರಾಜ ವಿಶ್ರುತೋ ಭರತರ್ಷಭ ।
ಸಮುದ್ರಾ ಯತ್ರ ಚತ್ವಾರೋ ನಿವಸಂತಿ ಯುಧಿಷ್ಠಿರ ॥ ೫೯ ॥

ತತ್ರೋಪಸ್ಪೃಶ್ಯ ರಾಜೇಂದ್ರ ಕೃತ್ವಾ ಚಾಪಿ ಪ್ರದಕ್ಷಿಣಂ ।
ನಿಯತಾತ್ಮಾ ನರಃ ಪೂತೋ ಗಚ್ಛೇತ ಪರಮಾಂ ಗತಿಂ ॥ ೬೦ ॥

ತತೋ ಗಚ್ಛೇತ್ಕುರುಶ್ರೇಷ್ಠ ಶೃಂಗಬೇರಪುರಂ ಮಹತ್ ।
ಯತ್ರ ತೀರ್ಣೋ ಮಹಾಪ್ರಾಜ್ಞೋ ರಾಮೋ ದಾಶರಥಿಃ ಪುರಾ ॥

---

೫೭. ಆ ಭರ್ತೃಸ್ಥಾನಕ್ಕೆ ಹೋದಮಾತ್ರಕ್ಕೇ ಸಿದ್ಧಿಯುಂಟಾಗುತ್ತದೆ. ಕೋಟಿತೀರ್ಥದಲ್ಲಿ ಸ್ನಾನಮಾಡಿದರೆ ಸಹಸ್ರಗೋಧಾನಫಲವನ್ನು ಹೊಂದುತ್ತಾನೆ.

೫೮. ಪ್ರದಕ್ಷಿಣಾಕಾರವಾಗಿ ಬಂದು ಶಿವನ ಸ್ಥಾನವನ್ನು ಹೊಂದಬೇಕು. ಅಲ್ಲಿ ಮಹಾದೇವನನ್ನು ಪೂಜಿಸಿದರೆ ಚಂದ್ರನಂತೆ ಪ್ರಕಾಶಿಸುತ್ತಾನೆ.

೫೯. ಅಲ್ಲಿರುವ ಕೂಪವು ಬಹು ಪ್ರಸಿದ್ಧವಾದುದು. ಅದರಲ್ಲಿ ನಾಲ್ಕು ಸಮುದ್ರಗಳೂ ವಾಸಮಾಡುತ್ತವೆ.

೬೦. ಅಲ್ಲಿ ನಿಯಮದಿಂದಿದ್ದು ಸ್ನಾನಮಾಡಿ ಪ್ರದಕ್ಷಿಣಮಾಡಿದರೆ ಉತ್ತಮವಾದ ಗತಿಯನ್ನು ಹೊಂದುತ್ತಾನೆ.

೬೧. ಆಮೇಲೆ ಶೃಂಗಬೇರಪುರಕ್ಕೆ ಹೋಗಬೇಕು. ಅಲ್ಲೇ ರಾಮನು ನದಿಯನ್ನು ದಾಟಿದುದು.

ಗಂಗಾಯಾಂ ತು ನರಃ ಸ್ನಾತ್ವಾ ಬ್ರಹ್ಮಚಾರೀ ಜಿತೇಂದ್ರಿಯಃ ।
ವಿಧೂತಪಾಪ್ಮಾ ಭವತಿ ವಾಜಪೇಯಂ ಚ ವಿಂದತಿ ॥ ೬೨ ॥
ತತೋ ಪಂಚವಟಂ ಗಚ್ಛೇತ್ಸ್ಥಾನಂ ದೇವಸ್ಯ ಧೀಮತಃ ।
ಅಭಿಗಮ್ಯ ಮಹಾದೇವಂ ಅಭ್ಯರ್ಚ್ಯ ಚ ನರಾಧಿಪ ॥
ಪ್ರದಕ್ಷಿಣಮುಪಾವೃತ್ಯ ಗಾಣಪತ್ಯಮವಾಪ್ನುಯಾತ್ ॥ ೬೩ ॥
ತತೋ ಗಚ್ಛೇತ ರಾಜೇಂದ್ರ ಪ್ರಯಾಗಮೃಷಿಸಂಸ್ತುತಂ ।
ಯತ್ರ ಬ್ರಹ್ಮಾದಯೋ ದೇವಾ ದಿಶಶ್ಚ ಸದಿಗೀಶ್ವರಾಃ ॥ ೬೪ ॥
ಲೋಕಪಾಲಾಶ್ಚ ಸಿದ್ಧಾಶ್ಚ ನಿರತಾಃ ಪಿತರಸ್ತಥಾ ।
ಸನತ್ಕುಮಾರಪ್ರಮುಖಾಃ ತಥೈವ ಚ ಮಹರ್ಷಯಃ ॥ ೬೫ ॥
ತಥಾ ನಾಗಾಸ್ಸುಪರ್ಣಾಶ್ಚ ಸಿದ್ಧಾಃ ಶುಕ್ರಧರಾಸ್ತಥಾ ।
ಸರಿತಸ್ಸಾಗರಶ್ಚೈವ ಗಂಧರ್ವಾಪ್ಸರಸಸ್ತಥಾ ॥ ೬೬ ॥
ಹರಿಶ್ಚ ಭಗವಾನಾಸ್ತೇ ಪ್ರಜಾಪತಿಪುರಸ್ಕೃತಾಃ ।
ತತ್ರ ತ್ರೀಣ್ಯಪಿ ಕುಂಡಾನಿ ತಯೋರ್ಮಧ್ಯೇನ ಜಾಹ್ನವೀ ।
ಪ್ರಯಾಗಾತ್ಸಮರೇ ಕ್ರಾಂತಾ ಸರ್ವತೀರ್ಥಪುರಸ್ಕೃತಾ ॥ ೬೭ ॥

---

೬೨. ಅಲ್ಲಿ ಗಂಗಾಸ್ನಾನಮಾಡಿದರೆ ಪಾಪವನ್ನು ಕಳೆದುಕೊಂಡು ವಾಜಪೇಯಫಲವನ್ನು ಹೊಂದುತ್ತಾನೆ.

೬೩. ಆಮೇಲೆ ಪಂಚವಟವೆಂಬಲ್ಲಿಗೆ ಹೋಗಬೇಕು. ಅಲ್ಲಿ ಮಹಾದೇವನನ್ನು ಅರ್ಚಿಸಿದರೆ ಗಣಗಳಿಗೆ ಅಧಿಪತಿಯಾಗುತ್ತಾನೆ.

೬೪–೬೬. ಅನಂತರ ಪ್ರಯಾಗಕ್ಕೆ ಹೋಗಬೇಕು. ಅಲ್ಲಿ ಬ್ರಹ್ಮಾದಿ ದೇವತೆಗಳು, ಋಷಿಗಳು, ದಿಕ್ಕು, ದಿಗೀಶ್ವರರು ಲೋಕಪಾಲಕರು, ಸಿದ್ಧರು, ಪಿತೃಗಳು, ಸನತ್ಕುಮಾರರು, ನಾಗರು, ಸುಪರ್ಣರು, ಸಿದ್ಧರು, ಶುಕ್ರರು, ನದಿಗಳು, ಸಾಗರಗಳು, ಗಂಧರ್ವಾಪ್ಸರರು, ಭಗವಂತನಾದ ಹರಿಯೂ, ಬ್ರಹ್ಮನೂ ಇದ್ದಾರೆ.

೬೭. ಅಲ್ಲಿ ಮೂರು ಕುಂಡಗಳಿವೆ. ಅವುಗಳ ಮಧ್ಯದಿಂದ ಗಂಗಾನದಿಯು ಹರಿಯುತ್ತದೆ.

ತಪನಸ್ಯ ಸುತಾ ತತ್ರ ತ್ರಿಷು ಲೋಕೇಷು ವಿಶ್ರುತಾ।
ಯಮುನಾ ಗಂಗಯಾ ಸಾರ್ಧಂ ಗಂಗಯಾ ಲೋಕಪಾವನೀ ॥ ೬೮ ॥

ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾ ಜಘನಂ ನೃಪ।
ಪ್ರಯಾಗಂ ಜಘನಸ್ಯಾಂತಮುಪಸ್ಥಮೃಷಯೋ ವಿದುಃ ॥ ೬೯ ॥

ಪ್ರಯಾಗಂ ಸುಪ್ರತಿಷ್ಠಾನಂ ಕಂಬಳಾಶ್ವತರಾವುಭೌ ।
ತೀರ್ಥಂ ಭೋಗವತೀ ಚೈವ ವೇದೀ ಪ್ರೋಕ್ತಾ ಪ್ರಜಾಪತೇಃ।
ತತ್ರ ವೇದಾಶ್ಚ ಯಜ್ಞಾಶ್ಚ ಮೂರ್ತಿಮಂತೋ ಯುಧಿಷ್ಠಿರ ॥ ೭೦ ॥

ಪ್ರಜಾಪತಿಮುಪಾಸಂತ ಋಷಯಶ್ಚ ಮಹಾನಘಾಃ।
ಯಜಂತೇ ಕ್ರತುಭಿರ್ದೇವಾನ್ ತಥಾ ಚಕ್ರಧರಾ ನೃಪ ॥ ೭೧ ॥

ತತಃ ಪುಣ್ಯತಮಂ ನಾಸ್ತಿ ತ್ರಿಷು ಲೋಕೇಷು ಭಾರತ।
ಪ್ರಯಾಗಂ ಸರ್ವತೀರ್ಥೇಭ್ಯಃ ಪ್ರಭಾವೇಣಾಧಿಕಂ ವಿಭೋ ॥ ೭೨ ॥

---

೬೮. ಅಲ್ಲಿ ಸೂರ್ಯಸುತೆಯಾದ ಯಮುನೆಯು ಗಂಗೆಯೊಡನೆ ಸೇರಿ ಸಂಗಮವಾಗುತ್ತಾಳೆ.

೬೯. ಗಂಗಾಯಮುನೆಗಳ ಮಧ್ಯಭಾಗವನ್ನು ಭೂಮಿಯ ಜಘನ ಪ್ರದೇಶವೆಂದು ಹೇಳುತ್ತಾರೆ. ಪ್ರಯಾಗವು ಜಘನದ ಕೊನೆಯಾದ ಉಪಸ್ಥವೆಯು ಎಂದು ತಿಳಿಯಬೇಕು. ಕಂಬಳಾಶ್ವತರಗಳೆರಡೂ ಪ್ರಯಾಗದಲ್ಲಿ ಸೇರಿವೆ.

೭೦–೭೧. ಅಲ್ಲಿ ಭೋಗವತೀ ಎಂಬ ತೀರ್ಥವಿರುವುದು. ಅದು ಬ್ರಹ್ಮನಿಗೆ ವೇದಿಕೆಯು. ಆ ವೇದಿಕೆಯಲ್ಲಿ ಋಷಿಗಳು ಯಾವಾಗಲೂ ಯಾಗಮಾಡುತ್ತಾರೆ.

೭೨. ಆ ಪ್ರಯಾಗಕ್ಕಿಂತ ಪುಣ್ಯತಮವಾದುದು ಮೂರು ಲೋಕದಲ್ಲಿಯೂ ಇಲ್ಲ. ಪ್ರಯಾಗವು ಸರ್ವತೀರ್ಥಗಳ ಪ್ರಭಾವಕ್ಕಿಂತ ಅಧಿಕ ಪ್ರಭಾವವುಳ್ಳುದು.

ಶ್ರವಣಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ।
ಮೂರ್ಧಕಾ ನಮನಾದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ॥ ೭೩ ॥

ತತ್ರಾಭಿಷೇಕಂ ಯಃ ಕುರ್ಯಾತ್ಸಂಗಮೇ ಸಂಶಿತವ್ರತಃ।
ಪುಣ್ಯಂ ಸುಮಹದಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೭೪ ॥

ಏಷಾ ಯಜನಭೂಮಿರ್ಹಿ ದೇವಾನಾಮಪಿ ತತ್ಕಥಾ।
ದತ್ತಂ ತತ್ರ ಸ್ವಲ್ಪಮಪಿ ಮಹದ್ಭವತಿ ಭಾರತ ॥ ೭೫ ॥

ನ ದೇವವಚನಾತ್ತಾತ ನ ಲೋಕವಚನಾದಪಿ।
ಮತಿರುತ್ಕ್ರಮಣೀಯಾ ತೇ ಪ್ರಯಾಗಮರಣಂ ಪ್ರತಿ ॥ ೭೬ ॥

ದಶತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾ ಪರಾಃ।
ತೇಷಾಂ ಸಾನ್ನಿಧ್ಯಮತ್ರೈವ ಕೀರ್ತಿತಂ ಕುರುನಂದನ ॥ ೭೭ ॥

ಚಾತುರ್ವಿದ್ಯೇ ಚ ಯತ್ಪುಣ್ಯಂ ಸತ್ಯವಾದಿಷು ಚೈವ ಯತ್ ।
ಸ್ನಾತ ಏವ ತದಾಪ್ನೋತಿ ಗಂಗಾಯಮುನಸಂಗಮೇ ॥ ೭೮ ॥

---

೭೩. ಆ ಪ್ರಯಾಗದ ಹೆಸರನ್ನು ಕೇಳುವುದು, ಅದನ್ನು ಉಚ್ಚರಿಸುವುದು, ನಮಸ್ಕರಿಸುವುದು ಇವುಗಳಿಂದ ಸಮಸ್ತಪಾಪವೂ ಹೋಗುತ್ತವೆ.

೭೪. ಆ ಸಂಗಮದಲ್ಲಿ ಸ್ನಾನಮಾಡಿದರೆ ರಾಜಸೂಯಾಶ್ವಮೇಧಯಜ್ಞಗಳನ್ನು ಮಾಡಿದ ಪುಣ್ಯವು ಬರುತ್ತದೆ.

೭೫. ಇದು ದೇವತೆಗಳ ಯಾಗಭೂಮಿಯು. ಅಲ್ಲಿ ಸ್ವಲ್ಪ ದಾನ ಮಾಡಿದರೂ ಮಹತ್ಫಲವುಂಟಾಗುವುದು.

೭೬. ಪ್ರಯಾಗದಲ್ಲಿ ಮರಣದ ವಿಷಯದಲ್ಲಿ ದೇವತೆಗಳಾಗಲೀ, ಜನರಾಗಲೀ, ಎಷ್ಟು ಬೇಡವೆಂದರೂ ಕೇಳಕೂಡದು.

೭೭. ಹತ್ತುಸಾವಿರ ತೀರ್ಥಗಳು ಮತ್ತು ಆರು ಕೋಟಿತೀರ್ಥಗಳು ಅಲ್ಲಿ ಸಾನ್ನಿಧ್ಯವನ್ನು ಹೊಂದಿರುತ್ತವೆ.

೭೮. ಗಂಗಾಯಮುನಾನದಿಗಳ ಸಂಗಮದಲ್ಲಿ ಸ್ನಾನಮಾಡಿದರೆ ಚತುರ್ವಿದ್ಯೆಗಳನ್ನು ಅಧ್ಯಯನಮಾಡಿದ ಪುಣ್ಯವೂ, ಯಾವಾಗಲೂ ಸತ್ಯವನ್ನೇ ನುಡಿಯುವವರಿಗೆ ಲಭಿಸುವ ಪುಣ್ಯವೂ ಬರುವುದು.

ತತೋ ಭೋಗವತೀ ನಾಮ ವಾಸುಕೇಸ್ತೀರ್ಥಮುತ್ತಮಂ।
ತತ್ರಾಭಿಷೇಕಂ ಯಃ ಕುರ್ಯಾತ್ಸೋಽಶ್ವಮೇಧಮವಾಪ್ನುಯಾತ್॥
ತತ್ರ ಹಂಸಪ್ರಪತನಂ ತೀರ್ಥಂ ತ್ರೈಲೋಕ್ಯವಿಶ್ರುತಂ।
ದಶಾಶ್ವಮೇಧಿಕಂ ಚೈವ ಗಂಗಾಯಾಂ ಕುರುನಂದನ ॥ ೮೦ ॥
ಕುರುಕ್ಷೇತ್ರಸಮಾ ಗಂಗಾ ಯತ್ರ ತತ್ರಾವಗಾಹಿತಾ।
ವಿಶೇಷೋ ವೈ ಖನಕಲೇ ಪ್ರಯಾಗಂ ಪರಮಂ ಮಹತ್ ॥ ೮೧ ॥
ಯದ್ಯಕಾರ್ಯಶತಂ ಕೃತ್ವಾ ಕೃತಂ ಗಂಗಾವಸೇವನಂ।
ಸರ್ವಂ ತತ್ತಸ್ಯ ಗಂಗಾಪೋ ದಹತ್ಯಗ್ನಿರಿವೇಂಧನಂ ॥ ೮೨ ॥
ಸರ್ವಂ ದಹತಿ ಗಂಗಾಪಸ್ತೂಲರಾಶಿಮಿವಾನಲಃ।
ಸರ್ವಂ ಕೃತಯುಗೇ ಪುಣ್ಯಂ ತ್ರೇತಾಯಾಂ ಪುಷ್ಕರಂ ಸ್ಮೃತಂ॥

---

೭೯. ಅಲ್ಲಿರುವ ವಾಸುಕಿತೀರ್ಥವಾದ ಭೋಗವತಿಯಲ್ಲಿ ಸ್ನಾನ ಮಾಡಿದರೆ ಅಶ್ವಮೇಧಯಾಗದ ಪುಣ್ಯವನ್ನು ಹೊಂದುತ್ತಾನೆ.

೮೦. ಆ ಗಂಗೆಯಲ್ಲಿ ಹಂಸಪ್ರಪತನ ಮತ್ತು ದಶಾಶ್ವಮೇಧಿಕ ವೆಂಬ ಪ್ರಸಿದ್ಧವಾದ ತೀರ್ಥಗಳೂ ಇವೆ.

೮೧. ಅಲ್ಲಿ ಗಂಗೆಯಲ್ಲಿ ಎಲ್ಲಿ ಸ್ನಾನಮಾಡಿದರೂ ಕುರುಕ್ಷೇತ್ರದಲ್ಲಿ ಸ್ನಾನಮಾಡಿದ ಪುಣ್ಯವು ಬರುವುದು. ಖನಕಲೆ ಎಂಬಲ್ಲಿ ಪ್ರಯಾಗವು ಮಹತ್ತರವಾದುದು.

೮೨. ಅನೇಕ ಕೆಟ್ಟಕೆಲಸಗಳನ್ನು ಮಾಡಿದ್ದರೂ ಗಂಗೆಯಲ್ಲಿ ಸ್ನಾನ ಮಾಡಿದರೆ ಆ ಗಂಗಾಸ್ನಾನಫಲವು, ಬೆಂಕಿಯು ಕಟ್ಟಿಗೆಯನ್ನು ಸುಡುವಂತೆ ಪಾಪಗಳನ್ನು ಸುಡುವುದು.

೮೩. ಬೆಂಕಿಯು ಹತ್ತಿಯನ್ನು ಸುಡುವಂತೆ ಗಂಗಾನದಿಯ ಉದಕವು ಪಾಪವನ್ನು ಸುಡುತ್ತದೆ. ಕೃತಯುಗದಲ್ಲಿ ಎಲ್ಲವೂ ಪುಣ್ಯಪ್ರದವಾದುದು. ತ್ರೇತಾಯುಗದಲ್ಲಿ ಪುಷ್ಕರವು ಪುಣ್ಯಪ್ರದವಾದುದು.

ದ್ವಾಪರೇ ತು ಕುರುಕ್ಷೇತ್ರಂ ಗಂಗಾ ಕಲಿಯುಗೇ ಸ್ಮೃತಾ।
ಪುಷ್ಕರೇ ತು ತಪಸ್ತಪ್ಯೇದ್ದಾನಂ ದದ್ಯಾನ್ಮಹಾಲಯೇ ॥ ೮೪ ॥

ಮಲಯೇ ತ್ವಗ್ನಿಮಾರೋಹೇದ್ಭೃಗುತುಂಗೇ ತ್ವನಾಶನಂ।
ಪುಷ್ಕರೇ ತು ಕುರುಕ್ಷೇತ್ರೇ ಗಂಗಾಪ್ರೋಮಧ್ಯಮೇಷು ಚ ॥ ೮೫ ॥

ಸದ್ಯಸ್ತಾರಯತೇ ಜಂತುಃ ಸಪ್ತ ಸಪ್ತಾವರಾನ್ ತಥಾ॥
ಪುನಾತಿ ಕೀರ್ತಿತಾ ಪಾಪಂ ದೃಷ್ಟ್ವಾ ಭದ್ರಂ ಪ್ರಯಚ್ಛತಿ।
ಅವಗಾಢಾ ಚ ಪೀತಾ ಚ ಪುನತ್ಯಾಸಪ್ತಮಂ ಕುಲಂ ॥ ೮೬ ॥

ಯಾವದಸ್ಥಿ ಮನುಷ್ಯಸ್ಯ ಗಂಗಾಯಾಃ ಸ್ಪೃಶತೇ ಜಲಂ।
ತಾವತ್ಸ ಪುರುಷೋ ರಾಜನ್ ಸ್ವರ್ಗಲೋಕೇ ಮಹೀಯತೇ॥ ೮೭ ॥

---

೮೪–೮೫. ದ್ವಾಪರದಲ್ಲಿ ಕುರುಕ್ಷೇತ್ರವೂ, ಕಲಿಯುಗದಲ್ಲಿ ಗಂಗೆಯೂ ಪುಣ್ಯಪ್ರದವಾದುವು. ಪುಷ್ಕರದಲ್ಲಿ ತಪಸ್ಸು ಶ್ರೇಷ್ಠವಾದುದು. ಮಹಾಲಯದಲ್ಲಿ ದಾನವು ಶ್ರೇಷ್ಠವಾದುದು. ಮಲಯದಲ್ಲಿ ಅಗ್ನಿಯಲ್ಲಿ ದೇಹತ್ಯಾಗಮಾಡುವುದು ಶ್ರೇಷ್ಠವಾದುದು. ಭೃಗುತುಂಗದಲ್ಲಿ ಉಪವಾಸವಿರುವುದು ಶ್ರೇಷ್ಠವಾದುದು. ಕುರುಕ್ಷೇತ್ರದಲ್ಲಿ ಸಂಗಮದ ಪುಷ್ಕರದಲ್ಲಿ ಪ್ರಾಣಿಯು ಸ್ನಾನಮಾಡಿದಮಾತ್ರದಿಂದಲೇ ಹಿಂದಿನ ಏಳುತಲೆ ಮುಂದಿನ ಏಳುತಲೆಗಳವರಿಗೂ ತನ್ನ ಕುಲವನ್ನು ಉದ್ಧಾರಮಾಡುತ್ತಾನೆ.

೮೬. ಆ ತೀರ್ಥದ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ಪವಿತ್ರನಾಗುವನು. ಕಣ್ಣಿನಿಂದ ನೋಡಿದರೆ ಮಂಗಳವುಂಟಾಗುವುದು. ಅಲ್ಲಿ ಸ್ನಾನಮಾಡಿದರೂ ಜಲಪಾನಮಾಡಿದರೂ ಏಳು ತಲೆಗಳವರಿಗೆ ಕುಲವನ್ನು ಪವಿತ್ರವನ್ನಾಗಿ ಮಾಡುವುದು.

೮೭. ಮೃತನಾದ ಮನುಷ್ಯನ ಅಸ್ಥಿಯು (ಮೂಳೆಯು) ಗಂಗೆಯ ನೀರನ್ನು ಸೋಕಿದೊಡನೆಯೇ ಆ ಮನುಷ್ಯನು ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

ಯಥಾ ಪುಷ್ಣಾತಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಉಪಾಸ್ಯ ಪುಣ್ಯಂ ಲಬ್ಧ್ವಾಚ ಭವತಿ ಪರಲೋಕಭಾಕ್ ॥ ೮೮ ॥
ನ ಗಂಗಾಸದೃಶಂ ತೀರ್ಥಂ ನ ದೇವಃ ಕೇಶವಾತ್ಪರಃ ।
ಬ್ರಾಹ್ಮಣೇಭ್ಯಃ ಪರಂ ನಾಸ್ತಿ ಏವಮಾಹ ಪಿತಾಮಹಃ ॥ ೮೯ ॥
ಯತ್ರ ಗಂಗಾ ಮಹಾರಾಜ ಸ ದೇಶಸ್ತತ್ತಪೋವನಂ ।
ಸಿದ್ಧಕ್ಷೇತ್ರಂ ಚ ವಿಜ್ಞೇಯಂ ಗಂಗಾತೀರಸಮಾಶ್ರಿತಂ ॥ ೯೦ ॥
ಇದಂ ಸತ್ಯಂ ದ್ವಿಜಾತೀನಾಂ ಸಾಧೂನಾಂ ಮಾನಸೇಷು ಚ ।
ಮುಕ್ತಿಂ ಚೈವ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ಚ ॥೯೧॥
ಇದಂ ಧರ್ಮ್ಯಮಿದಂ ಮೇಧ್ಯಮಿದಂ ಸ್ವರ್ಗ್ಯಮಿದಂ ಸುಖಂ ।
ಇದಂ ಪುಣ್ಯತಮಂ ಧರ್ಮ್ಯಂ ಪಾವನಂ ಧರ್ಮಮುತ್ತಮಂ ॥೯೨॥

---

೮೮. ಪುಣ್ಯವಾದ ಸ್ಥಳಗಳನ್ನೂ ತೀರ್ಥಗಳನ್ನೂ ಹೊಂದಿದ ಹಾಗೆಲ್ಲಾ ಪುಣ್ಯವಂತನಾಗಿ ಪರಲೋಕದಲ್ಲಿ ಉತ್ತಮಗತಿಯನ್ನು ಹೊಂದುವನು.

೮೯. ಗಂಗೆಗೆ ಸಮಾನವಾದ ತೀರ್ಥವು ಬೇರೊಂದಿಲ್ಲ. ಕೇಶವನಿಗಿಂತ ಮಿಗಿಲಾದ ದೇವರಿಲ್ಲ. ಬ್ರಾಹ್ಮಣರಿಗಿಂತ ಉತ್ತಮವಾದ ವಸ್ತುವಿಲ್ಲವೆಂದು ಬ್ರಹ್ಮನು ಹೇಳಿದ್ದಾನೆ.

೯೦. ಎಲ್ಲಿ ಗಂಗೆಯು ಹರಿಯುತ್ತದೆಯೋ ಅದೆಲ್ಲವೂ ತಪೋವನವೇ. ಗಂಗಾತೀರದಲ್ಲಿರುವ ಪ್ರದೇಶಗಳೆಲ್ಲವೂ ಸಿದ್ಧಕ್ಷೇತ್ರಗಳೇ.

೯೧. ಬ್ರಾಹ್ಮಣಾದಿ ದ್ವಿಜಾತಿಗಳಿಗೂ, ಸಾಧುಗಳಿಗೂ, ಶಿಷ್ಯರಿಗೂ, ತನ್ನನ್ನೇ ಅನುಸರಿಸಿಕೊಂಡಿರುವವರಿಗೂ ಮುಕ್ತಿಯನ್ನು ಕಿವಿಯಲ್ಲಿ ಹೇಳುತ್ತಿರುತ್ತದೆ. ಇದು ಸತ್ಯವು.

೯೨. ಇದೇ ಧರ್ಮವಾದುದು. ಇದೇ ಪವಿತ್ರವಾದುದು. ಇದೇ ಸ್ವರ್ಗವನ್ನು ಕೊಡುವುದು. ಇದೇ ಸುಖಮಯವಾದುದು. ಇದೇ ಪುಣ್ಯವಾದುದು, ಪಾವನವಾದುದು, ಉತ್ತಮ ಧರ್ಮವಾದುದು. ಮಹಾಶಿಷವನ್ನು ಕೊಡುವುದು, ಗುಹ್ಯವಾದುದು. ಸರ್ವಪಾಪಗಳನ್ನೂ ನಾಶಮಾಡತಕ್ಕುದಾಗಿದೆ.

ಮಹಾಶಿಷಮಿದಂ ಗುಹ್ಯಂ ಸರ್ವಪಾಪಪ್ರಮೋಚನಂ ।
ಅಧೀತ್ಯ ದ್ವಿಜಮಧ್ಯೇ ಚ ನಿರ್ಮಲತ್ವಮವಾಪ್ನುಯಾತ್ ॥೯೩॥

ಶ್ರೀಮತ್ಸ್ವರ್ಗ್ಯಂ ಮಹಾಪುಣ್ಯಂ ಸಪತ್ನಶಮನಂ ಶಿವಂ ।
ಮೇಧಾಜನನಮಗ್ರ್ಯಂ ವೈ ತೀರ್ಥವಂಶಾನುಕೀರ್ತನಂ ॥೯೪॥

ಅಪುತ್ರೋ ಲಭತೇ ಪುತ್ರಮಧನೋ ಧನಮಾಪ್ನುಯಾತ್ ।
ಮಹೀಂ ವಿಜಯತೇ ರಾಜಾ ವೈಶ್ಯೋ ಧನಮವಾಪ್ನುಯಾತ್ ।
ಶೂದ್ರೋ ವಾಛೇಪ್ಸಿತಾನ್ಕಾಮಾನ್ ಬ್ರಾಹ್ಮಣಃ ಪಾರಗಃ ಪಠನ್ ॥

ಯಶ್ಚೇದಂ ಶೃಣುಯಾನ್ನಿತ್ಯಂ ತೀರ್ಥಪುಣ್ಯಂ ಸದಾ ಶುಚಿಃ ।
ಜಾತೀಃ ಸಂಸ್ಮರತೇ ಬಹ್ವೀಸ್ನಾಕಪೃಷ್ಠೇ ಚ ಮೋದತೇ ॥೯೬॥

ಗಮ್ಯಾನ್ಯಪಿ ಚ ತೀರ್ಥಾನಿ ಕೀರ್ತಿತಾನ್ಯಾಗಮಾನ್ಯಪಿ ।
ಮನಸಾಪ್ಯಭಿಗಚ್ಛೇತ ಸರ್ವತೀರ್ಥಮಭೀಪ್ಸಯಾ ॥೯೭॥

---

೯೩-೯೪. ಬ್ರಾಹ್ಮಣರ ಮಧ್ಯದಲ್ಲಿ ತೀರ್ಥವಂಶವನ್ನು ಹೇಳಿದರೆ ಅಧ್ಯಯನ ಮಾಡಿದ ಫಲವು ಬರುತ್ತದೆ. ಸ್ವರ್ಗಪ್ರದವಾದುದು. ಶತ್ರುಗಳನ್ನು ನಾಶಮಾಡುತ್ತದೆ. ಬುದ್ಧಿಯನ್ನು ಕುದುರಿಸುತ್ತದೆ.

೯೫. ಈ ಕೀರ್ತನದಿಂದ ಮಕ್ಕಳಿಲ್ಲದವರಿಗೆ ಮಕ್ಕಳಾಗುತ್ತವೆ. ಹಣವಿಲ್ಲದವರಿಗೆ ದ್ರವ್ಯವು ಸಿಕ್ಕುತ್ತದೆ. ರಾಜನು ಜಯಶೀಲನಾಗುತ್ತಾನೆ. ವೈಶ್ಯನು ಧನವಂತನಾಗುತ್ತಾನೆ. ಶೂದ್ರನು ಇಷ್ಟಪ್ರಾಪ್ತಿಯನ್ನು ಹೊಂದುತ್ತಾನೆ. ಬ್ರಾಹ್ಮಣನು ವೇದಪಾರಗನಾಗುತ್ತಾನೆ.

೯೬. ಯಾವನು ಈ ತೀರ್ಥಪುಣ್ಯವನ್ನು ಕೇಳುತ್ತಾನೋ ಅವನು ಹಿಂದಿನ ಅನೇಕಜನ್ಮಗಳ ಸ್ಮರಣೆಯನ್ನು ಹೊಂದಿ ಸ್ವರ್ಗವನ್ನು ಪಡೆಯುತ್ತಾನೆ.

೯೭. ಈ ತೀರ್ಥಗಳನ್ನು ಕೇಳಿದರೆ ತೀರ್ಥಗಳಿಗೆ ಹೋದ ಪುಣ್ಯವು ಬರುತ್ತದೆ. ವೇದಗಳನ್ನು ಅಧ್ಯಯನಮಾಡಿದ ಪುಣ್ಯವೂ ಬರುತ್ತದೆ. ಆದುದರಿಂದ ಮನಸ್ಸಿನಿಂದಲಾದರೂ ಈ ತೀರ್ಥವನ್ನುಸ್ಮರಿಸುತ್ತಿರಬೇಕು.

ಏತಾನಿ ವಸುಭಿಃ ಸಾಧ್ಯೈರಾದಿತ್ಯೈರ್ಮರುದಶ್ವಿಭಿಃ ।
ಋಷಿಭಿರ್ದೇವಕಲ್ಪೈಶ್ಚ ಕೃತಾನಿ ಸುಕೃತೈಷಿಭಿಃ ॥೯೮॥

ಏವಂ ತ್ವಮಪಿ ಕೌರವ್ಯ ವಿಧಿನಾನೇನ ಸುವ್ರತ ।
ವ್ರಜ ತೀರ್ಥಾನಿ ನಿಯತಃ ಪುಣ್ಯಂ ಪುಣ್ಯೇನ ವರ್ಧತೇ ॥೯೯॥

ಭಾವಿತೈಃ ಕಾರಣೈಃ ಪೂರ್ವಮಾಸ್ತಿಕ್ಯಾಚ್ಛ್ರುತಿದರ್ಶನಾತ್ ।
ಪ್ರಾಪ್ಯಂತೇ ತಾನಿ ತೀರ್ಥಾನಿ ಸದ್ಭಿಃ ಶಿಷ್ಟಾನುದರ್ಶಿಭಿಃ ॥೧೦೦॥

ನಾವ್ರತೋ ನಾಕೃತಾತ್ಮಾ ಚ ನಾಶುಚಿರ್ನ ಚ ತಸ್ಕರಃ ।
ಸ್ನಾತಿ ತೀರ್ಥೇಷು ಕೌರವ್ಯ ನ ಚ ವಕ್ರಮತಿರ್ನರಃ ॥೧೦೧॥

ತ್ವಯಾಪಿ ಸಮ್ಯಗ್ವೃತ್ತೇನ ನಿತ್ಯಂ ಧರ್ಮಾರ್ಥದರ್ಶಿನಾ ।
ಪಿತರಸ್ತರ್ಪಿತಾಸ್ತಾತ ಸರ್ವೇ ಚ ಪ್ರಪಿತಾಮಹಾಃ
ಪಿತಾಮಹಪುರೋಗಾಶ್ಚ ದೇವಾಸ್ಸರ್ಷಿಗಣಾಸ್ತಥಾ । ॥೧೦೨॥

---

೯೮. ಈ ರೀತಿಯಾಗಿ ವಸುಗಳು ಕೇಳಿದ್ದಾರೆ. ಆದಿತ್ಯರೂ, ಅಶ್ವಿನೀದೇವತೆಗಳೂ, ಮರುತ್ತುಗಳೂ, ಋಷಿಗಳೂ, ಸುಕೃತವನ್ನು ಅಪೇಕ್ಷಿಸುವವರೂ ಮಾಡಿದ್ದಾರೆ.

೯೯. ಅಯ್ಯಾ, ಧರ್ಮರಾಜನೇ, ನೀನೂ ಕೂಡ ಈ ವಿಧಾನದಿಂದ ತೀರ್ಥಯಾತ್ರೆಯನ್ನು ಮಾಡು. ಪುಣ್ಯವು ಪುಣ್ಯದಿಂದ ಹೆಚ್ಚುತ್ತದೆ.

೧೦೦. ಪೂರ್ವದಲ್ಲಿ ಮಾಡಿದ ಪುಣ್ಯಗಳಿಂದಲೂ, ಆಸ್ತಿಕ್ಯದಿಂದಲೂ, ವೇದಗಳನ್ನು ಓದುವುದರಿಂದಲೂ ಈ ತೀರ್ಥಗಳು ಸಿಕ್ಕುತ್ತವೆ.

೧೦೧. ವ್ರತಮಾಡದವನೂ, ಅಯೋಗ್ಯನೂ, ಕಳ್ಳನೂ, ಕೆಟ್ಟಬುದ್ಧಿಯುಳ್ಳವನೂ ಇಲ್ಲಿ ಸ್ನಾನಮಾಡಲಾರರು.

೧೦೨. ಎಲೈ ಧರ್ಮನಂದನನೇ, ನೀನೂ ಕೂಡ ಧರ್ಮದಿಂದಿದ್ದು ದೇವಪಿತೃಗಳನ್ನು ಬ್ರಹ್ಮದೇವರ್ಷಿಗಳನ್ನೂ ತೃಪ್ತಿಪಡಿಸಿದ್ದೀಯೆ.

ತ್ವಂ ಚ ಧರ್ಮೇಣ ಧರ್ಮಜ್ಞ ನಿತ್ಯಮೇವಾಭಿತೋಷಿತಃ ।
ದಿಲೀಪಕೀರ್ತಿಂ ಮಹತೀಂ ಪ್ರಾಪ್ಸ್ಯಸೇ ಭುವಿ ಶಾಶ್ವತೀಂ ॥೧೦೩॥

॥ ನಾರದ ಉವಾಚ ॥

ಏವಮುಕ್ತ್ವಾಭ್ಯನುಜ್ಞಾಪ್ಯ ವಸಿಷ್ಠೋ ಭಗವಾನೃಷಿಃ ।
ಪ್ರಾತಃ ಪ್ರೀತೇನ ಮನಸಾ ತತ್ರೈವಾಂತರಧೀಯತ ॥೧೦೪॥

ದಿಲೀಪಃ ಕುರುಶಾರ್ದೂಲ ಶಾಸ್ತ್ರತತ್ತ್ವಾರ್ಥ ದರ್ಶನಾತ್ ।
ವಸಿಷ್ಠವಚನಾಚ್ಚೈವ ಪೃಥಿವೀಮನುಚಕ್ರಮೇ ॥೧೦೫॥

ಏವಮೇವ ಮಹಾಭಾಗ ಪ್ರತಿಷ್ಠಾನೇ ಪ್ರತಿಷ್ಠಿತಾ ।
ತೀರ್ಥಯಾತ್ರಾ ಮಹಾಪುಣ್ಯಾ ಸರ್ವಪಾಪ ಪ್ರಮೋಚಿನೀ ॥೧೦೬॥

ಅನೇನ ವಿಧಿನಾ ಯಸ್ತು ಪೃಥಿವೀಂ ಪರ್ಯಟಿಷ್ಯತಿ ।
ಅಶ್ವಮೇಧಶತಂ ಸಾಗ್ರಂ ಫಲಂ ಪ್ರೇತ್ಯೈಷ ಭೋಕ್ಷ್ಯತೇ ॥೧೦೭॥

---

೧೦೩. ಎಲೈ ಧರ್ಮಜನೇ, ನೀನು ಎಲ್ಲರನ್ನೂ ತೃಪ್ತಿಪಡಿಸುತ್ತಿರುವೆ. ದಿಲೀಪ ಮಹಾರಾಜನ ಮಹತ್ತಾದ ಕೀರ್ತಿಯನ್ನು ಹೊಂದುತ್ತೀಯೆ.

೧೦೪. ನಾರದನು ಹೇಳಿದನು: ಹೀಗೆ ವಸಿಷ್ಠನು ಎಲ್ಲರಿಗೂ ಹೇಳಿ ಅವರ ಒಪ್ಪಿಗೆಯನ್ನು ಹೊಂದಿ ಅಲ್ಲೇ ಅಂತರ್ಧಾನನಾದನು.

೧೦೫. ದಿಲೀಪನು ಶಾಸ್ತ್ರತತ್ತ್ವವನ್ನು ತಿಳಿದಿದ್ದುದರಿಂದಲೂ, ವಸಿಷ್ಠನ ಮಾತಿನ ಮೇಲೂ ಭೂಮಿಯನ್ನು ಸುತ್ತಲು ಮೊದಲು ಮಾಡಿದನು.

೧೦೬. ಈ ರೀತಿಯಾಗಿ ತೀರ್ಥಯಾತ್ರೆಗಳು, ಸ್ಥಾನಗಳು ಪ್ರತಿಷ್ಠಿತ ವಾಗಿವೆ. ಇವುಗಳು ಮಹಾ ಪುಣ್ಯಪ್ರದವೂ, ಪಾಪನಾಶಕರವಾದವೂ ಆಗಿವೆ.

೧೦೭. ಈ ವಿಧಾನದಿಂದ ಯಾರು ಭೂಮಿಯನ್ನು ಸುತ್ತುತ್ತಾನೋ ಅವನು ನೂರು ಅಶ್ವಮೇಧಯಾಗಗಳನ್ನು ಮಾಡಿದ ಫಲವನ್ನು ಹೊಂದಿ ಸ್ವರ್ಗಭಾಗಿಯಾಗುತ್ತಾನೆ.

ತತಶ್ಚಾಷ್ಟಗುಣಂ ಪಾರ್ಥ ಪ್ರಾಪ್ಸ್ಯಸೇ ಧರ್ಮಮುತ್ತಮಂ ।
ದಿಲೀಪಃ ಪಾರ್ಥ ನೃಪತಿಃ ಯಥಾಪೂರ್ವಮವಾಪ್ತವಾನ್ ।
ನೇತಾ ಚ ತ್ವಮೃಷೀನ್ಯಸ್ಮಾತ್ತಸ್ಮಾತ್ತೇಽಷ್ಟಗುಣಂ ಫಲಂ ॥೧೦೮॥

ರಕ್ಷೋಗಣ ವಿಕೀರ್ಣಾನಿ ತೀರ್ಥಾನ್ಯೇತಾನಿ ಭಾರತ ।
ನ ಗತಿರ್ವಿದ್ಯತೇಽನ್ಯಸ್ಯ ತ್ವಾಮೃತೇ ಕುರುನಂದನ ॥೧೦೯॥

ಇದಂ ದೇವರ್ಷಿಚರಿತಂ ಸರ್ವತೀರ್ಥಾನುಸಂಶ್ರಿತಂ ।
ಯಃ ಪಠೇತ್ಕಲ್ಯ ಉತ್ಥಾಯ ಸ ಸರ್ವಪಾಪೈಃ ಪ್ರಮುಚ್ಯತೇ ॥೧೧೦॥

ಋಷಿಮುಖ್ಯಾಸ್ಸದಾ ಯತ್ರ ವಾಲ್ಮೀಕಿಸ್ತ್ವಥ ಕಶ್ಯಪಃ ।
ಆತ್ರೇಯಸ್ತ್ವಥ ಕೌಂಡಿನ್ಯೋ ವಿಶ್ವಾಮಿತ್ರೋಽಥ ಗೌತಮಃ ॥

ಅಸಿತೋ ದೇವಲಶ್ಚೈವ ಮಾರ್ಕಂಡೇಯೋಽಥ ಗಾಲವಃ ।
ಭರದ್ವಾಜಶ್ಚ ಶಿಷ್ಯಶ್ಚ ಮುನಿರುದ್ದಾಲಕಸ್ತಥಾ ॥೧೧೨॥

ಶೌನಕಃ ಸಹ ಪುತ್ರೇಣ ವ್ಯಾಸಶ್ಚ ತಪತಾಂ ವರಃ ।
ದುರ್ವಾಸಾಶ್ಚ ಮುನಿಶ್ರೇಷ್ಠೋ ಜಾಬಾಲಿಶ್ಚ ಮಹಾತಪಾಃ॥೧೧೩॥

---

೧೦೮. ದಿಲೀಪನು ಹಿಂದೆ ಹೊಂದಿದುದಕ್ಕಿಂತ ಎಂಟರಷ್ಟು ಫಲವನ್ನು ಹೊಂದುತ್ತೀ. ಏಕೆಂದರೆ ನೀನು ಋಷಿಗಳನ್ನು ಜೊತೆಯಲ್ಲಿ ಕರೆದುಕೊಂಡು ಹೊಗುತ್ತಿದ್ದೀಯೆ.

೧೦೯. ಆ ತೀರ್ಥಗಳು ಅನೇಕ ರಾಕ್ಷಸರಿಂದ ಆವರಿಸಲ್ಪಟ್ಟಿವೆ. ಎಲೈ ಧರ್ಮಜನೇ ನಿನ್ನ ಹೊರತು ಬೇರೆಯವರು ಹೋಗಲಾರರು.

೧೧೦. ಈ ದೇವರ್ಷಿಚರಿತವು ಸರ್ವತೀರ್ಥಗಳನ್ನು ಅನುಸರಿಸಿಕೊಂಡಿದೆ ಪ್ರಾತಃಕಾಲದಲ್ಲಿ ಎದ್ದು ಪಠಿಸಿದರೆ ಸರ್ವಪಾಪವೂ ಹೋಗುತ್ತದೆ.

೧೧೧–೧೧೪. ಎಲೈ ಧರ್ಮಜನೇ ಋಷಿಮುಖ್ಯರಾದ ವಾಲ್ಮೀಕಿ, ಕಶ್ಯಪ, ಅತ್ರಿ, ಕಾಂಡಿನ್ಯ, ವಿಶ್ವಾಮಿತ್ರ, ಗೌತಮ ಅಸಿತ, ದೇವಲ, ಮಾರ್ಕಂಡೇಯ, ಗಾಲವ, ಭರದ್ವಾಜ, ಉದ್ದಾಲಕ, ಶೌನಕ, ಅವನ ಮಗ, ವ್ಯಾಸ, ಪರಾಶರ, ದುರ್ವಾಸ, ಜಾಬಾಲಿ ಇವರೆಲ್ಲರೂ ನಿನ್ನನ್ನೇ

ಏತೇ ಋಷಿವರಾಸ್ಸರ್ವೇ ತ್ವತ್ತ್ರ ತೀಕ್ಷ್ಣ್ಯಸ್ತ್ರಪೋಧನಾಃ ।
ಏಭಿಸ್ಸಹ ಮಹಾಭಾಗ ತೀರ್ಥಾನ್ಯೇತಾನ್ಯನುವ್ರಜ
ಪ್ರಾಪ್ಸ್ಯಸೇ ಮಹತೀಂ ಕೀರ್ತಿಂ ಯಥಾ ರಾಜಾ ಮಹಾಭಿಷಃ ॥

ಯಥಾ ಯಯಾತಿರ್ಧರ್ಮಾತ್ಮಾ ಯಥಾ ರಾಜಾ ಪುರೂರವಾಃ ।
ತಥಾ ತ್ವಂ ಕುರುಶಾರ್ದೂಲ ಸ್ವೇನ ಧರ್ಮೇಣ ಶೋಭಸೇ ॥೧೧೫॥

ಯಥಾ ಭಗೀರಥೋ ರಾಜಾ ಯಥಾ ರಾಮಶ್ಚ ವಿಶ್ರುತಃ ।
ಯಥಾ ವೈ ವೃತ್ರಹಾ ಸರ್ವಾನ್ ಸಪತ್ನಾನದಹತ್ಪುರಾ ॥೧೧೬॥

ತ್ರೈಲೋಕ್ಯಂ ಪಾಲಯಾಮಾಸ ದೇವರಾಡ್ವಿಗತಜ್ವರಃ ।
ತಥಾ ಶತ್ರುಕ್ಷಯಂ ಕೃತ್ವಾ ತ್ವಂ ಪ್ರಜಾಃ ಪಾಲಯಿಷ್ಯಸಿ ॥೧೧೭॥

ಸ್ವಧರ್ಮೇಣಾರ್ಜಿತಾಮುರ್ವೀಂ ಪ್ರಾಪ್ಯ ರಾಜೀವಲೋಚನ ।
ಖ್ಯಾತಿಂ ಯಾಸ್ಯಸಿ ವೀರ್ಯೇಣ ಕಾರ್ತವೀರ್ಯಾರ್ಜುನೋ ಯಥಾ ॥

---

ಎದುರುನೋಡುತ್ತಿದ್ದಾರೆ. ಇವರೊಡನೆ ತೀರ್ಥಪರ್ಯಟನೆ ಮಾಡು. ಭಗೀರಥನಂತೆ ಹೆಚ್ಚಾದ ಕೀರ್ತಿಯನ್ನು ಪಡೆಯುತ್ತೀಯೆ.

೧೧೫. ಯಯಾತಿ, ಪುರೂರವ ಇವರುಗಳಂತೆ ನೀನೂ ಸ್ವಧರ್ಮಾಚರಣೆಯಿಂದ ಶೋಭಿಸುತ್ತೀಯೆ.

೧೧೬-೧೧೭. ಭಗೀರಥ, ರಾಮ, ಇಂದ್ರ ಇವರುಗಳು ಹೇಗೆ ಶತ್ರುಗಳನ್ನು ನಾಶಮಾಡಿ ಸುಖವಾಗಿ ಲೋಕಗಳನ್ನು ಕಾಪಾಡಿದರೋ ಹಾಗೆ ನೀನೂ ಶತ್ರುಕ್ಷಯವನ್ನು ಮಾಡಿ ಪ್ರಜೆಗಳನ್ನು ಕಾಪಾಡುತ್ತೀಯೆ.

೧೧೮. ಎಲೈ ಧರ್ಮಜನೇ ನೀನು ನಿನ್ನ ಪರಾಕ್ರಮದಿಂದ ಭೂಮಿಯನ್ನು ಜಯಿಸಿ ಅದನ್ನು ಹೊಂದಿ ಕಾರ್ತವೀರ್ಯಾರ್ಜುನನಂತೆ ಪರಾಕ್ರಮದಿಂದ ಖ್ಯಾತಿಯನ್ನು ಹೊಂದುತ್ತೀಯೆ.

॥ ಸೂತ ಉವಾಚ ॥

ಏವಮಾಭಾಷ್ಯ ರಾಜಾನಂ ನಾರದೋ ಭಗವಾನ್ಯುಷಿಃ ।
ಅನುಜ್ಞಾಪ್ಯ ಮಹಾರಾಜಂ ತತ್ರೈವಾಂತರಧೀಯತ ॥೧೧೯॥
ಯುಧಿಷ್ಠಿರೋಽಪಿ ಧರ್ಮಾತ್ಮಾ ಋಷಿಭಿಃ ಸಹ ಸುವ್ರತಃ ।
ಜಗಾಮಾಖಿಲತೀರ್ಥಾನಿ ಸಾದರಃ ಪೃಥಿವೀಪತಿಃ ॥೧೨೦॥
ಮಯೋಕ್ತಾಮೃಷಯಸ್ಸರ್ವೇ ತೀರ್ಥಯಾತ್ರಾಶ್ರಯಿಣಾಂ ಕಥಾಂ ।
ಯಃ ಪಠೇಚ್ಛೃಣುಯಾದ್ವಾಪಿ ಸ ಮುಕ್ತಃ ಸರ್ವಪಾತಕೈಃ ॥
ಮಯೋಕ್ತಮಖಿಲಂ ತತ್ತ್ವಂ ಕಿಂ ಭೂಯಃ ಶ್ರೋತುಮಿಚ್ಛಥ ।
ಋಷೀಣಾಂ ಪುಣ್ಯಕೀರ್ತೀನಾಂನಾವಕ್ತವ್ಯಂ ಮಮಾಸ್ತಿ ವೈ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ನಾನಾವಿಧ ತೀರ್ಥಕಥನಂ ಏಕೋನಚತ್ವಾರಿಂಶೋಽಧ್ಯಾಯಃ

---

೧೧೯. ಸೂತನು ಹೇಳುತ್ತಾನೆ: ನಾರದನು ಧರ್ಮರಾಜನಿಗೆ ಹೀಗೆ ಹೇಳಿ ಅವನ ಅನುಮತಿಯನ್ನು ಪಡೆದು ಅಲ್ಲಿಯೇ ಅಂತರ್ಧಾನನಾದನು.

೧೨೦. ಯುಧಿಷ್ಠಿರನೂ ಕೂಡ ಋಷಿಗಳೊಡನೆ ಅಕ್ಕರೆಯಿಂದ ಎಲ್ಲ ತೀರ್ಥಗಳನ್ನೂ ಸೇವಿಸಲು ಹೊರಟನು.

೧೨೧. ಎಲೈ ಋಷಿಗಳಿರಾ! ನಾನು ಹೇಳಿದ ಈ ತೀರ್ಥಯಾತ್ರೆಯ ಕಥೆಯನ್ನು ಓದಿದವನೂ, ಕೇಳಿದವನೂ ಸಮಸ್ತಪಾಪಗಳಿಂದ ಮುಕ್ತನಾಗುತ್ತಾನೆ.

೧೨೨. ನಾನು ಎಲ್ಲವನ್ನೂ ಹೇಳಿದ್ದೇನೆ. ನೀವು ಇನ್ನೇನನ್ನು ಕೇಳಲಿಚ್ಛಿಸುವಿರಿ? ಪುಣ್ಯಶಾಲಿಗಳಾದ ಋಷಿಗಳಿಗೆ ನಾನು ಮುಚ್ಚಬೇಕಾದುದೇನೂ ಇಲ್ಲ.

ಇಲ್ಲಿಗೆ ಶ್ರೀ ಪದ್ಮಪುರಾಣದಲ್ಲಿ ಆದಿಖಂಡದ
ತೀರ್ಥವರ್ಣನೆಯ ಮೂವತ್ತೊಂಭತ್ತನೆಯ ಅದ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮ ಪುರಾಣೇ ಆದಿಖಂಡೇ ಚತ್ವಾರಿಂಶೋಽಧ್ಯಾಯಃ

ಏವಮುಕ್ತಾನಿ ತೀರ್ಥಾನಿ ವಿಷ್ಣುದೇಹಾನಿ ಸುವ್ರತ ।
ಏಷಾಮನ್ಯತಮಾಸಂಗಾನ್ಮುಕ್ತೋ ಭವತಿ ಮಾನವಃ ॥ ೧ ॥

ತೀರ್ಥಾನುಶ್ರವಣಂ ಧನ್ಯಂ ಧನ್ಯಂ ತೀರ್ಥನಿಷೇವಣಂ ।
ಪಾಪರಾಶಿನಿಪಾತಾಯ ನಾನ್ಯೋಽಪಾಯಃ ಕಲೌ ಯುಗೇ ॥ ೨ ॥

ವಾಸಂ ಕುರ್ಯಾಮಹಂ ತೀರ್ಥೇ ತೀರ್ಥಸ್ಪರ್ಶಮಹಂ ತಥಾ ।
ಏವಂ ಯೋಽನುದಿನಂ ಬ್ರೂತೇ ಸ ಯಾತಿ ಪರಮಂ ಮಹತ್ ॥ ೩ ॥

ಪಾಪಾನಿ ತಸ್ಯ ನಶ್ಯಂತಿ ತೀರ್ಥಾಲಾಪನಮಾತ್ರತಃ ।
ತೀರ್ಥಾನಿ ಖಲು ಧನ್ಯಾನಿ ಧನ್ಯಸೇವ್ಯಾನಿ ಸುವ್ರತಾಃ ॥ ೪ ॥

---

ಪದ್ಮಪುರಾಣದ ಆದಿಖಂಡದ ನಲವತ್ತನೆಯ ಅಧ್ಯಾಯವು.

೧. ಈಗ ಹೇಳಿದ ತೀರ್ಥಗಳೆಲ್ಲವೂ ವಿಷ್ಣುವಿನ ದೇಹಗಳೆಂದೇ ತಿಳಿ ಇವುಗಳಲ್ಲಿ ಯಾವುದಾದರೂ ಒಂದರ ಸಂಬಂಧವಾದರೂ ಮುಕ್ತನಾಗುತ್ತಾನೆ.

೨. ತೀರ್ಥಗಳ ಹೆಸರನ್ನು ಕೇಳವುದೇ ಪುಣ್ಯವು. ಸೇವಿಸುವುದಂತೂ ಮಹಾಪುಣ್ಯವು. ಕಲಿಯುಗದಲ್ಲಿ ಪಾಪನಾಶಕ್ಕೆ ಇದಲ್ಲದೆ ಬೇರೊಂದುಪಾಯವಿಲ್ಲ.

೩. ತೀರ್ಥದಲ್ಲಿ ವಾಸಮಾಡುತ್ತೇನೆ. ತೀರ್ಥಸ್ಪರ್ಶವನ್ನು ಮಾಡುತ್ತೇನೆ. ಎಂದು ಯಾವನು ನಿತ್ಯವೂ ಹೇಳುತ್ತಾನೊ ಅವನು ಉತ್ತಮಗತಿಯನ್ನು ಹೊಂದುತ್ತಾನೆ.

೪. ತೀರ್ಥಗಳ ಹೆಸರನ್ನು ಹೇಳಿದ ಮಾತ್ರಕ್ಕೆ ಅವನ ಪಾಪಗಳು ನಾಶವಾಗುತ್ತವೆ. ಧನ್ಯರು ತೀರ್ಥಗಳನ್ನು ಸೇವಿಸಿದರೆ ಆ ತೀರ್ಥಕ್ಕೆ ಧನ್ಯತೆ ಬರುತ್ತದೆ.

ತೀರ್ಥಾನಾಂ ಸೇವನಾದ್ದೇವಸ್ಸೇವಿತೋ ಭವತಿ ಪ್ರಭುಃ ।
ನಾರಾಯಣೋ ಜಗತ್ಕರ್ತಾ ನಾಸ್ತಿ ತೀರ್ಥಾತ್ಪರಂ ಪದಂ ॥ ೫ ॥

ಬ್ರಾಹ್ಮಣಸ್ತುಲಸೀ ಚೈವ ಅಶ್ವತ್ಥಸ್ತೀರ್ಥಸಂಚಯಃ ।
ವಿಷ್ಣುಶ್ಚ ಪರಮೇಶಾನಃ ಸೇವ್ಯ ಏವ ಸದಾನೃಭಿಃ ॥ ೬ ॥

ಬ್ರಾಹ್ಮಣಾನಾಂ ವಿಶೇಷೇಣ ಸೇವನಂ ಮುನಿಪುಂಗವಾಃ ।
ಸರ್ವತೀರ್ಥಾವಗಾಹಾದೇ ರಧಿಕಂ ವಿದುರಗ್ರಜಾಃ ॥ ೭ ॥

ತಸ್ಮಾನ್ನಿಜಪದಂ ಸಾಕ್ಷಾತ್ಸರ್ವತೀರ್ಥಮಯಂ ಶುಭಂ ।
ಭಜೇತಾನುದಿನಂ ವಿದ್ವಾನ್ ತತ್ರ ತೀರ್ಥಾಧಿಕಂ ಭವೇತ್ ॥ ೮ ॥

ಅಶ್ವತ್ಥಸ್ಯ ತುಲಸ್ಯಾಶ್ಚ ಗವಾಂ ಸೂರ್ಯಪ್ರದಕ್ಷಿಣಾತ್ ।
ಸರ್ವತೀರ್ಥಫಲಂ ಪ್ರಾಪ್ಯ ವಿಷ್ಣುಲೋಕೇ ಮಹೀಯತೇ ॥ ೯ ॥

---

೫. ತೀರ್ಥಗಳನ್ನು ಸೇವಿಸಿದರೆ ದೇವರನ್ನು ಸೇವಿಸಿದಂತೆ ಆಗುತ್ತದೆ. ತೀರ್ಥಕ್ಕಿಂತ ಉತ್ತಮವಾದುದು ಯಾವುದೂ ಇಲ್ಲ.

೬. ಬ್ರಾಹ್ಮಣ, ತುಳಸಿ, ಅರಳೀಮರ, ತೀರ್ಥಗಳು, ವಿಷ್ಣು, ಈಶ್ವರ ಇವರನ್ನು ಮನುಷ್ಯನು ಯಾವಾಗಲೂ ಸೇವಿಸಬೇಕು.

೭. ಎಲೈ ಧರ್ಮಜನೇ, ಬ್ರಾಹ್ಮಣಸೇವೆಯು ಸರ್ವತೀರ್ಥಸೇವೆಗಳಿಗಿಂತ ಅಧಿಕ, ಎಂದು ತಿಳಿದವರು ಹೇಳುತ್ತಾರೆ.

೮. ಆದುದರಿಂದ ಬ್ರಾಹ್ಮಣಪಾದವು ಸರ್ವ ತೀರ್ಥಮಯವಾದುದು. ಅವನನ್ನು ವಿದ್ವಾಂಸನು ನಿತ್ಯವೂ ಸೇವಿಸಬೇಕು. ಅದು ಸರ್ವ ತೀರ್ಥಕ್ಕೂ ಅಧಿಕವು.

೯. ಅಶ್ವತ್ಥ, ತುಲಸೀ, ಗೋವು, ಸೂರ್ಯ ಇವುಗಳ ಪ್ರದಕ್ಷಿಣೆಯು ಸರ್ವ ತೀರ್ಥಗಳ ಫಲವನ್ನು ಕೊಡುತ್ತದೆ. ವೈಕುಂಠಪ್ರಾಪ್ತಿಯೂ ಆಗುತ್ತದೆ.

ತಸ್ಮಾದ್ದುಷ್ಕೃತಕರ್ಮಾಣಿ ನಾಶಯೇತ್ತೀರ್ಥ ಸೇವನಾತ್ ।
ಅನ್ಯಥಾ ನರಕಂ ಯಾತಿ ಕರ್ಮ ಭೋಗಾದ್ಧಿ ಶಾಮ್ಯತಿ ॥೧೦॥

ಪಾಪಿನಾಂ ನರಕೇ ವಾಸಃ ಸುಕೃತೀ ಸ್ವರ್ಗಮಶ್ನುತೇ ।
ತಸ್ಮಾತ್ಪುಣ್ಯಂ ನಿಷೇವೇತ ತೀರ್ಥಂ ಖಲು ವಿಚಕ್ಷಣಃ ॥೧೧॥

॥ ಋಷಯ ಊಚುಃ ॥

ಶ್ರುತಾನಿ ಕಿಲ ತೀರ್ಥಾನಿ ಸಮಾಹಾತ್ಮ್ಯಾನಿ ಸುವ್ರತ ।
ಇದಾನೀಂ ಶ್ರೋತುಮಿಚ್ಛಾಮಃ ಪ್ರಯಾಗಸ್ಯ ವಿಶೇಷಕಂ ॥೧೨॥

ಪ್ರಯಾಗಂ ತು ಪುರಾ ಪ್ರೋಕ್ತಂ ಸಂಕ್ಷೇಪಾತ್ಸೂತ ಯತ್ತ್ವಯಾ।
ವಿಶೇಷಾಚ್ಛ್ರೋತುಮಿಚ್ಛಾಮಃ ಸೂತ ನಃ ಕಥ್ಯತಾಮಿತಿ ॥೧೩॥

॥ ಸೂತ ಉವಾಚ ॥

ಸಾಧು ಪೃಷ್ಟಂ ಮಹಾಭಾಗಾಃ ಪ್ರಯಾಗಂ ಪ್ರತಿ ಸುವ್ರತಾಃ ।
ಹಂತಾಹಂ ತತ್ಪ್ರವಕ್ಷ್ಯಾಮಿ ಪ್ರಯೋಗಸ್ಯೋಪವರ್ಣನಂ ॥೧೪॥

---

೧೦. ಆದುದರಿಂದ ತೀರ್ಥಸೇವನೆಯಿಂದ ಪಾಪಗಳನ್ನು ನಾಶ ಮಾಡಿಕೊಳ್ಳಬೇಕು. ಹಾಗಿಲ್ಲದಿದ್ದರೆ ನರಕಭಾಗಿಯಾಗುತ್ತಾನೆ. ಕರ್ಮಫಲವು ಭೋಗಿಸಿದಲ್ಲದೆ ಹೋಗುವುದಿಲ್ಲ.

೧೧. ಪಾಪಿಗಳಿಗೆ ನರಕವೂ, ಸುಕೃತಿಗಳಿಗೆ ಸ್ವರ್ಗವೂ ಸಿಕ್ಕುತ್ತದೆ. ಅದುದರಿಂದ ಬುದ್ಧಿವಂತನು ಪುಣ್ಯವನ್ನೇ ಮಾಡಬೇಕು.

೧೨. ಋುಷಿಗಳು ಕೇಳುತ್ತಾರೆ: ತೀರ್ಥಗಳ ಮಹಾತ್ಮ್ಯೆಯನ್ನು ಕೇಳಿದ್ದಾಯಿತು. ಈಗ ಪ್ರಯಾಗದ ಮಾಹಾತ್ಮೆಯ ವಿಷಯವನ್ನು ಇನ್ನೂ ಹೆಚ್ಚಾಗಿ ಕೇಳಬೇಕು.

೧೩. ಮೊದಲು ಪ್ರಯಾಗದ ವಿಷಯವನ್ನು ಸಂಕ್ಷೇಪವಾಗಿ ಹೇಳಿದ್ದೀಯೆ. ಎಲೈ ಸೂತನೇ, ಈಗ ಅದನ್ನೇ ವಿಸ್ತಾರವಾಗಿ ಹೇಳುವವನಾಗು.

೧೪. ಸೂತನು ಹೇಳುತ್ತಾನೆ: ಪ್ರಯಾಗದ ವಿಷಯವನ್ನು ಕೇಳಿದುದು ಒಳ್ಳೆಯದಾಯಿತು. ಬಹಳ ಸಂತೋಷ. ಆ ಪ್ರಯಾಗದ ವಿಷಯವನ್ನೂ ವಿವರವಾಗಿ ಹೇಳುತ್ತೇನೆ.

ಮಾರ್ಕಂಡೇಯೇನ ಕಥಿತಂ ಯತ್ಪುರಾ ಪಾಂಡುಸೂನವೇ ।
ಭಾರತೇ ಚ ತದಾ ವೃತ್ತೇ ಪ್ರಾಪ್ತರಾಜ್ಯೇ ಪೃಥಾಸುತೇ ॥೧೫॥

ಏತಸ್ಮಿನ್ನಂತರೇ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ಭ್ರಾತೃಶೋಕೇನ ಸಂತಪ್ತಃ ಚಿಂತಯಂಸ್ತು ಪುನಃ ಪುನಃ ॥೧೬॥

ಆಸೀದ್ದುರ್ಯೋಧನೋ ರಾಜಾ ಏಕಾದಶಚಮೂಪತಿಃ ।
ಅಸ್ಮಾನ್ ಸಂತಾಪ್ಯ ಬಹುಶಃ ಸರ್ವೇ ತೇ ನಿಧನಂ ಗತಾಃ ॥೧೭॥

ವಾಸುದೇವಂ ಸಮಾಶ್ರಿತ್ಯ ಪಂಚ ಶೇಷಾಸ್ತು ಪಾಂಡವಾಃ ।
ಕಥಂ ದ್ರೋಣಂ ಚ ಭೀಷ್ಮಂ ಚ ಕರ್ಣಂ ಚೈವ ಮಹಾಬಲಂ॥೧೮॥

ದುರ್ಯೋಧನಂ ಚ ರಾಜಾನಂ ಭ್ರಾತೃಪುತ್ರಸಮನ್ವಿತಂ ।
ರಾಜಾನೋ ನಿಹತಾಸ್ಸರ್ವೇ ಯೇ ಚಾನ್ಯೇ ಶೂರಮಾನಿನಃ ॥೧೯॥

---

೧೫. ಮಾರ್ಕಂಡೇಯನು ಯುಧಿಷ್ಠಿರನಿಗೆ ಹೇಳಿದುದನ್ನೂ ಹೇಳುತ್ತೇನೆ, ಕೇಳು. ಭಾರತಯುದ್ಧದಲ್ಲಿ ಅನೇಕರು ಸಾಯಲು ಪಾಂಡವರಿಗೆ ರಾಜ್ಯ ಬರಲು ಆಗ ಈ ವಿಷಯವನ್ನು ಹೇಳಿದನು.

೧೬. ಈ ಮಧ್ಯದಲ್ಲಿ ಧರ್ಮಜನು ಭ್ರಾತೃಶೋಕದಿಂದ ಪದೇಪದೇ ದುಃಖಿಸುತ್ತಾ ಕೇಳಿದನು.

೧೭. ಹನ್ನೊಂದು ಅಕ್ಷೋಹಿಣೀ ಸೈನ್ಯಕ್ಕೆ ಒಡೆಯನಾದ ದುರ್ಯೋಧನನು ನಮ್ಮನ್ನು ಬಹುವಾಗಿ ಹಿಂಸಿಸಿ ದುಃಖಪಡಿಸಿ, ತನ್ನ ಅನುಯಾಯಿಗಳೊಡನೆ ನಾಶವಾದನು.

೧೮–೧೯. ವಾಸುದೇವನನ್ನಾಶ್ರಯಿಸಿಕೊಂಡು ಪಂಚಪಾಂಡವರು ಳಿದೆವು. ದ್ರೋಣ, ಭೀಷ್ಮ, ಕರ್ಣ, ಭ್ರಾತೃಪುತ್ರಸಹಿತನಾದ ದುರ್ಯೋಧನನೇ ಮೊದಲಾದ ಅನೇಕ ಶೂರರಾದ ರಾಜರನ್ನು ಕೊಂಡೆವಲ್ಲಾ! ಬಹು ಕಷ್ಟವು.

ವಿನಾ ರಾಜ್ಯೇನ ಕರ್ತವ್ಯಂ ಕಿಂ ಭೋಗೈರ್ಜೀವಿತೇನ ವಾ ।
ಧಿಕ್ಕಷ್ಟಮಿತಿ ಸಂಚಿಂತ್ಯ ರಾಜಾ ವಿಹ್ವಲತಾಂ ಗತಃ ॥೨೦॥

ನಿಶ್ಚೇಷ್ಟೋಽಥ ನಿರುತ್ಸಾಹಃ ಕಿಂಚಿತ್ತಿಷ್ಠತ್ಯಧೋ ಮುಖಃ ।
ಲಬ್ಧಸಂಜ್ಞೋ ತದಾ ರಾಜಾ ಚಿಂತಯಾನಃ ಪುನಃ ಪುನಃ ॥೨೧॥

ಕಿಂ ಚರೇ ವಿಧಿನಾ ಯೋಗಂ ನಿಯಮಂ ತೀರ್ಥಮೇವ ವಾ ।
ಯೇನಾಹಂ ಶೀಘ್ರಮಾಮುಚ್ಯೇ ಮಹಾಪಾತಕಕಿಲ್ಬಿಷಾತ್ ॥೨೨॥

ಯತ್ರ ಸ್ನಾತ್ವಾ ನರೋ ಯಾತಿ ವಿಷ್ಣುಲೋಕಮನುತ್ತಮಂ ।
ಕಥಂ ಪೃಚ್ಛಾಮಿ ವೈ ಕೃಷ್ಣಂ ಯೇನೇದಂ ಕಾರಿತಂ ಮಹತ್ ॥೨೩॥

ಧೃತರಾಷ್ಟ್ರಂ ಕಥಂ ಪೃಚ್ಛೇ ಯಸ್ಯ ಪುತ್ರಶತಂ ಹತಂ ।
ವ್ಯಾಸಂ ಕಥಮಹಂ ಪ್ರಚ್ಛೇ ಯಸ್ಯ ಗೋತ್ರಕ್ಷಯಃ ಕೃತಃ ॥೨೪॥

---

೨೦. ರಾಜ್ಯವು ಬೇಡ, ಭೋಗವೂ ಬೇಡ, ಕೊನೆಗೆ ಜೀವಿತವೂ ಬೇಡ, ಛೀ, ಕಷ್ಟವು ಎಂದು ಹೇಳುತ್ತಾ ಬಹು ಖೇದಗೊಂಡನು.

೨೧. ನಿಶ್ಚೇಷ್ಟನೂ ನಿರುತ್ಸಾಹನೂ ಆಗಿ ತಲೆಯನ್ನು ತಗ್ಗಿಸಿಕೊಂಡು ದುಃಖಿಸುತ್ತಾ ಹಾಗೆಯೇ ಕೊಂಚಜ್ಞಾನವನ್ನು ತಂದುಕೊಂಡು ಯಾವ ಕೆಲಸವನ್ನು ಮಾಡಲಿ? ಯಾವ ನಿಯಮದಿಂದ ತೀರ್ಥವನ್ನು ಸೇವಿಸಲಿ? ಎಂದು ಯೋಚಿಸಿದನು.

೨೨. ಈ ಮಹಾಪಾತಕದಿಂದ ನಾನು ಹೇಗೆ ಬಿಡುಗಡೆಯನ್ನು ಹೊಂದಲಿ?

೨೩. ಯಾವ ತೀರ್ಥದಲ್ಲಿ ಸ್ನಾನಮಾಡಿದರೆ ಉತ್ತಮವಾದ ವಿಷ್ಣು ಲೋಕವನ್ನು ಹೊಂದುವೆನು? ಶ್ರೀ ಕೃಷ್ಣನನ್ನು ಹೇಗೆ ತಾನೆ ಕೇಳಲಿ? ಅವನೇ ಅಲ್ಲವೇ ಇದೆಲ್ಲವನ್ನೂ ಮಾಡಿಸಿದವನು?

೨೪. ಧೃತರಾಷ್ಟ್ರನನ್ನು ಹೇಗೆ ಕೇಳಲಿ? ಅವನ ಮಕ್ಕಳೆಲ್ಲರೂ ಸತ್ತಿರುವರಲ್ಲ? ವ್ಯಾಸನನ್ನು ಕೇಳುವುದು ತಾನೇ ಹೇಗೆ? ಅವನು ವಂಶವನ್ನೇ ನಾಶಮಾಡಿರುವೆನಲ್ಲ!

ಏವಂ ವೈಕ್ಲಬ್ಯಮಾಪನ್ನೋ ಧರ್ಮಪುತ್ರೋ ಯುಧಿಷ್ಠಿರಃ ।
ರುದಂತಃ ಪಾಂಡವಸ್ಸರ್ವೇ ಭ್ರಾತೃಶೋಕಪರಿಪ್ಲುತಾಃ ॥೨೫॥

ಯೇ ಚ ತತ್ರ ಮಹಾತ್ಮಾನಃ ಸಮೇತಾಃ ಪಾಂಡವಶ್ರಿತಾಃ ।
ಕುಂತೀ ಚ ದ್ರೌಪದೀ ಚೈವ ಯೇ ಚ ತತ್ರ ಸಮಾಗತಾಃ ॥೨೬॥

ಭೂಮೌ ನಿಪತಿತಾಸ್ಸರ್ವೇ ರೋದಮಾನಾಸ್ಸಮಂತತಃ
ವಾರಾಣಸ್ಯಾಂ ತು ಮಾರ್ಕಂಡಸ್ತೇನ ಜ್ಞಾತೋ ಯುಧಿಷ್ಠಿರಃ ।
ಯಥಾ ವಿಕ್ಲಬಮಾಪನ್ನೋ ರೋದಮಾನಃ ಸುದುಃಖಿತಃ ॥೨೭॥

ಅಚಿರೇಣೈವ ಕಾಲೇನ ಮಾರ್ಕಂಡಸ್ತು ಮಹಾತಪಾಃ ।
ಹಸ್ತಿನಾಪುರಸಂಪ್ರಾಪ್ತೋ ರಾಜದ್ವಾರೇ ಸ ತಿಷ್ಠತಿ ॥೨೮॥

ದ್ವಾರಪಾಲೋಽಪಿ ತಂ ದೃಷ್ಟ್ವಾ ರಾಜ್ಞಃ ಕಥಿತವಾನ್ ದ್ರುತಂ ।
ತ್ವಾಂ ದ್ರಷ್ಟುಕಾಮೋ ಮಾರ್ಕಂಡೋ ದ್ವಾರೇ ತಿಷ್ಠತ್ಯಸೌ ಮುನಿಃ
ತ್ವರಿತೋ ಧರ್ಮಪುತ್ರಸ್ತು ದ್ವಾರಮೇತ್ಯಾಹ ತತ್ಪರಃ । ॥೨೯॥

---

೨೫. ಹೀಗೆ ಧರ್ಮಜನು ದುಃಖಿತನಾದನು ಇವನ ದುಃಖವನ್ನು ನೋಡಿ ಅವನ ತಂಮ್ಮಂದಿರೂ ಅಳಲೂ ಮೊದಲಿಟ್ಟರು.

೨೬. ಅಲ್ಲಿ ಪಾಂಡವರನ್ನಾಶ್ರಯಿಸಿರುವ ಮಹಾತ್ಮರೂ, ಕುಂತೀ ದ್ರೌಪದಿ, ಮೊದಲಾಗಿ ಅಲ್ಲಿ ಬಂದಿರುವವರೆಲ್ಲರೂ, ದುಃಖಿತರಾಗಿ, ಭೂಮಿಯಲ್ಲಿ ಬಿದ್ದು ಹೊರಳಾಡುತ್ತಾ ಅಳುತ್ತಿದ್ದರು.

೨೭. ವಾರಾಣಸಿಯಲ್ಲಿದ್ದ ಮಾರ್ಕಂಡೇಯನೂ, ಯುಧಿಷ್ಠಿರನು ದುಃಖಿಸುತ್ತಿರವುದನ್ನು ತಿಳಿದುಕೊಂಡನು.

೨೮. ಇದನ್ನು ತಿಳಿದು ಸ್ವಲ್ಪಕಾಲದಲ್ಲಿಯೇ ಆ ಮಾರ್ಕಂಡೇಯನು ಹಸ್ತಿನಾಪುರಕ್ಕೆ ಬಂದು ಅರಮನೆಯ ಬಾಗಿಲಲ್ಲಿ ನಿಂತನು.

೨೯. ದ್ವಾರಪಾಲಕನು ಅವನನ್ನು ನೋಡಿ ಅವನು ಬಂದ ವೃತ್ತಾಂತವನ್ನು ರಾಜನಾದ ಧರ್ಮಜನಿಗೆ ಹೇಳಿದನು. ಮಾರ್ಕಂಡೇಯಮುನಿಯು ನಿನ್ನನ್ನು ನೋಡಲು ಇಲ್ಲಿಗೆ ಬಂದು ಬಾಗಿಲಲ್ಲಿ ನಿಂತಿರುವನು. ಎಂದು ಹೇಳಲು ಧರ್ಮಜನು ಅವನನ್ನು ನೋಡಲು ಜೇಗನೆ ಬಾಗಿಲ ಬಳಿಗೆ ಬಂದನು.

॥ ಯುಧಿಷ್ಠಿರ ಉವಾಚ ॥

ಸ್ವಾಗತಂ ತೇ ಮಹಾಪ್ರಾಜ್ಞ ಸ್ವಾಗತಂ ತೇ ಮಹಾಮುನೇ ।
ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ಪಾವಿತಂ ಕುಲಂ ।
ಅದ್ಯ ಮೇ ಪಿತರಸ್ತೃಪ್ತಾಸ್ತ್ವಯಿ ದೃಷ್ಟೇ ಮಹಾಮುನೇ ॥೩೦॥

ಸಿಂಹಾಸನ ಉಪಸ್ಥಾಪ್ಯ ಪಾದಶೌಚಾರ್ಚನಾದಿಭಿಃ ।
ಯುಧಿಷ್ಠಿರೋ ಮಹಾತ್ಮಾ ವೈ ಪೂಜಯಾಮಾಸ ತಂ ಮುನಿಂ॥೩೧॥

ತತಸ್ತಮೂಚೇ ಮಾರ್ಕಂಡಃ ಪೂಜಿತೋಽಹಂ ತ್ವಯಾ ವಿಭೋ ।
ಆಖ್ಯಾಹಿ ತ್ವರಿತೋ ರಾಜನ್ ಕಿಮರ್ಥಂ ತ್ವರಿತಂ ತ್ವಯಾ ।
ಕೇನ ವಾ ವಿಕ್ಲಬೀಭೂತಃ ಕಥಯಸ್ವ ಮಮಾಗ್ರತಃ ॥೩೨॥

ಅಸ್ಮಾಕಂ ಚೈವ ಯದ್ವೃತ್ತಂ ರಾಜ್ಯಸ್ಯಾರ್ಥೇ ಮಹಾಮುನೇ ।
ಏತತ್ಸರ್ವಂ ವಿದಿತ್ವಾ ತು ಭಗವಾನಿಹ ಚಾಽಽಗತಃ ॥೩೩॥

---

೩೦. ಧರ್ಮಜನು ಹೇಳಿದನು: ಮಹಾಪ್ರಾಜ್ಞನಾದ ಎಲೈ ಮಾರ್ಕಂಡೇಯ ಮುನಿಯೇ ನಿನಗೆ ಸ್ವಾಗತವು, ನೀನು ಬಂದುದರಿಂದ ನನ್ನ ಜನ್ಮವು ಸಫಲವಾಯಿತು, ನನ್ನ ಕುಲವು ಪವಿತ್ರವಾಯಿತು, ನಿನ್ನನ್ನು ನೋಡಿದ ಮಾತ್ರದಿಂದಲೇ ನಮ್ಮ ಪಿತೃಗಳೆಲ್ಲರೂ ತೃಪ್ತರಾದರು.

೩೧. ಆ ಋಷಿಯನ್ನು ಸಿಂಹಾಸನದಲ್ಲಿ ಕೂರಿಸಿ ಪಾದ್ಯಾಚಮನೀಯಗಳನ್ನು ಕೊಟ್ಟು ಸತ್ಕರಿಸಿ ಯುಧಿಷ್ಠಿರನು ಪೂಜಿಸಿದನು.

೩೨. ಆಗ ಮಾರ್ಕಂಡೇಯನು ಯುಧಿಷ್ಠಿರನನ್ನು ಕುರಿತು ಎಲೈ ರಾಜನೇ ನಿನ್ನ ಪೂಜೆಯಿಂದ ನಾನು ತೃಪ್ತನಾದೆನು. ನೀನೇತಕ್ಕೆ ಇಷ್ಟೊಂದು ದುಃಖಿತನಾಗಿರುವೆ? ಹೇಳು. ನನ್ನನ್ನೇತಕ್ಕೆ ಜಾಗ್ರತೆ ಬರಮಾಡಿದೆ?

೩೩. ಯುಧಿಷ್ಠಿರನು ಹೇಳುತ್ತಾನೆ: ರಾಜ್ಯಕ್ಕೋಸ್ಕರ ನಾವು ಮಾಡಿರುವ ಕಾರ್ಯಗಳನ್ನೆಲ್ಲ ತಿಳಿದೂ ಕೂಡ ಹೀಗೆ ಏತಕ್ಕೆ ಕೇಳುತ್ತೀ? ಇದೆಲ್ಲವನ್ನೂ ತಿಳಿದು ಅದರ ಪರಿಹಾರಕ್ಕಾಗಿಯೇ ನೀನು ಇಲ್ಲಿಗೆ ಬಂದಿರುವಂತೆ ಕಾಣುತ್ತದೆ.

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಮಹಾಬಾಹೋ ಯತ್ರ ಧರ್ಮೋ ವ್ಯವಸ್ಥಿತಃ ।
ನೈವ ದೃಷ್ಟಂ ರಣೇ ಪಾಪಂ ಯುಧ್ಯಮಾನಸ್ಯ ಧೀಮತಃ ॥೩೪॥

ಕಿಂ ಪುನಾ ರಾಜಧರ್ಮೇಣ ಕ್ಷತ್ರಿಯಸ್ಯ ವಿಶೇಷತಃ ।
ತದೇವಂ ಹೃದಯೇ ಕೃತ್ವಾ ತಸ್ಮಾತ್ಪಾಪಂ ನ ಚಿಂತಯೇತ್ ॥೩೫॥

ತತೋ ಯುಧಿಷ್ಠಿರೋ ರಾಜಾ ಪ್ರಣಮ್ಯ ಶಿರಸಾ ಮುನಿಂ ।
ಪೃಚ್ಛಾಮಿ ತ್ವಾಂ ಮುನಿಶ್ರೇಷ್ಠ ಸದಾ ತ್ರೈಲೋಕ್ಯದರ್ಶನಂ ।
ಕಥಯ ತ್ವಂ ಸಮಾಸೇನ ಮುಚ್ಯೇಽಹಂ ಯೇನ ಕಿಲ್ಬಿಷಾತ್ ॥೩೬॥

ಶೃಣು ರಾಜನ್ ಮಹಾಭಾಗ ಯನ್ಮಾಂ ಪೃಚ್ಛಸಿ ಭಾರತ ।
ಏವಂ ಸಾಂಖ್ಯಂ ಚ ಯೋಗಂ ಚ ತೀರ್ಥಂ ಚೈವ ಯುಧಿಷ್ಠಿರ ॥೩೭॥

---

೩೪. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ ಧರ್ಮವಿರುವಲ್ಲಿ ಪಾಪವೆಂಬುದನ್ನು ಕಾಣೆನು. ಧರ್ಮದಿಂದ ಯುದ್ಧಮಾಡುವವನಿಗೆ ಪಾಪವೆಂಬುದು ಉಂಟೆಂದು ಎಂದಿಗೂ ಕಂಡರಿಯೆನು.

೩೫. ರಾಜಧರ್ಮದಿಂದ ಪೂರ್ವದಲ್ಲಿ ಎಲ್ಲರೂ ಯುದ್ಧಮಾಡುತಿದ್ದರು. ಕ್ಷತ್ರಿಯನಿಗೆ ಇದು ವಿಶೇಷವಾದ ಧರ್ಮವು. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಪಾಪದ ವಿಷಯವನ್ನು ಯೋಚಿಸಬೇಡ.

೩೬. ಆಗ ಯುಧಿಷ್ಠಿರನು ಮುನಿಗೆ ತಲೆಬಾಗಿ ನಮಸ್ಕರಿಸಿ ಎಲೈ ಮುನಿಯೇ ನೀನು ಭೂತಭವಿಷ್ಯದ್ವರ್ತಮಾನಗಳನ್ನೂ ಮೂರ ಲೋಕಗಳ ವೃತ್ತಾಂತಗಳನ್ನೂ ಬಲ್ಲವನು ನಾನು ಪಾಪದಿಂದ ಮುಕ್ತನಾಗುವ ಬಗೆಯನ್ನು ದಯವಿಟ್ಟು ತಿಳಿಸು.

೩೭–೩೮. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ, ನೀನು ಕೇಳಿದ ವಿಷಯವನ್ನು ಹೇಳುವೆನು, ಕೇಳು. ಸಾಂಖ್ಯಯೋಗ

ಕಿಂ ಪುನರ್ಬ್ರಾಹ್ಮಣೈಃ ಪುಣ್ಯೈಃ ಕೀರ್ತಿತಂ ವೈ ಪುರಾ ವಿಭೋ ।
ಪ್ರಯೊಾಗಗಮನಂ ಶ್ರೇಷ್ಠಂ ನರಾಣಾಂ ಪುಣ್ಯಕರ್ಮಣಾಂ ॥೩೮॥

ಇತಿ ಶೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಚತ್ವಾರಿಂಶೋಽಧ್ಯಾಯಃ

---

ಗಳು, ಬ್ರಾಹ್ಮಣರು ಯಾವುದನ್ನು ಹೇಳಿರುವರೋ ಅದನ್ನು ಹೇಳುವೆನು, ಪುಣ್ಯವಂತರಾದವರು ಪ್ರಯೋಯಾಗಕ್ಷೇತ್ರಕ್ಕೆ ಹೋಗುವುದು ಉತ್ತಮವು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ನಲವತ್ತನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕಚತ್ವಾರಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ಭಗವನ್ ಶ್ರೋತುಮಿಚ್ಛಾಮಿ ಪುರಾ ಕಲ್ಪೇ ಯಥಾಸ್ಥಿತಂ ।**
**ಕಥಂ ಪ್ರಯಾಗಗಮನಂ ನರಾಣಾಂ ತತ್ರ ಕೀದೃಶಂ ॥ ೧ ॥**

**ಮೃತಾನಾಂ ಕಾ ಗತಿಸ್ತತ್ರ ಸ್ನಾತಾನಾಂ ಚೈವ ಕಿಂ ಫಲಂ ।**
**ಯೇ ವಸಂತಿ ಪ್ರಯಾಗೇ ತು ಬ್ರೂಹಿ ತೇಷಾಂ ಚ ಕಿಂ ಫಲಂ ।**
**ಏತನ್ಮೇ ಸರ್ವಮಾಖ್ಯಾಹಿ ಪರಂ ಕೌತೂಹಲಂ ಹಿ ಮೇ ॥ ೨ ॥**

॥ ಮಾರ್ಕಂಡೇಯ ಉವಾಚ ॥

**ಕಥಯಿಷ್ಯಾಮಿ ತೇ ವತ್ಸ ಯಥೇಷ್ಟಂ ಯಚ್ಚ ಯತ್ಫಲಂ ।**
**ಪುರಾ ಋಷೀಣಾಂ ವಿಪ್ರಾಣಾಂ ಕಥ್ಯಮಾನಂ ಮಯಾ ಶ್ರುತಂ ॥**

---

ಪದ್ಮ ಪುರಾಣದ ಆದಿಖಂಡದ ನಲವತ್ತೊಂದನೆಯ ಅಧ್ಯಾಯವು

೧. ಯುಧಿಷ್ಠಿರನು ಕೇಳುತ್ತಾನೆ, ಸ್ವಾಮಿ, ಪೂರ್ವದಲ್ಲಿ ಹೇಗಿತ್ತು? ಪ್ರಯಾಗಕ್ಕೆ ಹೋಗುವುದು ಹೇಗೆ? ಅಲ್ಲೇನಿದೆ? ದಯ ವಿಟ್ಟು ಹೇಳಿ.

೨. ಅಲ್ಲಿ ಮೃತರಾದವರಿಗೆ ಯಾವ ಗತಿಯು ಬರುತ್ತದೆ? ಸ್ನಾನ ಮಾಡಿದರೆ ಫಲವೇನು? ಪ್ರಯಾಗದಲ್ಲಿ ವಾಸಮಾಡುವವರಿಗೆ ಬರುವ ಪುಣ್ಯವೆಂತಹುದು? ಇವೆಲ್ಲವನ್ನೂ ಹೇಳಿ. ಕೇಳಬೇಕೆಂದು ನನಗೆ ಹೆಚ್ಚಾಗಿ ಕುತೂಹಲವಿದೆ.

೩. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ ಪ್ರಯಾಗದ ಫಲವನ್ನು ಹೇಳುತ್ತೇನೆ ಕೇಳು. ಹಿಂದೆ ಋಷಿಗಳಿಗೆ ಹೇಳುತ್ತಿದ್ದುದನ್ನು ಕೇಳಿದ್ದೇನೆ ಅದರಂತೆ ಹೇಳುತ್ತೇನೆ ಕೇಳು.

ಆಪ್ರಯಾಗಾತ್ಪ್ರತಿಷ್ಠಾನಾದ್ಧರ್ಮಕೀವಾಸುಕೀಹ್ರದಾತ್ ।
ಕಂಬಳಾಶ್ವತರೌ ನಾಗೌ ನಾಗಾಶ್ಚ ಬಹುಮೂಲಿಕಾಃ ॥ ೪ ॥

ಏತತ್ಪ್ರಜಾಪತಿಕ್ಷೇತ್ರಂ ತ್ರಿಷು ಲೋಕೇಷು ವಿಶ್ರುತಂ ।
ಅತ್ರ ಸ್ನಾತ್ವಾ ದಿವಂ ಯಾಂತಿ ಯೇ ಮುಕ್ತಾಸ್ತೇಽ ಪುನರ್ಭವಾಃ ॥

ತತ್ರ ಬ್ರಹ್ಮಾದಯೋ ದೇವಾ ರಕ್ಷಾಂ ಕುರ್ವಂತಿ ಸಂಗತಾಃ ।
ಅನ್ಯೇ ಚ ಬಹವಸ್ತೀರ್ಥಾಃ ಸರ್ವಪಾಪಹರಾಃ ಶುಭಾಃ ॥ ೬ ॥

ನ ಶಕ್ಯಾಃ ಕಥಿತಂ ರಾಜನ್ ಬಹುವರ್ಷಶತೈರಪಿ ।
ಸಂಕ್ಷೇಪೇಣ ಪ್ರವಕ್ಷಾಮಿ ಪ್ರಯಾಗಸ್ಯ ಚ ಕೀರ್ತನಂ ॥ ೭ ॥

ಷಷ್ಟಿರ್ಧನುಸ್ಸಹಸ್ರಾಣಿ ಪರಿರಕ್ಷಂತಿ ಜಾಹ್ನವೀಂ ।
ಯಮುನಾಂ ರಕ್ಷತಿ ಸದಾ ಸವಿತಾ ಸಪ್ತವಾಹನಃ ॥ ೮ ॥

---

೪. ಧರ್ಮಕೀಹ್ರದದಿಂದ ವಾಸುಕೀಹ್ರದದವರಿವಿಗೂ ಪ್ರಯಾಗವು ಎಂದು ಪ್ರಸಿದ್ಧವು. ಅಲ್ಲಿ ಕಂಬಳಾಶ್ವತರವೆಂಬ ನಾಗಗಳೂ ಮೂಲಿಕೆಗಳೂ ಬಹುವಾಗಿ ಇವೆ.

೫. ಇದು ಬ್ರಹ್ಮಕ್ಷೇತ್ರವೆಂದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ. ಇಲ್ಲಿ ಸ್ನಾನಮಾಡಿದವರು ಸ್ವರ್ಗವನ್ನು ಹೊಂದುತ್ತಾರೆ. ಪುನರ್ಜನ್ಮವಿಲ್ಲ.

೬. ಅಲ್ಲಿ ಬ್ರಹ್ಮಾದಿದೇವತೆಗಳೆಲ್ಲರೂ ಸೇರಿ ರಕ್ಷಿಸುತ್ತಿರುತ್ತಾರೆ. ಅಲ್ಲದೆ ಇನ್ನೂ ಅನೇಕ ಪಾಪಹರಗಳಾದ ಪುಣ್ಯತೀರ್ಥಗಳೂ ಅಲ್ಲಿವೆ.

೭. ಪ್ರಯಾಗಕ್ಷೇತ್ರದ ಮಹಿಮೆಯನ್ನು ಅನೇಕವರ್ಷಗಳು ಹೇಳಿದರೂ ಮುಗಿಸಲು ಸಾಧ್ಯವಿಲ್ಲ. ಆದರೂ ಸಂಕ್ಷೇಪವಾಗಿ ಹೇಳುತ್ತೇನೆ.

೮. ಅರವತ್ತುಸಾವಿರ ಧನುರ್ಧರರು ಗಂಗೆಯನ್ನು ರಕ್ಷಿಸುತ್ತಿರುತ್ತಾರೆ. ಯಮುನೆಯನ್ನು ಸೂರ್ಯನು ಯಾವಾಗಲೂ ಕಾಪಾಡುತ್ತಾನೆ.

ಪ್ರಯಾಗಂ ತು ವಿಶೇಷೇಣ ಸ್ವಯಂ ರಕ್ಷತಿ ವಾಸವಃ ।
ಮಂಡಲಂ ರಕ್ಷತಿ ಹರಿರ್ದೇವೈಸ್ಸಹ ಸುಸಂಮತಂ ॥ ೯ ॥

ತಂ ವಟಂ ರಕ್ಷತೇ ನಿತ್ಯಂ ಶೂಲಪಾಣಿರ್ಮಹೇಶ್ವರಃ ।
ಸ್ಥಾನಂ ರಕ್ಷಂತಿ ವೈ ದೇವಾಸ್ಸರ್ವಪಾಪಹರಂ ಶುಭಂ ॥
ಅಧರ್ಮೇಣ ವೃತೋ ಲೋಕೋ ನೈವ ಗಚ್ಛತಿ ತತ್ಪದಂ ॥೧೦॥

ಸ್ವಲ್ಪಮಲ್ಪತರಂ ಪಾಪಂ ಯದಾ ತಸ್ಯ ನರಾಧಿಪ ।
ಪ್ರಯಾಗಂ ಸ್ಮರಮಾಣಸ್ಯ ಸರ್ವಮಾಯಾತಿ ಸಂಕ್ಷಯಂ ॥೧೧॥

ದರ್ಶನಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ ।
ಮೃತ್ತಿಕಾಲಭನಾದ್ವಾಪಿ ನರಃ ಪಾಪಾದ್ವಿಮುಚ್ಯತೇ ॥೧೨॥

ಪಂಚ ಕುಂಡಾನಿ ರಾಜೇಂದ್ರ ಯೇಷಾಂ ಮಧ್ಯೇ ತು ಜಾಹ್ನವೀ ।
ಪ್ರಯಾಗೇ ತು ಪ್ರವಿಷ್ಟಸ್ಯ ಪಾಪಂ ನಶ್ಯತಿ ತತ್ಕ್ಷಣಾತ್ ॥೧೩॥

---

೯. ಅಲ್ಲದೆ ಪ್ರಯಾಗವನ್ನು ವಿಶೇಷ ಆಸಕ್ತಿಯಿಂದ ಇಂದ್ರನೇ ಕಾಪಾಡುತ್ತಾನೆ. ವಿಷ್ಣುವು ಅದರ ಸುತ್ತಲಿರುವ ಪ್ರದೇಶವನ್ನು ದೇವತೆಗಳೊಡನೆ ಕೂಡಿ ಕಾಪಾಡುತ್ತಾನೆ.

೧೦. ಅಲ್ಲಿರುವ ವಟವೃಕ್ಷವನ್ನು ಮಹೇಶನು ಶೂಲಪಾಣಿಯಾಗಿ ಕಾಪಾಡುತ್ತಾನೆ. ಅಧರ್ಮಿಷ್ಠರು ಆ ಜಾಗವನ್ನು ಹೊಂದುವುದೇ ಇಲ್ಲ.

೧೧. ಏನಾದರೂ ಅಲ್ಪಸ್ವಲ್ಪ ಪಾಪಮಾಡಿದ್ದರೆ ಅದು ಪ್ರಯಾಗದ ಸ್ಮರಣೆಯಿಂದಲೇ ನಾಶವಾಗುತ್ತದೆ.

೧೨. ಆ ತೀರ್ಥದ ದರ್ಶನದಿಂದಲೂ, ಅದರ ನಾಮಸ್ಮರಣೆಯಿಂದಲೂ ಕೊನೆಗೆ ಅಲ್ಲಿನ ಮಣ್ಣನ್ನು ಹೊಂದುವುದರಿಂದಲೂ ಕೂಡ ಪಾಪವು ಹೋಗುತ್ತದೆ.

೧೩. ಅಲ್ಲಿ ಪಂಚಕುಂಡಗಳ ಮಧ್ಯದಲ್ಲಿ ಗಂಗೆಯು ಹರಿಯುತ್ತದೆ. ಪ್ರಯಾಗವನ್ನು ಪ್ರವೇಶಿಸಿದ ಕೂಡಲೇ ಪಾಪವೆಲ್ಲವೂ ನಾಶವಾಗುತ್ತದೆ.

ಯೋಜನಾನಾಂ ಸಹಸ್ರೇಷು ಗಂಗಾಂ ಸ್ಮರತಿ ಯೋ ನರಃ ।
ಅಪಿ ದುಷ್ಕೃತಕರ್ಮಾಸೌ ಲಭತೇ ಪರಮಾಂ ಗತಿಂ ॥೧೪॥
ಕೀರ್ತನಾನ್ಮುಚ್ಯತೇ ಪಾಪೈರ್ದೃಷ್ಟ್ವಾ ಭದ್ರಾಣಿ ಪಶ್ಯತಿ ।
ಅವಗಾಹ್ಯ ಚ ಪೀತ್ವಾ ಚ ಪುನಾತ್ಯಾಸಪ್ತಮಂ ಕುಲಂ ॥೧೫॥
ಸತ್ಯವಾದೀ ಜಿತಕ್ರೋಧೋ ಅಹಿಂಸಾಂ ಪರಮಾಂ ಸ್ಥಿತಃ ।
ಧರ್ಮಾನುಸಾರೀ ತತ್ತ್ವಜ್ಞೋ ಗೋಬ್ರಾಹ್ಮಣಹಿತೇ ರತಃ ॥೧೬॥
ಗಂಗಾಯಮುನಯೋರ್ಮಧ್ಯೇ ಸ್ನಾತೋ ಮುಚ್ಯೇತ ಕಿಲ್ಬಿಷಾತ್ ।
ಮನಸಾ ಚಿಂತಿತಾನ್ಕಾಮಾನ್ ಸಮ್ಯಕ್ಪ್ರಾಪ್ನೋತಿ ಪುಷ್ಕಳಾನ್ ॥
ತತೋ ಗತ್ವಾ ಪ್ರಯಾಗಂ ತು ಸರ್ವದೇವಾಭಿರಕ್ಷಿತಂ ।
ಬ್ರಹ್ಮಚಾರೀ ವಸೇನ್ಮಾಸಂ ಪಿತೃದೇವಾಂಶ್ಚ ತರ್ಪಯೇತ್ ॥೧೮॥

---

೧೪. ಸಾವಿರ ಯೋಜನಗಳ ದೂರದಲ್ಲಿಯಾದರೂ ಯಾವನು ಗಂಗೆಯನ್ನು ಸ್ಮರಿಸುತ್ತಾನೆಯೋ ಅವನು ಪಾಪಿಯಾಗಿದ್ದರೂ ಉತ್ತಮ ಗತಿಯನ್ನು ಹೊಂದುತ್ತಾನೆ.

೧೫. ಆ ತೀರ್ಥದ ನಾಮಸ್ಮರಣೆಯಿಂದಲೇ ಪಾಪವು ಹೋಗುತ್ತದೆ. ಕಣ್ಣಿನಿಂದ ನೋಡಿದರೆ ಮಂಗಳವುಂಟಾಗುತ್ತದೆ. ಅಲ್ಲಿ ಸ್ನಾನ ಮಾಡಿ ಜಲಪಾನವನ್ನು ಮಾಡಿದರಂತೂ ತನ್ನ ಕುಲವನ್ನು ಏಳು ತಲೆಗಳವರಿಗೆ ಉದ್ಧರಿಸುತ್ತಾನೆ.

೧೬. ಸತ್ಯವನ್ನೇ ನುಡಿಯುವವನು, ಕ್ರೋಧವಿಲ್ಲದವನು, ಹಿಂಸೆ ಮಾಡದವನು, ಧರ್ಮವನ್ನನುಸರಿಸುವವನು ತತ್ತ್ವವನ್ನು ತಿಳಿದವನು, ಗೋ ಬ್ರಾಹ್ಮಣರ ಹಿತದಲ್ಲಿ ಆಸಕ್ತನಾದವನು, ಗಂಗಾಯಮುನೆಗಳ ಮಧ್ಯದಲ್ಲಿ ಸ್ನಾನಮಾಡಿದರೆ ಪಾಪರಹಿತನಾಗುತ್ತಾನೆ.

೧೭. ಮನಸ್ಸಿಗೆ ಇಷ್ಟವಾದುದೆಲ್ಲವನ್ನೂ ಬೇಕಾದಷ್ಟು ಹೊಂದುತ್ತಾನೆ.

೧೮. ಬ್ರಹ್ಮಚರ್ಯವ್ರತನಿಷ್ಠನಾಗಿ ಪ್ರಯಾಗಕ್ಕೆ ಹೋಗಿ ಅಲ್ಲಿ ಪಿತೃದೇವತೆಗಳನ್ನು ತರ್ಪಣಾದಿಗಳಿಂದ ತೃಪ್ತಿಪಡಿಸಿದರೆ, ಇಷ್ಟಾರ್ಥಗಳನ್ನು ಹೊಂದಿ ಎಲ್ಲಿ ಬೇಕಾದರೂ ಅನುಭವಿಸುತ್ತಾನೆ.

ಈಪ್ಸಿತಾಂಲ್ಲಭತೇ ಕಾಮಾನ್ ಯತ್ರ ತತ್ರಾಭಿಜಾಯತೇ।
ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ।
ಸಮಾಗತಾ ಮಹಾಭಾಗಾ ಯಮುನಾ ಯತ್ರ ನಿಮ್ನಗಾ ॥೧೯॥
ತತ್ರಸನ್ನಿಹಿತೋ ನಿತ್ಯಂ ಸಾಕ್ಷಾದ್ದೇವೋ ಮಹೇಶ್ವರಃ।
ದುಷ್ಪ್ರಾಪಂ ಮಾನುಷ್ಯೈಃ ಪುಣ್ಯಂ ಪ್ರಯಾಗಂ ತು ಯುಧಿಷ್ಠಿರ ॥
ದೇವದಾನವಗಂಧರ್ವಾ ಋಷಯಸ್ಸಿದ್ಧಚಾರಣಾಃ।
ತತ್ರೋಪಸ್ಪೃಶ್ಯ ರಾಜೇಂದ್ರ ಸ್ವರ್ಗಲೋಕೇ ಸುಖಂ ಗತಾಃ ॥೨೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಏಕಚತ್ವಾರಿಂಶೋಽಧ್ಯಾಯಃ

---

೧೯–೨೦. ಮೂರುಲೋಕಪ್ರಸಿದ್ಧವಾದ ಯಮುನೆಯು ಹರಿಯುವ ಜಾಗದಲ್ಲಿ ಸಾಕ್ಷಾನ್ಮಹೇಶ್ವರನು ನೆಲಸಿರುವನು. ಆ ಪುಣ್ಯಭೂಮಿಯಾದ ಪ್ರಯಾಗಕ್ಷೇತ್ರವನ್ನು ಹೊಂದುವುದು ಮನುಷ್ಯರಿಗೆ ಕಷ್ಟಸಾಧ್ಯವಾದುದು.

೨೧. ದೇವತೆಗಳು, ದಾನವರು, ಗಂಧರ್ವರು, ಋಷಿಗಳು, ಸಿದ್ಧರು ಚಾರಣರು ಇವರೆಲ್ಲರೂ ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಸ್ವರ್ಗಲೋಕದಲ್ಲಿ ಸುಖಿಸುತ್ತಾರೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

अथ पद्मपुराणे आदिखण्डे द्विचत्वारिंशोऽध्यायः

॥ मार्कण्डेय उवाच ॥

शृणु राजन् प्रयागस्य माहात्म्यं पुनरेव तु ।
प्रयागे सर्वपापेभ्यो मुच्यते नात्र संशयः ॥ १ ॥
आर्तानां च दरिद्राणां निश्चितव्यवसायिनाम् ।
स्थानं मुक्त्वा प्रयागं तु नाक्षयं तु कदाचन ॥
गङ्गायमुनमासाद्य यस्तु प्राणान् परित्यजेत् ।
दीप्तकाञ्चनवर्णाभे विमाने सूर्यवर्चसि ॥ ३ ॥

---

ಪದ್ಮಪುರಾಣದ ಆದಿಖಂಡದ ನಲವತ್ತೆರಡನೆಯ ಅಧ್ಯಾಯವು

೧. ಮಾರ್ಕಂಡೇಯನು ಹೇಳುತ್ತಾನೆ ಎಲೈ ರಾಜನೇ, ಪ್ರಯಾಗದ ಮಾಹಾತ್ಮ್ಯೆಯನ್ನು ಇನ್ನೂ ಹೇಳುವೆನು, ಕೇಳು. ಆ ಪ್ರಯಾಗದಲ್ಲಿ ಇದ್ದರೆ ಮಾನವನ ಸಮಸ್ತಪಾಪಗಳೂ ನಾಶವಾಗುತ್ತವೆ. ಸಂಶಯವಿಲ್ಲ.

೨. ತೊಂದರೆಯಲ್ಲಿರುವವರು, ದರಿದ್ರರು ಇವರುಗಳಿಗೆ ಪ್ರಯಾಗವನ್ನು ಬಿಟ್ಟರೆ ಅಕ್ಷಯವಾದ ಜಾಗವು ಬೇರೊಂದಿಲ್ಲ.

೩-೪. ಗಂಗಾ ಯಮುನೆಗಳ ಮಧ್ಯದಲ್ಲಿ ಪ್ರಾಣಬಿಟ್ಟ ಮನುಷ್ಯನು ಪುಟವಿಕ್ಕಿದ ಚಿನ್ನದ ಕಾಂತಿಯಂತೆ, ಬೆಳಗುತ್ತಿರುವ ಸೂರ್ಯನಂತೆ ಪ್ರಕಾಶಮಾನವಾದ ವಿಮಾನದಲ್ಲಿ ಕುಳಿತು ಗಂಧರ್ವಾಪ್ಸರರ ಮಧ್ಯದಲ್ಲಿ

ಗಂಧರ್ವಾಪ್ಸರಸಾಂ ಮಧ್ಯೇ ಸ್ವರ್ಗೇ ಮೋದೇತ ಮಾನವಃ ।
ಈಪ್ಸಿತಾನ್ ಲಭತೇ ಕಾಮಾನ್ ವದಂತಿ ಋಷಿಪುಂಗವಾಃ ॥ ೪ ॥

ಸರ್ವರತ್ನಮಯೈರ್ದಿವ್ಯೈರ್ನಾನಾ ಧ್ವಜಸಮಾಕುಲೈಃ ।
ವರಾಂಗನಾಸಮಾಕೀರ್ಣೈರ್ಮೋದತೇ ಶುಭಲಕ್ಷಣೈಃ ॥ ೫ ॥

ಗೀತವಾದಿತ್ರನಿರ್ಘೋಷೈಃ ಪ್ರಸುಪ್ತಃ ಪ್ರತಿಬುಧ್ಯತೇ ।
ಯಾವನ್ನ ಸ್ಮರತೇ ಜನ್ಮ ತಾವತ್ಸ್ವರ್ಗೇ ಮಹೀಯತೇ ॥ ೬ ॥

ತತ್ರ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ।
ಹಿರಣ್ಯರತ್ನಸಂಪೂರ್ಣೇ ಸಮೃದ್ಧೇ ಜಾಯತೇ ಕುಲೇ ॥ ೭ ॥

ತದೇವ ಸ್ಮರತೇ ತೀರ್ಥಂ ಸ್ಮರಣಾತ್ತತ್ರ ಗಚ್ಛತಿ ।
ದೇಶಸ್ಥೋ ಯದಿ ವಾರಣ್ಯೇ ವಿದೇಶೇ ಯದಿ ವಾ ಗೃಹೇ ॥ ೮ ॥

---

ಸ್ವರ್ಗಲೋಕದಲ್ಲಿ ಸುಖಿಸುತ್ತಾ ತನ್ನ ಇಷ್ಟಾರ್ಥಗಳನ್ನೂ ಹೊಂದುತ್ತಾನೆಂದು ಋಷಿಗಳಲ್ಲಿ ಶ್ರೇಷ್ಠರಾದವರು ಹೇಳುತ್ತಾರೆ.

೫. ನಾನಾ ರತ್ನಖಚಿತವಾಗಿಯೂ, ಅನೇಕ ಪತಾಕಾದಿಗಳಿಂದ ಅಲಂಕೃತವಾಗಿಯೂ, ಉತ್ತಮ ಸ್ತ್ರೀಯರಿಂದ ನಿಬಿಡವಾಗಿಯೂ ಇರುವ ಶುಭಕರವಾದ ಸ್ಥಳದಲ್ಲಿ ಸುಖಪಡುತ್ತಾನೆ.

೬. ಪ್ರಾತಃಕಾಲದಲ್ಲಿ ಮಂಗಳಕರವಾದ ಸಂಗೀತ, ವಾದ್ಯ ಮುಂತಾದ ಸುಶ್ರಾವ್ಯಧ್ವನಿಯಿಂದ ಮಲಗಿದ್ದವನು ಎಚ್ಚರಗೊಳ್ಳುತ್ತಾನೆ. ಹಿಂದಿನ ಜನ್ಮವನ್ನು ಸ್ಮರಿಸುವವರಿಗೂ ಸ್ವರ್ಗದಲ್ಲಿ ಸುಖಿಸುತ್ತಾನೆ.

೭. ಸುಕರ್ಮವು ಕ್ಷಯಿಸಿದನಂತರ ಸ್ವರ್ಗದಿಂದ ಚ್ಯುತನಾಗಿ ಸರ್ವಸಂಪತ್ಸಮೃದ್ಧಿಯಾದ ಕುಲದಲ್ಲಿ ಹುಟ್ಟುತ್ತಾನೆ.

೮. ಈರೀತಿ ಹುಟ್ಟಿ ಅವನು ಊರಿನಲ್ಲಿರಲಿ, ಕಾಡಿನಲ್ಲಿರಲಿ, ಪರದೇಶದಲ್ಲಿರಲಿ, ಅಥವಾ ತನ್ನ ಮನೆಯಲ್ಲಿಯೇ ಇರಲಿ ಎಲ್ಲಿದ್ದರೂ ಆ ತೀರ್ಥದ ಸ್ಮರಣೆಯು ಅವನಿಗೆ ಉಂಟಾಗುತ್ತದೆ. ಅನಂತರ ಅಲ್ಲಿಗೆ ಹೋಗುತ್ತಾನೆ.

ಪ್ರಯಾಗಂ ಸ್ಮರಮಾತ್ರೋಽಪಿ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಸ ಬ್ರಹ್ಮಲೋಕಮಾಪ್ನೋತಿ ವದಂತಿ ಋಷಿಪುಂಗವಾಃ ॥ ೯ ॥

ಸರ್ವಕಾಮಫಲಾ ವೃಕ್ಷಾ ಮಹೀ ಯತ್ರ ಹಿರಣ್ಮಯೀ ।
ಋಷಯೋ ಮುನಯಸ್ಸಿದ್ಧಾ ಯತ್ರ ಲೋಕೇ ಸ ಗಚ್ಛತಿ ॥೧೦॥

ಸ್ತ್ರೀಸಹಸ್ರಾಕುಲೇ ರಮ್ಯೇ ಮಂದಾಕಿನ್ಯಾಸ್ತಟೇ ಶುಭೇ ।
ಮೋದತೇ ಋಷಿಭಿಸ್ಸಾರ್ಧಂ ಸ್ವಕೃತೇನೇಹ ಕರ್ಮಣಾ ॥೧೧॥

ಸಿದ್ಧಚಾರಣಗಂಧರ್ವೈಃ ಪೂಜ್ಯತೇ ದಿವಿ ದೈವತೈಃ ।
ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ॥೧೨॥

ತತಃ ಶುಭಾನಿ ಕರ್ಮಾಣಿ ಚಿಂತಯಾನಃ ಪುನಃ ಪುನಃ ।
ಗುಣವಾನ್ ವಿತ್ತಸಂಪನ್ನೋ ಭವತೀಹ ನ ಸಂಶಯಃ ॥೧೩॥

---

೯. ಯಾವ ಮನುಷ್ಯನು ಎಲ್ಲೇ ಇದ್ದು ಪ್ರಯಾಗವನ್ನು ಸ್ಮರಿಸುತ್ತಾ ಪ್ರಾಣಬಿಟ್ಟರೂ ಅವನು ಬ್ರಹ್ಮಲೋಕವನ್ನು ಹೊಂದುತ್ತಾನೆಂದು ಋಷಿಶ್ರೇಷ್ಠರು ಹೇಳುತ್ತಾರೆ.

೧೦. ಆ ಬ್ರಹ್ಮಲೋಕದಲ್ಲಿ ವೃಕ್ಷಗಳು ಬೇಕಾದ ಫಲಗಳನ್ನು ಕೊಡುವುವು. ಅಲ್ಲಿನ ಭೂಮಿಯು ಸುವರ್ಣಮಯವಾದುದು. ಅಲ್ಲಿ ಋಷಿಗಳೂ ಮುನಿಗಳೂ ಸಿದ್ಧರೂ ವಾಸಿಸುವರು. ಅಂತಹ ದಿವ್ಯ ಲೋಕಕ್ಕೆ ಪ್ರಯಾಗ ಸ್ಮರಣೆಮಾಡಿದ ಮನುಜನು ಹೋಗುವನು.

೧೧. ಸಾವಿರಾರು ಸ್ತ್ರೀಯರಿಂದ ಕೂಡಿದ ಮಂದಾಕಿನಿಯ ದಡದಲ್ಲಿ ತಾನು ಮಾಡಿದ ಪುಣ್ಯದಿಂದ ಋಷಿಗಳೊಡನೆ ಸುಖಿಸುತ್ತಾನೆ.

೧೨. ಸಿದ್ಧಚಾರಣಗಂಧರ್ವರಿಂದಲೂ ದೇವತೆಗಳಿಂದಲೂ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಾನೆ. ಸ್ವರ್ಗದಿಂದ ಚ್ಯುತನಾದನಂತರ ಜಂಬೂದ್ವೀಪದ ರಾಜನಾಗಿ ಹುಟ್ಟುತ್ತಾನೆ.

೧೩. ಆಮೇಲೆ ತಾನು ಮಾಡಿದ ಶುಭಕರ್ಮಗಳನ್ನು ಪದೇಪದೆ ಸ್ಮರಿಸುತ್ತಾ ಗುಣವಂತನಾಗಿಯೂ, ಧನವಂತನಾಗಿಯೂ ಲೋಕದಲ್ಲಿ ಹುಟ್ಟುತ್ತಾನೆ.

ಕರ್ಮಣಾ ಮನಸಾ ವಾಚಾ ಸತ್ಯಧರ್ಮಪ್ರತಿಷ್ಠಿತಃ ।
ಗಂಗಾಯಮುನಯೋರ್ಮಧ್ಯೇ ಯಸ್ತು ದಾನಂ ಪ್ರಯಚ್ಛತಿ ॥

ಸುವರ್ಣಮಣಿಮುಕ್ತಾಂ ವಾ ಯದಿ ಧಾನ್ಯಂ ಪ್ರತಿಗ್ರಹಂ ।
ಸ್ವಕಾರ್ಯೇ ಪಿತೃಕಾರ್ಯೇ ವಾ ದೇವತಾಭ್ಯರ್ಚನೇಽಪಿ ವಾ ॥೧೫॥

ನಿಷ್ಫಲಂ ತಸ್ಯ ತತ್ತೀರ್ಥಂ ಯಾವತ್ತತ್ಫಲಮಶ್ನುತೇ ।
ಏವಂ ತೀರ್ಥೇ ನ ಗೃಹ್ಣೀಯಾತ್ಪುಣ್ಯೇಷ್ವಾಯತನೇಷು ಚ ॥೧೬॥

ನಿಮಿತ್ತೇಷು ಚ ಸರ್ವೇಷು ಅಪ್ರಮತ್ತೋ ದ್ವಿಜೋ ಭವೇತ್ ।
ಕಪಿಲಾಂ ಪಾಟಲಾವರ್ಣಾಂ ಪ್ರಯಾಗೇ ಯಃ ಪ್ರಯಚ್ಛತಿ ॥೧೭॥

ಸ್ವರ್ಣಶೃಂಗೀಂ ರೌಪ್ಯಖುರಾಂ ಚೈಲಕಂಠೀಂ ಪಯಸ್ವಿನೀಂ ।
ಪ್ರಯಾಗೇ ಶ್ರೋತ್ರಿಯಂ ಸಾಧುಂ ಗ್ರಾಹಯಿತ್ವಾ ಯಥಾವಿಧಿ ॥

---

೧೪. ತ್ರಿಕರಣ ಶುದ್ಧನಾಗಿ ಧರ್ಮಾಚರಣೆಯಲ್ಲಿದ್ದು ಪ್ರಯಾಗದಲ್ಲಿ ದಾನಮಾಡಿದವನು ಮೇಲೆ ಹೇಳಿದಂತೆ ಧನವಂತನಾಗಿ ಹುಟ್ಟುತ್ತಾನೆ.

೧೫–೧೬. ಸುವರ್ಣಾದಿಗಳಿಂದ ಕೂಡಿರುವ ಧಾನ್ಯವನ್ನು ದಾನತೆಗದುಕೊಂಡರೆ ಅವನು ಆ ಕ್ಷೇತ್ರದಲ್ಲಿ ಆಚರಿಸಿದ ಪಿತೃಗಳ ಮತ್ತು ದೇವತೆಗಳ ಕರ್ಮವು ನಿಷ್ಫಲವಾಗುತ್ತದೆ. ಆ ದಾನದ ಫಲವಿರುವವರೆಗೂ ತೀರ್ಥಫಲ ಸಿಕ್ಕುವುದಿಲ್ಲ. ಆದುದರಿಂದ ತೀರ್ಥಗಳಲ್ಲೂ ಪುಣ್ಯಸ್ಥಳಗಳಲ್ಲಿಯೂ ದಾನ ತೆಗೆದುಕೊಳ್ಳ ಬಾರದು.

೧೭–೧೯. ಎಲ್ಲಾ ಪುಣ್ಯದಿನಗಳಲ್ಲಿಯೂ ಬ್ರಾಹ್ಮಣನು ಜಾಗರೂಕತೆಯಿಂದಿರಬೇಕು. ಕಪಿಲವರ್ಣದ ತುಂಬ ಹಾಲನ್ನು ಕೊಡುವ ಹಸುವಿಗೆ ಚಿನ್ನದ ಕೊಂಬಿನ ಗೊಣಸು, ಬೆಳ್ಳಿಯ ಕಾಲುಗೊರಸು, ಕತ್ತಿಗೆ ಗೆಜ್ಜೆಗಳು ಇವುಗಳಿಂದ ಅಲಂಕರಿಸಿ ಕರುವಿನೊಡನೆ, ಶುಭ್ರವಸ್ತ್ರ ಧಾರಿಯಾಗಿಯೂ ಶಾಂತಮನಸ್ಕನಾಗಿಯೂ, ಧರ್ಮಜ್ಞನಾಗಿಯೂ ವೇದಾಧ್ಯಯ

ಶುಕ್ಲಾಂಬರಧರಂ ಶಾಂತಂ ಧರ್ಮಜ್ಞಂ ವೇದಪಾರಗಂ ।
ಸಾ ಗೌಸ್ತಸ್ಮೈ ಚ ದಾತವ್ಯಾ ಗಂಗಾಯಮುನಸಂಗಮೇ ॥೧೯॥

ವಾಸಾಂಸಿ ಚ ಮಹಾರ್ಹಾಣಿ ರತ್ನಾನಿ ವಿವಿಧಾನಿ ಚ ।
ಯಾವದ್ರೋಮಾಣಿ ತಸ್ಯಾ ಗೋಃ ಸಂತಿ ಗಾತ್ರೇಷು ಸತ್ತಮ ॥೨೦॥

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಯತ್ರ ಸಾ ಲಭತೇ ಜನ್ಮ ಸಾ ಗೌಸ್ತತ್ರಾಭಿಜಾಯತೇ ॥೨೧॥

ನ ಸ ಪಶ್ಯತ್ಯಸೌ ಘೋರಂ ನರಕಂ ತೇನ ಕರ್ಮಣಾ ।
ಉತ್ತರಾನ್ ಸ ಕುರೂನ್ಪ್ರಾಪ್ಯ ಮೋದತೇ ಕಾಲಮಕ್ಷಯಂ ॥೨೨॥

ಗವಾಂ ಶತಸಹಸ್ರೇಭ್ಯೋ ದದ್ಯಾದೇಕಾಂ ಪಯಸ್ವಿನೀಂ ।
ಪುತ್ರಾನ್ ದಾರಾಂಸ್ತಥಾ ಭೃತ್ಯಾನ್ ಗೌರೇಕಾ ಪ್ರತಿ ತಾರಯೇತ್ ॥೨೩॥

---

ನಸಂಪನ್ನನಾಗಿಯೂ ಇರವ ಶ್ರೋತ್ರಿಯನಾದ ಸಾಧುವಿಗೆ ಆ ಗೋವನ್ನು ಗಂಗಾಯಮುನೆಗಳ ಸಂಗಮಸ್ಥಳವಾದ ಪ್ರಯಾಗದಲ್ಲಿ ದಾನಮಾಡಬೇಕು.

೨೦. ಮತ್ತು ಆ ಶ್ರೋತ್ರಿಯನಿಗೆ ಅಮೂಲ್ಯವಾದ ವಸ್ತ್ರಗಳನೂ ಅನೇಕ ರತ್ನಗಳನ್ನೂ ಕೊಡಬೇಕು. ಹೀಗೆ ದಾನ ಮಾಡಿದರೆ, ಆ ಗೋವಿನ ದೇಹದಲ್ಲಿ ಎಷ್ಟು ರೋಮಗಳಿರುವವೋ ಅಷ್ಟು ಸಾವಿರವರ್ಷಗಳವರೆಗೆ ದಾನಮಾಡಿದ ಪುರುಷನು ಸ್ವರ್ಗದಲ್ಲಿ ಸುಖಿಸುತ್ತಾನೆ.

೨೧–೨೨. ಅವನು ಪುನಃ ಜನ್ಮ ತಾಳುವ ಜಾಗದಲ್ಲಿಯೇ ಆ ಹಸುವೂ ಹುಟ್ಟುತ್ತದೆ. ಈ ದಾನದ ಫಲದಿಂದ ಅವನಿಗೆ ಘೋರವಾದ ನರಕದರ್ಶನವು ಸಹ ಆಗುವುದಿಲ್ಲ. ಉತ್ತರಕುರುದೇಶದಲ್ಲಿ ಹುಟ್ಟಿ ಬಹುಕಾಲದವರೆಗೆ ಸುಖಿಸುತ್ತಾನೆ.

೨೩. ಅನೇಕ ಗೋವುಗಳ ದಾನಕ್ಕಿಂತ ಒಂದು ಕರೆಯುವ ಹಸುವಿನ ದಾನವು ಉತ್ತಮವಾದುದು. ಅದು ಹೆಂಡತಿ, ಮಕ್ಕಳು, ಭೃತ್ಯರು ಇವರುಗಳನ್ನು ಉದ್ಧರಿಸುತ್ತದೆ.

ತಸ್ಮಾತ್ಸರ್ವೇಷು ದಾನೇಷು ಗೋದಾನಂ ತು ವಿಶಿಷ್ಯತೇ ।
ದುರ್ಗಮೇ ವಿಷಮೇ ಘೋರೇ ಮಹಾಪಾತಕಸಂಭವೇ ।
ಗೌರೇವ ರಕ್ಷಾಂ ಕುರುತೇ ತಸ್ಮಾದ್ದೇಯಾ ದ್ವಿಜಾಯತೇ ॥೨೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಿಚತ್ವಾರಿಂಶೋಽಧ್ಯಾಯಃ

---

೨೪. ಎಲ್ಲಾ ದಾನಕ್ಕಿಂತಲೂ ಗೋದಾನವು ಶ್ರೇಷ್ಠವಾದುದು. ಎಂತಹ ಕಷ್ಟಗಳಲ್ಲಾಗಲಿ, ಎಂತಹ ಪಾತಕಗಳಲ್ಲಾಗಲಿ, ಗೋದಾನ ಫಲವೇ ರಕ್ಷಿಸುವುದು. ಆದುದರಿಂದ ಗೋವನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ
ಆದಿಖಂಡದ ನಲವತ್ತೆರಡನೆಯ ಅಧ್ಯಾಯವು ಮುಗಿಯಿತು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ತ್ರಿಚತ್ವಾರಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

**ಯಥಾ ಪ್ರಯಾಗಸ್ಯ ಮುನೇ ಮಾಹಾತ್ಮ್ಯಂ ಕಥಿತಂ ತ್ವಯಾ ।**
**ತಥಾ ಯಥಾ ಪ್ರಮುಚ್ಯೇಽಹಂ ಸರ್ವಪಾಪೈರ್ನ ಸಂಶಯಃ ॥ ೧ ॥**
**ಭಗವನ್ ಕೇನ ವಿಧಿನಾ ಗಂತವ್ಯಂ ಧರ್ಮನಿಶ್ಚಯೈಃ ।**
**ಪ್ರಯಾಗೇ ಯೋ ವಿಧಿಃ ಪ್ರೋಕ್ತಃ ತಂ ಮೇ ಬ್ರೂಹಿ ಮಹಾಮುನೇ॥**

॥ ಮಾರ್ಕಂಡೇಯ ಉವಾಚ ॥

**ಕಥಯಿಷ್ಯಾಮಿ ತೇ ವತ್ಸ ತೀರ್ಥಯಾತ್ರಾವಿಧಿಕ್ರಮಂ ।**
**ಯೋ ಗಚ್ಛೇತ ಕುರುಶ್ರೇಷ್ಠ ಪ್ರಯಾಗಂ ದೇವಸಂಯುತಂ ॥**
**ಬಲೀವರ್ದಂ ಸಮಾರೂಢಃ ಶೃಣು ತಸ್ಯಾಪಿ ಯತ್ಫಲಂ ॥ ೩ ॥**

---

### ಪದ್ಮ ಪುರಾಣದ ಆದಿಖಂಡದ ನಲವತ್ಮೂರನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳುತ್ತಾನೆ: ಎಲೈ ಮುನಿಗಳೆ: ಪ್ರಯಾಗದ ಮಾಹಾತ್ಮೆಯನ್ನು ಹೇಳಿದಿರಿ. ನಾನು ಸಮಸ್ತಪಾಪದಿಂದ ಪಾರಾಗುವ ರೀತಿಯೂ ಗೊತ್ತಾಯಿತು.

೨. ಸ್ವಾಮಿ, ಅಲ್ಲಿಗೆ ಯಾವ ವಿಧಾನದಿಂದ ಹೋಗಬೇಕು. ಪ್ರಯಾಗದಲ್ಲಿ ಮಾಡಬೇಕಾದ ವಿಧಿನಿಯಮಗಳಾವವು? ಇವೆಲ್ಲವನ್ನೂ ದಯವಿಟ್ಟು ಹೇಳಬೇಕು.

೩. ಮಾರ್ಕಂಡೇಯನು ಹೇಳುತ್ತಾನೆ: ತೀರ್ಥಯಾತ್ರೆಯ ವಿಧಿಯ ರೀತಿಯನ್ನು ಹೇಳುತ್ತೇನೆ, ಕೇಳು. ದೇವತೆಗಳಿಂದ ಕೂಡಿರುವ ಪ್ರಯಾಗವನ್ನು ಯಾವನು ಎತ್ತಿನ ಮೇಲೆ ಕುಳಿತುಕೊಂಡು ಹೊಂದುತ್ತಾನೆಯೋ ಅವನಿಗಾಗುವ ಫಲವನ್ನು ಕೇಳು.

ವಸತೇ ನರಕೇ ಘೋರೇ ಗವಾಂ ಕ್ರೋಧೇ ಸುದಾರಣೇ।
ಸಲಿಲಂ ಚ ನ ಗೃಹ್ಣಂತಿ ಪಿತರಸ್ತಸ್ಯ ದೇಹಿನಃ ॥ ೪ ॥

ಯಸ್ತು ಪುತ್ರಾಂಸ್ತಥಾ ಬಾಲಾನ್ ಸ್ನಾಪಯೇತ್ಪಾಯಯೇತ್ತಥಾ।
ಯಥಾಽಽತ್ಮಾನಃ ತಥಾ ಸರ್ವಾನ್ ದಾನಂ ವಿಪ್ರೇಷು ದಾಪಯೇತ್ ॥
ಐಶ್ವರ್ಯಂ ಲಭತೇ ಚಾಗ್ರ್ಯಂ ಬ್ರಹ್ಮಲೋಕೇ ಮಹೀಯತೇ ॥ ೫ ॥

ಐಶ್ವರ್ಯಲೋಭಾನ್ಮೋಹಾದ್ವಾ ಗಚ್ಛೇದ್ಯಾನೇನ ಯೋ ನರಃ।
ನಿಷ್ಫಲಂ ತಸ್ಯ ತತ್ತೀರ್ಥಂ ತಸ್ಮಾದ್ಯಾನಂ ಪರಿತ್ಯಜೇತ್ ॥ ೬ ॥

ಗಂಗಾಯಮುನಯೋರ್ಮಧ್ಯೇ ಯಸ್ತು ಕನ್ಯಾಂ ಪ್ರಯಚ್ಛತಿ।
ಆರ್ಷೇಣ ತು ವಿಧಾನೇನ ಯಥಾವಿಭವಸಂಭವಂ ॥ ೭ ॥

ನ ಪಶ್ಯತಿ ಯಮಂ ಘೋರಂ ನರಕಂ ತೇನ ಕರ್ಮಣಾ।
ಉತ್ತರಾನ್ ಸ ಕುರೂನ್ ಗತ್ವಾ ಮೋದತೇ ಕಾಲಮಕ್ಷಯಂ ॥ ೮ ॥

---

೪. ಅವನು ಘೋರವಾದ ನರಕದಲ್ಲಿ ಬೀಳುತ್ತಾನೆ. ಹಸುಗಳು ಅವನ ಮೇಲೆ ಕೋಪಗೊಳ್ಳುತ್ತವೆ. ಅವನ ಪಿತೃಗಳು ಅವನುಕೊಡುವ ತರ್ಪಣವನ್ನು ಸ್ವೀಕರಿಸುವುದಿಲ್ಲ.

೫. ಯಾವನು ಮಕ್ಕಳನ್ನೂ ಹುಡುಗರನ್ನೂ ಸ್ನಾನಮಾಡಿಸಿ ನೀರು ಕುಡಿಸುತ್ತಾನೆಯೋ ಮತ್ತು ತಾನು ಕೊಟ್ಟಂತೆಯೇ ಅವರಿಂದಲೂ ಬ್ರಾಹ್ಮಣರಿಗೆ ದಾನಕೊಡಿಸುತ್ತಾನೆಯೋ ಅವನು ಉತ್ತಮವಾದ ಐಶ್ವರ್ಯವನ್ನು ಹೊಂದಿ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೬. ಐಶ್ವರ್ಯದ ಹೆಮ್ಮೆಯಿಂದಲಾಗಲಿ, ಅಜ್ಞಾನದಿಂದಲಾಗಲಿ ವಾಹನಾರೂಢನಾಗಿ ಹೋದರೆ ಆ ತೀರ್ಥವು ಅವನಿಗೆ ಫಲಿಸುವುದಿಲ್ಲ. ಆದುದರಿಂದ ಯಾನಾರೋಹಣ ಕೂಡದು.

೭-೮. ಗಂಗಾಯಮುನೆಗಳ ಮಧ್ಯದಲ್ಲಿ ಪೂರ್ವಾಚಾರವಿಧಾನದಿಂದ ಕನ್ಯಾದಾನ ಮಾಡಿದರೆ ಆ ಪುಣ್ಯದಿಂದ ಸ್ವರ್ಗವನ್ನು ಹೊಂದುತ್ತಾನೆ ಉತ್ತರಕುರುವಿನಲ್ಲಿ ಹುಟ್ಟಿ ಅನೇಕಕಾಲದವರಿಗೂ ಸುಖಿಸುತ್ತಾನೆ.

ಪುತ್ರಾಂಸ್ತು ದಾರಾಂಲ್ಲಭತೇ ಧಾರ್ಮಿಕಾನ್ನಯಸಂಯುತಾನ್ ।
ತತ್ರ ದಾನಂ ಪ್ರದಾತವ್ಯಂ ಯಥಾವಿಭವಸಂಭವಃ ॥ ೯ ॥

ತೇನ ತೀರ್ಥಫಲೇನೈವ ವರ್ಧತೇ ನಾತ್ರ ಸಂಶಯಃ ।
ಸ್ವರ್ಗೇ ತಿಷ್ಠತಿ ರಾಜೇಂದ್ರ ಯಾವದಾಭೂತಸಂಪ್ಲವಂ ॥ ೧೦ ॥

ವಟಮೂಲಂ ಸಮಾಶ್ರಿತ್ಯ ಯಸ್ತು ಪ್ರಾಣಾನ್ಪರಿತ್ಯಜೇತ್ ।
ಸರ್ವಲೋಕಾನತಿಕ್ರಮ್ಯ ರುದ್ರಲೋಕಂ ಸ ಗಚ್ಛತಿ ॥ ೧೧ ॥

ತತ್ರ ತೇ ದ್ವಾದಶಾದಿತ್ಯಾಸ್ತಪಂತಿ ರುದ್ರಮಾಶ್ರಿತಾಃ ।
ನಿರ್ದಹಂತಿ ಜಗತ್ಸರ್ವಂ ವಟಮೂಲಂ ನ ದಹ್ಯತೇ ॥ ೧೨ ॥

ನಷ್ಟಚಂದ್ರಾರ್ಕಪವನಂ ಯದಾ ಚೈಕಾರ್ಣವಂ ಜಗತ್ ।
ಸ್ವಪಿತ್ಯತ್ರೈವ ವೈ ವಿಷ್ಣುರಿಜ್ಯಮಾನಃ ಪುನಃಪುನಃ ॥ ೧೩ ॥

---

೯. ಆ ಫಲದಿಂದ ಧಾರ್ಮಿಕರೂ ನೀತಿವಂತರೂ ಆದ ಹೆಂಡತಿ ಮಕ್ಕಳನ್ನು ಹೊಂದುತ್ತಾನೆ. ಆದುದರಿಂದ ಅಲ್ಲಿ ಯೋಗ್ಯತೆಗೆ ತಕ್ಕಂತೆ ದಾನಮಾಡಬೇಕು.

೧೦. ಆ ತೀರ್ಥಫಲದಿಂದಲೇ ಅವನು ವೃದ್ಧಿಹೊಂದುತ್ತಾನೆ. ಸಂಶಯವಿಲ್ಲ. ಪುನಃ ಪ್ರಳಯವಾಗುವವರೆಗೂ ಅವನು ಸ್ವರ್ಗಲ್ಲಿರುತ್ತಾನೆ.

೧೧. ಅಲ್ಲಿರುವ ವಟಮೂಲದಲ್ಲಿ ಪ್ರಾಣಬಿಟ್ಟರೆ ಎಲ್ಲ ಲೋಕಗಳನ್ನೂ ದಾಟಿ ರುದ್ರಲೋಕವನ್ನು ಹೊಂದುತ್ತಾನೆ.

೧೨. ರುದ್ರನನ್ನಾಶ್ರಯಿಸಿಕೊಂಡು ದ್ವಾದಶಾದಿತ್ಯರು ಅಲ್ಲಿರುವರು. ಅವರು ಲೋಕವೆಲ್ಲವನ್ನೂ ದಹಿಸುವವರಾದರೂ ವಟಮೂಲವನ್ನು ಮಾತ್ರ ದಹಿಸುವುದಿಲ್ಲ.

೧೩. ಚಂದ್ರಸೂರ್ಯರು ನಾಶಹೊಂದಿ ಜಗತ್ತೆಲ್ಲವೂ ಜಲಮಯವಾದಾಗ ವಟವನ್ನು ಪೂಜಿಸುತ್ತಾ ವಿಷ್ಣುವು ಇಲ್ಲೇ ಮಲಗುತ್ತಾನೆ.

ದೇವದಾನವಗಂಧರ್ವಾ ಋಷಯಸ್ಸಿದ್ಧಚಾರಣಾಃ।
ಸದಾ ಸೇವಂತಿ ತತ್ತೀರ್ಥಂ ಗಂಗಾಯಮುನಸಂಗಮೇ ॥ ೧೪ ॥

ತತ್ರ ಗಚ್ಛಂತಿ ರಾಜೇಂದ್ರ ಪ್ರಯಾಗೇ ಸಂಯುತಂ ಚ ಯತ್।
ತತ್ರ ಬ್ರಹ್ಮಾದಯೋ ದೇವಾ ದಿಶಶ್ಚೈವ ದಿಗೀಶ್ವರಾಃ ॥ ೧೫ ॥

ಲೋಕಪಾಲಾಶ್ಚ ಸಾಧ್ಯಾಶ್ಚ ಪಿತರೋ ಲೋಕಸಂಮತಾಃ।
ಸನತ್ಕುಮಾರಪ್ರಮುಖಾಸ್ತಥೈವ ಪರಮರ್ಷಯಃ ॥ ೧೬ ॥

ಅಂಗಿರಃ ಪ್ರಮುಖಾಶ್ಚೈವ ತಥಾ ಬ್ರಹ್ಮರ್ಷಯಃ ಪರೇ।
ತಥಾ ನಾಗಾಶ್ಚ ಸಿದ್ಧಾಶ್ಚ ಸುಪರ್ಣಾಃ ಖೇಚರಾಶ್ಚ ಯೇ ॥ ೧೭ ॥

ಸರಿತಸ್ಸಾಗರಾಶ್ಶೈಲಾ ನಾಗಾ ವಿದ್ಯಾಧರಾಸ್ತಥಾ।
ಹರಿಶ್ಚ ಭಗವಾನಾಸ್ತೇ ಪ್ರಜಾಪತಿಪುರಸ್ಕೃತಃ ॥ ೧೮ ॥

ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾ ಜಘನಂ ಸ್ಮೃತಂ।
ಪ್ರಯಾಗಂ ರಾಜಶಾರ್ದೂಲ ತ್ರಿಷು ಲೋಕೇಷು ವಿಶ್ರುತಂ ॥ ೧೯ ॥

---

೧೪. ದೇವದಾನವಗಂಧರ್ವರೂ, ಸಿದ್ಧಚಾರಣಋಷಿಗಳೂ ಗಂಗಾಯಮುನೆಗಳ ಸಂಗಮದ ತೀರ್ಥವನ್ನು ಯಾವಾಗಲೂ ಸೇವಿಸುತ್ತಾರೆ.

೧೫. ಎಲೈ ರಾಜನೇ, ಸಂಗಮದಲ್ಲಿರುವ ಆ ಪ್ರಯಾಗಕ್ಷೇತ್ರಕ್ಕೆ ಬ್ರಹ್ಮಾದಿದೇವತೆಗಳೂ, ದಿಕ್ಕುಗಳೂ ದಿಗೀಶ್ವರರೂ ಹೋಗುತ್ತಾರೆ.

೧೬–೧೮. ಲೋಕಪಾಲಕರು, ಸಾಧ್ಯರು, ಪಿತೃಗಳು, ಸನತ್ಕುಮಾರರು, ಋಷಿಗಳು, ಅಂಗೀರಸರೇ ಮೊದಲಾದ ಬ್ರಹ್ಮರ್ಷಿಗಳು, ನಾಗರು, ಸಿದ್ಧರು, ಸುಪರ್ಣರು, ಖೇಚರರು, ನದಿಗಳು, ಸಮುದ್ರಗಳು ನಾಗರು, ವಿದ್ಯಾಧರರು, ಬ್ರಹ್ಮನೊಡನೆ ವಿಷ್ಣುವು ಇವರೆಲ್ಲರೂ ಅಲ್ಲಿ ಇದ್ದಾರೆ.

೧೯. ಗಂಗಾಯಮುನೆಗಳ ಮಧ್ಯದಲ್ಲಿರುವ ಪ್ರದೇಶವು ಭೂಮಿಯ ಜಘನವೆನ್ನಿಸಿಕೊಳ್ಳುತ್ತದೆ. ಅದೇ ಪ್ರಯಾಗವು. ಇದು ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾಗಿದೆ.

ತತಃ ಪುಣ್ಯತಮಂ ನಾಸ್ತಿ ತ್ರಿಷು ಲೋಕೇಷು ಭಾರತ।
ಶ್ರವಣಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ।
ಮೃತ್ತಿಕಾಲಂಭನಾದ್ವಾಪಿ ನರಃ ಪಾಪಾತ್ಪ್ರಮುಚ್ಯತೇ ॥ ೨೦ ॥

ತತ್ರಾಭಿಷೇಕಂ ಯಃ ಕುರ್ಯಾತ್ಸಂಗಮೇ ಸಂಶಿತವ್ರತಃ।
ತುಲ್ಯಂ ಫಲಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೨೧ ॥

ನ ವೇದವಚನಾತ್ತಾತ ನ ಲೋಕವಚನಾದಪಿ।
ಮತಿರುತ್ಕ್ರಮಣೀ ಯಾತೇ ಪ್ರಯಾಗಗಮನಂ ಪ್ರತಿ ॥ ೨೨ ॥

ದಶತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾ ಪರಾಃ।
ಯೇಷಾಂ ಸಾನ್ನಿಧ್ಯಮತ್ರೈವ ಕೀರ್ತನಾತ್ಕುರುನಂದನ ॥ ೨೩ ॥

ಯಾ ಗತಿರ್ಯೋಗಯುಕ್ತಸ್ಯ ಸದುತ್ಥಸ್ಯ ಮನೀಷಿಣಃ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಮುನಸಂಗಮೇ ॥ ೨೪ ॥

---

೨೦. ಮೂರುಲೋಕದಲ್ಲಿಯೂ ಪ್ರಯಾಗಕ್ಕಿಂತ ಪುಣ್ಯತಮವಾದ ಕ್ಷೇತ್ರವು ಮತ್ತೊಂದಿಲ್ಲ. ಅದರ ಹೆಸರನ್ನು ಶ್ರವಣಮಾಡುವುದರಿಂದಲೂ, ಉಚ್ಚರಿಸುವುದರಿಂದಲೂ, ಅಲ್ಲಿನ ಮಣ್ಣನ್ನು ಬಳಿದುಕೊಳ್ಳುವುದರಿಂದಲೂ ಪಾಪವುಹೋಗುತ್ತದೆ.

೨೧. ಆ ಸಂಗಮದಲ್ಲಿ ಯಾರು ನಿಯಮದಿಂದ ಸ್ನಾನಮಾಡುತ್ತಾರೆಯೋ ಅವರು ರಾಜಸೂಯಾಶ್ವಮೇಧಗಳಿಗೆ ಸಮಾನವಾದ ಫಲವನ್ನೂ ಹೊಂದುತ್ತಾರೆ.

೨೨. ಪ್ರಯಾಗಕ್ಕೆ ಹೋಗುವ ಮನಸ್ಸನ್ನು ವೇದವಚನಗಳು ನಿಷೇಧಿಸಿದರೂ, ಜನಗಳು ಬೇಡವೆಂದರೂ ಅದನ್ನು ನಂಬದೆ ಖಂಡಿತ ಹೋಗು.

೨೩. ಹತ್ತು ಸಾವಿರ ತೀರ್ಥಗಳೂ, ಅರವತ್ತುಕೋಟಿ ತೀರ್ಥಗಳೂ ಈ ಪ್ರಯಾಗದ ಹೆಸರನ್ನು ಉಚ್ಚರಿಸಿದಮಾತ್ರಕ್ಕೆ ಇಲ್ಲೇ ಬರುತ್ತವೆ.

೨೪. ಸತ್ಕುಲ ಪ್ರಸೂತನಾದವನು ಯೋಗದಿಂದ ಪ್ರಾಣಗಳನ್ನು ಬಿಟ್ಟರೆ ಯಾವ ಸದ್ಗತಿಯು ಬರುವುದೋ ಅಂತಹ ಉತ್ತಮವಾದ ಗತಿಯು ಗಂಗಾಯಮುನೆಗಳ ಸಂಗಮದಲ್ಲಿ ಪ್ರಾಣಗಳನ್ನು ತ್ಯಜಿಸಿದವನಿಗೆ ಬರುವುದು.

**ತೇ ನ ಜೀವಂತಿ ಲೋಕೇಽಸ್ಮಿನ್ ಯತ್ರ ಯತ್ರ ಯುಧಿಷ್ಠಿರ।**
**ಯೇ ಪ್ರಯಾಗಂ ನ ಸಂಪ್ರಾಪ್ತಾಸ್ತ್ರಿಷು ಲೋಕೇಷು ವಿಶ್ರುತಂ॥**

**ಏವಂ ದೃಷ್ಟ್ವಾ ತು ತತ್ತೀರ್ಥಂ ಪ್ರಯಾಗಂ ಪರಮಂ ಪದಂ।**
**ಮುಚ್ಯತೇ ಸರ್ವಪಾಪೇಭ್ಯಃ ಶಶಾಂಕ ಇವ ರಾಹುಣಾ ॥ ೧೬ ॥**

**ಕಂಬಳಾಶ್ವತರೌ ನಾಗೌ ಯಮುನಾದಕ್ಷಿಣೇ ತಟೇ।**
**ತತ್ರ ಸ್ನಾತ್ವಾ ಚ ಪೀತ್ವಾ ಚ ಮುಚ್ಯತೇ ಸರ್ವಪಾತಕೈಃ ॥ ೧೭ ॥**

**ತತ್ರ ಗತ್ವಾ ತು ತತ್ಸ್ಥಾನಂ ಮಹಾದೇವಸ್ಯ ಧೀಮತಃ।**
**ನರಸ್ತಾರಯತೇ ಸರ್ವಾನ್ ದಶಾತೀತಾನ್ ದಶಾಪರಾನ್ ॥ ೧೮ ॥**

**ಕೃತ್ವಾಭಿಷೇಕಂ ತು ನರಃ ಸೋಽಶ್ವಮೇಧಫಲಂ ಲಭೇತ್।**
**ಸ್ವರ್ಗಲೋಕಮವಾಪ್ನೋತಿ ಯಾವದಾಭೂತಸಂಪ್ಲವಂ ॥ ೧೯ ॥**

---

೧೫. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಪ್ರಯಾಗಕ್ಷೇತ್ರಕ್ಕೆ ಹೋಗದವರು ಈ ಲೋಕದಲ್ಲಿದ್ದರೂ ಬದುಕಿರುವಂತೆ ಗಣನೆಯಿಲ್ಲ.

೧೬. ರಾಹುವು ಚಂದ್ರನನ್ನು ಬಿಟ್ಟುಹೋಗುವಂತೆ ಪ್ರಯಾಗಕ್ಷೇತ್ರದಲ್ಲಿ ಮನುಷ್ಯನನ್ನು ಅವನ ಪಾಪವು ಬಿಟ್ಟುಹೋಗುವುದು.

೧೭. ಯಮುನೆಯ ಬಲದಡದಲ್ಲಿ ಕಂಬಳಾಶ್ವತರವೆಂಬ ನಾಗಗಳಿವೆ. ಅಲ್ಲಿ ಸ್ನಾನಮಾಡಿದರೆ ಮತ್ತು ಜಲಪಾನ ಮಾಡಿದರೆ ಸರ್ವಪಾಪವೂ ಹೋಗುತ್ತದೆ.

೧೮. ಅಲ್ಲಿ ಮಹಾದೇವನಿರುವನು. ಅಲ್ಲಿಗೆ ಹೋಗಿ ಸ್ನಾನಮಾಡಿದರೆ ಮುಂದಿನೇಳುತಲೆ ಹಿಂದಿನೇಳುತಲೆಗಳವರಿಗೆ ತನ್ನ ಕುಲವನ್ನು ಉದ್ಧರಿಸುತ್ತಾನೆ.

೧೯. ಅಲ್ಲಿ ಸ್ನಾನಮಾಡಿದರೆ ಅಶ್ವಮೇಧಯಾಗದ ಫಲವನ್ನು ಹೊಂದಿ ಪ್ರಳಯಕಾಲದವರೆಗೂ ಸ್ವರ್ಗಲೋಕದಲ್ಲಿ ವಾಸಮಾಡುವನು.

ಪೂರ್ವಪಾರ್ಶ್ವೇ ತು ಗಂಗಾಯಾಸ್ತ್ರಿಷು ಲೋಕೇಷು ಭಾರತ।
ಕೂಪಂ ಚೈವ ತು ಸಾಮುದ್ರಂ ಪ್ರತಿಷ್ಠಾನಂ ಚ ವಿಶ್ರುತಂ ॥ ೩೦॥

ಬ್ರಹ್ಮಚಾರೀ ಜಿತಕ್ರೋಧಸ್ತ್ರಿರಾತ್ರಂ ಯದಿ ತಿಷ್ಠತಿ।
ಸರ್ವಪಾಪವಿಶುದ್ಧಾತ್ಮಾ ಸೋಽಶ್ವಮೇಧಫಲಂ ಲಭೇತ್ ॥ ೩೧॥

ಉತ್ತರೇಣ ಪ್ರತಿಷ್ಠಾನಾದ್ಭಾಗೀರಥ್ಯಾಸ್ತು ಪೂರ್ವತಃ।
ಹಂಸಪ್ರಪತನಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ॥ ೩೨॥

ಅಶ್ವಮೇಧಫಲಂ ತಸ್ಮಿನ್ ಸ್ನಾತಮಾತ್ರಸ್ಯ ಭಾರತ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವತ್ಸ್ವರ್ಗೇ ಮಹೀಯತೇ॥ ೩೩॥

ಊರ್ವಶೀಪುಲಿನೇ ರಮ್ಯೇ ವಿಪುಲೇ ಹಂಸಪಾಂಡುರೇ।
ಸಲಿಲೈಸ್ತರ್ಪಯೇದ್ಯಸ್ತು ಪಿತೄನ್ ತತ್ರ ವಿಮತ್ಸರಃ ॥ ೩೪॥

ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ।
ಸೇವೇತ ಪಿತೃಭಿಸ್ಸಾರ್ಧಂ ಸ್ವರ್ಗಲೋಕಂ ನರಾಧಿಪ ॥ ೩೫॥

---

೩೦–೩೧. ಗಂಗೆಗೆ ಪೂರ್ವದಿಕ್ಕಿನಲ್ಲಿ ಸಾಮುದ್ರಕೂಪವೆಂಬ ಜಾಗ ವಿದೆ. ಅಲ್ಲಿ ಬ್ರಹ್ಮಚರ್ಯಾದಿ ನಿಯಮದಿಂದ ಮೂರು ರಾತ್ರಿ ಇದ್ದರೆ ಪಾಪವೆಲ್ಲವೂ ಹೋಗಿ ಅಶ್ವಮೇಧಯಜ್ಞವನ್ನು ಮಾಡಿದ ಫಲವು ಬರುತ್ತದೆ.

೩೨–೩೩. ಆ ದೇವಸ್ಥಾನಕ್ಕೆ ಉತ್ತರದಿಕ್ಕಿದಲ್ಲಿ ಭಾಗೀರಥಿಗೆ ಪೂರ್ವ ದಿಕ್ಕಿನಲ್ಲಿ ಹಂಸಪ್ರಪತನವೆಂಬ ಪ್ರಸಿದ್ಧವಾದ ತೀರ್ಥವಿದೆ. ಅಲ್ಲಿ ಸ್ನಾನ ಮಾಡಿದರೆ ಸೂರ್ಯಚಂದ್ರರಿರುವವರೆಗೆ ಸ್ವರ್ಗದಲ್ಲಿ ಸುಖಿಸುತ್ತಾನೆ.

೩೪–೩೫. ರಮ್ಯವಾದುದೂ ಹಂಸಗಳಿಂದ ಶೋಭಿಸುತ್ತಿರುವುದೂ ಆದ ಊರ್ವಶೀಪುಲಿನವೆಂಬ ತೀರ್ಥದಲ್ಲಿ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ ಅರವತ್ತಾರುಸಾವಿರದ ಆರುನೂರು ಅರವತ್ತು ವರ್ಷಗಳವರೆಗೂ ಪಿತೃಗಳೊಡನೆ ಸ್ವರ್ಗಲೋಕದಲ್ಲಿ ಸುಖಿಸುವನು.

ಪೂಜ್ಯತೇ ಸತತಂ ತತ್ರ ಋಷಿಗಂಧರ್ವಕಿನ್ನರೈಃ ।
ತತಃ ಸ್ವರ್ಗಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ॥ ೩೬ ॥
ಊರ್ವಶೀಸದೃಶೀನಾಂ ತು ಕನ್ಯಾನಾಂ ಲಭತೇ ಶತಂ ।
ಗವಾಂ ಶತಸಹಸ್ರಾಣಾಂ ಭೋಕ್ತಾ ಭವತಿ ಭೂಮಿಪ ॥ ೩೭ ॥

ಕಾಂಚೀನೂಪುರಶಬ್ದೇನ ಸುಪ್ತೋಽಸೌ ಪ್ರತಿಬುಧ್ಯತೇ ।
ಭುಕ್ತ್ವಾ ತು ವಿಪುಲಾನ್ಭೋಗಾನ್ ತತ್ತೀರ್ಥಂ ಲಭತೇ ಪುನಃ ॥

ಕುಶಾಸನಧರೋ ನಿತ್ಯಂ ನಿಯತಃ ಸಂಯತೇಂದ್ರಿಯಃ ।
ಏಕಕಾಲಂ ತು ಭುಂಜಾನೋ ಮಾಸಂ ಭೋಗಪತಿರ್ಭವೇತ್ ॥

ಸುವರ್ಣಾಲಂಕೃತಾನಾಂ ತು ನಾರೀಣಾಂ ಲಭತೇ ಶತಂ ।
ಪೃಥಿವ್ಯಾಸ್ಸಸಮುದ್ರಾಯಾ ಮಹಾಭೋಗಪತಿರ್ಭವೇತ್ ॥ ೪೦ ॥

---

೩೬–೩೭. ಋಷಿಗಂಧರ್ವಕಿನ್ನರರಿಂದ ಪೂಜಿಸಲ್ಪಡುತ್ತಾ ಸ್ವರ್ಗದಲ್ಲಿದ್ದು, ತಾನು ಮಾಡಿದ ಪುಣ್ಯವು ತೀರಿದ ಮೇಲೆ ಸ್ವರ್ಗವನ್ನು ಬಿಟ್ಟು ಭೂಮಿಯಲ್ಲಿ ಜನ್ಮ ತಾಳಿ ಊರ್ವಶಿಗೆ ಸಮನಾದ ನೂರು ಜನ ಸುಂದರ ಕನ್ಯೆಯರನ್ನು ಹೊಂದುತ್ತಾನೆ. ಮತ್ತು ಅನೇಕಸಾವಿರ ಗೋವುಗಳ ಒಡೆಯನಾಗುತ್ತಾನೆ.

೩೮. ಕಾಂಚಿನೂಪುರಗಳ ಮೃದುಮಧುರವಾದ ಶಬ್ದಗಳನ್ನು ಕೇಳುತ್ತಾ ನಿದ್ರೆಯಿಂದ ಎಚ್ಚರಗೊಳ್ಳುತ್ತಾನೆ. ಈ ರೀತಿ ಅನೇಕ ಭೋಗಗಳನ್ನು ಅನುಭವಿಸಿ ಪುನಃ ಅದೇ ತೀರ್ಥವನ್ನು ಹೊಂದುತ್ತಾನೆ.

೩೯. ಜಿತೇಂದ್ರಿಯನಾಗಿ ದರ್ಭಾಸನದಲ್ಲಿ ಕುಳಿತುಕೊಂಡು ಒಂದು ತಿಂಗಳವರಿವಿಗೂ ಒಂದು ಹೊತ್ತು ಮಾತ್ರ ಭೋಜನಮಾಡುತ್ತಿದ್ದರೆ ಭೋಗಪತಿಯಾಗುತ್ತಾನೆ.

೪೦. ಸುವರ್ಣಾಭರಣಗಳಿಂದ ಅಲಂಕೃತರಾದ ಅನೇಕ ಸ್ತ್ರೀಯರನ್ನು ಹೊಂದುವುದಲ್ಲದೆ ಸಮುದ್ರಪರ್ಯಂತ ವಿಸ್ತರಿಸಿರುವ ಭೂಮಿಗೆಲ್ಲ ಒಡೆಯನಾಗಿ ಮಹಾಭೋಗವನ್ನು ಅನುಭವಿಸುವನು.

ದಶಗ್ರಾಮಸಹಸ್ರಾಣಾಂ ಭೋಕ್ತಾ ಭವತಿ ಭಾರತ।
ಕಾಂಚೀನೂಪುರಶಬ್ದೇನ ಸುಪ್ತೋಽಸೌ ಪ್ರತಿಬುಧ್ಯತೇ ॥ ೪೧॥
ಧನಧಾನ್ಯಸಮಾಯುಕ್ತೋ ದಾತಾ ಭವತಿ ನಿತ್ಯಶಃ ।
ಸ ಭುಕ್ತ್ವಾ ವಿಪುಲಾನ್ಭೋಗಾನ್ ತತ್ತೀರ್ಥಂ ಸ್ಮರತೇ ಪುನಃ ॥೪೨॥
ಅಥ ತಸ್ಮಿನ್ ವಟೇ ರಮ್ಯೇ ಬ್ರಹ್ಮಚಾರೀ ಜಿತೇಂದ್ರಿಯಃ ।
ಉಪೋಷ್ಯ ಯೋಗಯುಕ್ತಶ್ಚ ಬ್ರಹ್ಮಜ್ಞಾನಮವಾಪ್ನುಯಾತ್ ॥
ಕೋಟಿತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಕೋಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೪೪॥
ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ।
ಸುವರ್ಣಮಣಿಮುಕ್ತಾಢ್ಯೇ ಕುಲೇ ಭವತಿ ರೂಪವಾನ್ ॥೪೫॥

---

೪೧. ಹತ್ತುಸಾವಿರ ಗ್ರಾಮಗಳಿಗೆ ಅಧಿಪತಿಯಾಗಿ ಭೋಗಗಳನ್ನು ಅನುಭವಿಸುವನು. ನಿದ್ರೆಯಿಂದ ಏಳಬೇಕಾದರೆ ಸುಂದರಿಯರ ಕಾಂಚೀ ನೂಪುರಾದ್ಯಾಭರಣಗಳ ಮಂಜುಳಧ್ವನಿಯಿಂದ ಎಚ್ಚರಗೊಳ್ಳುವನು.

೪೨. ಧನಧಾನ್ಯಾದಿಸಂಪತ್ತಿನಿಂದ ಕೂಡಿ ನಿತ್ಯವೂ ದಾನಮಾಡುವ ದಾತನಾಗುತ್ತಾನೆ. ಅನೇಕಭೋಗಗಳನ್ನು ಅನುಭವಿಸಿ ಪುನಃ ಅದೇ ತೀರ್ಥವನ್ನು ಸ್ಮರಿಸುತ್ತಾನೆ.

೪೩. ಆ ವಟವೃಕ್ಷದ ಸಮೀಪದಲ್ಲಿ ಬ್ರಹ್ಮಚರ್ಯದಿಂದ ಜಿತೇಂದ್ರಿಯನಾಗಿ, ಉಪವಾಸಮಾಡುತ್ತಾ ಯೋಗಯುಕ್ತನಾಗಿದ್ದರೆ ಬ್ರಹ್ಮಜ್ಞಾನವನ್ನು ಪಡೆಯುವನು.

೪೪. ಕೋಟಿತೀರ್ಥದಲ್ಲಿ ಮೃತನಾದವನು ಸಾವಿರಕೋಟಿ ವರ್ಷಗಳವರೆಗೆ ಸ್ವರ್ಗದಲ್ಲಿ ಸುಖಿಸುತ್ತಾನೆ.

೪೫. ಪುಣ್ಯವು ತೀರಿದನಂತರ ಸ್ವರ್ಗದಿಂದ ಭ್ರಷ್ಟನಾಗಿ, ಸರ್ವಸಂಪತ್ಸಮೃದ್ಧವಾದ ಉತ್ತಮಕುಲದಲ್ಲಿ ರೂಪವಂತನಾಗಿ ಹುಟ್ಟುತ್ತಾನೆ.

ತತೋ ಭೋಗವತೀಂ ಗತ್ವಾ ವಾಸುಕೇರುತ್ತರೇಣ ತು ।
ದಶಾಶ್ವಮೇಧಕಂ ತತ್ರ ತೀರ್ಥಂ ತತ್ರಾಪರಂ ಭಜೇತ್ ॥೪೬॥

ಕೃತ್ವಾಭಿಷೇಕಂ ತು ನರಃ ಸೋಽಶ್ವಮೇಧಫಲಂ ಲಭೇತ್ ।
ಧನಾಢ್ಯೋ ರೂಪವಾನ್ ದಕ್ಷೋ ದಾತಾ ಭವತಿ ಧಾರ್ಮಿಕಃ ॥

ಚತುರ್ವೇದೇಷು ಯತ್ಪುಣ್ಯಂ ಸತ್ಯವಾದೇಷು ಯತ್ಫಲಂ ।
ಅಹಿಂಸಾಯಾಂ ತು ಯೋ ಧರ್ಮೋ ಗಮನಾದೇವ ತದ್ಭವೇತ್ ॥

ಕುರುಕ್ಷೇತ್ರಸಮಾ ಗಂಗಾ ಯತ್ರ ತತ್ರಾವಗಾಹ್ಯತೇ ।
ಕುರುಕ್ಷೇತ್ರಾದ್ದಶಗುಣಾ ಯತ್ರ ಸಿಂಧ್ವಾ ಸಮಾಗತಾ ॥೪೯॥

ಯತ್ರ ಗಂಗಾ ಮಹಾಭಾಗಾ ಬಹುತೀರ್ಥ ತಪೋಧನಾ ।
ಸಿದ್ಧಕ್ಷೇತ್ರಂ ಹಿ ತಜ್ಜ್ಞೇಯಂ ನಾತ್ರ ಕಾರ್ಯಾ ವಿಚಾರಣಾ ॥೫೦॥

---

೪೬. ಆಮೇಲೆ ಭೋಗವತಿಗೆ ಹೋಗಿ ವಾಸುಕಿತೀರ್ಥದಿಂದ ಉತ್ತರಕ್ಕೆ ಹೋದರೆ ದಶಾಶ್ವಮೇಧವೆಂಬ ಮತ್ತೊಂದು ತೀರ್ಥವಿರುವುದು.

೪೭. ಅಲ್ಲಿ ಸ್ನಾನಮಾಡಿದರೆ ಅಶ್ವಮೇಧಫಲವು ಬರುತ್ತದೆ. ಅಲ್ಲದೆ ಧನಾಢ್ಯನೂ ರೂಪವಂತನೂ ದಾತನೂ ಆಗುತ್ತಾನೆ.

೪೮. ನಾಲ್ಕು ವೇದಗಳ ಪಠನದಿಂದ ಬರುವ ಪುಣ್ಯವೂ, ಸತ್ಯವನ್ನೇ ನುಡಿಯುವುದರಿಂದ ಬರುವ ಪುಣ್ಯವೂ, ಅಹಿಂಸಾಚರಣೆಯಿಂದ ಬರುವ ಪುಣ್ಯವೂ ಆ ಕ್ಷೇತ್ರಕ್ಕೆ ಹೋಗುವುದರಿಂದ ಬರುತ್ತದೆ.

೪೯. ಗಂಗೆಯಲ್ಲಿ ಸ್ನಾನಮಾಡುವುದು ಕುರುಕ್ಷೇತ್ರಕ್ಕೆ ಸಮವಾದುದು. ಗಂಗಾಸಿಂಧುಗಳ ಸಂಗಮದಲ್ಲಿ ಸ್ನಾನಮಾಡಿದರೆ ಕುರುಕ್ಷೇತ್ರಕ್ಕಿಂತ ಹತ್ತರಷ್ಟು ಪುಣ್ಯವು ಬರುವುದು.

೫೦. ಗಂಗೆ ಎಲ್ಲಿರುವುದೋ ಅಲ್ಲಿ ಎಲ್ಲ ತೀರ್ಥಗಳೂ, ತಪಸ್ವಿಗಳೂ ಇರುವರು. ಅದು ಸಿದ್ಧಕ್ಷೇತ್ರವೆಂದು ತಿಳಿಯಬೇಕು. ಇದರಲ್ಲಿ ಸಂಶಯ ಪಡಬಾರದು.

ಕ್ಷಿತೌ ತಾರಯತೇ ಮರ್ತ್ಯಾನ್ ನಾಗಾಂಸ್ತಾರಯತೇಽಪ್ಯಧಃ ।
ದಿವಿ ತಾರಯತೇ ದೇವಾನ್ ತೇನ ಸಾ ತ್ರಿಪಥಾ ಸ್ಮೃತಾ ॥೫೧॥

ಯಾವದಸ್ಥೀನಿ ಗಂಗಾಯಾಂ ತಿಷ್ಠಂತಿ ತಸ್ಯ ದೇಹಿನಃ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೫೨॥

ತೀರ್ಥಾನಾಂ ತು ಪರಂ ತೀರ್ಥಂ ನದೀನಾಮುತ್ತಮಾ ನದೀ ।
ಮೋಕ್ಷದಾ ಸರ್ವಭೂತಾನಾಂ ಮಹಾಪಾತಕಿನಾಮಪಿ ॥೫೩॥

ಸರ್ವತ್ರ ಸುಲಭಾ ಗಂಗಾ ತ್ರಿಷು ಸ್ಥಾನೇಷು ದುರ್ಲಭಾ ।
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ ॥೫೪॥

ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ
ಸರ್ವೇಷಾಂ ಚೈವ ಭೂತಾನಾಂ ಪಾಪೋಪಹತಚೇತಸಾಂ ।
ಗತಿರನ್ಯತ್ರ ಮರ್ತ್ಯಾನಾಂ ನಾಸ್ತಿ ಗಂಗಾಸಮಾ ಗತಿಃ ॥೫೫॥

---

೫೧. ಈ ಗಂಗೆಯು ಅಂತರಿಕ್ಷದಲ್ಲಿ ದೇವತೆಗಳನ್ನೂ, ಭೂಮಿಯಲ್ಲಿ ಮನುಷ್ಯರನ್ನೂ, ಪಾತಾಳದಲ್ಲಿ ಸರ್ಪಗಳನ್ನೂ ಉದ್ಧರಿಸುವುದರಿಂದ ತ್ರಿಪಥೆಯೆಂದು ಹೇಳಲ್ಪಡುವುದು.

೫೨. ಮೃತನಾದ ಮನುಷ್ಯನ ಮೂಳೆಯು ಗಂಗೆಯಲ್ಲಿ ಎಲ್ಲಿಯವರೆಗೆ ಇರುವುದೋ ಅಷ್ಟು ಸಾವಿರ ವರ್ಷಗಳು ಸ್ವರ್ಗಲೋಕದಲ್ಲಿ ಸುಖಿಸುತ್ತಾನೆ.

೫೩. ಇದು ತೀರ್ಥಗಳಿಗೆಲ್ಲ ಉತ್ತಮತೀರ್ಥವು; ನದಿಗಳಲ್ಲಿ ಉತ್ತಮವಾದ ನದಿಯು; ಸಮಸ್ತಪ್ರಾಣಿಗಳಿಗೂ, ಮಹಾಪಾತಕವನ್ನು ಮಾಡಿದವರಿಗೂ ಸಹ ಮೋಕ್ಷವನ್ನು ಕೊಡುವಂತಹುದು.

೫೪. ಗಂಗೆಯು ಎಲ್ಲ ಕಡೆಯಲ್ಲಿಯೂ ಸುಲಭವು. ಆದರೆ ಗಂಗಾದ್ವಾರದಲ್ಲಿಯೂ, ಪ್ರಯಾಗದಲ್ಲಿಯೂ ಗಂಗಾಸಾಗರಗಳ ಸಂಗಮಸ್ಥಳದಲ್ಲಿಯೂ ದುರ್ಲಭವು. ಅಲ್ಲಿ ಸ್ನಾನಮಾಡಿದರೆ ಸ್ವರ್ಗವು ಲಭಿಸುತ್ತದೆ. ಅಲ್ಲಿ ಸತ್ತರೆ ಅವರಿಗೆ ಪುನರ್ಜನ್ಮವಿಲ್ಲ.

೫೫. ಸಮಸ್ತಪ್ರಾಣಿಗಳಿಗೂ, ಅದರಲ್ಲೂ ಪಾಪಿಗಳಾದ ಮನುಷ್ಯರಿಗೂ ಗಂಗೆಗೆ ಸಮಾನವಾದ ಗತಿ ಮತ್ತೊಂದಿಲ್ಲ.

**ಪವಿತ್ರಾಣಾಂ ಪವಿತ್ರಂ ಯಾ ಮಂಗಳಾನಾಂ ಚ ಮಂಗಳಂ ।**
**ಮಹೇಶ್ವರಶಿರೋಭ್ರಷ್ಟಾ ಸರ್ವಪಾಪಹರಾ ಶುಭಾ ॥೫೬॥**

---

**ಇತಿ ಶ್ರೀ ಮಹಾಪುರಾಣೇ ಪಾದ್ಮೇ**
**ಆದಿಖಂಡೇ ಪ್ರಯಾಗ ಮಹಾತ್ಮ್ಯೇ ತ್ರಿಚತ್ವಾರಿಂಶೋಽಧ್ಯಾಯಃ**

೫೬. ಮಹೇಶ್ವರನ ಶಿರಸ್ಸಿನಿಂದ ಜಾರಿ ಬೀಳುವ ಗಂಗೆಯು ಪವಿತ್ರ ವಸ್ತುಗಳಲ್ಲಿಯೂ ಅತಿ ಪವಿತ್ರವಾದುದು; ಮಂಗಳಗಳಲ್ಲಿ ಅತಿ ಶುಭ ಕರವಾದುದು. ಸಮಸ್ತಪಾಪಗಳನ್ನೂ ಪರಿಹರಿಸುವ ಪವಿತ್ರನದಿಯು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಪ್ರಯಾಗ ಮಹಾತ್ಮ್ಯೆಯಲ್ಲಿ ನಲವತ್ಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಚತುಶ್ಚತ್ವಾರಿಂಶೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ॥೧॥

ಮಾನಸಂ ನಾಮ ತತೀರ್ಥಂ ಗಂಗಾಯಾಮುತ್ತರೇ ತಟೇ ।
ತ್ರಿರಾತ್ರೋಪೋಷಿತೋ ಭೂತ್ವಾ ಸರ್ವಕಾಮಾನವಾಪ್ನುಯಾತ್ ॥

ಗೋಭೂಹಿರಣ್ಯದಾನೇನ ಯತ್ಫಲಂ ಪ್ರಾಪ್ನುಯಾನ್ನರಃ ।
ಏತತ್ಫಲಮವಾಪ್ನೋತಿ ತತ್ತೀರ್ಥಂ ಲಭತೇ ಪುನಃ ॥ ೩ ॥

---

ಪದ್ಮಪುರಾಣದ ಆದಿಖಂಡದ ನಲವತ್ತನಾಲ್ಕನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ, ಪ್ರಯಾಗಕ್ಷೇತ್ರದ ಮಾಹಾತ್ಮ್ಯೆಯನ್ನು ಇನ್ನೂ ಕೇಳು. ಅದನ್ನು ಕೇಳಿದರೆ ಪಾಪವೆಲ್ಲವೂ ನಾಶವಾಗುತ್ತದೆ. ಸಂಶಯವಿಲ್ಲ.

೨. ಗಂಗೆಯ ಉತ್ತರತೀರದಲ್ಲಿ ಮಾನಸವೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡಿ ಮೂರು ರಾತ್ರಿ ಉಪವಾಸವಿದ್ದರೆ ಸಮಸ್ತ ಇಷ್ಟಾರ್ಥಗಳೂ ಲಭಿಸುತ್ತವೆ.

೩. ಗೋವು, ಭೂಮಿ, ಸುವರ್ಣ ಇವುಗಳನ್ನು ದಾನಮಾಡಿದರೆ ಬರುವ ಪುಣ್ಯವನ್ನು ಈ ತೀರ್ಥದಲ್ಲಿ ಸ್ನಾನಮಾಡಿದರೆ ಹೊಂದುವನು. ಅಲ್ಲದೆ ಆ ತೀರ್ಥವನ್ನು ಮತ್ತೊಂದು ಬಾರಿ ಹೊಂದುವನು.

ಅಕಾಮೋ ವಾ ಸಕಾಮೋ ವಾ ಗಂಗಾಯಾಂ ಯೋ ವಿಪದ್ಯತೇ ।
ಮೃತಸ್ತು ಭವತಿ ಸ್ವರ್ಗೇ ನರಕಂ ಚ ನ ಪಶ್ಯತಿ ॥ ೪ ॥

ಅಪ್ಸರೋಗಣಸಂಗೀತೈಃ ಸುಪ್ತೋಽಸೌ ಪ್ರತಿಬುಧ್ಯತೇ ।
ಹಂಸಸಾರಸಯುಕ್ತೇನ ವಿಮಾನೇನ ಸ ಗಚ್ಛತಿ ॥ ೫ ॥

ಬಹುವರ್ಷಾಣಿ ರಾಜೇಂದ್ರ ಷಟ್ಸಹಸ್ರಾಣಿ ಭುಂಜತೇ ।
ತತಃ ಸ್ವರ್ಗಾತ್ಪರಿಭ್ರಷ್ಟಃ ಕ್ಷೀಣಕರ್ಮಾ ದಿವಶ್ಚ್ಯುತಃ ॥ ೬ ॥

ಸುವರ್ಣಮಣಿಮುಕ್ತಾಢ್ಯೇ ಜಾಯತೇ ತು ಮಹಾಕುಲೇ ।
ಷಷ್ಟಿತೀರ್ಥಸಹಸ್ರಾಣಿ ಷಷ್ಟಿತೀರ್ಥಶತಾನಿ ಚ ।
ಮಾಘೇ ಮಾಸಿ ಗಮಿಷ್ಯಂತಿ ಗಂಗಾಯಮುನಸಂಗಮೇ ॥ ೭ ॥

ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಂ ।
ಪ್ರಯಾಗೇ ಮಾಘಮಾಸೇ ತು ತ್ರ್ಯಹಂ ಸ್ನಾತಸ್ಯ ತತ್ಫಲಂ ॥ ೮ ॥

---

೪. ಇಷ್ಟವಿರಲಿ, ಇಲ್ಲದಿರಲಿ ಗಂಗೆಯಲ್ಲಿ ಮೃತನಾದವನು ಸ್ವರ್ಗವನ್ನು ಹೊಂದುತ್ತಾನೆ. ನರಕದದರ್ಶನ ಮಾಡುವುದೇ ಇಲ್ಲ.

೫. ಅಪ್ಸರಸ್ತ್ರೀಯರ ಸುಶ್ರಾವ್ಯ ಗಾನದಿಂದ ಅವನು ನಿದ್ರೆಯಿಂದೆಚ್ಚರಗೊಳ್ಳುತ್ತಾನೆ. ಹಂಸಸಾರಸಗಳಿಂದ ಯುಕ್ತವಾದ ವಿಮಾನದಲ್ಲಿ ಸಂಚರಿಸುತ್ತಾನೆ.

೬. ಈರೀತಿ ಬಹು ವರ್ಷಗಳು ಎಂದರೆ ಆರುಸಾವಿರ ವರ್ಷಗಳವರೆಗೆ ಸ್ವರ್ಗದಲ್ಲಿ ಸುಖವಾಗಿದ್ದು ಬಳಿಕ ಅಲ್ಲಿಂದ ಚ್ಯುತನಾಗಿ ಉತ್ತಮವಾದ ಸತ್ಕುಲದಲ್ಲಿ ಧನಸಂಪನ್ನನಾಗಿ ಜನಿಸುವನು.

೭. ಗಂಗಾಯಮುನೆಗಳ ಸಂಗಮದಲ್ಲಿ, ಮಾಘಮಾಸದಲ್ಲಿ ಅರವತ್ತಾರುಸಾವಿರ ತೀರ್ಥಗಳು ಬಂದು ಸೇರಿರುತ್ತವೆ.

೮. ಹತ್ತುಸಾವಿರ ಗೋದಾನಗಳನ್ನು ವಿಧ್ಯುಕ್ತವಾಗಿ ದಾನಮಾಡಿದ ಫಲವು, ಪ್ರಯಾಗಕ್ಷೇತ್ರದಲ್ಲಿ ಮಾಘಮಾಸದಲ್ಲಿ ಮೂರು ದಿವಿಸ ಸ್ನಾನಮಾಡುವುದರಿಂದ ಲಭಿಸುವುದು.

ಗಂಗಾಯಮುನಯೋರ್ಮಧ್ಯೇ ಪಂಚಾಗ್ನಿಂ ಯಸ್ತು ಸಾಧಯೇತ್
ಅಹೀನಾಂಗೋ ನಿರೋಗಶ್ಚ ಪಂಚೇಂದ್ರಿಯಸಮನ್ವಿತಃ ॥ ೯ ॥
ಯಾವಂತಿ ರೋಮಕೂಪಾಣಿ ತಸ್ಯ ಗಾತ್ರಸ್ಯ ದೇಹಿನಃ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೧೦॥
ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ।
ಸ ಭುಕ್ತ್ವಾ ವಿಪುಲಾನ್ಭೋಗಾನ್ ತತ್ತೀರ್ಥಂ ಭಜತೇ ಪುನಃ ॥೧೧॥
ಜಲ ಪ್ರವೇಶಂ ಯಃ ಕುರ್ಯಾತ್ಸಂಗಮೇ ಲೋಕವಿಶ್ರುತೇ ।
ರಾಹುಗ್ರಸ್ತೋ ಯಥಾ ಸೋಮೋ ವಿಮುಕ್ತಃ ಸರ್ವಪಾತಕೈಃ ॥
ಸೋಮಲೋಕಮವಾಪ್ನೋತಿ ಸೋಮೇನ ಸಹ ಮೋದತೇ ।
ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ॥೧೩॥

---

೯–೧೦. ಗಂಗಾಯಮುನೆಗಳ ಮಧ್ಯದಲ್ಲಿ ಪಂಜಾಗ್ನಿಮಧ್ಯದಲ್ಲಿ ತಪಸ್ಸನ್ನಾಚರಿಸಿದರೆ, ಅವನು ಅಂಗವಿಕಲನಾಗಿದ್ದರೂ, ರೋಗಿಷ್ಠನಾದರೂ ಅದರಿಂದ ಮುಕ್ತನಾಗಿ ಐದುಇಂದ್ರಿಯಗಳ ಪಾಟವಗಳಿಂದಲೂ ಕೂಡಿ ಆರೋಗ್ಯವಂತನಾಗುವನು. ಮತ್ತು ಅವನ ದೇಹದಲ್ಲಿ ಎಷ್ಟು ರೋಮ ಕೂಪಗಳಿರುವುವೋ ಅಷ್ಟು ಸಾವಿರ ವರ್ಷಗಳವರೆಗೆ ಸ್ವರ್ಗದಲ್ಲಿ ಸುಖಿಸುವನು.

೧೧. ಸ್ವರ್ಗದಿಂದ ಚ್ಯುತನಾದಮೇಲೆ ಜಂಬೂದ್ವೀಪದಲ್ಲಿ ರಾಜನಾಗಿ ಹುಟ್ಟುತ್ತಾನೆ. ಅನೇಕ ಭೋಗಗಳನ್ನು ಅನುಭವಿಸಿ ಪುನಃ ಅದೇ ತೀರ್ಥವನ್ನು ಹೊಂದುತ್ತಾನೆ.

೧೨. ಪ್ರಸಿದ್ಧವಾದ ಆ ಸಂಗಮದಲ್ಲಿ ಸ್ನಾನಮಾಡಿದರೆ ರಾಹುವಿನಿಂದ ಬಿಡಲ್ಪಟ್ಟ ಚಂದ್ರನಂತೆ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

೧೩. ಸೋಮಲೋಕವನ್ನು ಹೊಂದಿ ಸೋಮನೊಡನೆ ಅರವತ್ತಾರು ಸಾವಿರದ ಆರನೂರು ವರ್ಷಗಳವರೆಗೂ ಋಷಿಗಂಧರ್ವರಿಂದ ಸೇವಿಸಲ್ಪಡುತ್ತಾ ಸ್ವರ್ಗಲೋಕದಲ್ಲಿ ಸುಖದಿಂದಿರುವನು.

ಸ್ವರ್ಗಲೋಕಮವಾಪ್ನೋತಿ ಋಷಿಗಂಧರ್ವಸೇವಿತಃ ।
ಪರಿಭ್ರಷ್ಟಸ್ತು ರಾಜೇಂದ್ರ ಸಮೃದ್ಧೇ ಜಾಯತೇ ಕುಲೇ ॥೧೪॥

ಅಧಃಶಿರಸ್ತು ಯೋ ಜ್ವಾಲಾಮೂರ್ಧ್ವಪಾದಃ ಪಿಬೇನ್ನರಃ ।
ಶತಂ ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥೧೫॥

ಪರಿಭ್ರಷ್ಟಸ್ತು ರಾಜೇಂದ್ರ ಅಗ್ನಿಹೋತ್ರೀ ಭವೇನ್ನರಃ ।
ಭುಕ್ತ್ವಾ ತು ವಿಪುಲಾನ್ಭೋಗಾನ್ ತತ್ತೀರ್ಥಂ ಭಜತೇ ಪುನಃ ॥

ಯಸ್ತು ದೇಹಂ ವಿಕರ್ತಿತ್ವಾ ಶಕುನಿಭ್ಯಃ ಪ್ರಯಚ್ಛತಿ ।
ವಿಹಗೈರುಪಭುಕ್ತಸ್ಯ ಶೃಣು ತಸ್ಯಾಸ್ತಿ ಯತ್ಫಲಂ ॥೧೭॥

ಶತಂ ವರ್ಷಸಹಸ್ರಾಣಾಂ ಸೋಮಲೋಕೇ ಮಹೀಯತೇ ।
ತತಃ ಸ್ವರ್ಗಾತ್ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ॥೧೮॥

---

೧೪. ಪುಣ್ಯವು ತೀರಿದ ಮೇಲೆ ಸ್ವರ್ಗದಿಂದ ಚ್ಯುತನಾಗಿ ಭೂಮಿಯಲ್ಲಿ ಉತ್ತಮಧನಾಢ್ಯ ಕುಲದಲ್ಲಿ ಜನಿಸುತ್ತಾನೆ.

೧೫–೧೬. ಭೂಮಿಯಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ ಅದರಮೇಲೆ ಅಧೋಮುಖನಾಗಿಯೂ, ಕಾಲುಮೇಲಾಗಿಯೂ ಯಾವನು ತಪವನ್ನಾಚರಿಸುವನೋ ಅವನು ಒಂದು ಲಕ್ಷವರ್ಷಗಳವರೆಗೆ ಸ್ವರ್ಗದಲ್ಲಿದ್ದು ಬಳಿಕ ಈ ಲೋಕದಲ್ಲಿ ಅಗ್ನಿಹೋತ್ರಿಯಾಗಿ ಹುಟ್ಟಿ ಅನೇಕ ಭೋಗಗಳನ್ನು ಅನುಭವಿಸಿ ಪುನಃ ಅದೇ ತೀರ್ಥವನ್ನು ಹೊಂದುತ್ತಾನೆ.

೧೭. ಯಾವನು ತನ್ನ ದೇಹವನ್ನು ಕತ್ತರಿಸಿ ಪಕ್ಷಿಗಳಿಗೆ ಹಾಕುತ್ತಾನೆಯೋ ಅವನಿಗೆ ಉಂಟಾಗುವ ಫಲವನ್ನು ಹೇಳುತ್ತೇನೆ, ಕೇಳು.

೧೮–೧೯. ಅವನು ಒಂದು ಲಕ್ಷವರ್ಷಗಳು ಸೋಮಲೋಕದಲ್ಲಿ ಸುಖದಿಂದದ್ದು ಬಳಿಕ ಭೂಲೋಕದಲ್ಲಿ ಗುಣವಂತನೂ, ರೂಪಸಂಪ

ಗುಣವಾನ್ ರೂಪಸಂಪನೋ ವಿದ್ವಾನ್ ಸುಪ್ರಿಯದೇಹವಾನ್ ।
ಭುಕ್ತ್ವಾ ತು ವಿಪುಲಾನ್ಭೋಗಾನ್ ತತ್ತೀರ್ಥಂ ಭಜತೇ ಪುನಃ ॥
ಯಾಮುನೇ ಚೋತ್ತರೇ ಕೂಲೇ ಪ್ರಯಾಗಸ್ಯ ತು ದಕ್ಷಿಣೇ ।
ಋಣಪ್ರಮೋಚನಂ ನಾಮ ತೀರ್ಥಂ ತತ್ಪರಮಂ ಸ್ಮೃತಂ ॥೨೦॥
ಏಕರಾತ್ರೋಷಿತೋ ಭೂತ್ವಾ ಋಣೈಃ ಸರ್ವೈಃ ಪ್ರಮುಚ್ಯತೇ ।
ಸೂರ್ಯಲೋಕಮವಾಪ್ನೋತಿ ಅನೃಣೀ ಚ ಸದಾ ಭವೇತ್ ॥೨೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಪ್ರಯಾಗ ಮಹಾತ್ಮ್ಯೇ ಚತುಶ್ಚತ್ವಾರಿಂಶೋಧ್ಯಾಯಃ

---

ನ್ನನೂ, ವಿದ್ವಾಂಸನೂ ಉತ್ತಮ ಶರೀರವುಳ್ಳವನೂ ಧಾರ್ಮಿಕನೂ ಆದ ರಾಜನಾಗಿ ಜನಿಸಿ ಅನೇಕ ಭೋಗಗಳನ್ನು ಅನುಭವಿಸಿ ಪುನಃ ಆ ತೀರ್ಥವನ್ನೇ ಹೊಂದುತ್ತಾನೆ.

೨೦. ಯಮುನೆಯ ಉತ್ತರ ತೀರದಲ್ಲಿ ಪ್ರಯಾಗಕ್ಕೆ ದಕ್ಷಿಣದಿಕ್ಕಿನಲ್ಲಿ ಉತ್ತಮವಾದ ಋಣಪ್ರಮೋಚನವೆಂಬ ತೀರ್ಥವಿದೆ.

೨೧. ಒಂದು ರಾತ್ರಿ ಅಲ್ಲಿ ವಾಸವಾಗಿದ್ದರೆ ಋಣತ್ರಯದಿಂದ ಮುಕ್ತನಾಗಿ ಸೂರ್ಯಲೋಕವನ್ನು ಹೊಂದುತ್ತಾನೆ. ಮತ್ತು ಅವನು ಯಾವಾಗಲೂ ಋಣರಹಿತನಾಗಿಯೇ ಇರುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಪ್ರಯಾಗ ಮಹಾತ್ಮ್ಯೆಯಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಪಂಚಚತ್ವಾರಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಏತಚ್ಛ್ರುತ್ವಾ ಪ್ರಯಾಗಸ್ಯ ಯತ್ತ್ವಯಾ ಕೀರ್ತನಂ ಕೃತಂ ।
ವಿಶುದ್ಧಮೇತದ್ಧೃದಯಂ ಪ್ರಯಾಗಸ್ಯ ತು ಕೀರ್ತನಾತ್ ॥೧॥
ಅನಾಶಕಫಲಂ ಬ್ರೂಹಿ ಭಗವನ್ ತತ್ರ ಕೀದೃಶಂ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗೇ ತು ಅನಾಶಕಫಲಂ ವಿಭೋ ।
ಪ್ರಾಪ್ನೋತಿ ಪುರುಷೋ ಧೀಮಾನ್ ಶ್ರದ್ದಧಾನಶ್ಚ ಯಾದೃಶಂ ॥

ಅಹೀನಾಂಗೋ ವಿರೋಗಶ್ಚ ಪಂಚೇಂದ್ರಿಯಸಮನ್ವಿತಃ ।
ಅಶ್ವಮೇಧಫಲಂ ತಸ್ಯ ಗಚ್ಛತಸ್ತು ಪದೇ ಪದೇ ॥೩॥

---

ಪದ್ಮಪುರಾಣದ ಆದಿಖಂಡದ ನಲವತ್ತೈದನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳುತ್ತಾನೆ: ಈ ಪ್ರಯಾಗದ ಮಾಹಾತ್ಮ್ಯವನ್ನು ನಿಮ್ಮಿಂದ ಕೇಳಿ ನನ್ನ ಮನಸ್ಸು ಪರಿಶುದ್ಧವಾಯಿತು. ನಾಶವಾಗದ ಫಲವು ಎಂತಹದು? ಅದನ್ನು ದಯವಿಟ್ಟು ಹೇಳಿ.

೨ ಮಾರ್ಕಂಡೇಯನು ಹೇಳುತ್ತಾನೆ: ಪ್ರಯಾಗದ ಅನಾಶಕ ಫಲವನ್ನು ಕೇಳು. ಶ್ರದ್ಧೆಯುಳ್ಳವನು ಯಾವ ರೀತಿಯಾದ ಫಲವನ್ನುವನ್ನು ಹೊಂದುತ್ತಾನೆಂಬುದನ್ನು ವಿವರಿಸುತ್ತೇನೆ.

೩. ಹೀನಾಂಗನಾಗದೆ, ನೀರೋಗನಾಗಿ ಇಂದ್ರಿಯಗಳೂ ಗಟ್ಟಿಯಾಗಿದ್ದುಕೊಂಡಿರುವವನು ಹೋಗುವಾಗ ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲವನ್ನು ಹೊಂದುತ್ತಾನೆ.

ಕುಲಾನಿ ತಾರಯೇದ್ರಾಜನ್ ದಶಪೂರ್ವಾನ್ ದಶಾಪರಾನ್।
ಮುಚ್ಯತೇ ಸರ್ವಪಾಪೇಭ್ಯೋ ಗಚ್ಛೇತ ಪರಮಂ ಪದಂ ॥ ೪ ॥

॥ ಯುಧಿಷ್ಠಿರ ಉವಾಚ ॥

ಮಹಾಭಾಗೋಽಸಿ ಧರ್ಮಜ್ಞ ದಾನಂ ವದಸಿ ಮೇ ಪ್ರಭೋ।
ಅಲ್ಪೇನೈವ ಪ್ರದಾನೇನ ಬಹೂನ್ಧರ್ಮಾನವಾಪ್ನುಯಾತ್ ॥ ೫ ॥
ಅಶ್ವಮೇಧಸ್ತು ಬಹುಭಿಃ ಸುಕೃತೈಃ ಪ್ರಾಪ್ಯತೇ ಇಹ।
ಏವಂ ಮೇ ಸಂಶಯಂ ಬ್ರೂಹಿ ಪರಂ ಕೌತೂಹಲಂ ಹಿ ಮೇ ॥ ೬ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಮಹಾವೀರ ಯದುಕ್ತಂ ಪದ್ಮಯೋನಿನಾ।
ಋಷೀಣಾಂ ಸನ್ನಿಧೌ ಪೂರ್ವಂ ಕಥ್ಯಮಾನಂ ಮಯಾ ಶ್ರುತಂ ॥೭॥
ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಂ।
ಸಂಪ್ರವಿಷ್ಟಸ್ಯ ತದ್ಭೂಮಾವಶ್ವಮೇಧಃ ಪದೇ ಪದೇ ॥ ೮ ॥

---

೪. ತನ್ನ ಹಿಂದಿನ ಮತ್ತು ಮುಂದಿನ ಹತ್ತು ತಲೆಗಳವರೆಗೆ ತನ್ನ ಕುಲವನ್ನು ಉದ್ಧರಿಸುತ್ತಾನೆ. ಪಾಪರಹಿತನಾಗಿ ಉತ್ತಮಗತಿಯನ್ನು ಹೊಂದುತ್ತಾನೆ.

೫. ಯುಧಿಷ್ಠಿರನು ಹೇಳುತ್ತಾನೆ: ಎಲೈ ಧರ್ಮಜ್ಞನೇ, ನೀನು ಮಹಾನುಭಾವನಾಗಿದ್ದೀಯೆ, ದಾನಗಳೆಲ್ಲವನ್ನು ಹೇಳುತ್ತಿದ್ದೀಯೆ, ಅಲ್ಪದಾನದಿಂದ ಹೆಚ್ಚಾಗಿ ಧರ್ಮಬರುವ ವಿಧವನ್ನು ಹೇಳು.

೬. ಅಶ್ವಮೇದಯಾಗವನ್ನು ಮಾಡಬೇಕಾದರೆ ಬಹುಸುಕೃತವನ್ನು ಮಾಡಬೇಕೆಂದು ಕೇಳಿದ್ದೇನೆ. ಆ ವಿಷಯದಲ್ಲಿ ಸಂಶಯವಿದೆ, ಅದನ್ನು ಪರಿಹರಿಸು.

೭. ಮಾರ್ಕಂಡೇಯನು ಹೇಳುತ್ತಾನೆ: ಎಲೈ ವೀರನೇ, ಬ್ರಹ್ಮನು ಋಷಿಗಳಿಗೆ ಪೂರ್ವದಲ್ಲಿ ಹೇಳಿದುದನ್ನೇ ನಾನು ಕೇಳಿದ್ದೇನೆ. ಈಗ ನಾನು ನಿನಗೆ ಅದನ್ನೇ ಹೇಳುತ್ತೇನೆ.

೮. ಪ್ರಯಾಗದ ವಿಸ್ತಾರವು ಐದು ಯೋಜನಗಳಿವೆ. ಅದನ್ನು ತುಳಿದ ಮಾತ್ರದಿಂದಲೇ ಹೆಜ್ಜೆಹೆಜ್ಜೆಗೂ ಅಶ್ವಮೇಧ ಫಲವನ್ನು ಹೊಂದುತ್ತಾನೆ.

**ವ್ಯತೀತಾನ್ ಪುರುಷಾನ್ ಸಪ್ತ ಭವಿಷ್ಯಾಂಶ್ಚ ಚತುರ್ದಶ।**
**ನರಸ್ತಾರಯತೇ ಸರ್ವಾನ್ ಯಸ್ತು ಪ್ರಾಣಾನ್ಪರಿತ್ಯಜೇತ್ ॥೯॥**

**ಏವಂ ಜ್ಞಾತ್ವಾ ತು ರಾಜೇಂದ್ರ ಸದಾ ಶ್ರದ್ಧಾಪರೋ ಭವೇತ್।**
**ಅಶ್ರದ್ಧಧಾನಾಃ ಪುರುಷಾಃ ಪಾಪೋಪಹತಚೇತಸಃ**
**ನ ಪ್ರಾಪ್ನುವಂತಿ ತತ್ಸ್ಥಾನಂ ಪ್ರಯಾಗಂ ದೇವನಿರ್ಮಿತಂ ॥೧೦॥**

**॥ ಯುಧಿಷ್ಠಿರ ಉವಾಚ ॥**

**ಸ್ನೇಹಾದ್ವಾ ದ್ರವ್ಯಲೋಭಾದ್ವಾ ಯೇ ತು ಕಾಮವಶಂಗತಾಃ।**
**ಕಥಂ ತೀರ್ಥಫಲಂ ತೇಷಾಂ ಕಥಂ ಪುಣ್ಯಮವಾಪ್ನುಯುಃ ॥೧೧॥**

**ವಿಕ್ರಯಂ ಸರ್ವಭಾಂಡಾನಾಂ ಕಾರ್ಯಾಕಾರ್ಯಮಜಾನತಃ।**
**ಪ್ರಯಾಗೇ ಕಾ ಗತಿಸ್ತಸ್ಯ ಏವಂ ಬ್ರೂಹಿ ಮಹಾಮುನೇ ॥೧೨॥**

---

೯. ಅಲ್ಲದೆ ಅವನು ಹಿಂದಿನ ಏಳು ತಲೆಗಳವರಿಗೂ ಮುಂದಿನ ಏಳು ತಲೆಗಳವರಿಗೂ ಕುಲವನ್ನು ಆ ಸ್ಥಳದಲ್ಲಿ ಪ್ರಾಣಬಿಡುವುದರಿಂದ ಉದ್ಧರಿಸುತ್ತಾನೆ.

೧೦. ಇವೆಲ್ಲಕ್ಕೂ ಶ್ರದ್ಧೆಯೇ ಕಾರಣ. ಶ್ರದ್ಧೆಯಿಲ್ಲದ ಪಾಪಿಷ್ಠರು ದೇವನಿರ್ಮಿತವಾದ ಆ ಪ್ರಯಾಗವನ್ನು ಹೊಂದುವುದೇ ಇಲ್ಲ.

೧೧. ಯುಧಿಷ್ಠಿರನು ಹೇಳುತ್ತಾನೆ: ಸ್ನೇಹದಿಂದಾಗಲಿ, ಲೋಭದಿಂದಾಗಲಿ ಯಾರು ಇಂದ್ರಿಯಪರವಶರಾಗುವರೋ ಅವರಿಗೆ ತೀರ್ಥಫಲವು ಹೇಗೆ ಉಂಟಾಗುತ್ತದೆ? ಪುಣ್ಯವು ತಾನೇ ಹೇಗೆ ಲಭಿಸುತ್ತದೆ?

೧೨. ಎಲ್ಲಿ ಪದಾರ್ಥಗಳ ಮಾರಾಟಮಾಡುತ್ತಾ ಒಳ್ಳೆಯದು ಕೆಟ್ಟದ್ದು ಎಂಬುವುದನ್ನು ತಿಳಿಯದವನಿಗೆ ಪ್ರಯಾಗದಲ್ಲಿ ಉಂಟಾಗುವ ಗತಿಯೇನು! ಅದನ್ನು ಹೇಳು.

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಮಹಾಗುಹ್ಯಂ ಸರ್ವಪಾಪಪ್ರಣಾಶನಂ ।
ಮಾಸಂ ವಸಂಸ್ತು ರಾಜೇಂದ್ರ ಪ್ರಯಾಗೇ ನಿಯತೇಂದ್ರಿಯಃ॥೧೩॥

ಮುಚ್ಯತೇ ಸರ್ವ ಪಾಪೇಭ್ಯೋ ಯಥಾದಿಷ್ಟಂ ಸ್ವಯಂಭುವಾ ।
ಶುಚಿಸ್ತು ಪ್ರಯತೋ ಭೂತ್ವಾಽಹಿಂಸಕಃ ಶ್ರದ್ಧಯಾನ್ವಿತಃ।
ಮುಚ್ಯತೇ ಸರ್ವಪಾಪೇಭ್ಯಃ ಸ ಗಚ್ಛೇತ್ಪರಮಂ ಪದಂ ॥೧೪॥

ವಿಶ್ರಂಭಘಾತಕಾನಾಂ ತು ಪ್ರಯಾಗೇ ಶೃಣು ತತ್ಫಲಂ ।
ತ್ರಿಕಾಲಮೇವ ಸ್ನಾಯೀತ ಆಹಾರಂ ಭೈಕ್ಷ್ಯಮಾಚರೇತ್ ॥೧೫॥

ತ್ರಿಭಿರ್ಮಾಸೈಃ ಪ್ರಮುಚ್ಯೇತ ಪ್ರಯಾಗಾತ್ತು ನ ಸಂಶಯಃ ।
ಅಜ್ಞಾನೇನ ತು ಯಸ್ಯೇಹ ತೀರ್ಥಯಾತ್ರಾದಿಕಂ ಭವೇತ್ ॥೧೬॥

ಸರ್ವಕಾಮಸಮೃದ್ಧಸ್ತು ಸ್ವರ್ಗಲೋಕೇ ಮಹೀಯತೇ ।
ಸ್ಥಾನಂ ಸ ಲಬತೇ ನಿತ್ಯಂ ಧನಧಾನ್ಯಸಮಾಕುಲಂ ॥೧೭॥

---

೧೩. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ, ಇದು ಬಹು ರಹಸ್ಯವಾದುದು. ಸರ್ವಪಾಪಗಳೂ ನಾಶವಾಗುತ್ತವೆಂದು ಬ್ರಹ್ಮನು ಹೇಳಿದ್ದಾನೆ.

೧೪. ಶುಚಿರ್ಭೂತನಾಗಿಯೂ, ಶ್ರದ್ಧೆಯುಳ್ಳವನಾಗಿಯೂ, ಅಹಿಂಸಕನಾಗಿಯೂ ಇದ್ದರೆ ಎಲ್ಲಾ ಪಾಪಗಳೂ ನಾಶವಾಗಿ ಸ್ವರ್ಗವು ಲಭಿಸುತ್ತದೆ.

೧೫. ನಂಬಿಕೆದ್ರೋಹಮಾಡಿದವರು ತಮ್ಮ ಪಾಪಪರಿಹಾರಕ್ಕಾಗಿ ಅಲ್ಲಿ ತ್ರಿಕಾಲಗಳಲ್ಲಿಯೂ ಸ್ನಾನಮಾಡುತ್ತಾ ಭಿಕ್ಷಾವೃತ್ತಿಯಿಂದ ಜೀವಿಸಬೇಕು.

೧೬-೧೭. ಈರೀತಿ ಮಾಡಿದರೆ ಮೂರು ತಿಂಗಳಲ್ಲಿ ಅವರ ಪಾಪವು ಹೋಗುವುದು. ಅಜ್ಞಾನದಿಂದ ಯಾವನು ಈ ತೀರ್ಥಯಾತ್ರೆಗಳನ್ನು ಮಾಡುತ್ತಾನೆಯೋ, ಅವನು ಕೂಡ ಇಷ್ಟಾರ್ಥಗಳನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾನೆ. ಅಲ್ಲದೆ, ಧನಧಾನ್ಯಾದಿಸಮೃದ್ಧಿಯಾದ ಕುಲದಲ್ಲಿ ಜನಿಸುತ್ತಾನೆ.

ಏವಂ ಜ್ಞಾನೇನ ಸಂಪೂರ್ಣಃ ಸದಾ ಭವತಿ ಭೋಗವಾನ್ ।
ತಾರಿತಾಃ ಪಿತರಸ್ತೇನ ನರಕಾತ್ಪ್ರಪಿತಾಮಹಾಃ ॥೧೮॥

ಧರ್ಮಾನುಸಾರಿ ತತ್ತ್ವಜ್ಞ ಪೃಚ್ಛತಸ್ತೇ ಪುನಃ ಪುನಃ ।
ತ್ವತ್ಪ್ರಿಯಾರ್ಥಂ ಸಮಾಖ್ಯಾತಂ ಗುಹ್ಯಮೇತತ್ಸನಾತನಂ ॥೧೯॥

॥ ಯುಧಿಷ್ಠಿರ ಉವಾಚ ॥

ಅದ್ಯಮೇ ಸಫಲಂ ಜನ್ಮ ಅದ್ಯ ಮೇ ಸಫಲಂ ಕುಲಂ ।
ಪ್ರೀತೋಽಸ್ಮ್ಯನುಗ್ರಹೀತೋಽಸ್ಮಿ ದರ್ಶನಾದೇವ ತೇಽದ್ಯ ವೈ ॥
ತ್ವದ್ದರ್ಶನಾತ್ತು ಧರ್ಮಾತ್ಮನ್ ಮುಕ್ತೋಽಹಂ ಸರ್ವಪಾತಕೈಃ ॥

॥ ಮಾರ್ಕಂಡೇಯ ಉವಾಚ ॥

ದಿಷ್ಟ್ಯಾ ತೇ ಸಫಲಂ ಜನ್ಮ ದಿಷ್ಟ್ಯಾ ತೇ ತಾರಿತಂ ಕುಲಂ ।
ಕೀರ್ತನಾದ್ವರ್ಧತೇ ಪುಣ್ಯಂ ಶ್ರುತಂ ಪಾಪಪ್ರಣಾಶನಂ ॥೨೧॥

---

೧೮. ಸರಿಯಾದ ಶ್ರದ್ಧಾಜ್ಞಾನಾದಿಗಳಿಂದ ಯಾತ್ರೆಮಾಡಿದರೆ, ಅವನ ಪಿತೃಪಿತಾಮಹಾದಿಗಳು ನರಕದಿಂದ ಉದ್ಧೃತರಾಗುತ್ತಾರೆ.

೧೯. ನೀನು ಧರ್ಮವನ್ನು ಅನುಸರಿಸುವವನು, ತತ್ತ್ವರಹಸ್ಯವನ್ನು ತಿಳಿದವನು. ಇಂತಹ ನೀನು ಕೇಳಿದ್ದರಿಂದ ನಿನ್ನ ಹಿತಕ್ಕೋಸ್ಕರವಾಗಿ ಅತಿರಹಸ್ಯವಾದ ಇದನ್ನು ನಿನಗೆ ಹೇಳಿದ್ದೇನೆ.

೨೦. ಯುಧಿಷ್ಠಿರನು ಹೇಳುತ್ತಾನೆ: ಈಗ ನನ್ನ ಜನ್ಮವು ಸಾರ್ಥಕವಾಯಿತು. ಕುಲವು ಪವಿತ್ರವಾಯಿತು. ನಿನ್ನ ದರ್ಶನಮಾತ್ರದಿಂದಲೇ ನನಗೆ ಅನುಗ್ರಹವಾಗಿ ಸಂತೋಷಗೊಂಡಿರುವೆನು. ಅಲ್ಲದೆ ಎಲೈ ಧರ್ಮಾತ್ಮನೇ ನಿನ್ನ ದರ್ಶನದಿಂದ ನನಗೆ ಸರ್ವಪಾಪಗಳೂ ಹೋಗಿರುವುವು.

೨೧. ಮಾರ್ಕಂಡೇಯನು ಹೇಳುತ್ತಾನೆ: ನಿನ್ನ ಜನ್ಮವೂ, ಕುಲವೂ ಪವಿತ್ರವಾದುವು. ಪ್ರಯಾಗದ ಹೆಸರನ್ನು ಉಚ್ಚರಿಸುವುದರಿಂದ ಪುಣ್ಯವು ವೃದ್ಧಿಗೊಳ್ಳುವುದು. ಕೇಳುವುದರಿಂದ ಪಾಪಪರಿಹಾರವಾಗುವುದು.

॥ ಯುಧಿಷ್ಠಿರ ಉವಾಚ ॥

ಯಮುನಾಯಾಂ ತು ಕಿಂ ಪುಣ್ಯಂ ಕಿಂ ಫಲಂ ತು ಮಹಾಮುನೇ
ಏತನ್ಮೇ ಸರ್ವಮಾಖ್ಯಾಹಿ ಯಥಾದೃಷ್ಟಂ ಯಥಾಶ್ರುತಂ ॥೨೨॥

॥ ಮಾರ್ಕಂಡೇಯ ಉವಾಚ ॥

ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।
ಸಮಾಗತಾ ಮಹಾಭಾಗಾ ಯಮುನಾ ಯತ್ರ ನಿಮ್ನಗಾ ॥೨೩॥

ಯೇನೈವ ನಿಃಸೃತಾ ಗಂಗಾ ತೇನೈವ ಯಮುನಾ ಗತಾ ।
ಯೋಜನಾನಾಂ ಸಹಸ್ರೇಷು ಕೀರ್ತನಾತ್ಪಾಪನಾಶಿನೀ ॥೨೪॥

ತತ್ರ ಸ್ನಾತ್ವಾ ಚ ಪೀತ್ವಾ ಚ ಯಮುನಾಯಾಂ ಯುಧಿಷ್ಠಿರ ।
ಕೀರ್ತನಾಲ್ಲಭತೇ ಪುಣ್ಯಂ ದೃಷ್ಟ್ವಾ ಭದ್ರಾಣಿ ಪಶ್ಯತಿ ॥೨೫॥

---

೨೨. ಯುಧಿಷ್ಠಿರನು ಹೇಳುತ್ತಾನೆ: ಯಮುನಾನದಿಯಲ್ಲಿ ಸ್ನಾನ ಮಾಡುವುದರಿಂದ ಬರುವ ಪುಣ್ಯಫಲಗಳೆಂಥವು? ಎಂಬುದನ್ನು ನೀನು ಕಂಡುಕೇಳಿರುವಂತೆ ನನಗೆ ತಿಳಿಸು.

೨೩–೨೪. ಮಾರ್ಕಂಡೇಯನು ಹೇಳುತ್ತಾನೆ: ಸೂರ್ಯನ ಪುತ್ರಿಯಾದ ಯಮುನೆಯು ಮೂರು ಲೋಕದಲ್ಲಿಯೂ ಖ್ಯಾತಳಾಗಿದ್ದಾಳೆ. ಯಮುನೆಯು ಎಲ್ಲಿ ಹರಿಯುತ್ತದೆಯೋ ಅಲ್ಲೇ ಗಂಗೆಯೂ ಹರಿಯುತ್ತದೆ. ಯಮುನೆಯು ಹೊರಟ ಜಾಗದಿಂದಲೇ ಗಂಗೆಯೂ ಹೊರಟಿದೆ. ಸಾವಿರ ಯೋಜನಗಳ ದೂರದಿಂದಲಾದರೂ ಅದರ ಹೆಸರನ್ನು ಹೇಳಿದರೂ ಪಾಪನಾಶವಾಗುತ್ತದೆ.

೨೫–೨೬. ಆ ಯಮುನೆಯಲ್ಲಿ ಸ್ನಾನಮಾಡಿ ಉದಕಪಾನಮಾಡುವುದರಿಂದ ಮುಕ್ತಿಯುಂಟಾಗುತ್ತದೆ. ಅದರ ನಾಮೋಚ್ಚಾರಣೆಯಿಂದ ಪುಣ್ಯವೂ, ದರ್ಶನಮಾತ್ರದಿಂದ ಮಂಗಳವೂ, ಸ್ನಾನಪಾನದಿಗಳಿಂದ

ಅವಗಾಢಾ ಚ ಪೀತಾ ಚ ಪುನಾತ್ಯಾಸಪ್ತಮಂ ಕುಲಂ।
ಪ್ರಾಣಾನ್ ತ್ಯಜತಿ ಯಸ್ತ್ವತ್ರ ಸ ಯಾತಿ ಪರಮಾಂ ಗತಿಂ ॥೨೬॥
ಅಗ್ನಿತೀರ್ಥಮಿತಿ ಖ್ಯಾತಂ ಯಮುನಾದಕ್ಷಿಣೇ ತಟೇ।
ಪಶ್ಚಿಮೇ ಧರ್ಮರಾಜಸ್ಯ ತೀರ್ಥಂ ಹರವರಂ ಸ್ಮೃತಂ ॥೨೭॥
ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥
ಏವಂ ತೀರ್ಥ ಸಹಸ್ರಾಣಿ ಯಮುನಾ ದಕ್ಷಿಣೇ ತಟೇ।
ಉತ್ತರೇಣ ಪ್ರವಕ್ಷ್ಯಾಮಿ ಆದಿತ್ಯಸ್ಯ ಮಹಾತ್ಮನಃ ॥೨೮॥
ತೀರ್ಥಂ ತು ವಿರಜಂ ನಾಮ ಯತ್ರ ದೇವಾಃ ಸವಾಸವಾಃ।
ಉಪಾಸತೇ ಸ್ಮ ಸಂಧ್ಯಾಂ ತು ನಿತ್ಯಕಾಲಂ ಯುಧಿಷ್ಠಿರ ॥೨೯॥
ದೇವಾಸ್ಸೇವಂತಿ ತತ್ತೀರ್ಥಂ ಯೇ ಚಾನ್ಯೇ ವಿದುಷೋ ಜನಾಃ।
ಶ್ರದ್ದಧಾನಪರೋಭೂತ್ವಾ ಕುರು ತೀರ್ಥಾಭಿಷೇಚನಂ ॥೩೦॥

---

ಏಳು ತಲೆಗಳವರೆಗೆ ಕುಲಪವಿತ್ರವೂ ಆಗುವುದಲ್ಲದೆ ಅಲ್ಲಿ ಪ್ರಾಣಗಳನ್ನು ಬಿಡುವುದರಿಂದ ಉತ್ತಮಗತಿಯುಂಟಾಗುತ್ತದೆ.

೨೭. ಯಮುನೆಯ ದಕ್ಷಿಣದಲ್ಲಿ ಅಗ್ನಿತೀರ್ಥವಿದೆ. ಪಶ್ಚಿಮದಲ್ಲಿ ಧರ್ಮರಾಜ ತೀರ್ಥವಿದೆ. ಅಲ್ಲಿ ಸ್ನಾನಮಾಡಿದರೆ ಸ್ವರ್ಗಲೋಕ ಪ್ರಾಪ್ತಿಯಾಗುವುದು. ಅಲ್ಲಿ ಮೃತರಾದವರಿಗೆ ಪುನರ್ಜನ್ಮವಿಲ್ಲ.

೨೮. ಯಮುನೆಯ ದಕ್ಷಿಣತೀರದಲ್ಲಿರುವ ತೀರ್ಥಗಳನ್ನು ಹೇಳಿದ್ದಾಯಿತು. ಇನ್ನು ಉತ್ತರದಡದಲ್ಲಿರುವ ಆದಿತ್ಯ ತೀರ್ಥಗಳನ್ನು ಹೇಳುತ್ತೇನೆ, ಕೇಳು.

೨೯. ಉತ್ತರದಲ್ಲಿ ವಿರಜತೀರ್ಥವೆಂಬುದಿದೆ. ಅಲ್ಲಿ ಇಂದ್ರಾದಿ ದೇವತೆಗಳು, ಯಾವಾಗಲೂ ಸಂಧ್ಯಾದಿ ಕರ್ಮಗಳನ್ನು ಆಚರಿಸುತ್ತಾರೆ.

೩೦. ದೇವತೆಗಳೂ, ವಿದ್ವಜ್ಜನಗಳೂ ಆ ತೀರ್ಥವನ್ನು ಸೇವಿಸುತ್ತಾರೆ. ನೀನೂ ಸಹ ಶ್ರದ್ಧೆಯಿಂದ ಆ ತೀರ್ಥದಲ್ಲಿ ಸ್ನಾನಮಾಡು.

ಅನ್ಯೇ ಚ ಬಹವಸ್ತೀರ್ಥಾಃ ಸರ್ವಪಾಪಹರಾಃ ಶುಭಾಃ ।
ತೇಷು ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥

ಗಂಗಾ ಚ ಯಮುನಾಚ್ಚೈವ ಉಭೇ ತುಲ್ಯಫಲೇ ಸ್ಮೃತೇ ।
ಕೇವಲಂ ಶ್ರೇಷ್ಠಭಾವೇನ ಗಂಗಾ ಸರ್ವತ್ರ ಪೂಜ್ಯತೇ ॥೩೨॥

ಏವಂ ಕುರುಷ್ವ ಕೌಂತೇಯ ಸರ್ವತೀರ್ಥಾಭಿಷೇಚನಂ ।
ಯಾವಜ್ಜೀವ ಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥೩೩॥

ಯಸ್ತ್ವಿದಂ ಕಲ್ಯ ಉತ್ಥಾಯ ಪಠತೇ ಚ ಶೃಣೋತಿ ವಾ ।
ಮುಚ್ಯತೆ ಸರ್ವಪಾಪೇಭ್ಯಃ ಸ್ವರ್ಗಲೋಕಂ ಸಗಚ್ಛತಿ ॥೩೪॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಯಮುನ ಮಹಾತ್ಮ್ಯೇ ಪಂಚಚತ್ವಾರಿಂಶೋಽಧ್ಯಾಯಃ

---

೩೧. ಅಲ್ಲಿ ಪಾಪಹರಗಳಾದ ಇನ್ನೂ ಅನೇಕ ತೀರ್ಥಗಳಿವೆ. ಅಲ್ಲಿ ಸ್ನಾನಮಾಡಿದರೆ ಸ್ವರ್ಗವನ್ನು ಹೊಂದುವರು. ಅಲ್ಲಿ ಮೃತರಾದವರಿಗೆ ಪುನರ್ಜನ್ಮವಿಲ್ಲ.

೩೨. ಗಂಗೆ ಯಮುನೆಗಳೆರಡೂ ಸಮವಾದ ಫಲವುಳ್ಳವು. ಗಂಗೆಯನ್ನು ಶ್ರೇಷ್ಠಭಾವನೆಯಿಂದ ಎಲ್ಲೆಡೆಯಲ್ಲೂ ಪೂಜಿಸುತ್ತಾರೆ.

೩೩. ಈ ರೀತಿಯಾಗಿ ಎಲ್ಲ ತೀರ್ಥಗಳನ್ನೂ ಸೇವಿಸು. ಜೀವವಿರುವ ಪರ್ಯಂತ ಮಾಡಿದ ಪಾಪವೆಲ್ಲ ನಾಶವಾಗುತ್ತವೆ.

೩೪. ಪ್ರಾತಃಕಾಲದಲ್ಲಿ ಎದ್ದು ಯಾವನು ಇದನ್ನು ಪಠಿಸುತ್ತಾನೆಯೋ ಅಥವಾ ಶ್ರವಣಮಾಡುತ್ತಾನೆಯೋ ಅವನು ಸರ್ವಪಾಪರಹಿತನಾಗಿ ಸ್ವರ್ಗಲೋಕವನ್ನು ಹೊಂದುವನು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಯಮುನಾ ಮಹಾತ್ಮ್ಯೆಯಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಪದ್ಮಪುರಾಣೇ ಆದಿಖಂಡೇ ಷಟ್ಚತ್ವಾರಿಂಶೋಽಧ್ಯಾಯಃ

**॥ ಯುಧಿಷ್ಠಿರ ಉವಾಚ ॥**

**ಶ್ರುತಂ ಮೇ ಬ್ರಹ್ಮಣಾ ಪ್ರೋಕ್ತಂ ಪುರಾಣಂ ಪುಣ್ಯಸಂಮಿತಂ ।**
**ಕಥಾನಾಂ ತು ಸಹಸ್ರಾಣಿ ಶತಾನಿ ನಿಯುತಾನಿ ಚ ॥ ೧ ॥**

**ಸರ್ವೇ ಪುಣ್ಯಾಃ ಪವಿತ್ರಾಶ್ಚ ಗತಿಶ್ಚ ಪರಮಾ ಸ್ಮೃತಾ ।**
**ಪೃಥಿವ್ಯಾಂ ನೈಮಿಷಂ ಪುಣ್ಯಂ ಅಂತರಿಕ್ಷೇ ಚ ಪುಷ್ಕರಂ ॥ ೨ ॥**

**ಪ್ರಯಾಗಮಪಿ ಲೋಕಾನಾಂ ಕುರುಕ್ಷೇತ್ರಂ ವಿಶಿಷ್ಯತೇ ।**
**ಸರ್ವಾಣಿ ಸಂಪರಿತ್ಯಜ್ಯ ಕಥಮೇಕಂ ಪ್ರಶಂಸಸಿ ॥ ೩ ॥**

---

## ಪದ್ಮ ಪುರಾಣದ ಆದಿಖಂಡದ ನಲವತ್ತಾರನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳುತ್ತಾನೆ: ಬ್ರಹ್ಮನಿಂದ ಹೇಳಲ್ಪಟ್ಟ ಅನೇಕ ಕಥೆಗಳಿಂದ ಕೂಡಿದ ಪುರಾಣಗಳನ್ನು ಕೇಳಿದ್ದೇನೆ. ಅವುಗಳೆಲ್ಲವೂ ಪವಿತ್ರವೂ ಉತ್ತಮಗತಿಪ್ರದವೂ ಆಗಿವೆ.

೨. ಭೂಮಿಯಲ್ಲಿ ನೈಮಿಷಕ್ಷೇತ್ರವು ಪುಣ್ಯಪ್ರದವಾದುದು. ಅಂತರಿಕ್ಷದಲ್ಲಿ ಪುಷ್ಕರವು ಪವಿತ್ರವಾದುದು. ಪ್ರಯಾಗವು ಮೂರುಲೋಕಗಳಲ್ಲಿಯೂ ಉತ್ತಮವಾದುದು. ಕುರುಕ್ಷೇತ್ರವನ್ನಂತೂ ಹೇಳಬೇಕಾದುದಿಲ್ಲ. ಬಹು ಉತ್ತಮವಾದುದು.

೩. ಎಲ್ಲ ತೀರ್ಥಗಳನ್ನೂ ಬಿಟ್ಟು ಒಂದನ್ನೇ ಹೊಗಳುತ್ತೀಯಲ್ಲ! ಈ ಮಾತು ಸಕಾರಣವಾಗಿಲ್ಲ ನಂಬತಕ್ಕದ್ದಾಗಿಯೂ ಇಲ್ಲ.

ಅಪ್ರಮಾಣಮಿದಂ ಪ್ರೋಕ್ತಮಶ್ರದ್ಧೇಯಮನುತ್ತಮಂ ।
ಗತಿಂ ಚ ಪರಮಾಂ ದಿವ್ಯಾಂ ಭೋಗಾಂಶ್ಚೈವ ಯಥೇಪ್ಸಿತಾನ್ ॥
ಕಿಮರ್ಥಮಲ್ಪಯೋಗೇನ ಬಹುಧರ್ಮಂ ಪ್ರಶಂಸಸಿ ।
ಏವಂ ಮೇ ಸಂಶಯಂ ಬ್ರೂಹಿ ಯಥಾದೃಷ್ಟಂ ಯಥಾಶ್ರುತಂ ॥

॥ ಮಾರ್ಕಂಡೇಯ ಉವಾಚ ॥

ಅಶ್ರದ್ಧೇಯಂ ನ ವಕ್ತವ್ಯಂ ಪ್ರತ್ಯಕ್ಷಮಪಿ ತದ್ಭವೇತ್ ।
ನರಸ್ಯ ಶ್ರದ್ದಧಾನಸ್ಯ ಪಾಪೋಪಹತಚೇತಸಃ ॥
ಅಶ್ರದ್ದಧಾನೋ ಹ್ಯಶುಚಿರ್ದುರ್ಮತಿಸ್ತ್ಯಕ್ತಮಂಗಳಃ ॥ ೬ ॥
ಏತೇ ಪಾತಕಿನಸ್ಸರ್ವೇ ತೇನೇದಂ ಭಾಷಿತಂ ಮಯಾ ।
ಶೃಣು ಪ್ರಯಾಗಮಾಹಾತ್ಮ್ಯಂ ಯಥಾದೃಷ್ಟಂ ಯಥಾಶ್ರುತಂ ॥
ಪ್ರತ್ಯಕ್ಷಂ ಚ ಪರೋಕ್ಷಂ ಚ ಯಥಾನ್ಯತ್ಸಂಭವಿಷ್ಯತಿ
ಯಥೈವಾನ್ಯನ್ಮಯಾ ದೃಷ್ಟಂ ಪುರಾ ರಾಜನ್ಯಥಾಶ್ರುತಂ ॥ ೮ ॥

---

೪-೫. ಉತ್ತಮವಾದ ಗತಿಯೂ, ಇಷ್ಟವಾದ ಅನೇಕ ಭೋಗಗಳೂ ಈ ತೀರ್ಥದ ಅಲ್ಪಸೇವನೆಯಿಂದ ಬರುವವೆಂದು ಇದನ್ನು ಬಹುವಾಗಿ ಹೊಗಳುತ್ತಿರುವೆಯಲ್ಲ ಈ ಸಂಶಯವನ್ನು ನೀನು ಕಂಡು ಕೇಳಿರುವಂತೆ ನನಗೆ ಹೇಳಿ, ಪರಿಹಾರಮಾಡು.

೬. ಮಾರ್ಕಂಡೇಯನು ಹೇಳುತ್ತಾನೆ: ನಂಬಲನರ್ಹವೆಂದು ಹೇಳಬೇಡ ಅದು ಪ್ರತ್ಯಕ್ಷವಾಗಿಯೇ ಆಗುತ್ತದೆ. ಅವನು ಮಾತ್ರ ಶ್ರದ್ಧಾವಂತನಾಗಿರಬೇಕು. ಶ್ರದ್ಧೆಯಿಲ್ಲದವನೂ, ಅಶುಚಿಯೂ, ಕೆಟ್ಟಬುದ್ಧಿಯುಳ್ಳವನೂ ಯಾವಾಗಲೂ ಅಮಂಗಳಕರರು.

೭. ಮೇಲೆ ಹೇಳಿದ ಶ್ರದ್ಧಾದಿವಿಹೀನರೆಲ್ಲರೂ ಪಾತಕಿಗಳು. ಆದುದರಿಂದ ಹಾಗೆ ಹೇಳಿದೆನು. ಪ್ರಯಾಗದ ಮಹಿಮೆಯನ್ನು ನಾನು ಕಂಡು ಕೇಳಿರುವಂತೆ ಹೇಳುವೆನು ಕೇಳು.

೮. ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ಆ ಪುಣ್ಯವು ಉಂಟಾಗಿಯೇ ಉಂಟಾಗುತ್ತದೆ. ಹಾಗೆ ಆಗಿರುವುದನ್ನು ನಾನು ಹಿಂದೆ ನೋಡಿರುವಂತೆ ಹೇಳುತ್ತೇನೆ.

ಶಾಸ್ತ್ರಂ ಪ್ರಮಾಣಂ ಕೃತ್ವಾ ತು ಪೂಜ್ಯತೇ ಯೋಗಮಾತ್ಮನಃ ।
ಕ್ಲಿಶ್ಯತೇ ಚಾಪರಸ್ತತ್ರ ನೈವ ಯೋಗಮವಾಪ್ನುಯಾತ್ ॥ ೯ ॥

ಜನ್ಮಾಂತರಸಹಸ್ರೇಭ್ಯೋ ಯೋಗೋ ಲಭ್ಯೇತ ಮಾನವೈಃ ।
ತಥಾ ಯುಗಸಹಸ್ರೇಣ ಯೋಗೋ ಲಭ್ಯೇತ ಮಾನವೈಃ ॥೧೦॥

ಯಸ್ತು ಸರ್ವಾಣಿ ರತ್ನಾನಿ ಬ್ರಾಹ್ಮಣೇಭ್ಯಃ ಪ್ರಯಚ್ಛತಿ ।
ತೇನ ದಾನೇನ ದತ್ತೇನ ಯೋಗೋ ಲಭ್ಯೇತ ಮಾನವೈಃ ॥೧೧॥

ಪ್ರಯಾಗೇ ತು ಮೃತಸ್ಯೇದಂ ಸರ್ವಂ ಭವತಿ ನಾನ್ಯಥಾ ।
ಪ್ರಧಾನಹೇತುಂ ವಕ್ಷ್ಯಾಮಿ ಶ್ರದ್ಧಧತ್ಸ್ವ ಚ ಭಾರತ ॥೧೨॥

ಯಥಾ ಸರ್ವೇಷು ಭೂತೇಷು ಸರ್ವತ್ರೈವ ತು ದೃಶ್ಯತೇ ।
ಬ್ರಹ್ಮ ನೈವಾಸ್ತಿ ವೈ ಕಿಂಚಿದ್ಯದ್ವಕ್ತುಂ ತ್ವಿದಮುಚ್ಯತೇ ॥೧೩॥

---

೯. ತನ್ನ ಯೋಗಕ್ಕೆ ಶಾಸ್ತ್ರಪ್ರಮಾಣಮಾಡಿಕೊಂಡು ಒಬ್ಬನು ಆದಕ್ಕೆ ಗೌರವ ಕೊಡುತ್ತಾನೆ. ಮತ್ತೊಬ್ಬನು ನಂಬದೆ ತೊಂದರೆ ಹೊಂದುತ್ತಾನೆ.

೧೦. ಯೋಗಾಭ್ಯಾಸಿಯು ಹೇಗೆ ಅನೇಕಯುಗಗಳಿಂದ ಕಷ್ಟಪಟ್ಟು ಯೋಗಸಿದ್ಧಿಯನ್ನು ಹೊಂದುವನೋ ಹಾಗೆ ಪುಣ್ಯಯೋಗವೂ ಸಹ ಮನುಷ್ಯರಿಗೆ ಅನೇಕ ಜನ್ಮಗಳ ಸುಕೃತದಿಂದ ಉಂಟಾಗುತ್ತದೆ.

೧೧. ಯಾವನು ಅನೇಕ ರತ್ನಗಳನ್ನು ಬ್ರಾಹ್ಮಣರಿಗೆ ದಾನಮಾಡುತ್ತಾನೆಯೋ ಆ ದಾನದ ಮಹಿಮೆಯಿಂದ ಅವನು ಯೋಗವನ್ನು ಹೊಂದುತ್ತಾನೆ.

೧೨. ಪ್ರಯಾಗಕ್ಷೇತ್ರದಲ್ಲಿ ಸತ್ತವನಿಗೆ ಈ ಎಲ್ಲವೂ ಉಂಟಾಗುತ್ತವೆ. ಸುಳ್ಳಲ್ಲ, ಶ್ರದ್ಧೆಯನ್ನು ಹೊಂದಿರುವವರಲ್ಲಿ ಆ ಮುಖ್ಯ ಕಾರಣವನ್ನು ಹೇಳುತ್ತೇನೆ.

೧೩. ಎಲ್ಲಾ ಪ್ರಾಣಿಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ಬ್ರಹ್ಮ ಹೊರತು ಬೇರೆ ಯಾವುದೂ ಇಲ್ಲವೆಂಬುದನ್ನು ತಿಳಿದಿದ್ದೀಯೆ. ಅದರಂತೆ ಇದನ್ನು ಹೇಳುತ್ತೇನೆ.

ಯಥಾ ಸರ್ವೇಷು ಭೂತೇಷು ಬ್ರಹ್ಮ ಸರ್ವತ್ರ ಪೂಜ್ಯತೇ ।
ಏವಂ ಸರ್ವೇಷು ಲೋಕೇಷು ಪ್ರಯಾಗಃ ಪೂಜ್ಯತೇ ಬುಧೈಃ ॥೧೪॥

ಪೂಜ್ಯತೇ ತೀರ್ಥರಾಜಶ್ಚ ಸತ್ಯಮೇತದ್ಯುಧಿಷ್ಠಿರ ।
ಬ್ರಹ್ಮಾಪಿ ಸ್ಮರತೇ ನಿತ್ಯಂ ಪ್ರಯಾಗಂ ತೀರ್ಥಮುತ್ತಮಂ ॥೧೫॥

ತೀರ್ಥರಾಜಮನುಪ್ರಾಪ್ಯ ನೈವಾನ್ಯತ್ಕಿಂಚಿದಿಚ್ಛತಿ ।
ಕೋ ಹಿ ದೇವತ್ವಮಾಸಾದ್ಯ ಮನುಷ್ಯತ್ವಂ ಚಿಕೀರ್ಷತಿ ॥೧೬॥

ಅನೇನೈವಾನುಮಾನೇನ ತ್ವಂ ಜ್ಞಾಸ್ಯಸಿ ಯುಧಿಷ್ಠಿರ ।
ಯಥಾ ಪುಣ್ಯಮಪುಣ್ಯಂ ವಾ ತಥೈವ ಕಥಿತಂ ಮಯಾ ॥೧೭॥

॥ ಯುಧಿಷ್ಠಿರ ಉವಾಚ ॥

ಶ್ರುತಂ ತದ್ಯತ್ತ್ವಯಾ ಪ್ರೋಕ್ತಂ ವಿಸ್ಮಿತೋಽಹಂ ಪುನಃ ಪುನಃ ।
ಕಥಂ ಯೋಗೇನ ತತ್ಪ್ರಾಪ್ತಿಃ ಸ್ವರ್ಗಲೋಕಸ್ತು ಕರ್ಮಣಾ ॥೧೮॥

---

೧೪. ಎಲ್ಲ ಪ್ರಾಣಿಗಳಲ್ಲಿಯೂ ಬ್ರಹ್ಮವು ಹೇಗೆ ಪೂಜಿಸಲ್ಪಡುವುದೋ ಹಾಗೆ ಎಲ್ಲ ಲೋಕಗಳಲ್ಲಿಯೂ ಪ್ರಯಾಗಕ್ಷೇತ್ರವು ಪೂಜಿಸಲ್ಪಡುತ್ತದೆ.

೧೫. ತೀರ್ಥಗಳಿಗೆ ರಾಜನೆನಿಸಿದ ಈ ಪ್ರಯಾಗತೀರ್ಥವು ಬ್ರಹ್ಮನಿಂದಲೂ ಸಹ ಯಾವಾಗಲೂ ಸ್ಮರಿಸಲ್ಪಡುತ್ತಿರುವುದು. ಇದು ಸತ್ಯವು.

೧೬. ತೀರ್ಥರಾಜನಾದ ಪ್ರಯಾಗವನ್ನು ಹೊಂದದಮೇಲೆ ಬೇರೆ ಯಾವ ತೀರ್ಥವನ್ನೂ ಅಪೇಕ್ಷಿಸುವುದಿಲ್ಲ. ದೇವತ್ವವನ್ನು ಹೊಂದಿರುವವನು ಮನುಷ್ಯತ್ವವನ್ನು ಹೊಂದಲು ಇಚ್ಛಿಸುವನೇನು ?

೧೭. ಈ ಕಾರಣದಿಂದಲೇ ನೀನು ಎಲ್ಲವನ್ನೂ ತಿಳಿದುಕೊಳ್ಳಬಹುದು. ಪಾಪಪುಣ್ಯಗಳು ಬರುವ ರೀತಿಯನ್ನು ಹೇಳಿದೆನು ಅಷ್ಟೇ.

೧೮. ಯುಧಿಷ್ಠಿರನು ಹೇಳುತ್ತಾನೆ: ನೀನು ಹೇಳಿದುದೆಲ್ಲವನ್ನೂ ಕೇಳಿದೆನು. ನನಗೆ ಆಶ್ಚರ್ಯವಾಗಿದೆ. ಯೋಗದಿಂದ ಸ್ವರ್ಗಪ್ರಾಪ್ತಿಯು ಹೇಗೆ? ಕರ್ಮದಿಂದ ತಾನೇ ಸ್ವರ್ಗವು ಲಭಿಸುವುದು ?

ತದಾ ಚ ಲಭತೇ ಭೋಗಾನ್ ಗಾಂ ಚ ತತ್ಕರ್ಮಣಾಂ ಫಲಂ ।
ತಾನಿ ಕರ್ಮಾಣಿ ಪೃಚ್ಛಾಮಿ ಪುನರ್ಯೈಃ ಪ್ರಾಪ್ಯತೇ ಮಹೀ ॥೧೯॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ಮಹಾಬಾಹೋ ಯಥೋಕ್ತಂ ಕರ್ಮಣಾ ಮಹೀಂ ।
ಗಾಮಗ್ನಿಂ ಬ್ರಾಹ್ಮಣಂ ಶಾಸ್ತ್ರಂ ಕಾಂಚನಂ ಸಲಿಲಂ ಸ್ತ್ರಿಯಃ ॥

ಮಾತರಂ ಪಿತರಂ ಚೈವ ಯೋ ನಿಂದತಿ ನರಾಧಿಪ ।
ನೈತೇಷಾಮೂರ್ಧ್ವಗಮನ ಮೇವಮಾಹ ಪ್ರಜಾಪತಿಃ ॥೨೦॥

ಏವಂ ಯೋಗಸ್ಯ ಸಂಪ್ರಾಪ್ತಿಃ ಸ್ಥಾನಂ ಪರಮದುರ್ಲಭಂ ।
ಗಚ್ಛಂತಿ ನರಕಂ ಘೋರಂ ಯೇ ನರಾಃ ಪಾಪಕಾರಿಣಃ ॥೨೨॥

ಹಸ್ತ್ಯಶ್ವಂ ಗಾಮನಡ್ವಾಹಂ ಮಣಿಮುಕ್ತಾದಿಕಾಂಚನಂ ।
ಪರೋಕ್ಷಂ ಹರತೇ ಯಸ್ತು ಪಶ್ಚಾದ್ದಾನಂ ಪ್ರಯಚ್ಛತಿ ॥೨೩॥

---

೧೯. ಭೋಗವುಂಟಾದುವನ್ನು ಹೊಂದುವುದು ಕರ್ಮದ ಫಲವಷ್ಟೆ? ಪುನಃ ಭೂಮಿಯನ್ನು ಹೊಂದುವನು. ಅದಕ್ಕೂ ಕರ್ಮಬೇಕೆಂದೆನ್ನುವಿಯಲ್ಲ? ಅದಕ್ಕೆ ಏನು ಕರ್ಮ ಬೇಕು?

೨೦. ಮಾರ್ಕಂಡೇಯನು ಹೇಳುತ್ತಾನೆ: ಎಲೈ ರಾಜನೇ ಕೇಳು. ಭೂಮಿಯಲ್ಲೇ ಇರಲು ಕಾರಣವೇನೆಂದರೆ, ಗೋವು, ಅಗ್ನಿ, ಬ್ರಾಹ್ಮಣ ಶಾಸ್ತ್ರ, ಸುವರ್ಣ, ಜಲ, ಸ್ತ್ರೀಯರು ಇವರನ್ನು ನಿಂದಿಸಬಾರದು.

೨೧. ಹಾಗೆಯೇ, ತಾಯಿತಂದೆಗಳನ್ನೂ ನಿಂದಿಸಬಾರದು ಇವರನ್ನು ನಿಂದಿಸುವವರಿಗೆ ಸ್ವರ್ಗಪ್ರಾಪ್ತಿಯಿಲ್ಲವೆಂದು ಬ್ರಹ್ಮನು ಹೇಳಿರುವನು.

೨೨. ಈ ರೀತಿಯಾದವುಗಳು ಯೋಗಗಳೆಂಬುವು. ಸ್ವರ್ಗವು ಪರಮ ದುರ್ಲಭವಾದುದು. ಈ ಯೋಗವಿಲ್ಲದ ಪಾಪಿಗಳು ಘೋರವಾದ ನರಕವನ್ನು ಹೊಂದುತ್ತಾರೆ.

೨೩. ಆನೆ, ಕುದುರೆ, ಗೋವು, ದ್ರವ್ಯ ಇವುಗಳನ್ನು ಯಾವನು ಅಪಹರಿಸಿ ಆಮೇಲೆ ದಾನಮಾಡುತ್ತಾನೆಯೋ ಅವನಿಗೆ ಸ್ವರ್ಗಲೋಕ ಪ್ರಾಪ್ತಿ ಇಲ್ಲ.

ನ ತೇ ಗಚ್ಛಂತಿ ವೈ ಸ್ವರ್ಗಂ ದಾತಾರೋ ಯತ್ರ ಭೋಗಿನಃ ।
ಅನೇನ ಕರ್ಮಣಾ ಯುಕ್ತಾಃ ಪಚ್ಯಂತೇ ನರಕೇಽಧಮಾಃ ॥೨೪॥
ಏವಂ ಯೋಗಂ ಚ ಧರ್ಮಂ ಚ ದಾತಾರಂ ಚ ಯುಧಿಷ್ಠಿರ ।
ಯಥಾಸತ್ಯಮಸತ್ಯಂ ವಾ ಅಸ್ತಿ ನಾಸ್ತೀತಿ ಯತ್ಫಲಂ ॥
ನಿರುಕ್ತಂ ತು ಪ್ರವಕ್ಷ್ಯಾಮಿ ಯಥಾಯಂ ಸ್ವಯಮಾಪ್ನುಯಾತ್ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಪ್ರಯಾಗ ಮಹಾತ್ಮ್ಯೇ ಷಟ್ಚತ್ವಾರಿಂಶೋಽಧ್ಯಾಯಃ

---

೨೪. ಅಂಥವರು, ದಾನಶೀಲರು ಭೋಗಿಸುವ ಸ್ಥಳವಾದ ಸ್ವರ್ಗವನ್ನು ಹೊಂದುವುದಿಲ್ಲ. ಈ ಪಾಪದಿಂದ ಘೋರವಾದ ನರಕದಲ್ಲಿ ದಹಿಸಲ್ಪಡುತ್ತಾರೆ.

೨೫. ಈ ರೀತಿಯಾಗಿ ಯೋಗ, ಧರ್ಮ, ದಾನಿ, ಸತ್ಯ, ಅಸತ್ಯ, ಇದೆ, ಇಲ್ಲ ಎಬುವುಗಳ ಫಲಗಳು ಹೇಳಲ್ಪಟ್ಟವು. ದಾನಿಯಾದವನು ತಾನಾಗಿಯೇ ಉತ್ತಮಪದವನ್ನ ಹೊಂದುವ ಬಗೆಯನ್ನು ಹೇಳುತ್ತೇನೆ ಕೇಳು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಪ್ರಯಾಗ ಮಹಾತ್ಮ್ಯೆಯಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥಪದ್ಮ ಪುರಾಣೇ ಆದಿಖಂಡೇ ಸಪ್ತಚತ್ವಾರಿಂಶೋಽಧ್ಯಾಯಃ

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರಯಾಗಸ್ಯ ಮಾಹಾತ್ಮ್ಯಂ ಪುನರೇವ ತು ।
ನೈಮಿಷಂ ಪುಷ್ಕರಂ ಚೈವ ಗೋತೀರ್ಥಂ ಸಿಂಧುಸಾಗರಂ ॥ ೧ ॥

ಕುರುಕ್ಷೇತ್ರಂ ಗಯಾ ಚೈವ ಗಂಗಾಸಾಗರಮೇವ ಚ ।
ಏತೇ ಚಾನ್ಯೇ ಚ ಬಹವೋ ಯೇ ಚ ಪುಣ್ಯಾಶ್ಶಿಲೋಚ್ಚಯಾಃ ॥ ೨ ॥

ದಶತೀರ್ಥಸಹಸ್ರಾಣಿ ತ್ರಿಂಶತ್ಕೋಟ್ಯಸ್ತಥಾ ಪರೇ ।
ಪ್ರಯಾಗೇ ಸಂಸ್ಥಿತಾ ನಿತ್ಯಮೇವಮಾಹುರ್ಮನೀಷಿಣಃ ॥ ೩ ॥

ತ್ರೀಣಿವಾಪ್ಯಗ್ನಿಕುಂಡಾನಿ ಯೇಷಾಂ ಮಧ್ಯೇ ತು ಜಾಹ್ನವೀ ।
ಪ್ರಯಾಗಾದಭಿನಿಷ್ಕ್ರಾಂತಾ ಸರ್ವತೀರ್ಥಪುರಸ್ಕೃತಾ ॥ ೪ ॥

---

ಪದ್ಮಪುರಾಣದ ಆದಿಖಂಡದ ನಲವತ್ತೇಳನೆಯ ಅಧ್ಯಾಯವು

೧-೨-೩. ಮಾರ್ಕಂಡೇಯನು ಹೇಳುತ್ತಾನೆ : ಎಲೈ ರಾಜನೇ, ಕೇಳು. ಪ್ರಯಾಗದ ಮಹಿಮೆಯನ್ನು ಇನ್ನೂ ಹೇಳುತ್ತೇನೆ. ಪ್ರಯಾಗದಲ್ಲಿ, ನೈಮಿಷ, ಪುಷ್ಕರ, ಗೋತೀರ್ಥ, ಸಿಂಧುಸಾಗರಸಂಗಮ, ಕುರುಕ್ಷೇತ್ರ, ಗಯಾ, ಗಂಗಾಸಾಗರಸಂಗಮ ಇವೇ ಮೊದಲಾದ ಪುಣ್ಯಪ್ರದವಾದ ಹತ್ತುಸಾವಿರ ತೀರ್ಥಗಳೂ, ಇವುಗಳಲ್ಲದೆ ಸಾಧಾರಣ ತೀರ್ಥಗಳಾದ ಮೂವತ್ತು ಕೋಟಿ ತೀರ್ಥಗಳೂ ಯಾವಾಗಲೂ ನೆಲಸಿರುವುವೆಂದು ತಿಳಿದವರು ಹೇಳುತ್ತಾರೆ.

೪. ಅಲ್ಲದೆ ಅಗ್ನಿಕುಂಡಗಳೆಂಬ ಮುಖ್ಯವಾದ ತೀರ್ಥಗಳು ಮೂರಿವೆ. ಅವುಗಳ ಮಧ್ಯದಲ್ಲಿ ಗಂಗೆಯು ಹರಿಯುತ್ತಿರುವುದು. ಇಂತಹ ಸರ್ವ ತೀರ್ಥಗಳನ್ನೊಳಗೊಂಡ ಗಂಗಾನದಿಯು ಆ ಪ್ರಯಾಗದಲ್ಲಿ ಪ್ರವಹಿಸುತ್ತಿರುವುದು.

ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।
ಗಂಗಾ ಯಮುನಯಾ ಸಾರ್ಧಂ ಸಂಸ್ಥಿತಾ ಲೋಕಭಾವಿನೀ ॥ ೫ ॥

ಗಂಗಾಯಮುನಯೋರ್ಮಧ್ಯೇ ಪೃಥಿವ್ಯಾ ಜಘನಂ ಸ್ಮೃತಂ ।
ಪ್ರಯಾಗಂ ರಾಜಶಾರ್ದೂಲ ಕಲಾಂ ನಾರ್ಹಂತಿಶೋಡಶೀಂ ॥ ೬ ॥

ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಂ ವಾಯುರಬ್ರವೀತ್
ದಿವಿ ಭುವ್ಯಂತರಿಕ್ಷೇ ಚ ತತ್ಸರ್ವಂ ಜಾಹ್ನವೀ ಸ್ಮೃತಾ ॥ ೭ ॥

ಪ್ರಯಾಗಂ ಸಮಧಿಷ್ಠಾನಾಂ ಕಂಬಳಾಶ್ವತರಾವುಭೌ ।
ಭೋಗವತ್ಯಥ ಯಾ ಚೈವ ವೇದಿತೀಷಾ ಪ್ರಜಾಪತೇಃ ॥ ೮ ॥

ತತ್ರ ದೇವಾಶ್ಚ ಯಜ್ಞಾಶ್ಚ ಮೂರ್ತಿಮಂತೋ ಯುಧಿಷ್ಠಿರ ।
ಪೂಜಯಂತಿ ಪ್ರಯಾಗಂ ತೇ ಋಷಯಶ್ಚ ತಪೋಧನಾಃ ॥ ೯ ॥

---

೫. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಮತ್ತು ಸೂರ್ಯ ಪುತ್ರಿಯಾದ ಯಮುನೆಯು ಗಂಗೆಯೊಡನೆ ಅಲ್ಲಿ ಸೇರಿರುವುದು.

೬. ಗಂಗಾಯಮುನೆಗಳ ಮಧ್ಯವು ಭೂಮಿಯ ಜಘನ (ಮಧ್ಯ) ಪ್ರದೇಶ ವೆಂದು ಪರಿಗಣಿಸಲ್ಪಟ್ಟಿದೆ. ಅದೇ ಪ್ರಯಾಗವು. ಮೂರುವರೆ ಕೋಟಿ ತೀರ್ಥಗಳೂ ಸಹ ಆ ಪ್ರಯಾಗದ ಹದಿನಾರನೆಯ ಒಂದುಪಾಲು ಯೋಗ್ಯತೆಯನ್ನು ಸಹ ಹೊಂದುವುದಿಲ್ಲವೆಂದು ವಾಯುದೇವನು ಹೇಳಿದ್ದಾನೆ.

೭. ಅದು ಭೂವ್ಯಂತರಿಕ್ಷಸ್ವರ್ಗಗಳಲ್ಲಿ ಹರಿಯುವ ಜಾಹ್ನವೀ ಎಂದು ಪ್ರಸಿದ್ಧವಾದ ಗಂಗೆಯು ಅಲ್ಲಿ ಇರುವುದು.

೮. ಕಂಬಳಾಶ್ವತರರೆಂಬ ನಾಗಗಳೂ, ಭೋಗವತಿಯೂ, ಇರುವ ಜಾಗವು ಪ್ರಯಾಗವು. ಇದು ಬ್ರಹ್ಮನ ಯಜ್ಞವೇದಿಯು.

೯. ಅಲ್ಲಿ ದೇವತೆಗಳೂ, ಮೂರ್ತಿಮತ್ತಾದ (ದೇಹವನ್ನು ಧರಿಸಿರುವ) ಯಜ್ಞಗಳೂ ತಪಸ್ವಿಗಳಾದ ಋಷಿಗಳೂ ಪ್ರಯಾಗವನ್ನು ಪೂಜಿಸುತ್ತಾರೆ.

ಯಜಂತೇ ಕ್ರತುಭಿರ್ದೇವಾಃ ತಥಾ ಬಹುಧನಾ ನೃಪಾಃ ।
ತತಃ ಪುಣ್ಯತಮೋ ನಾಸ್ತಿ ತ್ರಿಷು ಲೋಕೇಷು ಭಾರತ ॥೧೦॥

ಪ್ರಭಾವಾತ್ಸರ್ವತೀರ್ಥೇಭ್ಯಃ ಪ್ರಭವತ್ಯಧಿಕಂ ಪ್ರಭೋ ।
ದಶತೀರ್ಥಸಹಸ್ರಾಣಿ ತಿಸ್ರಃ ಕೋಟ್ಯಸ್ತಥಾಪರಾಃ ॥೧೧॥

ಯತ್ರ ಗಂಗಾ ಮಹಾಭಾಗಾ ಸ ದೇಶಸ್ತತ್ತಪೋವನಂ ।
ಸಿದ್ಧಿಕ್ಷೇತ್ರಂ ತು ತಜ್ಜ್ಞೇಯಂ ಗಂಗಾತೀರಸಮಾಶ್ರಿತಂ ॥೧೨॥

ಇತಿ ಸತ್ಯಂ ದ್ವಿಜಾತೀನಾಂ ಸಾಧೂನಾಮಾತ್ಮಜಸ್ಯ ವಾ ।
ಸುಹೃದಾಂ ಚ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ವಾ ॥೧೩॥

ಇದಂ ಧನ್ಯಮಿದಂ ಸ್ವರ್ಗ್ಯಮಿದಂ ಸೇವ್ಯಮಿದಂ ಸುಖಂ ।
ಇದಂ ಪುಣ್ಯಮಿದಂ ರಮ್ಯಂ ಪಾವನಂ ಧರ್ಮಮುತ್ತಮಂ ॥೧೪॥

---

೧೦. ದೇವತೆಗಳೂ, ಧನವಂತರಾದ ರಾಜರುಗಳೂ ಯಜ್ಞಗಳಿಂದ ಅದನ್ನು ಗೌರವಿಸುತ್ತಾರೆ. ಅದಕ್ಕಿಂತ ಉತ್ತಮವಾದ ಜಾಗವು ಮೂರು ಲೋಕಗಳಲ್ಲಿ ಎಲ್ಲಿಯೂ ಇರುವುದಿಲ್ಲ.

೧೧. ಪ್ರಯಾಗವು ಸರ್ವತೀರ್ಥಗಳಿಗಿಂತ ಅಧಿಕ ಪ್ರಭಾವವುಳ್ಳದ್ದಾಗಿರುವುದು. ಮೂರುವರೆ ಕೋಟಿ ತೀರ್ಥಗಳು ಅದಕ್ಕಿಂತ ಕಡಿಮೆಯಾದುವು.

೧೨. ಎಲ್ಲಿ ಗಂಗೆ ಇರುವುದೋ ಆ ಪ್ರದೇಶವು ತಪೋವನವೆನಿಸುವುದು. ಗಂಗಾತೀರವೆಲ್ಲವನ್ನೂ ಸಿದ್ಧಕ್ಷೇತ್ರವೆಂದು ತಿಳಿಯತಕ್ಕದ್ದು.

೧೩. ಬ್ರಾಹ್ಮಣರಿಗೂ, ಸಾಧುಗಳಿಗೂ, ಮಗನಿಗೂ, ಸ್ನೇಹಿತರಿಗೂ, ಶಿಷ್ಯನಿಗೂ, ತನ್ನನ್ನು ಅನುಸರಿಸುವವನಿಗೂ ಇದನ್ನು ಗುಟ್ಟಾಗಿ ಹೇಳಲು ಯೋಗ್ಯವಾದದ್ದು.

೧೪. ಧನ, ಸ್ವರ್ಗ, ಸುಖ, ಸೇವಿಸಬೇಕಾದ ವಸ್ತು, ಪುಣ್ಯ, ರಮ್ಯ, ಪಾವನ, ಉತ್ತಮವಾದ ಧರ್ಮ ಇವೆಲ್ಲವೂ ಈ ಪ್ರಯಾಗವೇ ಆಗಿದೆ. ಋಷಿಗಳಿಗೂ ಕೂಡ ಗೋಪ್ಯವಾದುದು. ಸಮಸ್ತಪಾಪವನ್ನೂ ಪರಿಹಾರಮಾಡುವಂತಹುದು.

ಮಹರ್ಷೀಣಾಮಿದಂ ಗುಹ್ಯಂ ಸರ್ವಪಾಪಪ್ರಣಾಶನಂ ।
ಅಧೀತ್ಯ ದ್ವಿಜೋಽಧ್ಯಯನಂ ನಿರ್ಮಲತ್ವಮವಾಪ್ನುಯಾತ್ ॥೧೫॥

ಯಶ್ಚೇದಂ ಶೃಣುಯಾನ್ನಿತ್ಯಂ ತೀರ್ಥಂ ಪುಣ್ಯಂ ಸದಾ ಶುಚಿಃ ।
ಜಾತಿಸ್ಮರತ್ವಂ ಲಭತೇ ನಾಕಪೃಷ್ಠೇ ಚ ಮೋದತೇ ॥೧೬॥

ಪ್ರಾಪ್ಯಂ ತೇ ತಾನಿ ತೀರ್ಥಾನಿ ಸದ್ಭಿಃ ಶಿಷ್ಟಾರ್ಥ ದರ್ಶಿಭಿಃ ।
ಸ್ನಾಹಿ ತೀರ್ಥೇಷು ಕಾರವ್ಯ ನ ಚ ವಕ್ರಮತಿರ್ಭವ ॥೧೭॥

ತ್ವಯಾ ತು ಸಮ್ಯಕ್ಪೃಷ್ಟೇನ ಕಥಿತಂ ತು ಮಯಾ ವಿಭೋ ।
ಪಿತರಸ್ತಾರಿತಾಸ್ಸರ್ವೇ ತಾರಿತಾಶ್ಚ ಪಿತಾಮಹಾಃ ॥೧೮॥

ಪ್ರಯಾಗಸ್ಯ ತು ಸರ್ವೇ ತೇ ಕಲಾಂ ನಾರ್ಹಂತಿ ಷೋಡಶೀಂ ।
ಏವಂ ಜ್ಞಾನಂ ಚ ತೀರ್ಥಂ ಚ ಯೋಗಂ ಚೈವ ಯುಧಿಷ್ಠಿರ ॥೧೯॥

---

೧೫-೧೬. ಬ್ರಾಹ್ಮಣನು ವೇದಾಧ್ಯಯನವನ್ನು ಮಾಡಿದರೆ ಶುಚಿಯಾಗುತ್ತಾನೆ. ಈ ಪುಣ್ಯಪ್ರದವಾದ ಸ್ಥಳದ ವಿಷಯವನ್ನು ಕೇಳಿದರೇನೇ ಶುಚಿಯಾಗುತ್ತಾನೆ. ಪೂರ್ವಜನ್ಮದ ಸ್ಮರಣೆಯುಂಟಾಗುತ್ತದೆ. ಸ್ವರ್ಗದಲ್ಲೂ ಸುಖಿಸುತ್ತಾನೆ.

೧೭. ಧರ್ಮವನ್ನು ಬಲ್ಲ ಸತ್ಪುರುಷರಿಗೆ ಮಾತ್ರವೇ ತೀರ್ಥಗಳು ಲಭ್ಯವಾಗುವುವೇ ಹೊರತು ಅಧರ್ಮಿಗಳಿಗೆ ದೊರೆಯುವುದಿಲ್ಲ. ಆದುದರಿಂದ ತೀರ್ಥಗಳಲ್ಲಿ ಸ್ನಾನಮಾಡು. ವಕ್ರಬುದ್ಧಿಯುಳ್ಳವನಾಗಬೇಡ.

೧೮. ನೀನು ಕೇಳಿದುದರಿಂದ ನಾನು ಹೇಳಿದೆನು. ಇದರಿಂದ ನಿನ್ನ ಪಿತೃಪಿತಾಮಹರು ಉದ್ಧೃತರಾಗಿದ್ದಾರೆ.

೧೯. ಪ್ರಯಾಗದ ಹದಿನಾರರಲ್ಲೊಂದಂಶವನ್ನೂ ಎಲ್ಲ ತೀರ್ಥಗಳೂ ಸೇರಿದರೂ ಹೊಂದಲಾರವು. ಅದೇರೀತಿ ಜ್ಞಾನ, ಯೋಗ ತೀರ್ಥಗಳೂ ಕೂಡ ಹೊಂದಲಾರವು.

ಬಹುಕ್ಲೇಶೇನ ಯುಜ್ಯಂತೇ ತತೋ ಯಾತಿ ಪರಾಂ ಗತಿಂ ।
ಪ್ರಯಾಗಸ್ಮರಣಾಲ್ಲೋಕಃ ಸ್ವರ್ಗಲೋಕಂ ಸ ಗಚ್ಛತಿ　　॥೨೦॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಪ್ರಯಾಗ ಮಹಾತ್ಮ್ಯೇ ಚತ್ವಾರಿಂಶೋಽಧ್ಯಾಯಃ

---

೨೦. ಮಿಕ್ಕ ಸ್ಥಳಗಳಲ್ಲಿ ಬಹಳ ಕ್ಲೇಶದಿಂದ ಪ್ರಾಣಿಗಳು ಸ್ವರ್ಗವನ್ನು ಹೊಂದಬೇಕು. ಆದರೆ ಪ್ರಯಾಗದ ಸ್ಮರಣೆಯಿಂದಲೇ ಮನುಜನು ಸ್ವರ್ಗವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದಲ್ಲಿ
ಪ್ರಯಾಗ ಮಹಾತ್ಮೆಯಲ್ಲಿ ನಲವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಪದ್ಮಪುರಾಣೇ ಆದಿಖಂಡೇ ಅಷ್ಟಚತ್ವಾರಿಂಶೋಽಧ್ಯಾಯಃ

॥ ಯುಧಿಷ್ಠಿರ ಉವಾಚ ॥

ಕಥಾ ಸರ್ವಾ ತ್ವಿಯಂ ಪ್ರೋಕ್ತಾ ಪ್ರಯಾಗಸ್ಯ ಮಹಾಮುನೇ।
ಏವಂ ಮೇ ಸರ್ವಮಾಖ್ಯಾಹಿ ಯಥಾ ಹಿ ಮಮ ತಾರಯೇತ್ ॥

॥ ಮಾರ್ಕಂಡೇಯ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಪ್ರೋಕ್ತಂ ಸರ್ವಮಿದಂ ಜಗತ್ ।
ಬ್ರಹ್ಮಾ ವಿಷ್ಣುಸ್ತಥೇಶಾನೋ ದೇವತಾ ಪ್ರಭುರವ್ಯಯಃ ॥ ೨ ॥
ಬ್ರಹ್ಮಾ ಸೃಜತಿ ಭೂತಾನಿ ಸ್ಥಾವರಂ ಜಂಗಮಂ ಚ ಯತ್ ।
ತಾನ್ಯೇತಾನಿ ಪರೋ ಲೋಕೇ ವಿಷ್ಣುಃ ಪಾಲಯತಿ ಪ್ರಜಾಃ ॥ ೩ ॥

---

## ಪದ್ಮಪುರಾಣದ ಆದಿಖಂಡದ ನಲವತ್ತೆಂಟನೆಯ ಅಧ್ಯಾಯವು.

೧. ಯುಧಿಷ್ಠಿರನು ಹೇಳುತ್ತಾನೆ: ಎಲೈ ಋಷಿಯೇ, ಪ್ರಯಾಗದ ಕಥೆಯಲ್ಲವನ್ನೂ ಹೇಳಿದೆಯಷ್ಟೆ, ನಾನು ಉದ್ಧಾರವಾಗುವ ರೀತಿಯಾದ ವಿಷಯಗಳನ್ನು ಹೇಳು.

೨. ಮಾರ್ಕಂಡೇಯನು ಹೇಳುತ್ತಾನೆ. ಎಲೈ ರಾಜನೇ, ಕೇಳು ಈ ಜಗತ್ತು ಬ್ರಹ್ಮವಿಷ್ಣು ಶಿವಾತ್ಮಕವಾದುದು. ಎಂದರೆ ಮೂರುಜನ ಮುಖ್ಯರಾದವರು. ಆ ಮೂವರಿಗೂ ದೊಡ್ಡವನೊಬ್ಬನಿದ್ದಾನೆ.

೩. ಆ ಮೂವರಲ್ಲಿ ಬ್ರಹ್ಮನು ಸ್ಥಾವರಜಂಗಮಾತ್ಮಕವಾದ ಜಗತ್ತನ್ನು ಸೃಜಿಸುತ್ತಾನೆ. ಆ ಸ್ಥಾವರಜಂಗಮಗಳನ್ನು ವಿಷ್ಣುವು ಕಾಪಾಡುತ್ತಾನೆ.

ಕಲ್ಪಾಂತೇ ತತ್ಸಮಗ್ರಂ ಹಿ ರುದ್ರಃ ಸಂಹರತೇ ಜಗತ್ ।
ನ ದದಾತಿ ನ ಚಾದತ್ತೇ ನ ಕದಾಚಿದ್ವಿನಶ್ಯತಿ ।
ಈಶ್ವರಃ ಸರ್ವಭೂತಾನಾಂ ಯಃ ಪಶ್ಯತಿ ಸ ಪಶ್ಯತಿ ॥ ೪ ॥

ಉತ್ತರೇಣ ಪ್ರತಿಷ್ಠಾನಾದಿದಾನೀಂ ಬ್ರಹ್ಮ ತಿಷ್ಠತಿ ।
ಮಹೇಶ್ವರೋ ವಟೇ ಭೂತ್ವಾ ತಿಷ್ಠತೇ ಪರಮೇಶ್ವರಃ ॥ ೫ ॥

ತತೋ ದೇವಾಃ ಸಗಂಧರ್ವಾಃ ಸಿದ್ಧಾಶ್ಚ ಪರಮರ್ಷಯಃ ।
ರಕ್ಷಂತಿ ಪರಮಂ ನಿತ್ಯಂ ಪಾಪಕರ್ಮ ಪರಾಯಣಾಃ ॥
ಯೇ ತು ಚಾನ್ಯೇ ಚ ತಿಷ್ಠಂತಿ ತೇ ಯಾಂತಿ ಪರಮಾಂ ಗತಿಂ ॥ ೬ ॥

॥ ಯುಧಿಷ್ಠಿರ ಉವಾಚ ॥

ಅಖ್ಯಾಹ ಮೇ ಯಥಾ ತತ್ತ್ವಂ ಯಥೈಷಾಂ ತಿಷ್ಠತೇ ಶ್ರುತಂ ।
ಕೇನ ವಾ ಕಾರಣೇನೈವ ತಿಷ್ಠಂತಿ ಲೋಕಸಂಮತಾಃ ॥ ೭ ॥

---

೪. ಕಲ್ಪಾಂತದಲ್ಲಿ ರುದ್ರನು ಸಮಗ್ರವಾದ ಜಗತ್ತನ್ನು ನಾಶ ಮಾಡುತ್ತಾನೆ. ಮತ್ತೊಬ್ಬನಾದ ಕೂಟಸ್ಥನು ಕೊಡುವುದೂ ಇಲ್ಲ, ತೆಗೆದುಕೊಳ್ಳುವುದೂ ಇಲ್ಲ. ನಾಶವಾಗುವುದೂ ಇಲ್ಲ. ಎಲ್ಲಕ್ಕೂ ಒಡೆಯನು ಆ ಈಶ್ವರನೇ. ಅವನನ್ನು ತಿಳಿದವನೇ ಜ್ಞಾನಿಯು.

೫. ಆ ಪ್ರಯಾಗದೊಳಗೆ ಉತ್ತರದ ಕಡೆಗೆ ಬ್ರಹ್ಮನಿದ್ದಾನೆ. ಮಹೇಶ್ವರನು ವಟದ ಸಮೀಪದಲ್ಲಿ ಇದ್ದಾನೆ.

೬. ಇತರ ದಿಕ್ಕುಗಳಲ್ಲಿ ದೇವತೆಗಳು, ಗಂಧರ್ವರು, ಸಿದ್ಧರು, ಋಷಿಗಳು ಇವರೆಲ್ಲರೂ ಈ ಪ್ರಯಾಗಕ್ಷೇತ್ರವನ್ನು ಯಾವಾಗಲೂ ಕಾಪಾಡುತ್ತಿರುತ್ತಾರೆ. ಮತ್ತು ಇಲ್ಲಿ ಪಾಪಿಷ್ಠರು ಯಾರು ಇದ್ದರೂ ಅವರು ಸಹ ಉತ್ತಮವಾದ ಗತಿಯನ್ನು ಹೊಂದುತ್ತಾರೆ.

೭. ಯುಧಿಷ್ಠಿರನು ಕೇಳುತ್ತಾನೆ: ಆ ಉತ್ತಮರು ಹೇಗಿರುವರು? ಅವರ ತತ್ತ್ವವೆಂಥಹದು? ಅವರ ಜ್ಞಾನವೆಂಥಹದು? ಯಾವ ಕಾರಣದಿಂದ ಅವರು ಲೋಕಸಂಮತರಾಗಿರುತ್ತಾರೆ!

## ॥ ಮಾರ್ಕಂಡೇಯ ಉವಾಚ ॥

ಪ್ರಯಾಗೇ ನಿವಸಂತ್ಯೇತೇ ಬ್ರಹ್ಮವಿಷ್ಣುಮಹೇಶ್ವರಾಃ ।
ಕಾರಣಂ ತು ಪ್ರವಕ್ಷ್ಯಾಮಿ ಶೃಣು ತತ್ವಂ ಯುಧಿಷ್ಠಿರ ॥ ೮ ॥

ಪಂಚಯೋಜನವಿಸ್ತೀರ್ಣಂ ಪ್ರಯಾಗಸ್ಯ ತು ಮಂಡಲಂ ।
ತಿಷ್ಠಂತಿ ರಕ್ಷಣಾರ್ಥಾಯ ಪಾಪಕರ್ಮ ನಿವಾರಣಾಃ ॥ ೯ ॥

ತಸ್ಮಿಂಸ್ತು ಸ್ವಲ್ಪಕಂ ಪಾಪಂ ನರಕೇ ಪಾತಯಿಷ್ಯತಿ ।
ಏವಂ ಬ್ರಹ್ಮಾ ಚ ವಿಷ್ಣುಶ್ಚ ಪ್ರಯಾಗೆ ಸ ಮಹೇಶ್ವರಃ ॥೧೦॥

ಸಪ್ತದ್ವೀಪಾಸ್ಸಮುದ್ರಾಶ್ಚ ಪರ್ವತಾಶ್ಚ ಮಹೀತಲೇ ।
ಧ್ರಿಯಮಾಣಾಶ್ಚ ತಿಷ್ಠಂತಿ ಯಾವದಾಭೂತಸಂಪ್ಲವಂ ॥೧೧॥

ಯೇ ಚಾನ್ಯೇ ಬಹವಸ್ಸರ್ವೇ ತಿಷ್ಠಂತಿ ಚ ಯುಧಿಷ್ಠಿರ ।
ಪೃಥಿವೀಸ್ಥಾನಮಾರಭ್ಯ ನಿರ್ಮಿತಂ ಮೂರ್ತಿಭಿ ಸ್ತ್ರಿಭಿಃ ॥೧೨॥

---

೮. ಬ್ರಹ್ಮವಿಷ್ಣುಮಹೇಶ್ವರರು ಪ್ರಯಾಗದಲ್ಲಿ ವಾಸಮಾಡುತ್ತಾರೆ. ಅದಕ್ಕೆ ಕಾರಣವನ್ನು ಹೇಳುತ್ತೇನೆ, ಕೇಳು.

೯. ಪ್ರಯಾಗದ ಸುತ್ತಳತೆಯು ಐದು ಯೋಜನಗಳ ವಿಸ್ತಾರವಿದೆ. ಅಲ್ಲಿ ಈ ಮುಖ್ಯರು ಪಾಪನಾಶಕರಾಗಿ ಜನರನ್ನು ಕಾಪಾಡುತ್ತಿರುತ್ತಾರೆ.

೧೦. ಅದರಲ್ಲಿ ಸ್ವಲ್ಪ ಪಾಪಮಾಡಿದವನನ್ನು ನರಕದಲ್ಲಿ ಹಾಕುತ್ತಾರೆ. ಈರೀತಿ ಬ್ರಹ್ಮ ವಿಷ್ಣು ಮಹೇಶ್ವರರು ಅಲ್ಲಿದ್ದಾರೆ.

೧೧. ಸಪ್ತದ್ವೀಪಗಳೂ, ಸಮುದ್ರಗಳೂ, ಪರ್ವತಗಳೂ ಪ್ರಳಯಕಾಲದವರೆಗೂ ಅದನ್ನು ಹೊತ್ತು ಕಾಪಾಡುತ್ತಿರುತ್ತವೆ.

೧೨. ಇನ್ನೂ ಯಾರು ಯಾರು ಇದ್ದಾರೆಯೋ ಅವರೂ ಪೃಥಿವಿಯಲ್ಲಿರುವವೆಲ್ಲವೂ ಭೂಮಿಯ ಸ್ಥಾನ ಮೊದಲುಗೊಂಡು ಎಲ್ಲವೂ ಈ ಬ್ರಹ್ಮ ವಿಷ್ಣು ಮಹೇಶ್ವರರಿಂದ ನಿರ್ಮಿಸಲ್ಪಟ್ಟಿದೆ. ಏತದಾತ್ಮಕವಾಗಿಯೂ ನಿರ್ಮಿಸಲ್ಪಟ್ಟವೆ.

ಪ್ರಜಾಪತೇರಿದಂ ಕ್ಷೇತ್ರಂ ಪ್ರಯಾಗಮಿತಿ ವಿಶ್ರುತಂ ।
ಏತತ್ಪುಣ್ಯಂ ಪವಿತ್ರಂ ಚ ಪ್ರಯಾಗಂ ತು ಯುಧಿಷ್ಠಿರ ।
ಸ್ವರಾಜ್ಯಂ ಕುರು ರಾಜೇಂದ್ರ ಭ್ರಾತೃಭಿಸ್ಸಹಿತೋ ಭವ ॥೧೩॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಪ್ರಯಾಗ ಮಹಾತ್ಮ್ಯೇ ಅಷ್ಟಚತ್ವಾರಿಂಶೋಽಧ್ಯಾಯಃ

---

೧೩. ಈ ಪ್ರಯಾಗವು ಬ್ರಹ್ಮನ ಕ್ಷೇತ್ರವೆಂದು ಹೇಳಲ್ಪಟ್ಟಿದೆ. ಇದು ಪುಣ್ಯ ಪ್ರದವು ಪವಿತ್ರವೂ ಆದುದು. ಇದನ್ನು ಕಿವಿಯಿಂದ ಕೇಳಿದ ಮಾತ್ರಕ್ಕೆ ಶುದ್ಧನಾಗಿದ್ದೀಯೆ. ಎಲೈ ಯುಧಿಷ್ಠಿರನೇ ನಿನ್ನ ತಮ್ಮಂದಿರೊಡನೆ ಸಹಿತನಾಗಿ ರಾಜ್ಯಭಾರವನ್ನು ಮಾಡು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಪ್ರಯಾಗ ಮಹಾತ್ಮ್ಯೆಯಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಏಕೋನಪಂಚಾಶತ್ತಮೋಽಧ್ಯಾಯಃ

॥ ಸೂತ ಉವಾಚ ॥

ಭ್ರಾತೃಭಿಃ ಸಹಿತಾಃ ಸರ್ವೇ ಪಾಂಡವಾ ಧರ್ಮನಿಶ್ಚಯಾಃ ।
ಬ್ರಾಹ್ಮಣೇಭ್ಯೋ ನಮಸ್ಕೃತ್ವಾ ಗುರುದೇವಾಂಸ್ತ್ವತರ್ಪಯನ್ ॥

ವಾಸುದೇವೋಽಪಿ ತತ್ರೈವ ಕ್ಷಣೇನಾಭ್ಯಾಗತಸ್ತದಾ ।
ಪಾಂಡವೈಸ್ಸಹಿತೈಃ ಸರ್ವೈಃ ಪೂಜ್ಯಮಾನಃ ಸ ಮಾಧವಃ ॥ ೨ ॥

ಕೃಷ್ಣೇನ ಸಹಿತೈಸ್ಸರ್ವೈಃ ಪುನರೇವ ಮಹಾತ್ಮಭಿಃ ।
ಅಭಿಷಿಕ್ತಃ ಸ್ವರಾಜ್ಯೇ ತು ಧರ್ಮಪುತ್ರೋ ಯುಧಿಷ್ಠಿರಃ ॥ ೩ ॥

---

ಪದ್ಮ ಪುರಾಣದ ಆದಿಖಂಡದ ನಲವತ್ತೊಂಭತ್ತನೆಯ ಅಧ್ಯಾಯವು

೧. ಸೂತನು ಹೇಳುತ್ತಾನೆ: ಧರ್ಮಧಲ್ಲಿ ನಿಶ್ಚಯ (ನಂಬಿಕೆ) ವುಳ್ಳ ಪಾಂಡವರೈವರೂ ಬ್ರಾಹ್ಮಣರಿಗೆ ನಮಸ್ಕರಿಸಿ ಗುರುದೇವತೆಗಳನ್ನೂ ತೃಪ್ತಿಪಡಿಸಿದರು.

೨. ಅಷ್ಟರೊಳಗೆ ಕೃಷ್ಣನೂ ಅಲ್ಲಿಗೆ ಬಂದನು. ಪಾಂಡವರೇ ಮೊದಲಾದವರೆಲ್ಲರೂ ಅವನನ್ನು ಗೌರವಿಸಿದರು.

೩. ಕೃಷ್ಣನಿಂದ ಕೂಡಿದ ಮಹಾತ್ಮರೆಲ್ಲರೂ ಆ ಯುಧಿಷ್ಠಿರನನ್ನು ಸ್ವರಾಜ್ಯದಲ್ಲಿ ಅಭಿಷೇಕಮಾಡಿದರು.

ಏತಸ್ಮಿನ್ನಂತರೇ ಚೈವ ಮಾರ್ಕಂಡೇಯೋ ಮಹಾತ್ಮವಾನ್ ।
ತತಃ ಸ್ವಸ್ತೀತಿ ಚೋಕ್ತ್ವಾ ವೈ ಕ್ಷಣಾದಾಶ್ರಮಮಾಗತಃ ॥ ೪ ॥

ಯುಧಿಷ್ಠಿರೋಽಪಿ ಧರ್ಮಾತ್ಮಾ ಭ್ರಾತೃಭಿಃ ಸಹಿತಸ್ತು ಸಃ ।
ಮಹಾದಾನಂ ದದೌ ಚಾಥ ಧರ್ಮಪುತ್ರೋ ಯುಧಿಷ್ಠಿರಃ ॥ ೫ ॥

ಯಸ್ತ್ವಿದಂ ಕಲ್ಯಮುತ್ಥಾಯ ಪಠತೇ ವಾ ಶೃಣೋತಿ ವಾ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೬ ॥

॥ ವಾಸುದೇವ ಉವಾಚ ॥

ಮಮ ವಾಕ್ಯಂ ತು ಕರ್ತವ್ಯಂ ತತ್ರ ಸ್ನೇಹಾದ್ಬ್ರವೀಮ್ಯಹಂ ।
ನಿತ್ಯಂ ಸಂಸ್ಮರ ತ್ವಂ ರಾಜನ್ ಪ್ರಯಾಗಂ ವಿಗತಜ್ವರಃ ॥ ೭ ॥

ಪ್ರಯಾಗಂ ಸಂಸ್ಮರೇನ್ನಿತ್ಯಂ ಸಹಾಸ್ಮಾಭಿರ್ಯುಧಿಷ್ಠಿರ ।
ಸ್ವಯಂ ಪ್ರಾಪ್ಸ್ಯಸಿ ರಾಜೇಂದ್ರ ಸ್ವರ್ಗಲೋಕಂ ಚ ಶಾಶ್ವತಂ ॥ ೮ ॥

---

೪. ಇಷ್ಟರೊಳಗೆ ಮಹಾಮಹಿಮನಾದ ಮಾರ್ಕಂಡೇಯಮುನಿಯು ರಾಜನಿಗೆ ಒಳ್ಳೆಯದಾಗಲೆಂದು ಆಶೀರ್ವದಿಸಿ ಕ್ಷಣಕಾಲದಲ್ಲಿ ತನ್ನ ಆಶ್ರಮಕ್ಕೆ ಬಂದನು.

೫. ಬಳಿಕ ಯುಧಿಷ್ಠಿರನು ತಮ್ಮಂದಿರೊಡನೆ ಅನೇಕ ಮಹಾದಾನಗಳನ್ನು ಕೊಟ್ಟನು.

೬. ಪ್ರಾತಃಕಾಲದಲ್ಲಿ ಎದ್ದು, ಯಾವ ಮನುಷ್ಯನು ಇದನ್ನು ಪಠಿಸುತ್ತಾನೆಯೋ ಅಥವಾ ಶ್ರವಣಮಾಡುತ್ತಾನೆಯೋ ಅವನು ಸರ್ವ ಪಾಪರಹಿತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ.

೭–೮. ಕೃಷ್ಣನು ಹೇಳುತ್ತಾನೆ: ನಾನು ನಿಮ್ಮಲ್ಲಿರುವ ವಿಶ್ವಾಸದಿಂದ ಹೇಳುತ್ತೇನೆ. ನಾನು ಹೇಳಿದಂತೆ ಮಾಡಬೇಕು. ನೀನು ಸ್ವಲ್ಪವೂ ಯೋಚಿಸದೆ ಪ್ರಯಾಗವನ್ನು ನಿತ್ಯವೂ ಸ್ಮರಿಸು. ಆಗ ತಾನಾಗಿಯೇ ಶಾಶ್ವತವಾಗಿ ಸ್ವರ್ಗಲೋಕವನ್ನು ಹೊಂದುತ್ತೀಯೆ.

ಪ್ರಯಾಗಮನುಗಚ್ಛೇದ್ವಾ ವಸತೇ ವಾಪಿ ಯೋ ನರಃ।
ಸರ್ವಪಾಪವಿಶುದ್ಧಾತ್ಮಾ ಸ್ವರ್ಗಲೋಕಂ ಸ ಗಚ್ಛತಿ ॥ ೯ ॥

ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ನಿಯತಶ್ಶುಚಿಃ।
ಅಹಂಕಾರನಿವೃತ್ತಶ್ಚ ಸ ತೀರ್ಥಫಲಮಶ್ನುತೇ ॥ ೧೦ ॥

ಅಕೋಪನಶ್ಚ ರಾಜೇಂದ್ರ ಸತ್ಯವಾದೀ ದೃಢವ್ರತಃ।
ಅಕೋಪನಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥ ೧೧ ॥

ಋಷಿಭಿಃ ಕ್ರತವಃ ಪ್ರೋಕ್ತಾ ದೇವೈಶ್ಚಾಪಿ ಯಥಾಕ್ರಮಂ।
ನ ಹಿ ಶಕ್ಯಾ ದರಿದ್ರೇಣ ಯಜ್ಞಾಃ ಪ್ರಾಪ್ತುಂ ಮಹೀಪತೇ ॥ ೧೨ ॥

ಬಹೂಪಕರಣೋ ಯಜ್ಞೋ ನಾನಾಸಂಭಾರವಿಸ್ತರಃ।
ಪ್ರಾಪ್ಯತೇ ವಿವಿಧೈರರ್ಥೈಃ ಸಮೃದ್ಧೈರ್ವಾ ನರಃ ಕ್ವಚಿತ್ ॥ ೧೩ ॥

---

೯. ಪ್ರಯಾಗಕ್ಕೆ ಹೋದರೂ, ಅಲ್ಲೇ ವಾಸಮಾಡಿದರೂ ಮನುಷ್ಯನು ಪಾಪದಿಂದ ಬಿಡಲ್ಪಟ್ಟವನಾಗಿ ಸ್ವರ್ಗಲೋಕವನ್ನು ಹೊಂದುತ್ತಾನೆ.

೧೦. ದಾನತೆಗೆದುಕೊಳ್ಳದೆ ತೃಪ್ತನಾಗಿ ಶುಚಿಯಾಗಿಯೂ, ಅಹಂಕಾರವಿಲ್ಲದವನಾಗಿಯೂ ಇದ್ದರೆ ಈ ತೀರ್ಥದ ಫಲವನ್ನು ಹೊಂದುತ್ತಾನೆ.

೧೧. ಕೋಪವನ್ನು ಬಿಟ್ಟು ಸತ್ಯವಾದಿಯಾಗಿಯೂ, ವ್ರತನಿಷ್ಠನಾಗಿಯೂ, ಸಮಸ್ತ ಪ್ರಾಣಿಗಳನ್ನೂ ಕಾಣುವ ಮನುಷ್ಯನು ಈ ತೀರ್ಥದ ಫಲವನ್ನು ಹೊಂದುತ್ತಾನೆ.

೧೨. ದೇವತೆಗಳಿಂದಲೂ, ಋಷಿಗಳಿಂದಲೂ ಪುಣ್ಯಪ್ರಾಪ್ತಿಗೋಸ್ಕರ ಯಜ್ಞಗಳು ಹೇಳಲ್ಪಟ್ಟಿವೆ. ಅವುಗಳನ್ನು ದರಿದ್ರರು ಮಾಡಲು ಸಾಧ್ಯವಿಲ್ಲ.

೧೩. ಯಜ್ಞಕ್ಕೆ ಬಹುಸಾಧನಗಳಿರಬೇಕು ಬಹಳ ಧನವಿರಬೇಕು. ಆದುದರಿಂದ ಧನವಂತರಾದವರಲ್ಲಿ ಎಲ್ಲೋ ಕೆಲವರು ಅದನ್ನು ಮಾಡುತ್ತಾರೆ.

ಯೋ ದರಿದ್ರೈರಪಿ ಬುಧೈಃ ಶಕ್ಯಃ ಪ್ರಾಪ್ತುಂ ನರೇಶ್ವರ।
ತತೋ ಯಜ್ಞೈಃ ಫಲೈಃ ಪುಣ್ಯೈಸ್ತಂ ನಿಬೋಧ ಜನೇಶ್ವರ ॥ ೧೪ ॥
ಋಷೀಣಾಂ ಪರಮಂ ಗುಹ್ಯಮಿದಂ ಭರತಸತ್ತಮ।
ತೀರ್ಥಾಭಿಗಮನಂ ಪುಣ್ಯಂ ಯಜ್ಞೈರಪಿ ವಿಶಿಷ್ಯತೇ ॥ ೧೫ ॥
ದಶಕೋಟಿಸಹಸ್ರಾಣಿ ತ್ರಿಂಶತ್ಕೋಟಿಸ್ತಥಾಽಪರೇ।
ಮಾಘಮಾಸೇ ತು ಗಂಗಾಯಾಂ ಗಮಿಷ್ಯಂತಿ ನರರ್ಷಭ ॥ ೧೬ ॥
ಸ್ವಸ್ಥೋ ಭವ ಮಹಾರಾಜ ಭುಂಕ್ಷ್ವ ರಾಜ್ಯಮಕಂಟಕಂ।
ಪುನರ್ದ್ರಕ್ಷ್ಯಸಿ ರಾಜೇಂದ್ರ ಯಜಮಾನೋ ವಿಶೇಷತಃ ॥ ೧೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಪ್ರಯಾಗ ಮಹಾತ್ಮ್ಯೇ ಏಕೋನಪಂಚಾಶತ್ತಮೋಽಧ್ಯಾಯಃ

---

೧೪. ಯಾವುದರಿಂದ ಯಜ್ಞದ ಫಲವನ್ನು ಬಡವರೂ ಕೂಡ ಹೊಂದಲು ಸಾಧ್ಯವೋ ಅಂತಹ ಉಪಾಯವನ್ನು ಹೇಳುತ್ತೇನೆ, ಕೇಳು.

೧೫. ಎಲೈ ರಾಜನೇ, ಋುಷಿಗಳಿಗೂ ಈ ರಹಸ್ಯವು ತಿಳಿಯದು. ತೀರ್ಥಯಾತ್ರೆಯನ್ನು ಮಾಡುವುದು ಯಜ್ಞ ಫಲಕ್ಕಿಂತಲೂ ಹೆಚ್ಚಿನ ಫಲವುಳ್ಳದ್ದೆಂದು ಹೇಳಲ್ಪಟ್ಟಿದೆ.

೧೬. ಮೂವತ್ತು ಕೋಟಿಯ ಹತ್ತು ಸಾವಿರ ತೀರ್ಥಗಳು ಮಾಘಮಾಸದಲ್ಲಿ ಗಂಗೆಯಲ್ಲಿ ಬಂದು ಸೇರಿರುತ್ತವೆ.

೧೭. ಎಲೈ ರಾಜನೇ, ಶತ್ರುರಹಿತವಾದ ರಾಜ್ಯವನ್ನು ಅನುಭವಿಸುತ್ತಾ ಸುಖವಾಗಿರು. ನೀನು ಯಾಗಮಾಡುವಾಗ ಅದೆಲ್ಲವನ್ನೂ ನೋಡುತ್ತೀಯಂತೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಪ್ರಯಾಗ ಮಹಾತ್ಮ್ಯೆಯಲ್ಲಿ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಪಂಚಾಶತ್ತಮೋಽಧ್ಯಾಯಃ

॥ ಋಷಯ ಊಚುಃ ॥

**ಭವತಾ ಕಥಿತಂ ಸರ್ವಂ ಯತ್ಕಿಂಚಿತ್ಪೃಷ್ಟಮೇವ ವಾ ।**
**ಇದಾನೀಮಪಿ ಪೃಚ್ಛಾಮ ಏಕಂ ವದ ಮಹಾಮತೇ ॥ ೧ ॥**

**ಏತೇಷಾಂ ಖಲು ತೀರ್ಥಾನಾಂ ಸೇವನಾದ್ಯತ್ಫಲಂ ಭವೇತ್ ।**
**ಸರ್ವೇಷಾಂ ಕಿಲ ಕೃತ್ಸ್ನೈಕಂ ಕರ್ಮ ಕೇನ ಚ ಲಭ್ಯತೇ**
**ಏತನ್ನೋ ಬ್ರೂಹಿ ಸರ್ವಜ್ಞ ಕರ್ಮೈವಂ ಯದಿ ವರ್ತತೇ ॥ ॥ ೨ ॥**

॥ ಸೂತ ಉವಾಚ ॥

**ಕರ್ಮಯೋಗಃ ಕಿಲ ಪ್ರೋಕ್ತೋ ವರ್ಣಾನಾಂ ದ್ವಿಜಪೂರ್ವಶಃ ।**
**ನಾನಾವಿಧೋ ಮಹಾಭಾಗಾಸ್ತತ್ರ ಚೈಕಂ ವಿಶಿಷ್ಯತೇ ॥ ೩ ॥**

---

ಪದ್ಮಪುರಾಣದ ಆದಿಖಂಡದ ಐವತ್ತನೆಯ ಅಧ್ಯಾಯವು.

೧. ಋಷಿಗಳು ಹೇಳುತ್ತಾರೆ: ಎಲೈ ಮಹಾಪ್ರಾಜ್ಞನಾದ ಸೂತ ಮುನಿಯೇ, ನಾವು ಯಾವುದೋ ಸ್ವಲ್ಪವನ್ನು ಕೇಳಿದರೆ ನೀನು ಎಲ್ಲ ವನ್ನೂ ಹೇಳಿದ್ದೀಯೆ. ಈಗ ಒಂದನ್ನು ಕೇಳುತ್ತೇವೆ. ಅದನ್ನು ಹೇಳು.

೨. ಈ ಎಲ್ಲ ತೀರ್ಥಗಳ ಸೇವನೆಯಿಂದ ಬರುವ ಫಲವೆಲ್ಲವೂ ಒಂದೇ ಕರ್ಮದಿಂದ ಬರುವಂತಹ ಯಾವುದಾದರೂ ಒಂದು ಕರ್ಮ ವಿದ್ದರೆ ಅದನ್ನು ದಯವಿಟ್ಟು ನನಗೆ ಹೇಳು.

೩. ಸೂತನು ಹೇಳುತ್ತಾನೆ: ದ್ವಿಜರೇ ಮೊದಲಾದವರಿಗೆ ಕರ್ಮ ಯೋಗವು ನಾನಾ ವಿಧವಾಗಿ ಹೇಳಲ್ಪಟ್ಟಿದೆ. ಅವುಗಳಲ್ಲಿ ಒಂದು ವಿಶೇ ಷವಿದೆ.

ಹರಿಭಕ್ತಿಃ ಕೃತಾ ಯೇನ ಮನಸಾ ವಚಸಾ ಗಿರಾ ।
ಜಿತಂ ತೇನ ಜಿತಂ ತೇನ ಜಿತಮೇವ ನ ಸಂಶಯಃ ॥ ೪ ॥

ಹರಿರೇವ ಸಮಾರಾಧ್ಯಃ ಸರ್ವದೇವೇಶ್ವರೇಶ್ವರಃ ।
ಹರಿನಾಮ ಮಹಾಮಂತ್ರೈರ್ನಶ್ಯೇತ್ಪಾಪಪಿಶಾಚಕಂ ॥ ೫ ॥

ಹರೇಃ ಪ್ರದಕ್ಷಿಣಾಂ ಕೃತ್ವಾ ಸಕೃದಪ್ಯಮಲಾಶಯಾಃ ।
ಸರ್ವತೀರ್ಥಸಮಾಗಾಹ್ಯಂ ಲಭಂತೇ ಯನ್ನ ಸಂಶಯಃ ॥ ೬ ॥

ಪ್ರತಿಮಾಂ ಚ ಹರೇರ್ದೃಷ್ಟ್ವಾ ಸರ್ವತೀರ್ಥಫಲಂ ಲಭೇತ್ ।
ವಿಷ್ಣುನಾಮಪದಂ ಜಪ್ತ್ವಾ ಸರ್ವಮಂತ್ರಫಲಂ ಲಭೇತ್ ॥ ೭ ॥

ವಿಷ್ಣುಪ್ರಸಾದತುಲಸೀಮಾಘ್ರಾಯ ದ್ವಿಜಸತ್ತಮಃ ।
ಪ್ರಚಂಡಂ ವಿಕರಾಳಂ ತದ್ಯಮಸ್ಯಾಸ್ಯಂ ನ ಪಶ್ಯತಿ ॥ ೮ ॥

---

೪. ಯಾವನು ಹರಿಯಲ್ಲಿ ಭಕ್ತಿಯಿಡುತ್ತಾನೆಯೋ ಅವನು ಎಲ್ಲವನ್ನೂ ಖಂಡಿತವಾಗಿಯೂ ಮೀರಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ.

೫. ಸರ್ವಶ್ರೇಷ್ಠನಾದ ಹರಿಯನ್ನೇ ಆರಾಧಿಸಬೇಕು. ಹರಿಸ್ಮರಣೆಯೆಂಬ ಮಹಾಮಂತ್ರದಿಂದ ಪಾಪವೆಂಬ ಪಿಶಾಚಿಯು ನಾಶವಾಗುತ್ತದೆ.

೬. ಒಂದಾವರ್ತಿಯಾದರೂ ಹರಿಗೆ ನಮಸ್ಕರಿಸಿದರೆ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದ ಫಲವನ್ನು ಹೊಂದುತ್ತಾನೆ. ಇದರಲ್ಲಿ ಸಂಶಯವಿಲ್ಲ.

೭. ಹರಿಯವಿಗ್ರಹವನ್ನು ದರ್ಶನಮಾಡಿದರೆ ಸರ್ವತೀರ್ಥಫಲವೂ ಬರುತ್ತದೆ. ವಿಷ್ಣುನಾಮವನ್ನು ಜಪಿಸಿದರೆ ಸರ್ವಮಂತ್ರಜಪದ ಫಲವು ಬರುತ್ತದೆ.

೮. ದ್ವಿಜಶ್ರೇಷ್ಠನು ವಿಷ್ಣುಪ್ರಸಾದದ ತುಲಸಿಯನ್ನು ಮೂಸಿ ನೋಡಿದರೆ ಭಯಂಕರವಾದ ಯಮನ ಮೋರೆಯನ್ನು ನೋಡುವುದಿಲ್ಲ.

ಸಕೃತ್ಪ್ರಣಾಮೀ ಕೃಷ್ಣಸ್ಯ ಮಾತುಃ ಸ್ತನ್ಯಂ ಪಿಬೇನ್ನ ಹಿ ।
ಹರಿಪಾದೇ ಮನೋ ಯೇಷಾಂ ತೇಭ್ಯೋ ನಿತ್ಯಂ ನಮೋನಮಃ ॥

ಪುಲ್ಕಸಃ ಶ್ವಪಚೋ ವಾಪಿ ಯೇ ಚಾನ್ಯೇ ಮ್ಲೇಚ್ಛಜಾತಯಃ ।
ತೇಽಪಿ ವಂದ್ಯಾ ಮಹಾಭಾಗಾ ಹರಿಪಾದೈಕಸೇವಕಾಃ ॥ ೧೦ ॥

ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।
ಹರೌ ಭಕ್ತಿಂ ವಿಧಾಯೈವ ಗರ್ಭವಾಸಂ ನ ಪಶ್ಯತಿ ॥ ೧೧ ॥

ಹರೇರಗ್ರೇ ಸ್ವನೈರುಚ್ಚೈರ್ನೃತ್ಯಂಸ್ತನ್ನಾಮಕೃನ್ನರಃ ।
ಪುನಾತಿ ಭುವನಂ ವಿಪ್ರಾಃ ಗಂಗಾದಿಸಲಿಲಂ ಯಥಾ ॥ ೧೨ ॥

ದರ್ಶನಾತ್ಸ್ಪರ್ಶನಾತ್ತಸ್ಯ ಆಲಾಪಾದಪಿ ಭಕ್ತಿತಃ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೧೩ ॥

---

೯. ಕೃಷ್ಣನಿಗೆ ಒಂದುಸಾರಿ ನಮಸ್ಕಾರಮಾಡಿದರೂ ಅವನಿಗೆ ಪುನರ್ಜನ್ಮವಿಲ್ಲ. ಹರಿಯ ಪಾದದಲ್ಲಿಯೇ ಯಾರ ಮನಸ್ಸು ಅಡಗಿದೆಯೋ ಅವರಿಗೆ ಅನೇಕಾನೇಕ ನಮಸ್ಕಾರಗಳು.

೧೦. ಎಂತಹ ಚಂಡಾಲನಾದರೂ, ಮ್ಲೇಚ್ಛನಾದರೂ ಕೂಡ ಹರಿ ಪಾದಸೇವಕರಾಗಿದ್ದರೆ ಅವರನ್ನು ನಾವು ಸೇವಿಸಬಹುದು.

೧೧. ಹೀಗಿರುವಲ್ಲಿ ಬ್ರಾಹ್ಮಣರೂ, ರಾಜರ್ಷಿಗಳೂ ಇತರ ಭಕ್ತರೂ ಹರಿಭಕ್ತರಾಗಿದ್ದರೆ, ಅವರನ್ನು ಸೇವಿಸುವ ವಿಷಯದಲ್ಲಿ ಹೇಳಬೇಕಾದುದೇನು ? ಹರಿಯಲ್ಲಿ ಭಕ್ತಿಮಾಡಿದವನು ಗರ್ಭವಾಸವನ್ನು ಪುನಃ ಅನುಭವಿಸುವುದಿಲ್ಲ.

೧೨. ಹರಿಯ ನಾಮವನ್ನು ಗಟ್ಟಿಯಾಗಿ ಹೇಳುತ್ತಾ ನರ್ತನಮಾಡಿದವನು ಗಂಗಾಜಲದಂತೆ ಲೋಕವನ್ನು ಪವಿತ್ರವನ್ನಾಗಿ ಮಾಡುವನು.

೧೩. ಅವನ ದರ್ಶನಸ್ಪರ್ಶನಗಳಿಂದಲೂ ಭಕ್ತಿಯಿಂದ ಅವನ ವಿಷಯವಾದ ಮಾತುಗಳನ್ನಾಡುವುದರಿಂದಲೂ ಬಹ್ಮಹತ್ಯಾದಿಪಾಪಗಳು ಪರಿಹಾರವಾಗುವವು. ಇದರಲ್ಲಿ ಸಂಶಯವಿಲ್ಲ.

ಹರೇಃ ಪ್ರದಕ್ಷಿಣಂ ಕುರ್ವನ್ ಉಚ್ಚೈಸ್ತನ್ನಾಮಕೃನ್ನರಃ।
ಕರತಾಳಾದಿಸಂಧಾನಂ ಸುಸ್ವರಂ ಕಲಶಬ್ದಿತಂ ॥
ಬ್ರಹ್ಮಹತ್ಯಾದಿಕಂ ಪಾಪಂ ತೇನೈವ ಕರತಾಳಿತಂ ॥ ೧೪ ॥
ಹರಿಭಕ್ತಿಕಥಾಮುಕ್ತಾಖ್ಯಾಯಿಕಾಂ ಶೃಣುಯಾಚ್ಚ ಯಃ।
ತಸ್ಯ ಸಂದರ್ಶನಾದೇವ ಪೂತೋ ಭವತಿ ಮಾನವಃ ॥ ೧೫ ॥
ಕಿಂ ಪುನಸ್ತಸ್ಯ ಪಾಪಾನಾಮಾಶಂಕಾ ಮುನಿಪುಂಗವಾಃ ।
ತೀರ್ಥಾನಾಂ ಚ ಪರಂ ತೀರ್ಥಂ ಕೃಷ್ಣನಾಮ ಮಹರ್ಷಯಃ ॥
ತೀರ್ಥೀಕುರ್ವಂತಿ ಜಗತೀಂ ಗೃಹೀತಂ ಕೃಷ್ಣನಾಮ ಯೈಃ।
ತಸ್ಮಾನ್ಮುನಿವರಾಃ ಪುಣ್ಯಂ ನಾತಃಪರತರಂ ವಿದುಃ ॥ ೧೭ ॥
ವಿಷ್ಣುಪ್ರಸಾದನಿರ್ಮಾಲ್ಯಂ ಭುಕ್ತ್ವಾ ಧೃತ್ವಾ ಚ ಮಸ್ತಕೇ।
ವಿಷ್ಣುರೇವ ಭವೇನ್ಮರ್ತ್ಯೋ ಯಮಶೋಕವಿನಾಶನಃ ॥ ೧೮ ॥

---

೧೪. ಹರಿಯ ಪ್ರದಕ್ಷಿಣೆಯನ್ನು ಮಾಡುತ್ತಾ ಘಟ್ಟಿಯಾಗಿ ಅವನ ನಾಮೋಚ್ಚಾರಣೆಯನ್ನು ಚಪ್ಪಾಳೆಹೊಡೆಯುತ್ತಾ ಸುಸ್ವರವಾಗಿ ಹಾಡುತ್ತಿದ್ದರೆ ಬ್ರಹ್ಮಹತ್ಯಾದಿಪಾಪವೆಲ್ಲವೂ ಚಿಟಕಿಹಾಕಿದಂತೆ ಓಡುತ್ತವೆ.

೧೫. ಹರಿಭಕ್ತಿಯಿಂದ ಕೂಡಿದ ಕಥೆಯನ್ನು ಕೇಳಿದವನ ದರ್ಶನ ಮಾತ್ರದಿಂದಲೇ ಮನುಷ್ಯನು ಪವಿತ್ರನಾಗುತ್ತಾನೆ.

೧೬. ಹೀಗಿರುವಲ್ಲಿ ಅವನ ಪಾಪಗಳು ಹೋಗುತ್ತವೆಂಬುದರಲ್ಲಿ ಸಂದೇಹವೇನಿದೆ? ಎಲೈ ಋಷಿಶ್ರೇಷ್ಠರೇ: ಕೃಷ್ಣನಾಮವು ತೀರ್ಥಗಳಲ್ಲೆಲ್ಲ ಉತ್ತಮವಾದ ತೀರ್ಥವು.

೧೭. ಶ್ರೀಕೃಷ್ಣನ ನಾಮಸ್ಮರಣೆ ಮಾಡಿದರೆ ಜಗತ್ತೇ ತೀರ್ಥವಾಗುತ್ತದೆ. ಆ ನಾಮಕ್ಕಿಂತಲೂ ಪುಣ್ಯವಾದುದು ಮತ್ತೊಂದಿಲ್ಲ.

೧೮. ವಿಷ್ಣುಪ್ರಸಾದವನ್ನು ಭಕ್ಷಿಸಿ ತಲೆಯಲ್ಲಿ ಧರಿಸಿದರೆ ಅವನು ವಿಷ್ಣುವೇ ಸರಿ. ಅವನಿಗೆ ಯಮನಸಂಬಂಧವಾದ ದುಃಖವಿಲ್ಲ. ಎಂದರೆ ನರಕಬಾಧೆಯಿಲ್ಲ. ಅಂತಹವನು ಪೂಜಿಸಲ್ಪಡಲು ಮತ್ತು ನಮಸ್ಕರಿಸಲ್ಪಡಲು ಯೋಗ್ಯನು. ಇದರಲ್ಲಿ ಸಂಶಯವಿಲ್ಲ.

ಅರ್ಚನೀಯೋ ನಮಸ್ಕಾರ್ಯೋ ಹರಿರೇವ ನ ಸಂಶಯಃ ।
ಯೇ ಹೀಮಂ ವಿಷ್ಣುಮವ್ಯಕ್ತಂ ದೇವಂ ವಾಪಿ ಮಹೇಶ್ವರಂ ।
ಏಕೀಭಾವೇನ ಪಶ್ಯಂತಿ ನ ತೇಷಾಂ ಪುನರುದ್ಭವಃ ॥ ॥ ೧೯ ॥
ತಸ್ಮಾದನಾದಿನಿಧನಂ ವಿಷ್ಣುಮಾತ್ಮಾನಮವ್ಯಯಂ ।
ಹರಿಂ ಚೈಕಂ ಪ್ರಪಶ್ಯಧ್ವಂ ಪೂಜಯಧ್ವಂ ತಥೈವ ಹಿ ॥ ೨೦ ॥
ಯೇಽಸಮಾನಂ ಪ್ರಪಶ್ಯಂತಿ ಹರಿಂ ವೈ ದೇವತಾಂತರಂ ।
ತೇ ಯಾಂತಿ ನರಕಾನ್ ಘೋರಾನ್ನತಾಂಸ್ತು ಗಣಯೇದ್ಧರಿಃ ॥ ೨೧ ॥
ಮೂರ್ಖಂ ವಾ ಪಂಡಿತಂ ವಾಪಿ ಬ್ರಾಹ್ಮಣಂ ಕೇಶವಪ್ರಿಯಂ ।
ಶ್ವಪಾಕಂ ವಾ ಮೋಚಯತಿ ನಾರಾಯಣಃ ಸ್ವಯಂ ಪ್ರಭುಃ ॥ ೨೨ ॥
ನಾರಾಯಣಾತ್ಪರೋ ನಾಸ್ತಿ ಪಾಪರಾಶಿದವಾನಲಃ ।
ಕೃತ್ವಾಪಿ ಪಾತಕಂ ಘೋರಂ ಕೃಷ್ಣನಾಮ್ನಾ ವಿಮುಚ್ಯತೇ ॥ ೨೩ ॥

---

೧೯. ಯಾರು ವಿಷ್ಣುವನ್ನೂ ಈಶ್ವರನನ್ನೂ ಒಂದೆಂದು ತಿಳಿಯುತ್ತಾರೆಯೋ, ಅವರಿಗೆ ಪುನರ್ಜನ್ಮವಿಲ್ಲ.

೨೦. ಆದುದರಿಂದ ಆದ್ಯಂತಗಳಿಲ್ಲದ ಮತ್ತು ನಾಶರಹಿತನಾದ ವಿಷ್ಣುವನ್ನೂ ಹರಿಯನ್ನೂ ಒಂದಾಗಿ ತಿಳಿದು ಪೂಜೆಮಾಡಿರಿ.

೨೧. ಹರಿಯನ್ನೂ, ಶಿವನನ್ನೂ ಯಾರು ಬೇರೆ ಬೇರೆಯೆಂದು ತಿಳಿಯುತ್ತಾರೆಯೋ ಅವರು ಘೋರವಾದ ನರಕವನ್ನು ಹೊಂದುತ್ತಾರೆ. ಹರಿಯು ಅವರನ್ನು ಲೆಕ್ಕಿಸುವುದಿಲ್ಲ.

೨೨. ಮೂರ್ಖನಾಗಲಿ, ಪಂಡಿತನಾಗಲಿ, ಬ್ರಾಹ್ಮಣನಾಗಲಿ, ಹೊಲೆಯನಾಗಲಿ ವಿಷ್ಣುಭಕ್ತನಾಗಿದ್ದಲ್ಲಿ ನಾರಾಯಣನು ಅವನಿಗೆ ಮುಕ್ತಿಯನ್ನು ಕೊಡುತ್ತಾನೆ.

೨೩. ಪಾಪರಾಶಿಗಳನ್ನು ಸುಡುವುದರಲ್ಲಿ ಬೆಂಕಿಯಂತೆ ಇರುವವನು ನಾರಾಯಣನಿಗಿಂತ ಬೇರೆ ಯಾರೂ ಇಲ್ಲ. ಮಹಾಪಾತಕವನ್ನು ಮಾಡಿದ್ದರೂ ಕೃಷ್ಣನ ನಾಮೋಚ್ಚಾರಣೆಯಿಂದ ಮುಕ್ತನಾಗುತ್ತಾನೆ.

ಸ್ವಯಂ ನಾರಾಯಣೋ ದೇವಃ ಸ್ವನಾಮ್ನಿ ಜಗತಾಂ ಗುರುಃ ।
ಆತ್ಮನೋಽಭ್ಯಧಿಕಾಂ ಶಕ್ತಿಂ ಸ್ಥಾಪಯಾಮಾಸ ಸುವ್ರತಾಃ ॥ ೨೪ ॥

ಅತ್ರ ಯೇ ವಿವದಂತೇ ವಾ ಆಯಾಸಲಘುದರ್ಶನಾತ್ ।
ಫಲಾನಾಂ ಗೌರವಾಚ್ಚಾಪಿ ತೇ ಯಾಂತಿ ನರಕಂ ಬಹು ॥ ೨೫ ॥

ತಸ್ಮಾದ್ಧರೌ ಭಕ್ತಿಮಾನ್ ಸ್ಯಾದ್ಧರಿನಾಮಪರಾಯಣಃ ।
ಪೂಜಕಂ ಪೃಷ್ಠತೋ ರಕ್ಷೇನ್ನಾಮಿನಂ ವಕ್ಷಸಿ ಪ್ರಭುಃ ॥ ೨೬ ॥

ಹರಿನಾಮಮಹಾವಜ್ರಂ ಪಾಪ ಪರ್ವತದಾರಣಂ ।
ತಸ್ಯ ಪಾದೌ ತು ಸಫಲೌ ತದರ್ಥಗತಿಶಾಲಿನೀ ॥ ೨೭ ॥

ತಾವೇವ ಧನ್ಯಾವಾಖ್ಯಾತೌ ಯೌ ತು ಪೂಜಾಕರೌ ಕರೌ ।
ಉತ್ತಮಾಂಗಮುತ್ತಮಾಂಗಂ ತದ್ಧರೌ ನಮ್ರಮೇವ ಯತ್ ॥

---

೨೪. ಎಲೈ ಋಷಿಗಳೇ, ನಾರಾಯಣನು ತಾನಾಗಿಯೇ ತನ್ನ ಹೆಸರಿನಲ್ಲಿ ತನಗಿಂತಲೂ ಹೆಚ್ಚಾದ ಶಕ್ತಿಯನ್ನಿಟ್ಟಿದ್ದಾನೆ.

೨೫. ಕೃಷ್ಣನೆಂಬ ಹೆಸರನ್ನುಚ್ಚರಿಸಲಾಯಾಸವಿಲ್ಲವೆಂದೂ ಫಲ ಹೆಚ್ಚೆಂದೂ ತಿಳಿದು ಯಾರು ತರ್ಕಿಸುತ್ತಾರೆಯೋ ಅವರು ನರಕಭಾಗಿಗಳಾಗುತ್ತಾರೆ.

೨೬. ಹರಿಯ ಹೆಸರನ್ನು ಹೇಳುತ್ತ ಅವನಲ್ಲಿ ಭಕ್ತಿಯಿಡಬೇಕು. ಪೂಜೆಮಾಡುವವನನ್ನು ಹಿಂದೆ ರಕ್ಷಿಸುತ್ತಾನೆ. ನಾಮೋಚ್ಚಾರಣೆಮಾಡುವವನನ್ನು ತನ್ನ ಎದೆಯಲ್ಲಿಟ್ಟುಕೊಂಡು ರಕ್ಷಿಸುತ್ತಾನೆ.

೨೭. ಹರಿನಾಮವೆಂಬ ಮಹಾವಜ್ರವು ಪಾಪವೆಂಬ ಪರ್ವತವನ್ನು ಸೀಳುತ್ತದೆ. ಆ ಹರಿಯನ್ನು ನೋಡಲು ಹೋಗುವ ಕಾಲುಗಳು ಸಫಲಗಳು.

೨೮. ಹರಿಯನ್ನು ಪೂಜೆಮಾಡುವ ಕೈಗಳು ಧನ್ಯಗಳು. ಹರಿಯನ್ನು ಬಗ್ಗಿ ನಮಿಸುವ ಶಿರವು ಉತ್ತಮಾಂಗವು.

ಸಾ ಜಿಹ್ವಾ ಯಾ ಹರಿಂ ಸ್ತೌತಿ ತನ್ಮನಸ್ತತ್ಪದಾನುಗಂ।
ತಾನಿ ಲೋಮಾನಿ ಚೋಚ್ಯಂತೇ ಯಾನಿ ತನ್ನಾಮ್ನಿಚೋತ್ಥಿತಂ ॥

ಕುರ್ವಂತಿ ತಚ್ಚ ನೇತ್ರಾಂಬು ಯದಚ್ಯುತಪ್ರಸಂಗತಃ।
ಅಹೋ ಲೋಕಾ ಅತಿತರಾಂ ದೈವದೋಷೇಣ ವಂಚಿತಾಃ ॥ ೩೦ ॥

ನಾಮೋಚ್ಚಾರಣಮಾತ್ರೇಣ ಮುಕ್ತಿದಂ ನ ಭಜಂತಿ ಯೇ।
ವಂಚಿತಾಸ್ತೇ ಚ ಕಲುಷಾಃ ಸ್ತ್ರೀಣಾಂ ಸಂಗಪ್ರಸಂಗತಃ ॥ ೩೧ ॥

ಪ್ರತಿಷ್ಠಂತಿ ಚ ಲೋಮಾನಿ ಯೇಷಾಂ ನೋ ಕೃಷ್ಣಶಬ್ದನೇ।
ತೇ ಮೂರ್ಖಾ ಹ್ಯಕೃತಾತ್ಮಾನಃ ಪುತ್ರಶೋಕಾದಿವಿಹ್ವಲಾಃ ॥೩೨॥

ರುದಂತಿ ಬಹುಲಾಲಾಪೈರ್ನ ಕೃಷ್ಣಾಕ್ಷರಕೀರ್ತನೇ।
ಜಿಹ್ವಾಂ ಲಬ್ಧ್ವಾಪಿ ಲೋಕೇಽಸ್ಮಿನ್ ಕೃಷ್ಣನಾಮ ಜಪೇನ್ನ ಹಿ॥೩೩॥

---

೨೯. ಹರಿಧ್ಯಾನಮಾಡುವುದೇ ಯೋಗ್ಯವಾದ ನಾಲಗೆಯು. ಅವನ ಪಾದಧ್ಯಾನದಲ್ಲಿ ಲೀನವಾಗಿರುವುದೇ ಯೋಗ್ಯವಾದ ಮನಸ್ಸು. ಅವನ ಹೆಸರನ್ನು ಕೇಳಿ ಆಗುವ ರೋಮಾಂಚಗಳೇ ಲೋಮಗಳು.

೩೦. ಅಚ್ಯುತನ ಪ್ರಸಂಗದಿಂದ ಸಂತೋಷದಿಂದ ಬಂದ ಕಣ್ಣೀರೇ ಆನಂದಬಾಷ್ಪವು. ಆದರೆ ಜನರು ದೈವದೋಷದಿಂದ ವಂಚಿತರಾಗಿರುವರು.

೩೧. ನಾಮೋಚ್ಚಾರಣ ಮಾತ್ರದಿಂದಲೇ ಮುಕ್ತಿಯನ್ನು ಕೊಡುವ ಆ ಹರಿಯನ್ನು ಯಾರು ಭಜಿಸುವುದಿಲ್ಲವೋ ಆ ಪಾಪಿಗಳು ಸ್ತ್ರೀ ಸಂಗ ದೋಷದಿಂದ ವಂಚಿತರಾಗಿದ್ದಾರೆ.

೩೨. ಕೃಷ್ಣನ ನಾಮೋಚ್ಚಾರಣವಾಗುತ್ತಲೂ ಯಾರಿಗೆ ಭಕ್ತಿಪರ ವಶದಿಂದ ರೋಮಾಂಚವಾಗುವುದಿಲ್ಲವೋ ಆ ಮೂರ್ಖರು ಅಯೋಗ್ಯರು. ಪುತ್ರಶೋಕಾದಿಗಳಿಂದ ಕೂಡಿದವರು.

೩೩. ಕೃಷ್ಣನಾಮವನ್ನುಚ್ಚರಿಸುತ್ತ ಯಾರು ಬಹುವಾದ ಸ್ತೋತ್ರಗಳಿಂದ ಅಳುವುದಿಲ್ಲವೋ ಮತ್ತು ಯಾರು ನಾಲಗೆಯನ್ನು ಹೊಂದಿದ್ದರೂ ಕೃಷ್ಣನಾಮವನ್ನು ಜಪಿಸುವುದಿಲ್ಲವೋ, ಅವರು ಮುಕ್ತಿಸೋಪಾನವನ್ನು ಏರಿದ್ದರೂ ಸುಲಭವಾಗಿಯೇ ಅಲ್ಲಿಂದ ಜಾರಿಬೀಳುವರು.

ಲಬ್ಧ್ವಾಪಿ ಮುಕ್ತಿಸೋಪಾನಂ ಹೇಲಯೈವ ಚ್ಯವಂತಿ ತೇ।
ತಸ್ಮಾದ್ಯತ್ನೇನ ವೈ ವಿಷ್ಣುಂ ಕರ್ಮಯೋಗೇನ ಮಾನವಃ ॥೩೪॥

ಕರ್ಮಯೋಗಾರ್ಚಿತೋ ವಿಷ್ಣುಃ ಪ್ರಸೀದತ್ಯೇವ ನಾನ್ಯಥಾ॥
ಸರ್ವೇಷಾಂ ಖಲು ತೀರ್ಥಾನಾಂ ಸ್ನಾನಪಾನಾವಗಾಹನೈಃ।
ಯತ್ಫಲಂ ಲಭತೇ ಮರ್ತ್ಯಸ್ತತ್ಫಲಂ ಕೃಷ್ಣಸೇವನಾತ್ ॥೩೫॥

ಯಜಂತೇ ಕರ್ಮಯೋಗೇನ ಧನ್ಯಾ ಏವ ನರಾ ಹರಿಂ।
ತಸ್ಮಾದ್ಯಜಧ್ವಂ ಮುನಯಃ ಕೃಷ್ಣಂ ಪರಮಮಂಗಳಂ ॥೩೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಕರ್ಮಯೋಗ ಪ್ರಶಂಸನಂ ನಾಮ ಪಂಚಾಶತ್ತಮೋಽಧ್ಯಾಯಃ

---

೩೪. ಆದುದರಿಂದ ಕೃಷ್ಣನನ್ನು ಕರ್ಮಯೋಗದಿಂದ ಅರ್ಚಿಸಬೇಕು. ಹಾಗೆ ಮಾಡಿದರೆ ವಿಷ್ಣುವು ಪ್ರಸನ್ನನಾಗುತ್ತಾನೆ. ಬೇರೆ ಉಪಾಯವಿಲ್ಲ.

೩೫. ಎಲ್ಲ ತೀರ್ಥಗಳಲ್ಲಿಯೂ ಸ್ನಾನಪಾನಗಳಿಂದ ಯಾವ ಫಲವನ್ನು ಹೊಂದುತ್ತಾನೆಯೋ ಆ ಫಲವನ್ನು ಕೃಷ್ಣನ ಸೇವೆಯಿಂದ ಹೊಂದುತ್ತಾನೆ.

೩೬. ಯಾರು ಕರ್ಮಯೋಗದಿಂದ ಹರಿಯನ್ನು ಪೂಜಿಸುತ್ತಾರೆಯೋ ಅವರೇ ಧನ್ಯರು. ಆದುದರಿಂದ ಎಲೈ ಮುನಿಗಳೇ, ನೀವು ಪರಮ ಮಂಗಳ ಸ್ವರೂಪನಾದ ಕೃಷ್ಣನನ್ನು ಪೂಜಿಸಿರಿ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದಲ್ಲಿ
ಕರ್ಮಯೋಗ ಪ್ರಶಂಸನದಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥಪದ್ಮ ಪುರಾಣೇ ಆದಿಖಂಷೇ ಏಕಪಂಚಾಶತ್ತಮೋಽಧ್ಯಾಯಃ

॥ ಋಷಯ ಊಚುಃ ॥

**ಕರ್ಮಯೋಗಃ ಕಥಂ ಸೂತ ಯೇನ ಚಾರಾಧಿತೋ ಹರಿಃ ।**
**ಪ್ರಸೀದತಿ ಮಹಾಭಾಗ ವದ ನೋ ವದತಾಂ ವರ ॥ ೧ ॥**

**ಯೇನಾಽಸೌ ಭಗವಾನೀಶಃ ಸಮಾರಾಧ್ಯೋ ಮುಮುಕ್ಷುಭಿಃ ।**
**ತದ್ವದಾಖಿಲಲೋಕಾನಾಂ ರಕ್ಷಣಂ ಧರ್ಮಸಂಗ್ರಹಂ ॥ ೨ ॥**

**ತಂ ಕರ್ಮಯೋಗಂ ವದ ನಃ ಸೂತ ಮೂರ್ತಿಮಯುಸ್ತು ಯಃ ।**
**ಇತಿ ಶುಶ್ರೂಷವೋ ವಿಪ್ರಾ ಭವದಗ್ರೇ ವ್ಯವಸ್ಥಿತಾಃ ॥ ೩ ॥**

---

ಪದ್ಮಪುರಾಣದ ಆದಿಖಂಡದ ಐವತ್ತೊಂದನೆಯ ಅಧ್ಯಾಯವು

೧. ಋಷಿಗಳು ಹೇಳುತ್ತಾರೆ: ಎಲೈ ಸೂತನೇ, ಕರ್ಮಯೋಗವೆಂದರೇನು? ಪೂರ್ವದಲ್ಲಿ ಅದರಿಂದ ಯಾರು ಹರಿಯನ್ನು ಆರಾಧಿಸಿದರು? ಆ ವಿಚಾರವನ್ನು ನಮಗೆ ಹೇಳು.

೨. ಮೋಕ್ಷವನ್ನಪೇಕ್ಷಿಸುವವರು ಆ ಭಗವಂತನ್ನು ಆರಾಧಿಸಬೇಕಾದ ಕರ್ಮಯೋಗದ ಸ್ವರೂಪವೆಂತಹುದು? ಎಲ್ಲರೂ ಧರ್ಮಸಂಗ್ರಹ ಮಾಡಬೇಕಷ್ಟೆ? ಅದನ್ನು ನಮಗೆ ಹೇಳು.

೩. ಮೂರ್ತಿಮತ್ತಾದ ಆ ಕರ್ಮಯೋಗದ ಸ್ವರೂಪವೆಂತಹದೆಂಬುದನ್ನು ನಮಗೆ ಹೇಳು. ಎಲೈ ಸೂತನೇ ಇದನ್ನು ಕೇಳುವುದರಲ್ಲಿ ಆಸಕ್ತಿಯುಳ್ಳ ಬ್ರಾಹ್ಮಣರು ಇಗೋ ನಿನ್ನ ಮುಂದಿದ್ದೇವೆ.

॥ ಸೂತ ಉವಾಚ ॥

ಏವಮೇವ ಪುರಾ ಪೃಷ್ಟೋ ವ್ಯಾಸಃ ಸತ್ಯವತೀಸುತಃ ।
ಋಷಿಭೀರಗ್ನಿಸಂಕಾಶೈರ್ವ್ಯಾಸಸ್ತಾನಾಹ ಯಚ್ಛೃಣು ॥ ೪ ॥

॥ ವ್ಯಾಸ ಉವಾಚ ॥

ಶೃಣುಧ್ವಮೃಷಯಃ ಸರ್ವೇ ವಕ್ಷ್ಯಮಾಣಂ ಸನಾತನಂ ।
ಕರ್ಮಯೋಗಂ ಬ್ರಾಹ್ಮಣಾನಾಮಾತ್ಯಂತಿಕಫಲಪ್ರದಂ ॥ ೫ ॥
ಆಮ್ನಾಯ ಸಿದ್ಧಿಮಖಿಲಂ ಬ್ರಾಹ್ಮಣಾರ್ಥಂ ಪ್ರದರ್ಶಿತಂ ।
ಋಷೀಣಾಂ ಶೃಣ್ವತಾಂ ಪೂರ್ವಂ ಮನುರಾಹ ಪ್ರಜಾಪತಿಃ ॥ ೬ ॥
ಸರ್ವಪಾಪಹರಂ ಪುಣ್ಯಂ ಋಷಿಸಂಘೈರ್ನಿಷೇವಿತಂ ।
ಸಮಾಹಿತಧಿಯೋ ಯೂಯಂ ಶೃಣುಧ್ವಂ ಗದತೋ ಮಮ ॥ ೭ ॥
ಕೃತೋಪನಯನೋ ವೇದಾನಧೀಯೀತ ದ್ವಿಜೋತ್ತಮಃ ।
ಗರ್ಭಾಷ್ಟಮೇಽಷ್ಟಮೇವಾಬ್ದೇ ಸ್ವಸೂತ್ರೋಕ್ತವಿಧಾನತಃ ॥ ೮ ॥

---

೪. ಸೂತನು ಹೇಳುತ್ತಾನೆ ಪೂರ್ವದಲ್ಲಿ ಮಹಾತಪಸ್ವಿಗಳಾದ ಋಷಿಗಳು ವ್ಯಾಸಮಹರ್ಷಿಯನ್ನು ಇದೇ ವಿಷಯವಾಗಿ ಪ್ರಶ್ನೆಮಾಡಿದರು ಅವರನ್ನು ಕುರಿತು ವ್ಯಾಸನು ಏನನ್ನು ಹೇಳಿದನೋ ಅದನ್ನೆ ಹೇಳುವೆನು, ಕೇಳು.

೫. ವ್ಯಾಸನು ಹೇಳುತ್ತಾನೆ: ಎಲೈ ಋಷಿಗಳೇ ಕೇಳಿ. ಕರ್ಮಯೋಗವೆಂಬದು ಬ್ರಾಹ್ಮಣರಿಗೆ ಜಾಗ್ರತೆಯಾಗಿ ವಿಶೇಷಫಲವನ್ನು ಕೊಡತಕ್ಕದು.

೬. ಇದು ವೇದಸಿದ್ಧವಾದುದು, ಬ್ರಾಹ್ಮಣರಿಗೋಸ್ಕರ ತಿಳಿಸಲ್ಪಟ್ಟಿದೆ.

೭. ಇದು ಸರ್ವಪಾಪಹರವಾದುದು. ಋಷಿಗಳು ಆಚರಿಸಿರುವುದು. ನಾನು ಹೇಳುವುದನ್ನು ಏಕಾಗ್ರಮನಸ್ಸಿನಿಂದ ಕೇಳಿ.

೮. ಗರ್ಭವಾಸದ ಲಾಗಾಯಿತು ಎಂಟನೆಯ ವರ್ಷದಲ್ಲಾಗಲಿ ಅಥವಾ ಜನ್ಮಾರಭ್ಯ ಎಂಟನೆಯ ವರ್ಷದಲ್ಲಾಗಲಿ ಬ್ರಾಹ್ಮಣನು ಉಪನೀತನಾಗಿ ತನ್ನ ಸೂತ್ರೋಕ್ತವಾದ ವೇದಗಳನ್ನು ಅಧ್ಯಯನ ಮಾಡಬೇಕು.

ದಂಡೀ ಚ ಮೇಖಲೀ ಸೂತ್ರೀ ಕೃಷ್ಣಾಜಿನಧರೋ ಮುನಿಃ ।
ಭಿಕ್ಷಾಹಾರೋ ಗುರುಹಿತೋ ವೀಕ್ಷಮಾಣೋ ಗುರೋರ್ಮುಖಂ॥
ಕಾರ್ಪಾಸಮುಪವೀತಾರ್ಥಂ ನಿರ್ಮಿತಂ ಬ್ರಹ್ಮಣಾ ಪುರಾ।
ಬ್ರಾಹ್ಮಣಾನಾಂ ತ್ರಿವೃತ್ಸೂತ್ರಂ ಕೌಶೇಯಂ ವಸ್ತ್ರಮೇವ ವಾ ॥
ಸದೋಪವೀತೀ ಚೈವ ಸ್ಯಾತ್ಸದಾ ಬದ್ಧಶಿಖೋ ದ್ವಿಜಃ।
ಅನ್ಯಥಾ ಯತ್ಕೃತಂ ಕರ್ಮ ತದ್ಭವತ್ಯಯಥಾಕೃತಂ ॥೧೧॥
ವಸೇದವಿಕೃತಂ ವಾಸಃ ಕಾರ್ಪಾಸಂ ವಾ ಕಷಾಯಕಂ।
ತದೇವ ಪರಿಧಾನೀಯಂ ಶುಕ್ಲಂ ಚಾತೀವಮುತ್ತಮಂ ॥೧೨॥
ಉತ್ತರಂ ತು ಸಮಾಮ್ನಾತಂ ವಾಸಃ ಕೃಷ್ಣಾಜಿನಂ ಶುಭಂ।
ತದಭಾವೇ ಗವಯಜಂ ರೌರವಂ ವಾ ವಿಧೀಯತೇ ॥೧೩॥

---

೯. ದಂಡವನ್ನು ಹಿಡಿದುಕೊಂಡು, ಮೌಂಜಿಕಟ್ಟಿಕೊಂಡು, ಕೃಷ್ಣಾಜಿನವನ್ನು ಧರಿಸಿ ಭಿಕ್ಷಾನ್ನಮಾಡುತ್ತ ಗುರುವಿನ ಹಿತವನ್ನು ಬಯಸುತ್ತಾ ಗುರುವನ್ನು ನೋಡುತ್ತಿರಬೇಕು.

೧೦. ಜನಿವಾರಕ್ಕೆಂದು ಹತ್ತಿಯನ್ನು ಬ್ರಹ್ಮನು ಪೂರ್ವದಲ್ಲಿ ಸೃಷ್ಟಿ ಮಾಡಿರುವನು. ಬ್ರಾಹ್ಮಣರಿಗೆ ಮೂರು ಎಳೆಯ ಸೂತ್ರವಿರಬೇಕು. ಅಥವಾ ರೇಷ್ಮೆಯದಾಗಬಹುದು.

೧೧. ಯಾವಾಗಲೂ ಜುಟ್ಟನ್ನು ಗಂಟುಹಾಕಿಕೊಂಡು, ಜನಿವಾರವನ್ನು ಉಪವೀತಿಯಾಗಿ ಹಾಕಿಕೊಂಡು ಸತ್ಕರ್ಮಗಳನ್ನು ಮಾಡಬೇಕು. ಇದನ್ನು ಬಿಟ್ಟು ಅನ್ಯಥಾ ಆಚರಿಸಿಕೊಂಡರೆ ಆ ಕರ್ಮವು ನಿರರ್ಥಕವಾಗುವುದು.

೧೨. ಹರಿಯದೇ ಇರುವ ಹತ್ತಿಯ ಅಥವಾ ರೇಷ್ಮೆಯ ಬಟ್ಟೆಯನ್ನುಡಬೇಕು ಹೊದ್ದುಕೊಳ್ಳುವುದಕ್ಕೂ ಅದೇ ರೀತಿ ಇರಬೇಕು. ಬಿಳಿಯ ಬಟ್ಟೆಯಾದರೆ ಉತ್ತಮವು.

೧೩. ಹೊದಿಯುವುದಕ್ಕೆ ಕೃಷ್ಣಾಜಿನವೇ ಯೋಗ್ಯವೆಂದು ಹೇಳಲ್ಪಟ್ಟಿದೆ. ಅದಿಲ್ಲದಿದ್ದರೆ. ಗವಯಮೃಗದ ಅಥವಾ ರುರು ಎಂಬ ಜಿಂಕೆಯ ಮೃಗದ ಚರ್ಮವಾದರೂ ಆಗಬಹುದು.

ಉದ್ಧೃತ್ಯ ದಕ್ಷಿಣಂ ಬಾಹುಂ ಸವ್ಯಬಾಹೌ ಸಮರ್ಪಿತಂ ।
ಉಪವೀತಂ ಭವೇನ್ನಿತ್ಯಂ ನಿವೀತಂ ಕಂಠಸಜ್ಜಿತೇ ॥೧೪॥

ಸವ್ಯಬಾಹುಂ ಸಮುದ್ಧೃತ್ಯ ದಕ್ಷಿಣೇ ತೂದ್ಧೃತಂ ದ್ವಿಜಾಃ ।
ಪ್ರಾಚೀನಾವೀತಮಿತ್ಯುಕ್ತಂ ಪಿತ್ರ್ಯೇ ಕರ್ಮಣಿ ಯೋಜಯೇತ್ ॥

ಅಗ್ನ್ಯಗಾರೇ ಗವಾಂ ಗೋಷ್ಠೇ ಹೋಮೇ ತರ್ಪ್ಯೇ ತಥೈವ ಚ ।
ಸ್ವಾಧ್ಯಾಯೇ ಭೋಜನೇ ನಿತ್ಯಂ ಬ್ರಾಹ್ಮಣಾನಾಂ ಚ ಸನ್ನಿಧೌ ॥

ಉಪಾಸನೇ ಗುರೂಣಾಂ ಚ ಸಂಧ್ಯಯೋಸ್ಸಾಧುಸಂಗಮೇ ।
ಉಪವೀತೋ ಭವೇನ್ನಿತ್ಯಂ ವಿಧಿರೇಷಾ ಸನಾತನಃ ॥೧೭॥

ಮೌಂಜೀಂ ತ್ರಿವೃತ್ಸಮಾಶ್ಲಿಷ್ಟಾಂ ಕುರ್ಯಾದ್ವಿಪ್ರಸ್ಯ ಮೇಖಲಾಂ ।
ಮುಂಜಾಭಾವೇ ಕುಶೇನಾಹುಃ ಗ್ರಂಥಿನೈಕೇನ ವಾ ತ್ರಿಭಿಃ ॥ ೧೮॥

---

೧೪. ಎಡಭುಜದ ಮೇಲೆ ಬಂದು ಬಲದ ಕಂಕುಳಲ್ಲಿ ಸೂತ್ರವನ್ನು ಧರಿಸಿದರೆ ಅದು ಉಪವೀತವೆನಿಸುವುದು. ಅದೇ ಯಜ್ಞೋಪವೀತವು ಕಂಠದಲ್ಲಿ ಹಾರದಂತೆ ನೇತಾಡುತ್ತಿದ್ದರೆ ಅದು ನಿವೀತಿಯು.

೧೫. ಬಲಭುಜದ ಮೇಲೂ, ಎಡದ ಕಂಕುಳಲ್ಲೂ ಬರುವಂತೆ ಯಜ್ಞೋಪವೀತವನ್ನು ಧರಿಸಿದರೆ ಅದು ಪ್ರಾಚೀನಾವೀತಿಯು. ಅದನು ಪಿತೃಕರ್ಮಗಳಲ್ಲಿ ಉಪಯೋಗಿಸಬೇಕು.

೧೬-೧೭. ಔಪಾಸನ, ಗೋವುಗಳ ಕೊಟ್ಟಿಗೆ, ಹೋಮ, ತರ್ಪಣ, ವೇದಾಧ್ಯಯನ, ಭೋಜನ, ಬ್ರಾಹ್ಮಣರ ಸನ್ನಿಧಿ, ಗುರುಶುಶ್ರೂಷೆ, ಸಂಧ್ಯಾವಂದನೆ, ಸಾಧುಗಳ ಸೇವೆ, ಈ ಕಾಲಗಳಲ್ಲಿ ಉಪವೀತವನ್ನು ಹಾಕಿಕೊಂಡಿರಬೇಕು· ಇದು ಪ್ರಾಚೀನಸಂಪ್ರದಾಯವು.

೧೮. ನೊದೆಹುಲ್ಲಿನಲ್ಲಿ ಮೂರುಹುರಿಯಿಂದ ಕೂಡಿರುವ ಮೌಂಜಿಯನ್ನು ಬ್ರಾಹ್ಮಣನು ಸೊಂಟಕ್ಕೆ ಸುತ್ತಲೂ ಕಟ್ಟಿಕೊಳ್ಳಬೇಕು. ಅದಿಲ್ಲದಿದ್ದರೆ ದರ್ಭೆಯಿಂದಲಾದರೂ ಮಾಡಿ ಉಪಯೋಗಿಸಬಹುದು. ಒಂದು ಗಂಟಿನಿಂದಲಾಗಲಿ, ಮೂರು ಗಂಟಿನಿಂದಲಾಗಲಿ ಕಟ್ಟಬೇಕು.

ಧಾರಯೇದ್ವೈಣಪಾಲಾಶೌ ದಂಡೌ ಕೇಶಾಂತಿಕೌ ದ್ವಿಜಃ ।
ಯಜ್ಞೀಯಮವೃಕ್ಷಜಂ ವಾಥ ಸೌಮ್ಯಮವ್ರಣಮೇವ ಚ ॥೧೯॥

ಸಾಯಂಪ್ರಾತರ್ದ್ವಿಜಸ್ಸಂಧ್ಯಾಮುಪಾಸೀತ ಸಮಾಹಿತಃ ।
ಕಾಮಾಲ್ಲೋಭಾದ್ಭಯಾನ್ಮೋಹಾತ್ತ್ಯಕ್ತ್ವೈನಾಂ ಪತಿತೋ ಭವೇತ್ ॥೨೦॥

ಅಗ್ನಿಕಾರ್ಯಂ ತತಃ ಕುರ್ಯಾತ್ಸಾಯಂಪ್ರಾತಃ ಪ್ರಸನ್ನಧೀಃ ।
ಸ್ನಾತ್ವಾ ಸಂತರ್ಪಯೇದ್ದೇವಾನೃಷೀನ್ ಪಿತೃಗಣಾಂಸ್ತಥಾ ॥೨೧॥

ದೇವತಾಭ್ಯರ್ಚನಂ ಕುರ್ಯಾತ್ಪುಷ್ಪೈಃ ಪತ್ರೈಃ ನವಾಂಬುಭಿಃ ।
ಅಭಿವಾದನಶೀಲಃ ಸ್ಯಾನ್ನಿತ್ಯಂ ವೃದ್ಧೇಷು ಧರ್ಮತಃ ॥೨೨॥

ಅಸಾವಹಂ ಭೋ ನಾಮೇತಿ ಸಮ್ಯಕ್ಪ್ರಣತಿಪೂರ್ವಕಂ ।
ಆಯುರಾರೋಗ್ಯಸಿದ್ಧ್ಯರ್ಥಂ ತಂದ್ರಾದಿಪರಿವರ್ಜಿತಃ ॥೨೩॥

---

೧೯. ಬಿದಿರು ಅಥವಾ ಮುತ್ತುಗದ ದಂಡವನ್ನು ತಲೆಯ ಕೂದಲಿನವರಿಗೂ ಎತ್ತರವಾಗಿರುವುದನ್ನು ಬ್ರಾಹ್ಮಣನು ಧರಿಸಬೇಕು. ಅಥವಾ ಯಜ್ಞಕ್ಕೆ ಉಪಯೋಗಿಸುವ ಮರದ್ದಾದರೂ ಆಗಬಹುದು. ಆ ದಂಡವು ನುಣುಪಾಗಿಯೂ ಕಚ್ಚಿಲ್ಲದೆಯೂ ಇರಬೇಕು.

೨೦. ಸಾಯಂಪ್ರಾತಃಕಾಲಗಳಲ್ಲಿ ಬ್ರಾಹ್ಮಣನಾದವನು ಶುದ್ಧ ಮನಸ್ಕನಾಗಿ ಸಂಧ್ಯಾವಂದನೆಯನ್ನು ಮಾಡಬೇಕು. ಕಾಮ, ಲೋಭ, ಭಯ, ಅಜ್ಞಾನ ಮುಂತಾದವುಗಳಿಂದ ಈ ಸಂಧ್ಯಾವಂದನೆ ಮಾಡುವುದನ್ನು ಬಿಟ್ಟರೆ ಅವನು ಪತಿತನಾಗುತ್ತಾನೆ.

೨೧. ಬಳಿಕ ಸಾಯಂಪ್ರಾತಃಕಾಲಗಳಲ್ಲಿ ಒಳ್ಳೆಯ ಮನಸ್ಸಿನಿಂದ ಅಗ್ನಿಕಾರ್ಯವನ್ನು ಮಾಡಬೇಕು. ಸ್ನಾನಮಾಡಿದ ಮೇಲೆ ದೇವರ್ಷಿಪಿತೃ ತರ್ಪಣಗಳನ್ನು ಮಾಡಬೇಕು.

೨೨. ಹೂವು, ಪತ್ರೆ, ಅಗ್ರೋದಕಗಳಿಂದ ದೇವರ ಪೂಜೆ ಮಾಡಬೇಕು. ವೃದ್ಧರನ್ನು ನಮಸ್ಕರಿಸಬೇಕು.

೨೩. ಅಯ್ಯಾ, ನಾನು ಇಂಥ ಹೆಸರಿನವನೆಂದು ಹೇಳಿಕೊಂಡು ನಮಸ್ಕರಸಬೇಕು. ಆಲಸ್ಯಾದಿಗಳನ್ನು ಬಿಟ್ಟು ಹೀಗೆ ನಮಸ್ಕರಿಸಿದರೆ ಆಯುರಾರೋಗ್ಯವುಂಟಾಗುವುದು.

ಆಯುಷ್ಮಾನ್ ಭವ ಸೌಮ್ಯೇತಿ ವಾಚ್ಯೋ ವಿಪ್ರೋಽಭಿವಾದನೇ ।
ಅಕಾರಶ್ಚಾಸ್ಯ ನಾಮ್ನೋಽನ್ತೇ ವಾಚ್ಯಃ ಪೂರ್ವಾಕ್ಷರಪ್ಲುತಃ ॥೨೪॥
ಯೋ ನ ವೇತ್ತ್ಯಭಿವಾದಸ್ಯ ವಿಪ್ರಃ ಪ್ರತ್ಯಭಿವಾದನಂ ।
ನಾಭಿವಾದ್ಯಸ್ಸವಿದುಷೋ ಯಥಾ ಶೂದ್ರಸ್ತಥೈವ ಸಃ ॥೨೫॥
ವ್ಯತ್ಯಸ್ತಪಾಣಿನಾ ಕಾರ್ಯಮುಪಸಂಗ್ರಹಣಂ ಗುರೋಃ ।
ಸವ್ಯೇನ ಸವ್ಯಃ ಸ್ಪ್ರಷ್ಟವ್ಯೋ ದಕ್ಷಿಣೇನ ತು ದಕ್ಷಿಣಃ ॥೨೬॥
ಲೌಕಿಕಂ ವೈದಿಕಂ ವಾಪಿ ತಥಾಧ್ಯಾತ್ಮಿಕಮೇವ ವಾ ।
ಆದದಾಚ್ಚ ಯತೋ ಜ್ಞಾನಂ ತಂ ಪೂರ್ವಮಭಿವಾದಯೇತ್ ॥
ನೋದಕಂ ಧಾರಯೇದ್ಭೈಕ್ಷಂ ಪುಷ್ಪಾಣಿ ಸಮಿಧಸ್ತಥಾ ।
ಏವಂ ವಿಧಾನಿ ಚಾನ್ಯಾನಿ ನ ದೇವಾರ್ಥೇಷು ಕರ್ಮಣಿ ॥೨೮॥

---

೨೪. ಬ್ರಾಹ್ಮಣನು ನಮಸ್ಕರಿಸಿದರೆ "ಆಯುಷ್ಮಾನ್ ಭವ" ಎನ್ನಬೇಕು. ಹೆಸರಿನ ಕೊನೆಯ ಹಿಂದಿನ ಸ್ವರವನ್ನು ಪ್ಲುತವನ್ನಾಗಿ ( ದೀರ್ಘವಾಗಿ ) ಹೇಳಬೇಕು.

೨೫. ನಮಸ್ಕರಿಸಿದರೆ ಆಶೀರ್ವಾದ ಮಾಡಲು ತಿಳಿಯದಿದ್ದರೆ ಅವನು ಶೂದ್ರನು. ಅವನಿಗೆ ನಮಸ್ಕರಿಸಿದರೆ ಶೂದ್ರನಿಗೆ ನಮಸ್ಕರಿಸಿದಂತೆ ತಿಳಿಯಬೇಕು.

೨೬. ಗುರುವಿಗೆ ನಮಸ್ಕರಿಸುವಾಗ ಬಲಗಾಲಿಗೆ ಬಲಗೈ, ಎಡಗಾಲಿಗೆ ಎಡಗೈ, ಬರುವಂತೆ ಕೈಗಳನ್ನು ವ್ಯತ್ಯಾಸ ಮಾಡಿಕೊಂಡು ನಮಸ್ಕರಿಸಬೇಕು.

೨೭. ಲೋಕವ್ಯವಹಾರದ, ವೇದದ, ಅಥವಾ ಆತ್ಮಜ್ಞಾನದ ಜ್ಞಾನವನ್ನು ಯಾವ ಗುರುವಿನಿಂದ ಹೊಂದುತ್ತಾನೆಯೋ ಅವನಿಗೆ ಮೊದಲು ನಮಸ್ಕರಿಸಬೇಕು.

೨೮. ದೇವರ ಕಾರ್ಯಕ್ಕೋಸ್ಕರ ನೀರು, ಹೂವು, ಸಮಿತ್ತುಗಳು ಮತ್ತು ಇಂತಹವುಗಳನ್ನು ಯಾಚಿಸಬಾರದು.

ಬ್ರಾಹ್ಮಣಾನ್ ಕುಶಲಂ ಪೃಚ್ಛೇತ್ಕ್ಷತ್ರಬಂಧುಮನಾಮಯಂ ।
ವೈಶ್ಯಂ ಕ್ಷೇಮಂ ಸಮಾಗಮ್ಯ ಶೂದ್ರಮಾರೋಗ್ಯಮೇವ ಚ ॥೨೯॥

ಉಪಾಧ್ಯಾಯಃ ಪಿತಾ ಜ್ಯೇಷ್ಠೋ ಭ್ರಾತಾ ಚೈವ ಮಹೀಪತಿಃ ।
ಮಾತುಲಃ ಶ್ವಶುರಶ್ಚೈವ ಮಾತಾಮಹಪಿತಾಮಹೌ ॥೩೦॥

ವರ್ಣಜ್ಯೇಷ್ಠಃ ಪಿತೃವ್ಯಶ್ಚ ಪುಂಸೋಽತ್ರ ಗುರವಃಸ್ಮೃತಾಃ ।
ಮಾತಾ ಮಾತಾಮಹೀ ಗುರ್ವೀ ಪಿತುರ್ಮಾತುಶ್ಚ ಸೋದರಾ ॥

ಶ್ವಶ್ರೂಃ ಪಿತಾಮಹೀ ಜ್ಯೇಷ್ಠಾ ಧಾತ್ರೀ ಚ ಗುರವಃ ಸ್ತ್ರಿಯಃ ।
ಜ್ಞೇಯಸ್ತು ಗುರುವರ್ಗೋಽಯಂ ಮಾತೃತಃ ಪಿತೃತೋ ದ್ವಿಜಾಃ ॥

ಅನುವರ್ತನಮೇತೇಷಾಂ ಮನೋವಾಕ್ಕಾಯಕರ್ಮಭಿಃ ।
ಗುರೂನ್ ದೃಷ್ಟ್ವಾ ಸಮುತ್ತಿಷ್ಠೇದಭಿವಾದ್ಯ ಕೃತಾಂಜಲಿಃ ॥೩೩॥

---

೨೯. ಬ್ರಾಹ್ಮಣನನ್ನು ಕುಶಲವೇ ಎಂದೂ, ಕ್ಷತ್ರಿಯನನ್ನು ಅನಾಮಯವೇ ಎಂದೂ, ವೈಶ್ಯನನ್ನು ಕ್ಷೇಮವೇ ಎಂದೂ, ಶೂದ್ರನನ್ನು ಆರೋಗ್ಯವೇ ಎಂದೂ ಕೇಳಬೇಕು.

೩೦. (ನಮಸ್ಕಾರವಿರಚಾರದಲ್ಲಿ) ಉಪಾಧ್ಯಾಯ, ತಂದೆ, ದೊಡ್ಡಣ್ಣ, ರಾಜ, ಸೋದರಮಾವ, ಹೆಣ್ಣುಕೊಟ್ಟಮಾವ ತಂದೆತಾಯಿಗಳ ತಂದೆಯವರು ತನ್ನ ಜಾತಿಯಲ್ಲಿ ದೊಡ್ಡವರು, ತಂದೆಯ ಸೋದರ ಇವರು ಗುರುಗಳೆಂದು ತಿಳಿಯಬೇಕು.

೩೧–೩೨. ತಾಯಿ, ಅಜ್ಜಿ, ಹಿರಿಯವಳು, ತಾಯಿಯತಂದೆಗಳ ಸೋದರಿಯರು ಹೆಣ್ಣುಕೊಟ್ಟ ಅತ್ತೆ, ಅಜ್ಜಿ, ಸಾಕಿದವರಲ್ಲಿ ಹಿರಿಯಳು, ಇವರು ಸ್ತ್ರೀಯರಲ್ಲಿ ಗುರುವರ್ಗದವರೆಂದು ತಿಳಿಯಬೇಕು.

೩೩. ಇವರನ್ನು ಮನೋವಾಕ್ಕಾಯಕರ್ಮಗಳಿಂದ ಅನುಸರಿಸುತ್ತಿರಬೇಕು. ಇವರನ್ನು ನೋಡಿದರೆ ಎದ್ದು ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ನಿಂತಿರಬೇಕು.

ನೈತೈರುಪವಿಶೇತ್ಸಾರ್ಧಂ ವಿವದೇನ್ನಾತ್ಮಕಾರಣಾತ್ ।
ಜೀವಿತಾರ್ಥಮಪಿ ದ್ವೇಷಾದ್ಗುರುಭಿರ್ನೈವ ಭಾಷಣಂ ।
ಉದ್ರಿಕ್ತೋಽಪಿ ಗುಣೈರನ್ಯೈರ್ಗುರುದ್ವೇಷೀ ಪತತ್ಯಧಃ ॥೩೪॥

ಗುರೂಣಾಮಪಿ ಸರ್ವೇಷಾಂ ಪಂಚ ಪೂಜ್ಯಾ ವಿಶೇಷತಃ ।
ತೇಷಾಮಾದ್ಯಾಸ್ತ್ರಯಃ ಶ್ರೇಷ್ಠಾಃ ತೇಷಾಂ ಮಾತಾ ಸುಪೂಜಿತಾ ॥

ಯೋ ಭಾವಯತಿ ಯಾ ಸೂತೇ ಯೇನ ವಿದ್ಯೋಪದಿಶ್ಯತೇ ।
ಜ್ಯೇಷ್ಠೋ ಭ್ರಾತಾ ಚ ಭರ್ತಾ ಚ ಪಂಚೈತೇ ಗುರವಃ ಸ್ಮೃತಾಃ ॥

ಆತ್ಮನಃ ಸರ್ವಯತ್ನೇನ ಪ್ರಾಣತ್ಯಾಗೇನ ವಾ ಪುನಃ ।
ಪೂಜನೀಯಾ ವಿಶೇಷೇಣ ಪಂಚೈತೇ ಭೂತಿಮಿಚ್ಛತಾ ॥೩೭॥

ಯಾವತ್ಪಿತಾ ಚ ಮಾತಾ ಚ ದ್ವಾವೇತೌ ನಿರ್ವಿಕಾರಿಣೌ ।
ತಾವತ್ಸರ್ವಂ ಪರಿತ್ಯಜ್ಯ ಪುತ್ರಸ್ಸ್ಯಾತ್ತತ್ಪರಾಯಣಃ ॥೩೮॥

---

೩೪. ಇವರ ಸಮಕ್ಕೆ ಕುಳಿತುಕೊಳ್ಳಬಾರದು. ತನಗೋಸ್ಕರ ಜಗಳವಾಡಬಾರದು. ಜೀವನಕ್ಕೋಸ್ಕರ ದ್ವೇಷದಿಂದಲಾಗಲಿ, ಉದ್ರೇಕ ದಿಂದಲಾಗಲಿ, ಗುರುಗಳೊಡನೆ ದ್ವೇಷಮಾಡಿದರೆ ನರಕಭಾಗಿಯಾಗು ತ್ತಾನೆ.

೩೫. ಗುರುವರ್ಗದಲ್ಲಿಯೂ ಮೊದಲಿನ ಐದು ಹೆಸರಿನವರು ವಿಶೇಷ ಪೂಜ್ಯರು. ಅವರಲ್ಲಿಯೂ ಮೊದಲಿನ ಮೂವರು ಇನ್ನೂ ಪೂಜ್ಯರು ಅದರಲ್ಲಿಯೂ ತಾಯಿಯು ಬಹು ವಿಶೇಷದಿಂದ ಪೂಜ್ಯಳು.

೩೬. ಯಾರು ಮಗನೆಂದು ಭಾವಿಸುತ್ತಾರೋ ಅವರು, ಹೆತ್ತ ತಾಯಿಯು, ವಿದ್ಯೋಪದೇಶಮಾಡಿದ ಗುರುವು, ಹಿರಿಯಣ್ಣ, ಗಂಡ ಈ ಐವರೂ ಗುರುಗಳು ಎಂದು ತಿಳಿಯಿರಿ.

೩೭. ತಾನು ಸರ್ವಪ್ರಯತ್ನದಿಂದಲೂ, ಕೊನೆಗೆ ಪ್ರಾಣಕೊಡುವು ದರಿಂದಲೂ ಈ ಐದು ಜನರನ್ನು ಪೂಜಿಸಿದರೆ ಒಳ್ಳೆಯದಾಗುವುದು.

೩೮. ತಾಯಿತಂದೆಗಳು ಎಲ್ಲಿಯವರೆಗೂ ತನ್ನ ವಿಷಯದಲ್ಲಿ ವಿಕಾರ ಹೊಂದುವುದಿಲ್ಲವೋ ಅಲ್ಲಿಯವರಿಗೂ ಸರ್ವಸ್ವದಿಂದಲೂ ಪೂಜಿಸಬೇಕು.

ಪಿತಾ ಮಾತಾ ಚ ಸುಪ್ರೀತೌ ಸ್ಯಾತಾಂ ಪುತ್ರಗುಣೈರ್ಯದಿ ।
ಸ ಪುತ್ರಸ್ಸಕಲಂ ಧರ್ಮಂ ಪ್ರಾಪ್ನುಯಾತ್ತೇನ ಕರ್ಮಣಾ ॥೩೯॥
ನಾಸ್ತಿ ಮಾತೃಸಮಂ ದೈವಂ ನಾಸ್ತಿ ಪಿತೃಸಮೋ ಗುರುಃ ।
ತಯೋಃ ಪ್ರತ್ಯುಪಕಾರೋಽಪಿ ನ ಕಥಂ ಚ ನ ವಿದ್ಯತೇ ॥೪೦॥
ತಯೋರ್ನಿತ್ಯಂ ಪ್ರಿಯಂ ಕುರ್ಯಾತ್ಕರ್ಮಣಾ ಮನಸಾ ಗಿರಾ ।
ನ ತಾಭ್ಯಾಮನನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ॥೪೧॥
ವರ್ಜಯಿತ್ವಾ ಮುಕ್ತಿಫಲಂ ನಿತ್ಯನೈಮಿತ್ತಿಕಂ ತಥಾ ।
ಧರ್ಮಸಾರಸ್ಸಮುದ್ದಿಷ್ಟಃ ಪ್ರೇತ್ಯಾನಂತಫಲಪ್ರದಃ ॥೪೨॥
ಸಮ್ಯಗಾರಾಧ್ಯ ವಕ್ತಾರಂ ವಿಸೃಷ್ಟಸ್ತದನುಜ್ಞಯಾ ।
ಶಿಷ್ಯೋ ವಿದ್ಯಾಫಲಂ ಭುಂಕ್ತೇ ಪ್ರೇತ್ಯ ಚಾಪದ್ಯತೇ ಭುವಿ ॥೪೩॥

---

೩೯. ಮಗನ ಗುಣಗಳಿಂದ ತಾಯಿತಂದೆಗಳು ಸುಪ್ರೀತರಾದರೆ ಅದರಿಂದಲೇ ಮಗನು ಸಕಲಧರ್ಮಗಳನ್ನೂ ಹೊಂದಿದಂತಾಯಿತು.

೪೦. ತಾಯಿಗೆ ಸಮವಾದ ದೇವತೆಯಿಲ್ಲ. ತಂದೆಗೆ ಸಮನಾದ ಗುರುವಿಲ್ಲ. ಅವರಿಬ್ಬರಿಗೂ ಪ್ರತ್ಯುಪಕಾರಮಾಡಿ ತೀರಿಸಲು ಸಾಧ್ಯವಿಲ್ಲ.

೪೧. ಮನೋವಾಕ್ಕಾಯಗಳಿಂದ ಅವರಿಗೆ ಒಳ್ಳೆಯದನ್ನೇ ಮಾಡುತ್ತಿರಬೇಕು. ಅವರ ಅಪ್ಪಣೆಯಿಲ್ಲದೆ ಬೇರೆ ಕೆಲಸವನ್ನು ಮಾಡಬಾರದು.

೪೨. ನಿತ್ಯನೈಮಿತ್ತಿಕವಾದ ಮುಕ್ತಿಫಲದ ಕೆಲಸಗಳನ್ನೂ ಬಿಟ್ಟು ಅವರ ಸೇವೆಮಾಡಬೇಕು. ಮೃತನಾದ ಮೇಲೆ ಅನಂತಫಲವುಂಟು.

೪೩. ವಿದ್ಯೆ ಹೇಳಿದ ಗುರುವನ್ನು ಆರಾಧಿಸಿ ಅವನಿಂದ ಅಪ್ಪಣೆ ಪಡೆದು ಬಂದು ಶಿಷ್ಯನು ವಿದ್ಯಾಫಲವನ್ನು ಅನುಭವಿಸುವುದಲ್ಲದೆ ಮರಣಾನಂತರ ಸ್ವರ್ಗದಲ್ಲೂ ಸುಖಿಸುವನು.

ಯೋ ಭ್ರಾತರಂ ಪಿತೃಸಮಂ ಜ್ಯೇಷ್ಠಂ ಮೂಢೋಽವಮನ್ಯತೇ।
ತೇನ ದೋಷೇಣ ಸಂಪ್ರೇತ್ಯ ನಿರಯಂ ಘೋರಮೃಚ್ಛತಿ ॥೪೪॥

ಪುಂಸಾಂ ವರ್ತ್ಮನಿ ಸ್ಪಷ್ಟೇನ ಪೂಜ್ಯೋ ಭರ್ತಾ ತು ಸರ್ವದಾ।
ಅಪಿ ಮಾತರಿ ಲೋಕೇಽಸ್ಮಿನ್ನುಪಕಾರಾದ್ಧಿ ಗೌರವಂ ॥೪೫॥

ಮಾತುಲಾಂಶ್ಚ ಪಿತೃವ್ಯಾಂಶ್ಚ ಶ್ವಶುರಾನ್ ಋತ್ವಿಜೋ ಗುರೂನ್ ।
ಅಸಾವಹಮಿತಿ ಬ್ರೂಯಾತ್ಪ್ರತ್ಯುತ್ಥಾಯ ಯವೀಯಸಃ ॥೪೬॥

ಅವಾಚ್ಯೋ ಋತ್ವಿಜೋ ನಾಮ್ನಾ ಯವೀಯಾನಪಿ ಯೋ ಭವೇತ್।
ಭೋ ಭವತ್ಪೂರ್ವಕಂ ತ್ವೇನಮಭಿಭಾಷೇತ ಧರ್ಮವಿತ್ ॥೪೭॥

ಅಭಿವಾದ್ಯಶ್ಚ ಪೂಜ್ಯಶ್ಚ ಶಿರಸಾ ನಮ್ಯ ಏವ ಚ।
ಬ್ರಾಹ್ಮಣಕ್ಷತ್ರಿಯಾದ್ಯೈಶ್ಯ ಶ್ರೀಕಾಮಃ ಸಾದರಂ ಸದಾ ॥೪೮॥

---

೪೪. ಹಿರಿಯ ಅಣ್ಣನನ್ನು ಅವಮಾನಪಡಿಸಿದರೆ ಆ ಪಾಪದಿಂದ ಅವನು ಘೋರವಾದ ನರಕವನ್ನು ಹೊಂದುತ್ತಾನೆ.

೪೫. ಹೆಂಡತಿಗೆ ಯಾವಾಗಲೂ ಗಂಡನೇ ಪೂಜ್ಯನು. ಈ ಲೋಕದಲ್ಲಿ ತಾಯಿಯಲ್ಲಿಯೂ ಉಪಕಾರದಿಂದ ಗೌರವವು.

೪೬. ಚಿಕ್ಕವನಾದವನು ಸೋದರಮಾವನನ್ನೂ, ತಂದೆಯ ಅಣ್ಣ ತಮ್ಮಂದಿರನ್ನೂ, ಹೆಣ್ಣುಕೊಟ್ಟ ಮಾವನನ್ನೂ, ಋತ್ವಿಜರನ್ನೂ ಗುರುಗಳನ್ನೂ, ನಾನೆಂದು ಹೆಸರುಹೇಳಿ ಅವರಿಗೆ ಗೌರವಕೊಟ್ಟು ನಮಸ್ಕರಿಸಬೇಕು.

೪೭. ಚಿಕ್ಕವನಾದರೂ ಕೂಡ ಋತ್ವಿಕ್ಕನ್ನೂ ಹೆಸರು ಹಿಡಿದು ಕೂಗದೆ, ಅಯ್ಯಾ, ತಾವು ಎಂದು ಮಾತನಾಡಿಸಬೇಕು.

೪೮. ಶ್ರೇಯಸ್ಸನ್ನು ಅಪೇಕ್ಷಿಸುವ ಕ್ಷತ್ರಿಯಾದಿಗಳಿಂದ ಬ್ರಾಹ್ಮಣನು ನಮಸ್ಕರಿಸಲ್ಪಡಲು ಅರ್ಹನು.

ನಾಭಿವಾದ್ಯಶ್ಚ ವಿಪ್ರೇಣ ಕ್ಷತ್ರಿಯಾದ್ಯಾಃ ಕಥಂ ಚ ನ ।
ಜ್ಞಾನಕರ್ಮಗುಣೋಪೇತೋ ಯದ್ಯಪ್ಯೇತೇ ಬಹುಶ್ರುತಾಃ ॥೪೯॥

ಬ್ರಾಹ್ಮಣಸ್ಸರ್ವವರ್ಣಾನಾಂ ಸ್ವಸ್ತಿ ಕುರ್ಯಾದಿತಿ ಶ್ರುತಿಃ ।
ಸವರ್ಣೇನ ಸವರ್ಣಾನಾಂ ಕಾರ್ಯಮೇವಾಭಿವಾದನಂ ॥೫೦॥

ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋ ಗುರುಃ ।
ಪತಿರೇಕೋ ಗುರುಃ ಸ್ತ್ರೀಣಾಂ ಸರ್ವತ್ರಾಭ್ಯಾಗತೋ ಗುರುಃ ॥೫೧॥

ವಿದ್ಯಾ ಕರ್ಮ ವಯೋ ಬಂಧುರ್ವಿತ್ತಂ ಭವತಿ ಪಂಚಮಂ ।
ಮಾನ್ಯಸ್ಥಾನಾನಿ ಪಂಚಾಹುಃ ಪೂರ್ವಂ ಪೂರ್ವಂಗುರೂತ್ತರಾತ್ ॥

ಪಂಚಾನಾಂ ತ್ರಿಷು ವರ್ಣೇಷು ಭೂಯಾಂಸಿ ಬಲವಂತಿ ಚ ।
ಯತ್ರ ಸ್ಯುಃ ಸೋಽತ್ರ ಮಾನಾರ್ಹಃ ಶೂದ್ರೋಽಪಿ ದಶಮೀಂಗತಃ ॥

---

೪೯. ಕ್ಷತ್ರಿಯಾದಿಗಳು ವಿದ್ಯಾಜ್ಞಾನಗುಣಸಂಪನ್ನರಾಗಿದ್ದಾಗ್ಯೂ ಅವರನ್ನು ಬ್ರಾಹ್ಮಣನು ಯಾವಾಗಲೂ ನಮಸ್ಕರಿಸಬಾರದು.

೫೦. ಬ್ರಾಹ್ಮಣನು ಎಲ್ಲರಿಗೂ ಒಳ್ಳೆಯದಾಗಲಿ ಎಂದೆನ್ನಬೇಕು. ಸಮಾನ ಜಾತಿಯವರು ಸಮಾನರಿಗೆ ನಮಸ್ಕಾರಾದಿಗಳನ್ನು ಮಾಡಬೇಕು.

೫೧. ಬ್ರಾಹ್ಮಣರಿಗೆ ಅಗ್ನಿಯು ಗುರುವು; ಎಲ್ಲ ವರ್ಣಗಳಿಗೂ ಬ್ರಾಹ್ಮಣನು ಗುರುವು; ಸ್ತ್ರೀಯರಿಗೆ ಪತಿಯೇ ಗುರುವು; ಎಲ್ಲರಿಗೂ ಅಭ್ಯಾಗತನು ಗುರುವು.

೫೨. ವಿದ್ಯೆ, ಕೆಲಸ, ವಯಸ್ಸು, ಬಂಧುತ್ವ, ದ್ರವ್ಯ ಇವು ಗೌರವ ಸ್ಥಾನಗಳು. ಇವುಗಳಲ್ಲಿ ಕೊನೆಯದರಿಂದ ಹಿಂದು ಹಿಂದಿನದಕ್ಕೆ ಗೌರವ ಹೆಚ್ಚು.

೫೩. ಈ ಐದೂ ಬ್ರಹ್ಮಕ್ಷತ್ರಿಯ ವೈಶ್ಯರಲ್ಲಿ ಬಲವಾದುವು. ಅವೆಲ್ಲಿವೆಯೋ ಅವರು ಗೌರವಾರ್ಹರು. ವಯಸ್ಸಾಗಿರುವ ಶೂದ್ರನೂ ಇವರ ಜೊತೆಗೆ ಗೌರವಾರ್ಹನು.

ಪಂಥಾ ದೇಯೋ ಬ್ರಾಹ್ಮಣಾಯ ಸ್ತ್ರಿಯೈ ರಾಜ್ಞೇ ವಿಚಕ್ಷುಷೇ ।
ವೃದ್ಧಾಯ ಭಾರಭಗ್ನಾಯ ರೋಗಿಣೇ ದುರ್ಬಲಾಯ ಚ ॥೫೪॥

ಭಿಕ್ಷಾಮಾಹೃತ್ಯ ಶಿಷ್ಯಾನಾಂ ಗೃಹೇಭ್ಯಃ ಪ್ರಯತೋಽನ್ವಹಂ ।
ನಿವೇದ್ಯ ಗುರವೇಽಶ್ನೀಯಾದ್ವಾಗ್ಯತಸ್ತದನುಜ್ಞಯಾ ॥೫೫॥

ಭವತ್ಪೂರ್ವಂ ಚರೇದ್ಭೈಕ್ಷ್ಯಮುಪನೀತೋ ದ್ವಿಜೋತ್ತಮಃ ।
ಭವನ್ಮಧ್ಯಂ ತು ರಾಜನ್ಯೋ ವೈಶ್ಯಸ್ತು ಭವದುತ್ತರಂ ॥೫೬॥

ಮಾತರಂ ವಾ ಸ್ವಸಾರಂ ವಾ ಮಾತುರ್ವಾ ಭಗಿನೀಂ ನಿಜಾಂ ।
ಭಿಕ್ಷೇತ ಭಿಕ್ಷಾಂ ಪ್ರಥಮಂ ಯಾ ಚೈನಂ ನ ವಿಮಾನಯೇತ್ ॥

ಸಜಾತೀಯಗೃಹೇಷ್ವೇವ ಸಾರ್ವವರ್ಣಿಕಮೇವ ಚ ।
ಭೈಕ್ಷಸ್ಯಾಚರಣಂ ಪ್ರೋಕ್ತಂ ಪತಿತಾದಿ ವಿವರ್ಜಿತಂ ॥೫೮॥

---

೫೪. ಬ್ರಾಹ್ಮಣ, ಸ್ತ್ರೀ, ರಾಜ, ಕುರುಡ, ಮುದುಕ, ಹೊರೆ ಹೊತ್ತಿರುವವನು ರೋಗಿ, ನಿಶ್ಶಕ್ತ, ಇವರಿಗೆ ದಾರಿಯನ್ನು ಬಿಡಬೇಕು.

೫೫. ಶಿಷ್ಯರ ಮನೆಯಿಂದ ಭಿಕ್ಷೆಯನ್ನುತಂದು ಗುರುವಿನ ಅಪ್ಪಣೆಯಿಂದ ಮಾತನಾಡದೆ ಭೋಜನಮಾಡಬೇಕು.

೫೬. "ಭವಾನ್ ಭಿಕ್ಷಾಂ ದದಾತು" ಎಂದು ಭಿಕ್ಷಮಾಡಲು ಹೇಳುವ ವಾಕ್ಯದಲ್ಲಿ, ಬ್ರಾಹ್ಮಣರಿಗೆ ಭವಚ್ಛಬ್ದ ಆದಿಯಲ್ಲಿರಬೇಕು. ಕ್ಷತ್ರಿಯರ ಮನೆಯಲ್ಲಿ ಆ ಶಬ್ದವು ಮಧ್ಯದಲ್ಲಿ ಎಂದರೆ "ಭಿಕ್ಷಾಂ ಭವಾನ್ ದದಾತು" ಎಂದೂ ವೈಶ್ಯರಲ್ಲಿ ಆ ಶಬ್ದವು ಕೊನೆಯಲ್ಲಿ "ಭಿಕ್ಷಾಂ ದದಾತು ಭವಾನ್" ಎಂದೂ ಇರುವಂತೆ ಭಿಕ್ಷೆಯನ್ನು ಯಾಚಿಸಬೇಕು.

೫೭. ತಾಯಿ, ಸೋದರಿ, ಚಿಕ್ಕಮ್ಮದೊಡ್ಡಮ್ಮಂದಿರು ತನ್ನಲ್ಲಿ ಕರುಣೆಯುಳ್ಳವರು ಇವರನ್ನು ಮೊದಲು ಭಿಕ್ಷೆ ಕೇಳಬೇಕು.

೫೮. ಸಜಾತೀಯರಲ್ಲಿಯಾಗಲಿ, ಅಥವಾ ಇತರ ದ್ವಿಜವರ್ಣಗಳಲ್ಲಿಯಾಗಲಿ ಭಿಕ್ಷೆಮಾಡಬಹುದು. ಪತಿತರ ಮನೆಗೆ ಹೋಗಬಾರದು.

ದೇವಯಜ್ಞೈರಹೀನಾನಾಂ ಪ್ರಶಸ್ತಾನಾಂ ಸ್ವಕರ್ಮಸು ।
ಬ್ರಹ್ಮಚರ್ಯಾ ಹರೇದ್ಭೈಕ್ಷ್ಯಂ ಗೃಹೇಭ್ಯಃ ಪ್ರಯತೋನ್ವಹಂ ॥

ಗುರೋಃ ಕುಲೇ ನ ಭಿಕ್ಷೇತ ನ ಜ್ಞಾತಿಕುಲಬಂಧುಷು ।
ಅಲಾಭೇತ್ವನ್ಯಗೇಹಾನಾಂ ಪೂರ್ವಂ ಪೂರ್ವಂ ವಿವರ್ಜಯೇತ್ ॥

ಸರ್ವಂ ವಾ ವಿಚರೇದ್ಗ್ರಾಮಂ ಪೂರ್ವೋಕ್ತಾನಾಮಸಂಭವೇ ।
ನಿಯಮ್ಯ ಪ್ರಯತೋ ವಾಚಂ ದಿಶಸ್ತ್ವನವಲೋಕಯನ್ ॥೬೧॥

ಸಮಾಹೃತ್ಯ ತು ಭೈಕ್ಷ್ಯಂ ತದ್ಯಾವದರ್ಥಮಮಾಯಯಾ ।
ಭುಂಜೀತ ಪ್ರಯತೋ ನಿತ್ಯಂ ವಾಗ್ಯತೋಽನನ್ಯಮಾನಸಃ ॥೬೨॥

---

೫೯. ದೇವಯಜ್ಞಾದಿ ಪಂಚಮಹಾಯಜ್ಞಗಳನ್ನು ಆಚರಿಸುತ್ತಾ ತಮ್ಮ ಕೆಲಸಗಳಲ್ಲಿ ನಿಷ್ಠರಾಗಿರುವವರ ಮನೆಯಲ್ಲಿ ಅನುದಿನವೂ ಭಿಕ್ಷೆ ಮಾಡಬೇಕು.

೬೦. ಗುರುವಿನ ಅಥವಾ ಅವನ ಸಂಬಂಧಿಗಳ ಮನೆಯಲ್ಲಿ ಭಿಕ್ಷೆ ಮಾಡಬಾರದು, ಜ್ಞಾತಿ, ಕುಲ ಬಂಧುಗಳಲ್ಲಿಯೂ ಭಿಕ್ಷೆಮಾಡಬಾರದು. ಎಲ್ಲೂ ಸಿಕ್ಕದಿದ್ದರೆ ಪೂರ್ವ ಪೂರ್ವ ಹೇಳಿದವುಗಳನ್ನು ಬಿಟ್ಟು ಉಳಿದವುಗಳಲ್ಲಿ ಮಾಡಬೇಕು. ಎಂದರೆ ಎಲ್ಲೂ ಸಿಕ್ಕದಿದ್ದರೆ ಬಂಧುಗಳಲ್ಲಿಯೂ, ಅಲ್ಲಿಯೂ ದೊರೆಯದಿದ್ದರೆ ಕುಲ, ಅಲ್ಲೂ ಇಲ್ಲದಿದ್ದರೆ ಜ್ಞಾತಿ, ಅಲ್ಲೂ ಇಲ್ಲದಿದ್ದರೆ ಗುರು ಇವರುಗಳ ಮನೆಯಲ್ಲಿ ಭಿಕ್ಷೆಮಾಡಬಹುದು.

೬೧. ಹಿಂದೆ ಹೇಳಿದವರಲ್ಲಿಯೂ ಸಿಕ್ಕದಿದ್ದರೆ ಊರಲ್ಲಿ ಎಲ್ಲರ ಮನೆಗೂ ಹೋಗಬಹುದು. ಹರಟೆ ಕೂಡದು, ಅತ್ತಿತ್ತ ನೋಡಬಾರದು.

೬೨. ಕಪಟಮನಸ್ಸಿಲ್ಲದೆ ತನಗೆ ಬೇಕಾದಷ್ಟು ಭಿಕ್ಷಾನ್ನವನ್ನು ತಂದು ಮೌನದಿಂದ ಊಟಮಾಡಬೇಕು.

ಭೈಕ್ಷ್ಯೇಣ ವರ್ತಯೇನ್ನಿತ್ಯಂ ನೈಕಾನ್ನಾದೋ ಭವೇದ್ವ್ರತೀ ।
ಭೈಕ್ಷ್ಯೇಣ ವ್ರತಿನೋ ವೃತ್ತಿರುಪವಾಸಸಮಾಸ್ಮೃತಾ ॥೬೩॥
ಪೂಜಯೇದಶನಂ ನಿತ್ಯಮ್ಮದಾಚ್ಚೈತದಕುತ್ಸಯನ್ ।
ದೃಷ್ಟ್ವಾ ಹೃಷ್ಯೇತ್ಪ್ರಸೀದೇಚ್ಚ ಪ್ರತಿನಂದೇಚ್ಚ ಸರ್ವಶಃ ॥೬೪॥
ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಂ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ಪರಿವರ್ಜಯೇತ್ ॥೬೫॥
ಪ್ರಾಙ್ಮುಖೋ ವಾಪಿ ಭುಂಜೀತ ಸೂರ್ಯಾಭಿಮುಖಮೇವ ವಾ ।
ನಿಂದ್ಯಾದುದಙ್ಮುಖೋ ನಿತ್ಯಂ ವಿಧಿರೇಷ ಸನಾತನಃ ॥೬೬॥
ಪ್ರಕ್ಷಾಲ್ಯ ಪಾಣಿಪಾದೌ ಚ ಭುಂಜಾನೋಽದ್ಭಿರುಪಸ್ಪೃಶೇತ್
ಶುದ್ಧದೇಶೇ ಸಮಾಸೀನೋ ಭುಕ್ತ್ವಾ ಚ ದ್ವಿರುಪಸ್ಪೃಶೇತ್ ॥೬೭॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಕರ್ಮಯೋಗ ಕಥನಂ ಏಕಪಂಚಾಶತ್ತಮೋಽಧ್ಯಾಯಃ

---

೬೩. ನಿತ್ಯವೂ ಭಿಕ್ಷೆಮಾಡಬೇಕು. ಒಬ್ಬರ ಮನೆಯ ಅನ್ನವನ್ನೇ ಊಟಮಾಡಬಾರದು. ಈ ರೀತಿ ಭಿಕ್ಷಾನ್ನವನ್ನು ಊಟಮಾಡಿದರೆ ಉಪವಾಸಮಾಡಿದ ಫಲವುಂಟು.

೬೪. ಕೊಬ್ಬಿನಿಂದ ತಿರಸ್ಕರಿಸದೆ ಅನ್ನವನ್ನು ಊಟಮಾಡಬೇಕು. ಅದನ್ನು ನೋಡಿ ಸಂತೋಷಗೊಂಡು ಅಭಿನಂದಿಸಬೇಕು.

೬೫. ಅತಿಭೋಜನವು ಅನಾರೋಗ್ಯವು, ಆಯುಃಕ್ಷೀಣಕರವು, ನರಕಪ್ರಾಪ್ತಿಯು, ಪುಣ್ಯರಹಿತವು, ಲೋಕತಿರಸ್ಕಾರವು, ಇವುಗಳನ್ನುಂಟು ಮಾಡುತ್ತದೆ. ಆದುದರಿಂದ ಅತಿಯಾಗಿ ಭೋಜನಮಾಡುವುದನ್ನು ಬಿಡಬೇಕು.

೬೬. ಪ್ರತಿದಿನವೂ ಪೂರ್ವಾಭಿಮುಖನಾಗಿ ಅಥವಾ ಸೂರ್ಯಾಭಿಮುಖನಾಗಿ ಊಟಮಾಡಬೇಕು ನಿತ್ಯವೂ ಉತ್ತರಮುಖಿಯಾಗಿ ಊಟಮಾಡಬಾರದು. ಇದು ಪ್ರಾಚೀನ ಸಂಪ್ರದಾಯವು.

೬೭. ಕೈ ಕಾಲುಗಳನ್ನೂ ತೊಳೆದುಕೊಂಡು ಎರಡಾವರ್ತಿ ಆಚನ ಮಾಡಿ ಶುದ್ಧದೇಶದಲ್ಲಿ ಕುಳಿತು ಊಟಮಾಡಬೇಕು. ಊಟವಾದ ಮೇಲೆ ಎರಡಾವೃತ್ತಿ ಆಚಮನಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದಲ್ಲಿ
ಕರ್ಮಯೋಗ ಕಥನದಲ್ಲಿ ಐವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮ ಪುರಾಣೇ ಆದಿಖಂಡೇ ದ್ವಿಪಂಚಾಶತ್ತಮೋಽಧ್ಯಾಯಃ

**ಭುಕ್ತ್ವಾ ಪೀತ್ವಾ ಚ ಸುಪ್ತ್ವಾಚ ಸ್ನಾತ್ವಾ ರಥ್ಯಾವಸರ್ಪಣೇ ।**
**ಓಷ್ಠಾವಲೋಹಾತ್ಸ್ಪೃಷ್ಟ್ವಾ ವಾ ವಾಸೋಽಪಿ ಪರಿಧಾಯ ಚ ॥ ೧॥**
**ರೇತೋಮೂತ್ರಪುರೀಷಾಣಾಮುತ್ಸರ್ಗೇಽ ನುಕ್ತಭಾಷಣೇ ।**
**ಷ್ಠೀವಿತ್ವಾಧ್ಯಯನಾರಂಭೇ ಕಾಸಶ್ವಾಸಾಗಮೇ ತಥಾ ॥ ೨ ।**
**ಚತ್ವರಂ ವಾ ಶ್ಮಶಾನಂ ವಾ ಸಮಾಕ್ರಮ್ಯ ದ್ವಿಜೋತ್ತಮಃ ।**
**ಸಂಧ್ಯಯೋರುಭಯೋಸ್ತದ್ವದಾಚಾಂತೋಽಪ್ಯಾಚಮೇತ್ಪುನಃ ॥೩॥**
**ಚಂಡಾಲಮ್ಲೇಚ್ಛಸಂಭಾಷೇ ಸ್ತ್ರೀಶೂದ್ರೋಚ್ಛಿಷ್ಟಭಾಷಣೇ ।**
**ಉಚ್ಛಿಷ್ಟಂ ಪುರುಷಂ ದೃಷ್ಟ್ವಾ ಭೋಜ್ಯಂ ಚಾಪಿ ತಥಾವಿಧಂ ॥ ೪ ॥**

---

ಪದ್ಮಪುರಾಣದ ಆದಿಖಂಡದ ಐವತ್ತೆರಡನೆಯ ಅಧ್ಯಾಯವು

೧–೩. ಭೋಜನ, ಪಾನ, ನಿದ್ರೆ, ಸ್ನಾನ, ಬೀದಿಯಲ್ಲಿ ಸಂಚಾರ, ತುಟಿಯನ್ನು ಮುಟ್ಟಿಕೊಳ್ಳುವುದು, ಬಟ್ಟೆಯುಟ್ಟುಕೊಳ್ಳುವುದು, ರೇತೋ ವಿಸರ್ಜನ ಮೂತ್ರಪುರೀಷೋತ್ಸರ್ಜನ, ಅಯೋಗ್ಯರೊಡನೆ ಮಾತು, ವಾಂತಿ, ಅಧ್ಯಯನಾರಂಭ, ಕೆಮ್ಮು, ಅಕಳಿಕೆ, ಚಚ್ಚೌಕದ ಎಂದರೆ ನಾಲ್ಕು ರಸ್ತೆಗಳ ಸೇರುವ ಚೌಕ ಅಥವಾ ಶ್ಮಶಾನವನ್ನು ದಾಟಿದನಂತರ, ಇವುಗಳಾದ ಬಳಿಕವೂ, ಎರಡು ಸಂಧ್ಯಾಕಾಲಗಳಲ್ಲಿಯೂ ಬ್ರಾಹ್ಮಣನು ಆಚಮನ ಮಾಡಬೇಕು.

೪–೫. ಚಂಡಾಲಮ್ಲೇಚ್ಛರೊಡನೆ ಮಾತನಾಡಿದರೂ, ಸ್ತ್ರೀಶೂದ್ರ ಮತ್ತು ಎಂಜಲುತಿನ್ನುವರು ಇವರೊಡನೆ ಮಾತನಾಡಿದರೂ, ಆಚಮನ ಮಾಡಬೇಕು. ಎಂಜಲು ತಿನ್ನುವವನನ್ನು ನೋಡಿದರೂ, ಅಂಥ ಅನ್ನ

ಆಚಾಮೇದಶ್ರುಪಾತೇ ವಾ ಲೋಹಿತಸ್ಯ ತಥೈವ ಚ ।
ಭೋಜನೇ ಸಂಧ್ಯಯೋಃ ಸ್ನಾತ್ವಾ ಪೀತ್ವಾ ಮೂತ್ರಪುರೀಷಯೋಃ ॥
ಆಗತೋ ವಾಚಮೇತ್ಸುಪ್ತ್ವಾ ಸಕೃತ್ಸಕೃದಥಾನ್ಯತಃ ।
ಅಗ್ನೇರ್ಗವಾಮಥಾಲಂಭೇ ಸ್ಪೃಷ್ಟ್ವಾ ಪ್ರಯತಮೇವ ವಾ ॥ ೬ ॥
ಸ್ತ್ರೀಣಾಮಥಾತ್ಮಸಂಸ್ಪರ್ಶೇ ನೀಲೀಂ ವಾ ಪರಿಧಾಯ ಚ ।
ಉಪಸ್ಪೃಶೇಜ್ಜಲಂ ಗಾಂಚ ತೃಣಂ ವಾ ಭೂಮಿಮೇವ ವಾ ॥ ೭ ॥
ಕೇಶಾನಾಂ ಚಾತ್ಮನಃ ಸ್ಪರ್ಶೇ ವಾಸಸಃ ಸ್ಖಲಿತಸ್ಯ ಚ ।
ಅನುಷ್ಣಾಭಿರಫೇನಾಭಿರಕ್ಷ್ಣರದ್ಭಿಶ್ಚ ಧರ್ಮತಃ ॥ ೮ ॥
ಶೌಚೇಪ್ಸುಸ್ಸರ್ವದಾಚಾಮೇದಾಸೀನಃ ಪ್ರಾಗುದಙ್ಮುಖಃ ।
ಶಿರಃ ಪ್ರಾವೃತ್ಯ ಕಂಠಂ ವಾ ಮುಕ್ತಕೇಶಶಿಖೋಽಪಿ ವಾ ॥ ೯ ॥

---

ವನ್ನು ನೋಡಿದರೂ ಆಚಮನಮಾಡಬೇಕು. ಕಣ್ಣೀರು ಸುರಿದರೆ, ರಕ್ತಬಿದ್ದರೆ, ಊಟಮಾಡಿದರೆ, ಸ್ನಾನಮಾಡಿದರೆ, ನೀರುಕುಡಿದರೆ, ಜಲ ಮಲವಿಸರ್ಜನೆ ಮಾಡಿದರೆ ಆಗಲೂ ಆಚಮನ ಮಾಡಬೇಕು.

೬–೭. ಹೊರಗಿಂದ ಬಂದಾಗಲೂ, ಮಲಗಿದ್ದು ಎದ್ದಾಗಲೂ ಅಥವಾ ಕೊಂಚ ಕೊಂಚ ನಿದ್ರೆಮಾಡಿ ಎದ್ದಾಗಲೂ, ಅಗ್ನಿ, ಗೋವು, ಸ್ತ್ರೀ ಇವರನ್ನು ಸ್ಪರ್ಶಮಾಡಿದಾಗಲೂ, ನೀಲಿಬಟ್ಟೆಯನ್ನುಟ್ಟಾಗಲೂ ಜಲಸ್ಪರ್ಶಮಾಡಬೇಕು. ಅಥವಾ ಹುಲ್ಲು ಭೂಮಿ ಇವುಗಳಲ್ಲಿ ಯಾವುದನ್ನಾದರೂ ಮುಟ್ಟಬಹುದು.

೮. ತಾನು ಕೂದಲನ್ನು ಮುಟ್ಟಿದರೆ, ಉಟ್ಟಬಟ್ಟೆ ಬಿಚ್ಚಿಹೋದರೆ, ಆಗ ಸರಿಯಾದ ರೀತಿಯಿಂದ ಉಷ್ಣವಲ್ಲದ, ನೊರೆಯಿಲ್ಲದ, ಕೊಳೆಯಿಲ್ಲದ ನೀರಿನಿಂದ ಆಚಮನಮಾಡಬೇಕು.

೯. ಶುಚಿಯಾಗಿರಬೇಕೆಂಬುವನು ಯಾವಾಗಲೂ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕುಳಿತು ಆಚಮನಮಾಡಬೇಕು. ತಲೆಗೆ ಸುತ್ತಿಕೊಂಡೂ, ಕತ್ತಿಗೆಸುತ್ತಿಕೊಂಡೂ, ಜುಟ್ಟನ್ನು ಬಿಚ್ಚಿಕೊಂಡೂ ಕಾಲನ್ನು ತೊಳೆದುಕೊಳ್ಳದೆಯೂ ಇದ್ದರೆ ಶುಚಿಯಾಗುವುದಿಲ್ಲ.

ಅಕೃತ್ವಾ ಪಾದಯೋಃಶೌಚಮಾಗತೋ ನ ಶುಚಿರ್ಭವೇತ್ ।
ಸೋಪಾನಸ್ಥೋ ಜಲಸ್ಥೋ ವಾ ನೋಷ್ಣೀಷೀ ಚಾಚಮೇದ್ಬುಧಃ ॥
ನ ಚೈವ ಮುಷ್ಣಧಾರಾಭಿರ್ನ ತಿಷ್ಠನ್ನುದ್ಧೃತೋದಕೈಃ ।
ನೈಕಹಸ್ತೇನ ಜಲ್ಯೈರ್ವಿನಾ ಸೂತ್ರೇಣ ವಾ ಪುನಃ ॥೧೧॥
ನ ಪಾದುಕಾಸನಸ್ಥೋ ವಾ ಬಹಿರ್ಜಾನುರಥಾಪಿ ವಾ ।
ನ ಜಲ್ಪನ್ನ ಹಸನ್ ಪ್ರೇಕ್ಷನ್ ಶಯಾನಸ್ಸಲ್ಪ ಏವ ಚ ॥೧೨॥
ನಾವೀಕ್ಷಿತಾಭಿಃ ಫೇನಾದ್ಯೈರುಪೇತಾಭಿರಥಾಪಿ ವಾ ।
ಶೂದ್ರಾಶುಚಿಕರೋನ್ಮುಕ್ತೈರ್ನ ಕ್ಷಾರಾಭಿಸ್ತಥೈವ ಚ ॥೧೩॥
ನ ಚೈವಾಂಗುಳಿಭಿಃ ಶಬ್ದಂ ಪ್ರಕುರ್ಯಾನ್ನಾನ್ಯಮಾನಸಃ ।
ನ ವರ್ಣರಸದುಷ್ಟಾಭಿರ್ನ ಚೈವ ಪ್ರದರೋದಕೈಃ ॥೧೪॥

---

೧೦. ಮೆಟ್ಟಲಿನ ಮೇಲಿದ್ದಾಗಲೀ ನೀರಿನೊಳಗೆ ಇದ್ದಾಗಲೀ, ತಲೆಗೆ ಬಟ್ಟೆಯನ್ನು ಸುತ್ತಿಕೊಂಡಾಗಲಿ ಆಚಮನಮಾಡಬಾರದು.

೧೧. ತೊಟ್ಟುತೊಟ್ಟಾಗಿ ಬೀಳುವ ನೀರಿನಿಂದ, ನಿಂತುಕೊಂಡು, ಒಂದು ಕೈಯ್ಯಿಂದ ನೀರನ್ನು ಹಾಕಿಕೊಂಡು, ಜನಿವಾರವಿಲ್ಲದೆ, ಆಚಮನ ಮಾಡಬಾರದು. ನೀರನ್ನು ಎತ್ತಿಕೊಂಡು ಆಚಮನಮಾಡಬೇಕು.

೧೨. ಜೋಡುಹಾಕಿಕೊಂಡೂ, ಕುರ್ಚಿಮುಂತಾದವುಗಳ ಮೇಲಿದ್ದು ಕೊಂಡೂ, ತೊಡೆಗಳ ಹೊರಗೆ ಕೈಯಿಟ್ಟುಕೊಂಡೂ, ಆಚಮನಮಾಡ ಬಾರದು, ಅಲ್ಲದೆ, ಮಾತನಾಡುತ್ತಾ, ನಗುತ್ತಾ, ನೋಡುತ್ತಾ, ಹಾಸಿಗೆಯ ಮೇಲೆ ಮಲಗಿರುವಾಗ ಆಚಮನಮಾಡಬಾರದು.

೧೩. ನೋಡದಿರುವ, ನೊರೆಮೊದಲಾದವುಗಳಿಂದ ಕೂಡಿದ, ಶೂದ್ರನಿಂದ ಹಾಕಿದ, ಅಶುಚಿಯಾದರಿಂದ ತಂದ, ಉಪ್ಪಾಗಿರುವ ನೀರಿನಿಂದ, ಆಚಮನಮಾಡಬಾರದು.

೧೪. ಬೆರಳುಗಳಿಂದ ಶಬ್ದಮಾಡುತ್ತಲೂ, ಬೇರೆಕಡೆ ಜ್ಞಾನದದಿಂದಲೂ; ಆಚಮನಮಾಡಬಾರದು. ಮತ್ತು ಬಣ್ಣ, ರಸ, ಮುಂತಾದ ವಸ್ತುಗಳಿಂದಕೂಡಿದ ನೀರಿನಿಂದಲೂ, ಜಿನುಗುತ್ತಿರುವ ನೀರಿನಿಂದಲೂ ಆಚಮನಮಾಡಬಾರದು.

ನ ಪಾಣಿಕ್ಷುಭಿತಾಭಿರ್ವಾ ನ ಬಹಿಃ ಸ್ಕಂಧ ಏವ ವಾ ।
ಹೃದ್ಗಾಭಿಃ ಪೂಯತೇ ವಿಪ್ರಃ ಕಂಠ್ಯಾಭಿಃ ಕ್ಷತ್ರಿಯಃ ಶುಚಿಃ ॥೧೫॥

ಪ್ರಾಶಿತಾಂಭಿಸ್ತಥಾ ವೈಶ್ಯಃ ಸ್ತ್ರೀಶೂದ್ರೌ ಸ್ಪರ್ಶತೋಽನ್ಯತಃ ।
ಅಂಗುಷ್ಠಮೂಲಾಂತರತೋ ರೇಖಾಯಾಂ ಬ್ರಾಹ್ಮಮುಚ್ಯತೇ ॥

ಅಂತರಾಗುಷ್ಠದೇಶಿನ್ಯೋಃ ಪಿತೄಣಾಂ ತೀರ್ಥಮುಚ್ಯತೇ ।
ಕನಿಷ್ಠಾಮೂಲತಃ ಪಶ್ಚಾತ್ಪ್ರಾಜಾಪತ್ಯಂ ಪ್ರಚಕ್ಷತೇ ॥೧೭॥

ಅಂಗುಲ್ಯಗ್ರಂ ಸ್ಮೃತಂ ದೈವಂ ತದೇವಾರ್ಷಂ ಪ್ರಕೀರ್ತಿತಂ ।
ಮೂಲೇ ವಾ ದೈವಮಾರ್ಷಂ ಸ್ಯಾದಾಗ್ನೇಯಂ ಮಧ್ಯತಸ್ಮೃತಂ ॥

---

೧೫. ಆಚಮನಮಾಡಿದ ನೀರು ಕೈಯಲ್ಲಿ ನಿಲ್ಲಕೂಡದು. ಗಂಟಲಿನಿಂದ ಹೊರಗಿರಬಾರದು. ಹೃದಯದವರೆಗೂ ಮುಟ್ಟಬೇಕು. ಹೀಗಾದರೆ ಬ್ರಾಹ್ಮಣನು ಶುಚಿಯಾಗುತ್ತಾನೆ. ಗಂಟಲನ್ನು ಮುಟ್ಟಿದರೆ ಕ್ಷತ್ರಿಯನು ಶುಚಿಯಾಗುವನು.

೧೬. ವೈಶ್ಯನು ಆಚಮನದ ನೀರನ್ನು ಬಾಯಿಗೆ ಹಾಕಿಕೊಂಡರೆ ಸಾಕು ಶುಚಿಯಾಗುತ್ತಾನೆ. ಸ್ತ್ರೀಶೂದ್ರರು ನೀರನ್ನು ಮುಟ್ಟಿದರೆ ಅದರಿಂದಲೇ ಶುಚಿಯಾಗುವರು.

೧೭. ಅಂಗುಷ್ಠದಮೂಲದಲ್ಲಿ ನೀರನ್ನು ಕೊಟ್ಟರೆ ಅದಕ್ಕೆ ಬ್ರಾಹ್ಮತೀರ್ಥವೆಂದು ಹೆಸರು. ಅಂಗುಷ್ಠದೇಶವು ಮಧ್ಯವಾಗುವಂತೆ ಎಂದರೆ ಮಿಕ್ಕ ಬೆರಳುಗಳಿಗೂ ಅಂಗುಷ್ಠಪ್ರದೇಶಕ್ಕೂ ಮಧ್ಯದಲ್ಲಿ ಕೊಟ್ಟರೆ ಅದು ಪಿತೃತೀರ್ಥವೆನಿಸುತ್ತದೆ. ಕಿರುಬೆರಳಿನ ಮೂಲಕ್ಕಿಂತ ಸ್ವಲ್ಪಒಳಕ್ಕೆ ಬಂದರೆ ಅದು ಪ್ರಾಜಾಪತ್ಯತೀರ್ಥವೆನಿಸುತ್ತದೆ.

೧೮. ಬೆಟ್ಟಿನ ತುದಿಯಲ್ಲಿ ದೈವತೀರ್ಥವಾಗುವುದು. ಅದನ್ನೇ ಆರ್ಷವೆಂದೂ ಹೇಳುತ್ತಾರೆ. ಬೆಟ್ಟಿನ ಮೂಲದಲ್ಲಿನ ತೀರ್ಥವು ದೈವವಾಗಲೀ ಆರ್ಷವಾಗಲೀ ಆಗುತ್ತದೆ. ಅಂಗುಳಿಯ ಮಧ್ಯದಲ್ಲಿ ಆಗ್ನೇಯತೀರ್ಥವಾಗುತ್ತದೆ.

ತದೇವ ಸೌಮಿಕಂ ತೀರ್ಥಮೇತಜ್ಜ್ಞಾತ್ವಾ ನ ಮುಹ್ಯತಿ ।
ಬ್ರಾಹ್ಮೇಣೈವ ತು ತೀರ್ಥೇನ ದ್ವಿಜೋ ನಿತ್ಯಮುಪಸ್ಪೃಶೇತ್ ॥೧೯॥

ಕಾಮಯೇದ್ವಾಥ ದೈವೇನ ನ ತು ಪಿತ್ರ್ಯೇಣ ವೈ ದ್ವಿಜಾಃ ।
ತ್ರಿಃ ಪ್ರಾಶ್ನೀಯಾದಪಃ ಪೂರ್ವಂ ಬ್ರಾಹ್ಮೇಣ ಪ್ರಯತಸ್ತತಃ॥೨೦॥

ಸಂಮೃಜ್ಯಾಂಗುಷ್ಠಮೂಲೇನ ಮುಖಂ ವೈ ಸಮುಪಸ್ಪೃಶೇತ್ ।
ಅಂಗುಷ್ಠಾನಾಮಿಕಾಭ್ಯಾಂ ತು ಸ್ಪೃಶೇನ್ನೇತ್ರದ್ವಯಂ ತತಃ ॥೨೧॥

ತರ್ಜನ್ಯಂಗುಷ್ಠಯೋಗೇನ ಸ್ಪೃಶೇನ್ನಾಸಾ ಪುಟದ್ವಯಂ ।
ಕನಿಷ್ಠಾಂಗುಷ್ಠಯೋಗೇನ ಶ್ರವಣೇ ಸಮುಪಸ್ಪೃಶೇತ್ ॥೨೨॥

ಸರ್ವಾಸಾಮಥ ಯೋಗೇನ ಹೃದಯಂ ತು ತಲೇನ ವಾ ।
ಸ್ಪೃಶೇತ ವೈ ಶಿರಸ್ತದ್ವದಂಗುಷ್ಠೇನಾಂಸಕದ್ವಯಂ ॥೨೩॥

---

೧೯-೨೦. ಅದನ್ನೇ ಸಾಮಿಕತೀರ್ಥವೆನ್ನುತ್ತಾರೆ. ಇದನ್ನು ತಿಳಿದವನೇ ಜ್ಞಾನಿಯು. ಬ್ರಾಹ್ಮತೀರ್ಥದಿಂದ ಬ್ರಾಹ್ಮಣನು ಆಚಮನಮಾಡಬೇಕು. ಅಥವಾ ದೈವ ತೀರ್ಥದಿಂದಲಾದರೂ ಮಾಡಬಹುದು. ಪಿತ್ರ್ಯದಿಂದ ಕೂಡದು. ಬ್ರಹ್ಮತೀರ್ಥವಿಧಿಯಿಂದ ನಿಯಮವಾಗಿ ಮೂರು ಬಾರಿ ನೀರನ್ನು ಪ್ರಾಶನಮಾಡಬೇಕು.

೨೧. ನೀರು ಕುಡಿದನಂತರ ಅಂಗುಷ್ಠದ ಮೂಲವನ್ನು ಸವರಬೇಕು ಆ ಮೇಲೆ ಬಾಯನ್ನು ಸವರಬೇಕು. ಅಂಗುಷ್ಠಾನಾಮಿಕಾಬೆರಳುಗಳನ್ನು ಸೇರಿಸಿ ಕಣ್ಣುಗಳೆರಡನ್ನೂ ಮುಟ್ಟಬೇಕು.

೨೨. ತರ್ಜನೀಅಂಗುಷ್ಠಗಳಿಂದ ಮೂಗಿನ ಎರಡು ಹೊಳ್ಳೆಗಳನ್ನೂ ಮುಟ್ಟಬೇಕು. ಕನಿಷ್ಠಾಂಗುಷ್ಠಗಳಿಂದ ಎರಡು ಕಿವಿಗಳನ್ನೂ ಮುಟ್ಟಬೇಕು.

೨೩. ಎಲ್ಲ ಬೆರಳುಗಳಿಂದಲೂ ಅಥವಾ ಅಂಗೈಯಿಂದಲಾದರೂ ಎದೆಯನ್ನು ಮುಟ್ಟಬೇಕು. ಹಾಗೆಯೇ ತಲೆಯನ್ನು ಮುಟ್ಟಬೇಕು. ಅಂಗುಷ್ಟದಿಂದ ಭುಜಗಳನ್ನು ಮುಟ್ಟಬೇಕು.

ತ್ರಿಃ ಪ್ರಾಶ್ನೀಯಾದ್ಯದಂಭಸ್ತು ಪ್ರೀತಾಸ್ತೇನಾಸ್ಯ ದೇವತಾಃ ।
ಬ್ರಹ್ಮಾ ವಿಷ್ಣುರ್ಮಹೇಶಶ್ಚ ಭವಂತೀತ್ಯನುಶುಶ್ರುಮ ॥೨೪॥
ಗಂಗಾ ಚ ಯಮುನಾ ಚೈವ ಪ್ರೀಯೇತೇ ಪರಿಮಾರ್ಜನಾತ್ ।
ಸಂಸ್ಪೃಷ್ಟಯೋರ್ಲೋಚನಯೋಃ ಪ್ರಿಯೇತೇ ಶಶಿಭಾಸ್ಕರೌ ॥೨೫॥
ನಾಸತ್ಯದಸ್ರೌ ಪ್ರೀಯೇತೇ ಸ್ಪೃಶೇನ್ನಾಸಾಪುಟದ್ವಯಂ ।
ಕರ್ಣಯೋಃ ಸ್ಪೃಷ್ಟಯೋಸ್ತದ್ವತ್ಪ್ರೀಯೇತೇ ಚಾನಿಲಾನಲೌ ॥೨೬॥
ಸಂಸ್ಪೃಷ್ಟೇ ಹೃದಯೇ ಚಾಸ್ಯ ಪ್ರೀಯಂತೇ ಸರ್ವದೇವತಾಃ ।
ಮೂರ್ಧಸಂಸ್ಪರ್ಶನಾದೇವ ಪ್ರೀತಃ ಸ ಪುರುಷೋ ಭವೇತ್ ॥೨೭॥
ನೋಚ್ಛಿಷ್ಟಂ ಕುರ್ವತೇ ವಕ್ತ್ರೇ ವಿಪ್ರುಷೋಂಗೇ ಲಸಂತಿ ಯಾಃ ।
ದಂತವದ್ದಂತಲಗ್ನೇಷು ಜಿಹ್ವಾಸ್ಪರ್ಶೋ ಶುಚಿರ್ಭವೇತ್ ॥೨೮॥

---

೨೪. ಮೂರು ಬಾರಿ ನೀರು ಕುಡಿದರೆ ಇವನ ದೇವತೆಗಳೆಲ್ಲಾ ಪ್ರೀತರಾಗುತ್ತಾರೆ. ಬ್ರಹ್ಮ ವಿಷ್ಣು ಮಹೇಶ್ವರರು ಪ್ರೀತರಾಗುತ್ತಾರೆಂದು ಕೇಳಿದ್ದೇವೆ.

೨೫. ಪ್ರೋಕ್ಷಣೆಯಿಂದ ಗಂಗೆಯಮುನೆಗಳು ಪ್ರೀತರಾಗುತ್ತಾರೆ ನೇತ್ರಸಂಸ್ಪರ್ಶನದಿಂದ ಸೂರ್ಯಚಂದ್ರರು ಪ್ರೀತರಾಗುತ್ತಾರೆ.

೨೬. ಮೂಗಿನ ಹೊಳ್ಳೆಗಳನ್ನು ಮುಟ್ಟುವುದರಿಂದ ಅಶ್ವನೀದೇವತೆಗಳೂ ಕಿವಿಗಳನ್ನುಮುಟ್ಟುವುದರಿಂದ ವಾಯ್ವಗ್ನಿಗಳೂ ಪ್ರೀತರಾಗುತ್ತಾರೆ.

೨೭. ಹೃದಯವನ್ನು ಮುಟ್ಟುವುದರಿಂದ ಸರ್ವದೇವತೆಗಳೂ ಪ್ರೀತರಾಗುತ್ತಾರೆ. ತಲೆಯನ್ನು ಮುಟ್ಟುವುದರಿಂದ ಪುರುಷಶ್ರೇಷ್ಠನು ಪ್ರೀತನಾಗುತ್ತಾನೆ.

೨೮. ಬಾಯಿಯ ತುಂತುರುಗಳು ಬಾಯಲ್ಲಿದ್ದರೆ ಎಂಜಲಲ್ಲ. ಅವಯವಗಳ ಮೇಲೆ ಬಿದ್ದರೆ ಎಂಜಲಾಗುವುದು. ಹಲ್ಲಿನಲ್ಲಿ ಸಿಕ್ಕಿಕೊಂಡು ಇರುವ ಪದಾರ್ಥಗಳ ವಿಷಯದಲ್ಲಿ ಹಲ್ಲಿನ ವಿಷಯದಲ್ಲಿನ ಅಶುಚಿತ್ವವನ್ನು ಹೊಂದಿಸಬೇಕು. ನಾಲಗೆಯಿಂದ ತೆಗೆದುಕೊಂಡರೂ ಅದು ಅಶುಚಿಯೇ ಆಗುವುದು.

ಸ್ಪೃಶಂತಿ ಬಿಂದವಃ ಪಾದೌ ಯ ಆಚಾಮಯತಃ ಪರಾನ್ ।
ಭೂಮಿಪಾಂಶುಸಮಾಜ್ಞೇಯಾ ನ ತೈರಸ್ಪೃಶ್ಯತಾ ಭವೇತ್ ॥೨೯॥
ಮಧುಪಾಕೇ ಚ ಸೋಮೇ ಚ ತಾಂಬೂಲಸ್ಯ ಚ ಭಕ್ಷಣೇ ।
ಫಲಮೂಲೇ ಚೇಕ್ಷುದಂಡೇ ನ ದೋಷಂ ಪ್ರಾಹ ವೈ ಮನುಃ ॥
ಪ್ರಚರಂಶ್ಚಾನ್ನಪಾನೇಷು ದ್ರವ್ಯಹಸ್ತೋ ಭವೇನ್ನರಃ ।
ಭೂಮೌ ನಿಕ್ಷಿಪ್ಯ ತದ್ದ್ರವ್ಯಂ ಆಚಮ್ಯಾಭ್ಯುಕ್ಷಯೇಚ್ಚ ತತ್ ॥
ತೈಜಸಂ ವೈ ಸಮಾದಾಯ ಯದ್ಯುಚ್ಛಿಷ್ಟೋ ಭವೇದ್ದ್ವಿಜಃ ।
ಭೂಮೌ ನಿಕ್ಷಿಪ್ಯ ತದ್ದ್ರವ್ಯಂ ಆಚಮ್ಯಾಭ್ಯುಕ್ಷಯೇಚ್ಚ ಯತ್ ॥
ಯದ್ಯದ್ದ್ರವ್ಯಂ ಸಮಾದಾಯ ಭವೇದುಚ್ಛೇಷಣಾನ್ವಿತಃ ।
ಅನಿಧಾಯೈವ ತದ್ದ್ರವ್ಯಂ ಭೂಮೌ ತ್ವಶುಚಿತಾಮಿಯಾತ್ ॥೩೩॥

---

೨೯. ಆಚಮನ ಮಾಡುತ್ತಿದ್ದಾಗ ಎಂದರೆ ಪರರಿಗೆ ಮಾಡಿಸುತ್ತಿದ್ದಾಗ ಎಂಜಲು ಬಿಂದುಗಳು ಕಾಲಿನ ಮೇಲೆ ಬಿದ್ದರೆ ಧೂಳಿನಂತೆ ತಿಳಿದುಕೊಳ್ಳಬೇಕು. ಆದರಿಂದ ಅಸ್ಪೃಶ್ಯತ್ವವಿಲ್ಲ.

೩೦. ಬೆಲ್ಲಮಾಡುವಿಕೆ, ಸೋಮಪಾನ, ತಾಂಬೂಲಭಕ್ಷಣ, ಫಲವನ್ನು ತಿನ್ನುವುದು, ಗೆಡ್ಡೆಗಳನ್ನು ತಿನ್ನುವುದು, ಕಬ್ಬಿನಜಲ್ಲೆ ಇವುಗಳ ವಿಷಯದಲ್ಲಿ ಉಚ್ಛಿಷ್ಟವಿಲ್ಲ.

೩೧. ಅನ್ನಪಾನಗಳನ್ನು ತೆಗೆದುಕೊಂಡು ಪ್ರಯಾಣಮಾಡುವಾಗ, ಕೈಯಲ್ಲಿ ಪಾತ್ರೆಯಿರಬೇಕು. ಆ ಪಾತ್ರೆಯನ್ನು ಭೂಮಿಯಲ್ಲಿಟ್ಟು ಆಚಮನಮಾಡಿ ಪ್ರೋಕ್ಷಿಸಿದರೆ ಶುಚಿ. ಅದು ಕೈಯಲ್ಲಿದ್ದಾಗ ಅಶುಚಿಯಲ್ಲ.

೩೨. ತೇಜೋರೂಪವಾದ ವಸ್ತುಗಳನ್ನು ತೆಗೆದುಕೊಂಡಿದ್ದಾಗ ಅಶುಚಿಯಾದರೆ ಅದನ್ನು ನೆಲದ ಮೇಲಿಟ್ಟು ಆಚಮಿಸಿ ಪ್ರೋಕ್ಷಿಸಿದರೆ ಶುಚಿಯು, ಕೈಲಿದ್ದಾಗ ಅಶುಚಿಯಲ್ಲ.

೩೩. ಏನಾದರೂ ಪದಾರ್ಥವನ್ನು ತೆಗೆದುಕೊಂಡು ಅಶುಚಿಯಾದರೆ ಆ ಪದಾರ್ಥವನ್ನು ಭೂಮಿಯಲ್ಲಿಡುವುದಕ್ಕೆ ಮುಂಚೆಯೇ ಅಶುಚಿಯಾಗುತ್ತಾನೆ.

ವಸ್ತ್ರಾದಿಷು ವಿಕಲ್ಪಃ ಸ್ಯಾತ್ತತ್ಸಂಸ್ಪೃಶ್ಯಾಚಮೇದಿಹ ।
ಅರಣ್ಯೇ ತು ವ್ರಜನ್ರಾತ್ರೌ ಚೋರವ್ಯಾಘ್ರಾಕುಲೇ ಪಥಿ ॥೩೪॥

ಕೃತ್ವಾ ಮೂತ್ರಂ ಪುರೀಷಂ ವಾ ದ್ರವ್ಯಹಸ್ತೋ ನ ದುಷ್ಯತಿ ।
ನಿಧಾಯ ದಕ್ಷಿಣೇ ಕರ್ಣೇ ಬ್ರಹ್ಮಸೂತ್ರಮುದಙ್ಮುಖಃ ॥೩೫॥

ಅಹ್ನಿ ಕುರ್ಯಾಚ್ಛಕೃನ್ಮೂತ್ರಂ ರಾತ್ರೌ ಚೇದ್ದಕ್ಷಿಣಾಮುಖಃ ।
ಅಂತರ್ಧಾಯ ಮಹೀಂ ಕಾಷ್ಠೈಃ ಪತ್ರೈರ್ಲೋಷ್ಟತೃಣೇನ ವಾ ॥

ಪ್ರಾವೃತ್ಯ ಚ ಶಿರಃ ಕುರ್ಯಾದ್ವಿಣ್ಮೂತ್ರಸ್ಯ ವಿಸರ್ಜನಂ ।
ಛಾಯಾಕೂಪನದೀಗೋಷ್ಠಚೈತ್ಯಾಂಭಃ ಪಥಿ ಭಸ್ಮಸು ॥೩೭॥

ಅಗ್ನೌ ಚೈವ ಶ್ಮಶಾನೇ ಚ ವಿಣ್ಮೂತ್ರಂ ನ ಸಮಾಚರೇತ್ ।
ನ ಗೋಮಯೇ ನ ಕಾಷ್ಠೇ ವಾ ಮಹಾವೃಕ್ಷೇಽಥ ಶಾದ್ವಲೇ ॥

---

೩೪. ವಸ್ತ್ರಾದಿಗಳ ವಿಷಯದಲ್ಲಿ ಆ ಅಶುಚಿತನವು ವಿಕಲ್ಪ ಎಂದರೆ ಅವುಗಳನ್ನು ಮುಟ್ಟಿದಾಗ ಅಶುಚಿಯಾಗಿಯೇ ಆಗುತ್ತಾನೆ. ಆದುದರಿಂದ ಮುಟ್ಟಿದಮೇಲೆ ಆಚಮನಮಾಡಬೇಕು.

೩೫–೩೯. ಕಳ್ಳರು, ದುಷ್ಟಪ್ರಾಣಿಗಳು ಇವರ ಭಯವಿರುವ ಕಾಡಿನಲ್ಲಿ ರಾತ್ರಿಕಾಲದಲ್ಲಿ ಹೋಗುತ್ತಿರುವಾಗ ಜಲಮಲಬಾಧೆಗಳನ್ನು ಮಾಡಿದರೆ ಆ ದ್ರವ್ಯವು ಅಶುಚಿಯಾಗುವುದಿಲ್ಲ. ಅವನೂ ಅಶುಚಿಯಾಗುವುದಿಲ್ಲ. ಜನಿವಾರವನ್ನು ಬಲಗಿವಿಗೆ ಸುತ್ತಿಕೊಂಡು ಹಗಲಿನಲ್ಲಾದರೆ ಉತ್ತರಮುಖವಾಗಿಯೂ, ರಾತ್ರಿಯಲ್ಲಾದರೆ ದಕ್ಷಿಣಮುಖವಾಗಿಯೂ ಜಲಮಲಗಳನ್ನು ವಿಸರ್ಜಿಸಬೇಕು. ಭೂಮಿಯನ್ನು ಕಡ್ಡಿ, ಹೆಂಟೆ, ಹುಲ್ಲುಗಳಿಂದ ಮುಚ್ಚಿ ಅದರಮೇಲೆ, ತಲೆಗೆ ಬಟ್ಟೆಯನ್ನು ಸುತ್ತಿಕೊಂಡು ಜಲಮಲಬಾಧೆಗಳನ್ನು ಮಾಡಬೇಕು. ನೆರಳು, ಭಾವಿ, ನದಿ, ದನದ ಕೊಟ್ಟಿಗೆ, ಜೈನರ ದೇವಸ್ಥಾನ, ನೀರು, ದಾರಿ, ಬೂದಿ, ಬೆಂಕಿ ಶ್ಮಶಾನ ಈ ಸ್ಥಳ

ನ ತಿಷ್ಠನ್ನ ಚ ನಿರ್ವಾಣೋ ನ ಚ ಪರ್ವತಮಂಡಲೇ ।
ನ ಜೀರ್ಣದೇವಾಯತನೇ ನ ವಲ್ಮೀಕೇ ಕದಾಚನ ॥೩೯॥

ನ ಚ ಸರ್ವೇಷು ಗರ್ತೇಷು ಪ್ರಗಚ್ಛನ್ನ ಸಮಾಚರೇತ್ ।
ತುಷಾಂಗಾರಕಪಾಲೇಷು ರಾಜಮಾರ್ಗೇ ತಥೈವ ಚ ॥೪೦॥

ನ ಕ್ಷೇತ್ರೇ ನ ಬಿಲೇ ವಾಪಿ ನ ತೀರ್ಥೇ ನ ಚತುಷ್ಪಥೇ ।
ನೋದ್ಯಾನೇऽಪಾಂ ಸಮೀಪೇ ವಾ ನೋಷರೇ ನಗರಾಶಯೋ॥೪೧॥

ನ ಸೋಪಾನಃ ಪಾದುಕೋ ವಾ ಛತ್ರೀ ವಾ ನಾಂತರಿಕ್ಷಕೇ।
ನ ಚೈವಾಭಿಮುಖಸ್ತ್ರೀಣಾಂ ಗುರುಬ್ರಾಹ್ಮಣಯೋರ್ಗವಾಂ ॥

ನ ದೇವದೇವಾಲಯಯೋರಪಾಮಪಿ ಕದಾಚನ ।
ನ ಜ್ಯೋತೀಂಷಿ ನಿರೀಕ್ಷನ್ವಾ ನ ವಾ ಪ್ರತಿಮುಖೋऽಥವಾ ॥೪೩॥

---

ಗಳಲ್ಲಿ ಜಲಮಲ ವಿಸರ್ಜನೆಯನ್ನು ಮಾಡಬಾರದು. ಸಗಣಿಯ ಮೇಲೂ, ಕಟ್ಟಿಗೆಯ ಮೇಲೂ, ದೊಡ್ಡ ಮರದಕೆಳಗೂ ಹುಲ್ಲುಗರಿಕೆಯ ಮೇಲೂ ಜಲಮಲವಿಸರ್ಜನೆಯನ್ನು ಮಾಡಬಾರದು. ನಿಂತುಕೊಂಡು, ಬಟ್ಟೆಯಿಲ್ಲದೆ, ಪರ್ವತಗಳ ಗುಂಪಿನಲ್ಲಿ, ಹಳೆಯ ( ಪಾಳು ) ದೇವಸ್ಥಾನದಲ್ಲಿ, ಹುತ್ತದ ಮೇಲೆ, ಜಲಮಲವಿಸರ್ಜನ ಕೂಡದು.

೪೦–೪೧. ಹಳ್ಳಗಳಲ್ಲಿ, ಹೋಗುತ್ತಿರುವಾಗ, ಹೊಟ್ಟುಗಳ ಮೇಲೆ, ಬೆಂಕಿಯಮೇಲೆ, ಮಣ್ಣಿಓಡಿನ ಮೇಲೆ, ರಾಜಮಾರ್ಗದಲ್ಲಿ, ಹೊಲಗಳಲ್ಲಿ, ಬಿಲದಲ್ಲಿ, ತೀರ್ಥಗಳಲ್ಲಿ, ನಾಲ್ಕು ದಾರಿ ಸೇರಿದ ಚೌಕದಲ್ಲಿ ಉದ್ಯಾನದಲ್ಲಿ, ನೀರಿನ ಹತ್ತಿರ, ಚೌಳುಭೂಮಿಯಲ್ಲಿ, ಪಟ್ಟಣದ ಸಮೀಪದಲ್ಲಿ, ಜಲಮಲಬಾಧೆಗಳನ್ನು ಮಾಡಬಾರದು.

೪೨. ಜೋಡಿನೊಡನೆ, ಮೆಟ್ಟಲಿನ ಮೇಲಿಂದ, ಛತ್ರಿಯನ್ನು ಹಿಡಿದುಕೊಂಡು, ಮೇಲಿನಿಂದ, ಸ್ತ್ರೀ ಗುರುಬ್ರಾಹ್ಮಣ ಗೋವುಗಳಿಗೆ ಎದುರಾಗಿ ಜಲಮಲವಿಸರ್ಜನೆ ಮಾಡಬಾರದು.

೪೩. ದೇವತೆಗಳು, ದೇವಾಲಯಗಳು, ನೀರು, ಇವುಗಳೆದುರಿಗೆ ಜಲಮಲವಿಸರ್ಜನೆ ಮಾಡಬಾರದು. ದೀಪಮುಂತಾದ ಬೆಳಕನ್ನು

ಪ್ರತ್ಯಾದಿತ್ಯಂ ಪ್ರತ್ಯನಲಂ ಪ್ರತಿಸೋಮಂ ತಥೈವ ಚ ।
ಆಹೃತ್ಯ ಮೃತ್ತಿಕಾಂ ಕೂಲಾಲ್ಲೇಪಗಂಧಾಪಕರ್ಷಿಣೀಂ
ಕುರ್ಯಾದತಂದ್ರಿತಶ್ಶೌಚಂ ವಿಶುದ್ಧೈರುದ್ಧೃತೋದಕೈಃ । ॥೪೪॥
ನಾಹರೇನ್ಮೃತ್ತಿಕಾಂ ವಿಪ್ರಃ ಪಾಂಸುಲಾಂ ನ ಚ ಕರ್ದಮಾಂ
ನ ಮಾರ್ಗಾನ್ನೋಷರೋದ್ದೇಶಾಚ್ಛೌಚಶಿಷ್ಟಾಂ ಪರಸ್ಯ ಚ ॥೪೫॥
ನ ದೇವಾಯತನಾತ್ಕೂಪಾದ್ಗ್ರಾಮಾನ್ನ ಚ ಜಲಾತ್ತಥಾ ।
ಉಪಸ್ಪೃಶೇತ್ತತೋ ನಿತ್ಯಂ ಪೂರ್ವೋಕ್ತೇನ ವಿಧಾನತಃ ॥೪೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಕರ್ಮಯೋಗ ಕಥನಂ ದ್ವಿಪಂಚಾಶತ್ತಮೋಽಧ್ಯಾಯಃ

---

ನೋಡುತ್ತಲೂ ಅಥವಾ ಅವುಗಳ ಅಭಿಮುಖವಾಗಿಯೂ ಜಲಮಲಬಾಧೆಗಳನ್ನು ಮಾಡಬಾರದು. ಸೂರ್ಯ, ಚಂದ್ರ ಬೆಂಕಿ ಇವುಗಳ ಎದುರಿಗೆ ಜಲಮಲವಿಸರ್ಜನೆಯನ್ನು ಮಾಡಬಾರದು.

೪೪. ಯಾವುದಾದರೂ ಹಳ್ಳದ ದಡದಿಂದ ಮಣ್ಣನ್ನು ತೆಗೆದುಕೊಂಡು ಜೋಪಾನವಾಗಿ ನೀರನ್ನು ಹೊರಗೆ ತೆಗೆದುಕೊಂಡು ಬಂದು ಶೌಚವನ್ನು ಮಾಡಿಕೊಳ್ಳಬೇಕು. ಆ ಮಣ್ಣು ದುರ್ವಾಸನೆಯನ್ನಡಗಿಸಲು ಸಮರ್ಥವಾಗಿರಬೇಕು.

೪೫. ಧೂಳಾಗಿರುವ, ಅಥವಾ ಕೊಚ್ಚೆಯಾದ ಮಣ್ಣನ್ನು ಶೌಚಕ್ಕಾಗಿ ಉಪಯೋಗಿಸಕೂಡದು. ಮಾರ್ಗದಿಂದಾಗಲಿ, ಚೌಳುಭೂಮಿಯಿಂದಲಾಗಲಿ, ಮತ್ತೊಬ್ಬರು ಶೌಚಮಾಡಿ ಮಿಕ್ಕ ಮಣ್ಣನ್ನಾಗಲಿ ತಂದು ಶೌಚಮಾಡಿಕೊಳ್ಳ ಬಾರದು.

೪೬. ದೇವಸ್ಥಾನದಿಂದಲೂ, ಭಾವಿಯಿಂದಲೂ, ಮನೆಗಳ ಸಂಬಂಧವಾದ ಮಣ್ಣನ್ನು ಶೌಚಕ್ಕಾಗಿ ತರಬಾರದು. ಹಿಂದೆ ಹೇಳಿದ ಈ ವಿಧಾನಗಳಿಂದ ಪ್ರತಿನಿತ್ಯವೂ ಶೌಚಮಾಡಿಕೊಳ್ಳುತ್ತಾ ಆಚಮನಾದಿಗಳನ್ನು ಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದಲ್ಲಿ
ಕರ್ಮಯೋಗ ಕಥನದಲ್ಲಿ ಐವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ತ್ರಿಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಏವಂ ದಂಡಾದಿಭಿರ್ಯುಕ್ತಃ ಶೌಚಾಚಾರಸಮನ್ವಿತಃ ।**
**ಆಹೂತೋಽಧ್ಯಯನಂ ಕುರ್ಯಾದ್ವೀಕ್ಷಮಾಣೋ ಗುರೋರ್ಮುಖಂ**

**ನಿತ್ಯಮುದ್ಯತಪಾಣಿಸ್ಸ್ಯಾತ್ಸಾಧ್ವಾಚಾರಸ್ಸುಸಂಯುತಃ ।**
**ಆಸ್ಯತಾಮಿತಿ ಚೋಕ್ತಸ್ಸನ್ನಾಸೀತಾಭಿಮುಖಂ ಗುರೋಃ ॥೨॥**

**ಪ್ರತಿಶ್ರವಣಸಂಭಾಷೇ ಶಯಾನೋ ನ ಸಮಾಚರೇತ್ ।**
**ಆಸೀನೋ ನ ಚ ಭುಂಜಾನೋ ನ ತಿಷ್ಠನ್ನ ಪರಾಙ್ಮುಖಃ ॥೩॥**

---

### ಪದ್ಮ ಪುರಾಣದ ಆದಿಖಂಡದ ಐವತ್ಮೂರನೆಯ ಅಧ್ಯಾಯವು

೧. ವ್ಯಾಸಮಹರ್ಷಿಯು ಹೇಳುತ್ತಾನೆ: ದಂಡ, ಮೇಖಲೆ; ಅಜಿನಗಳಿಂದ ಯುಕ್ತನಾಗಿ ಶೌಚವನ್ನು ಸರಿಯಾಗಿ ಮಾಡುತ್ತಾ, ಗುರುವಿನಿಂದ ಕರೆಸಿಕೊಂಡು ಗುರುಮುಖವನ್ನು ನೋಡುತ್ತಾ, ಅಧ್ಯಯನವನ್ನು ಮಾಡಬೇಕು.

೨. ಒಳ್ಳೆಯ ಆಚಾರದಿಂದ ಕೂಡಿದವನಾಗಿ ಕೈಯನ್ನು ಮೇಲೆತ್ತಿಕೊಂಡಿದ್ದು ಕುಳಿತುಕೋ ಎಂದು ಹೇಳಿದಮೇಲೆ ಗುರುವಿನ ಅಭಿಮುಖವಾಗಿ ಕುಳಿತುಕೊಳ್ಳಬೇಕು.

೩. ಹೇಳಿದುದನ್ನು ಕೇಳುವುದು ಮಾತನಾಡುವುದು ಇದನ್ನು ಮಲಗಿಕೊಂಡು ಮಾಡಬಾರದು. ಕೂತುಕೊಂಡು ಊಟಮಾಡುತ್ತ ಗುರುವಿಗೆ ಉತ್ತರ ಪ್ರತ್ಯುತ್ತರ ಕೊಡದು. ಗುರುವಿಗೆ ಹಿಂದುಮುಂದಾಗಿ ಕುಳಿತುಕೊಳ್ಳಬಾರದು.

ನೀಚೇ ಶಯ್ಯಾಸನಂ ಚಾಸ್ಯ ಸರ್ವದಾ ಗುರುಸನ್ನಿಧೌ।
ಗುರೋಸ್ತು ಚಕ್ಷುರ್ವಿಷಯೇ ನ ಯಥೇಷ್ಟಾಸನೋ ಭವೇತ್ ॥೪॥
ನೋದಾಹರೇದಸ್ಯ ನಾಮ ಪರೋಕ್ಷಮಪಿ ಕೇವಲಂ।
ನ ಚೈವಾಸ್ಯಾನುಕುರ್ವೀತ ಗತಿಭಾಷಣಚೇಷ್ಟಿತಂ ॥೫॥
ಗುರೋರ್ಯತ್ರ ಪರೀವಾದಾ ನಿಂದಾ ವಾಪಿ ಪ್ರವರ್ತತೇ।
ಕರ್ಣೌ ತತ್ರ ಪಿಧಾತವ್ಯೌ ಗಂತವ್ಯಂ ವಾ ತತೋಽನ್ಯತಃ ॥೬॥
ದೂರಸ್ಥೋ ನಾರ್ಚಯೇದೇನಂ ನ ಕ್ರುದ್ಧೋ ನಾಂತಿಕೇ ಸ್ತ್ರಿಯಃ।
ನ ಚೈವಾಸ್ಯೋತ್ತರಂ ಬ್ರೂಯಾತ್ಸ್ಥಿತೋ ನಾಸೀತ ಸನ್ನಿಧೌ ॥೭॥
ಉದಕುಂಭಂ ಕುಶಾನ್ಪುಷ್ಪಂ ಸಮಿಧೋಽಸ್ಯಾಹರೇತ್ಸದಾ।
ಮಾರ್ಜನಂ ಲೇಪನಂ ನಿತ್ಯಮಂಗಾನಾಂ ವೈ ಸಮಾಚರೇತ್ ॥೮॥

---

೪. ಗುರುಗಳ ಸಮೀಪದಲ್ಲಿ ಅವರ ಹಾಸಿಗೆಗಿಂತ ತಾನು ಕೆಳಗೆ ಹಾಸಿಗೆಯನ್ನೂ, ಅವರ ಅಸನಕ್ಕಿಂತ ಕೆಳಗೆ ಆಸನವನ್ನೂ, ಮಾಡಿಕೊಳ್ಳ ಬೇಕು. ಗುರುವಿನ ಎದುರಿಗೆ ಇಷ್ಟಬಂದಂತೆ ಕುಳಿತುಕೊಳ್ಳಬಾರದು.

೫. ಗುರುವಿನ ಹೆಸರನ್ನು ಪರೋಕ್ಷದಲ್ಲಿಯೂ ಕೂಡ ಹೇಳ ಕೂಡದು. ಗುರುವನ್ನು ಯಾವ ವಿಧದಿಂದಲೂ ಅಣಕಿಸಬಾರದು.

೬. ಗುರುವಿನ ವಿಷಯದಲ್ಲಿ ತಿರಸ್ಕಾರ ನಿಂದೆಗಳು ನಡೆಯುವಲ್ಲಿ ಕಿವಿಗಳನ್ನು ಮುಚ್ಚಿಕೊಳ್ಳಬೇಕು. ಅಥವಾ ಅಲ್ಲಿಂದ ಹೊರಟುಹೋಗ ಬೇಕು.

೭. ಗುರುವನ್ನು ದೂರದಿಂದಲೇ ಗೌರವಿಸಬಾರದು. ಕೋಪ ಗೊಂಡು ಗೌರವಿಸಬಾರದು. ಹೆಂಗಸಿನ ಎದುರಿಗೆ ಗೌರವಿಸಲು ಹೋಗ ಬಾರದು. ಕುಳಿತುಕೊಂಡೇ ಗುರುವಿಗೆ ಉತ್ತರ ಕೊಡಬಾರದು. ಹತ್ತಿರ ದಲ್ಲಿ ಕೂತುಕೊಳ್ಳಬಾರದು.

೮. ಅಗ್ನ್ಯೋದಕ, ಹೂ, ದರ್ಭೆ, ಸಮಿತ್ತುಗಳನ್ನು ನಿತ್ಯವೂ ತಂದು ಕೊಡುತ್ತಿರಬೇಕು. ಗುರುವಿಗೆ ಸ್ನಾನಮಾಡಿಸುವುದು ತೈಲ ಮುಂತಾ ದುವನ್ನು ತಿಕ್ಕುವುದು. ಇವನ್ನು ಮಾಡಬೇಕು.

ನಾಸ್ಯ ನಿರ್ಮಾಲ್ಯಶಯನಂ ಪಾದುಕೋಪಾನಹಾವಪಿ।
ಆಕ್ರಾಮೇದಾಸನಂ ಚಾಸ್ಯ ಛಾಯಾದೀನ್ವಾ ಕದಾಚನ ॥೯॥

ಸಾಧಯೇದ್ದಂತಕಾಷ್ಠಾದೀನ್ ಲಬ್ಧಂ ಚಾಸ್ಮೈ ನಿವೇದಯೇತ್।
ಅನಾಪೃಚ್ಛ್ಯ ನ ಗಂತವ್ಯಂ ಭವೇತ್ಪ್ರಿಯಹಿತೇ ರತಃ ॥೧೦॥

ನ ಪಾದೌ ಸಾರಯೇದಸ್ಯ ಸನ್ನಿಧಾನೇ ಕದಾಚನ।
ಜೃಂಭಿತಂ ಹಸಿತಂ ಚೈವ ಕಂಠಪ್ರಾವರಣಂ ಕಥಾ ॥೧೧॥

ವರ್ಜಯೇತ್ಸಂನಿಧೌ ನಿತ್ಯಂ ಅಂಗಸ್ಫೋಟನಮೇವ ವಾ॥
ಯಥಾಕಾಲಮಧೀಯೀತ ಯಾವನ್ನವಿಮನಾ ಗುರುಃ ॥೧೨॥

ಆಸೀತಾಧೋ ಗುರೋಃ ಪಾರ್ಶ್ವೇ ಸೇವಾಂ ಚ ಸಸಮಾಹಿತಃ।
ಆಸನೇ ಶಯನೇ ಯಾನೇ ನೈವ ತಿಷ್ಠೇತ್ಕದಾಚನ ॥೧೩॥

---

೯. ಅವರು ಮಲಗಿದ್ದ ಹಾಸಿಗೆಯಲ್ಲಿ ಮಲಗಬಾರದು. ಅವರ ಪಾದುಕೆ, ಕೆರಗಳನ್ನು ಮೆಟ್ಟಬಾರದು. ಅವರ ಪೀಠದಲ್ಲಿ ಕೂಡ ಬಾರದು. ಅವರ ನೆರಳನ್ನು ಕೂಡ ಮೀರಬಾರದು.

೧೦. ಗುರುವಿಗೆ ಹಲ್ಲುಜ್ಜುವಕಡ್ಡಿ ಮುಂತಾದುವನ್ನು ತಂದುಕೊಡಬೇಕು. ಸಿಕ್ಕಿದ ಅಥವಾ ತಂದ, ಅವನ್ನು ಅವರಿಗೆ ಹೇಳಬೇಕು. ಅವರಿಗೆ ಹೇಳದೆ ಹೋಗಬಾರದು. ಅವರ ಹಿತವನ್ನೇ ಬಯಸುತ್ತಿರಬೇಕು.

೧೧. ಗುರುಗಳೆದುರಿಗೆ ಕಾಲುನೀಡಿಕೊಂಡು ಕೂರಬಾರದು. ನಗುವುದು, ಆಕಳಿಸುವುದು, ಕತ್ತಿಗೆ ಸುತ್ತಿಕೊಳ್ಳುವುದು, ಮೈ ಕೈಗಳನ್ನು ಮುರಿವುದು, ಇವನ್ನು ಗುರುವಿನೆದುರಿಗೆ ಮಾಡಬಾರದು.

೧೨. ಗುರುವು ಬೇಡವೆನ್ನುವವರೆಗೂ ಕಾಲಕ್ಕೆ ಸರಿಯಾಗಿ ಅಧ್ಯಯನ ಮಾಡಬೇಕು.

೧೩. ಗುರುವಿನಹತ್ತಿರ ಸೇವೆಮಾಡುತ್ತ ಕೆಳಗೆ ಕುಳಿತುಕೊಳ್ಳಬೇಕು. ಅವರ ಆಸನ, ಹಾಸಿಗೆ, ಯಾನಗಳಲ್ಲಿ ಕುಳಿತುಕೊಳ್ಳಬಾರದು.

ಧಾವಂತಮನುಧಾವೇತ ಗಚ್ಛಂತಮನುಗಚ್ಛತಿ।
ಗೋಶ್ವೋಷ್ಟ್ರಯಾನಪ್ರಾಸಾದೇ ತಥಾ ಚ ವಿಷ್ಟರೇಷು ಚ ॥೧೪॥

ಆಸೀತ ಗುರುಣಾ ಸಾರ್ಧಂ ಶಿಲಾಫಲಕನೌಷು ಚ।
ಜಿತೇಂದ್ರಿಯಸ್ಸ್ಯಾತ್ಸತತಂ ವಶ್ಯಾತ್ಮಾಽಕ್ರೋಧನಶ್ಶುಚಿಃ ॥೧೫॥

ಪ್ರಯುಂಜೀತ ಸದಾ ವಾಚಂ ಮಧುರಾಂ ಹಿತಕಾರಿಣೀಂ।
ಗಂಧಮಾಲ್ಯಂ ರಸಂ ಕಲ್ಪಂ ಶುಕ್ತಿಂ ಪ್ರಾಣಿವಿಹಿಂಸನಂ ॥೧೬॥

ಅಭ್ಯಂಜನಾಂಜನೇ ಸಾನಂ ಛತ್ರಧಾರಣಮೇವ ಚ।
ಕಾಮಂ ಲೋಭಂ ಭಯಂ ನಿದ್ರಾಂ ಗೀತಂ ವಾದಿತ್ರವರ್ತನಂ ॥೧೭॥

ಆತರ್ಜನಂ ಪರೀವಾದಂ ಸ್ತ್ರೀಪ್ರೇಕ್ಷಾಲಂಭನಂ ತಥಾ।
ಪರೋಪಘಾತಂ ಪೈಶುನ್ಯಂ ಪ್ರಯತ್ನೇನ ವಿವರ್ಜಯೇತ್ ॥೧೮॥

---

೧೪. ಗುರುವು ಓಡುತ್ತಿದ್ದರೆ ತಾನೂ ಹಿಂದೆ ಓಡುತ್ತಿರಬೇಕು. ಹೋಗುತ್ತಿದ್ದರೆ ಹಿಂದೆ ಹೋಗಬೇಕು. ಎತ್ತು, ಕುದುರೆ, ಒಂಟೆಗಳ ಯಾನ, ಮಹಡಿ, ಆಸನಗಳಲ್ಲಿ ಆ ಆಸನವು ಗುರುವಿನದಾಗಿದ್ದರೆ ಅವುಗಳ ಜೊತೆಯಲ್ಲಿ ಕೂರಬಹುದು.

೧೫. ಕಲ್ಲು ಚಪ್ಪಡಿ, ದೋಣಿಗಳಲ್ಲಿ ಜೊತೆಯಲ್ಲಿ ಕೂರಬಹುದು. ಜಿತೇಂದ್ರಿಯನಾಗಿ ಕೊಪವಿಲ್ಲದೆ ಶುಚಿಯಾಗಿ ಯಾವಾಗಲೂ ಇರಬೇಕು.

೧೬–೧೮. ಮಧುರವಾದ ಹಿತವಾದ ಮಾತನ್ನೇ ಆಡಬೇಕು. ಗಂಧ ಮಾಲೆ ರಸ, ಗಂಧದ ಅಂಟಿನಂತಿರುವ ಪದಾರ್ಥ, ಕಪ್ಪೆಚಿಪ್ಪು (ಮುತ್ತು) ಗಳನ್ನು ನೋಡಿ ಆಸೆಬಿಡಬೇಕು. ಪ್ರಾಣಿಹಿಂಸೆ ಮಾಡಬಾರದು. ಅಭ್ಯಂಜನ, ಕಣ್ಣುಕಪ್ಪು, ಕುಡಿತ, ಛತ್ರಿ ಹಿಡಿವುದು, ಕಾಮ, ಲೋಭ, ಭಯ, ನಿದ್ದೆ, ಹಾಡು, ವಾದ್ಯ, ಕುಣಿತ, ಹೆದರಿಸುವುದು, ಅಣಕಿಸುವುದು, ಹೆಂಗಸರನ್ನು ನೋಡುವುದು, ಹೊಡೆವುದು, ಪರಾಪಕಾರ, ಚಾಡಿ ಇವನ್ನು ಪ್ರಯತ್ನಪಟ್ಟಾದರೂ ಬಿಡಬೇಕು.

ಉದಕುಂಭಂ ಸುಮನಸೋ ಗೋಶಕೃನ್ಮೃತ್ತಿಕಾಕುಶಾನ್ ।
ಆಹರೇದ್ಯಾವದನ್ನಾನಿ ಭೈಕ್ಷ್ಯಂ ತಾವದ್ಬಹಿಶ್ಚರೇತ್ ॥೧೯॥

ಘೃತಂ ಚ ಲವಣಂ ಸರ್ವಂ ವರ್ಜ್ಯಂ ಪರ್ಯುಷಿತಂ ಚ ಯತ್ ।
ಅನೃತ್ಯದರ್ಶೀ ಸತತಂ ಭವೇದ್ಗೀತಾದಿನಿಃಸ್ಪೃಹಃ ॥೨೦॥

ನಾದಿತ್ಯಂ ವೈ ಸಮೀಕ್ಷೇತ ನಾಚರೇದ್ದಂತಧಾವನಂ ।
ಏಕಾಂತಮಶುಚಿಸ್ತ್ರೀಭಿಃ ಶೂದ್ರಾದ್ಯೈರಭಿಭಾಷಣಂ ॥೨೧॥

ಗುರೂಚ್ಛಿಷ್ಟಂ ಭೇಷಜಾನ್ನಂ ಪ್ರಯುಂಜೀತ ನ ಕಾಮತಃ ।
ಮಲಾಪಕರ್ಷಣಂ ಸ್ನಾನಂ ನ ಚರೇದ್ಧಿ ಕದಾಚನ ॥೨೨॥

ನ ಕುರ್ಯಾನ್ಮಾನಸಂ ವಿಪ್ರೋ ಗುರೋಸ್ತ್ಯಾಗೇ ಕಥಂಚನ ।
ಮೋಹಾದ್ವಾಯದ್ವಿ ವಾ ಲೋಭಾತ್ತ್ಯಕ್ತ್ವಾ ತು ಪತಿತೋ ಭವೇತ್ ॥

---

೧೯. ಅಗ್ನ್ಯೋದಕ, ಹೂ, ಸಗಣಿ, ಮೃತ್ತಿಕೆ ದರ್ಭೆಗಳನ್ನು ತರಬೇಕು. ಭಿಕ್ಷಾನ್ನವನ್ನು ಹೊರಗೆ ಮಾಡಬೇಕು.

೨೦. ತುಪ್ಪ, ಉಪ್ಪು, ಹಳಸಿದುದು, ಇವೆಲ್ಲವು ಬಿಡಲ್ಪಡತಕ್ಕುವು ಕುಣಿತ ಮೊದಲಾದುವನ್ನು ನೋಡಬಾರದು. ಹಾಡು ಮೊದಲಾದವರಲ್ಲಿ ಆಸೆಬಿಡಬೇಕು.

೨೧. ಸೂರ್ಯನನ್ನು ನೋಡಬಾರದು. ಹಲ್ಲನ್ನುಜ್ಜಬಾರದು. ಅಯೋಗ್ಯ ಸ್ತ್ರೀಯೊಡನೆ ಒಬ್ಬನೇ ಇರಬಾರದು. ಶೂದ್ರಾದಿಗಳೊಡನೆ ಮಾತಾಡಬಾರದು.

೨೨. ಗುರುವಿನ ಎಂಜಲು, ವೈದ್ಯನ ಮನೆ ಅನ್ನ ಇದನ್ನು ಇಷ್ಟಬಂದಂತೆ ತಿನ್ನಬಾರದು. ಕೊಳೆ ಹೋಗುವಂತೆ ಸ್ನಾನಮಾಡಲೇ ಬಾರರದು.

೨೩. ಗುರುವಿನ ತ್ಯಾಗದಲ್ಲಿ ಮೋಹದಿಂದಾಗಲಿ, ಲೋಭದಿಂದಾಗಲಿ ಮನಸ್ಸುಮಾಡಬಾರದು. ಹಾಗೆ ಬಿಟ್ಟರೆ ಪತಿತನಾಗುತ್ತಾನೆ.

ಲೌಕಿಕಂ ವೈದಿಕಂ ವಾಪಿ ತಥಾಽಧ್ಯಾತ್ಮಿಕಮೇವ ವಾ ।
ಆದದೀತ ಯತೋ ಜ್ಞಾನಂ ತನ್ನ ದ್ರುಹ್ಯೇತ್ಕದಾಚನ ॥೨೪॥

ಗುರೋರಪ್ಯವಲಿಪ್ತಸ್ಯ ಕಾರ್ಯಕಾರ್ಯಾಮಜಾನತಃ ।
ಉತ್ಪಥಂ ಪ್ರತಿಪನ್ನಸ್ಯ ನ ಮನುಸ್ತ್ಯಾಗಮಬ್ರವೀತ್ ॥೨೫॥

ಗುರೋರ್ಗುರೌ ಸಂನಿಹಿತೇ ಗುರುವದ್ವೃತ್ತಿಮಾಚರೇತ್ ।
ನತ್ವಾಽಭಿಸೃಷ್ಟೋ ಗುರುಣಾ ಸ್ವಾನ್ಗುರೂನಭಿವಾದಯೇತ್ ॥೨೬॥

ವಿದ್ಯಾಗುರುಷ್ವೇತದೇವ ನಿತ್ಯಾ ವೃತ್ತಿಷು ಯೋಗಿಷು ।
ಪ್ರತಿಷೇಧತ್ಸು ಚಾಧರ್ಮಾದ್ಧಿತಂ ಚೋಪದಿಶತ್ಸು ಚ ॥೨೭॥

ಶ್ರೇಯಃ ಸ್ವಗುರುವದ್ವೃತ್ತಿಂ ನಿತ್ಯಮೇವ ಸಮಾಚರೇತ್ ।
ಗುರುಪುತ್ರೇಷು ದಾರೇಷು ಗುರೋಶ್ಚೈವ ಸ್ವಬಂಧುಷು ॥೨೮॥

---

೨೪. ಲೌಕಿಕ, ವೈದಿಕ, ಬ್ರಹ್ಮಸಂಬಂಧಜ್ಞಾನಗಳನ್ನು ಯಾರಿಂದ ಹೊಂದುತ್ತಾನೋ ಅವನಿಗೆ ದ್ರೋಹ ಮಾಡಲೇಬಾರದು.

೨೫. ಕೊಬ್ಬಿದ, ವಿವೇಕವಿಲ್ಲದ, ಅಯೋಗ್ಯ ದಾರಿಯನ್ನು ಹೊಂದಿದ ಗುರುವನ್ನು ಕೂಡ ಬಿಡಬಾರದೆಂದು ಮನು ಹೇಳಿದ್ದಾನೆ.

೨೬. ಗುರುವಿನ ಗುರುವು ಬಂದಾಗ ಗುರುವಿನಂತೆ ಶುಶ್ರೂಷೆ ಮಾಡಬೇಕು. ಆ ಗುರುವು ಬಿಟ್ಟಮೇಲೆ ನಮಸ್ಕರಿಸಿ ತನ್ನ ಗುರುವನ್ನು ಶುಶ್ರೂಷಿಸಬೇಕು.

೨೭. ವಿದ್ಯಾಗುರುವಿನಲ್ಲಿ ಮೇಲೆ ಹೇಳಿದ ರೀತಿಯಲ್ಲಿರಬೇಕು. ಯೋಗ್ಯರಲ್ಲಿಯೂ, ಯೋಗಿಗಳಲ್ಲಿಯೂ ಹೀಗೇ ಇರಬೇಕು. ಅಧರ್ಮ ವನ್ನು ಬೇಡವೆನ್ನುವವರು, ಹಿತವನ್ನುಪದೇಶಿಸುವವರು, ಇವರಲ್ಲಿ ಗುರು ವಿನಂತೆ ಶುಶ್ರೂಷಿಸಬೇಕು.

೨೮. ಗುರುವಿನ ಮಗ, ಹೆಂಡತಿ ಅವರ ಬಂಧುಗಳಲ್ಲಿಯೂ ಗುರು ವಿನಂತೆ ನಡೆಯಬೇಕು.

ಬಾಲಸ್ಸಂಮಾನಯೇನ್ಮಾನ್ಯಾನ್ ಶಿಷ್ಯೋ ವಾ ಯಜ್ಞಕರ್ಮಣಿ ।
ಅಧ್ಯಾಪಯನ್ ಗುರುಸುತೋ ಗುರುವನ್ಮಾನಮರ್ಹತಿ ॥೨೯॥

ಉತ್ಸಾದನಂ ಚ ಗಾತ್ರಾಣಾಂ ಸ್ನಾಪನೋಚ್ಛಿಷ್ಟಭೋಜನೇ ।
ನ ಕುರ್ಯಾದ್ಗುರುಪುತ್ರಸ್ಯ ಪಾದಯೋಃ ಶೌಚಮೇವ ಚ ॥೩೦॥

ಗುರುವತ್ಪ್ರತಿಪೂಜ್ಯಾಶ್ಚ ಸವರ್ಣಾ ಗುರುಯೋಷಿತಃ ।
ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿವಾದನೈಃ ॥೩೧॥

ಅಭ್ಯಂಜನಂ ಸ್ನಾಪನಂ ಚ ಗಾತ್ರೋತ್ಸಾದನಮೇವ ಚ ।
ಗುರುಪತ್ನ್ಯಾ ನ ಕಾರ್ಯಾಣಿ ಕೇಶಾನಾಂ ಚ ಪ್ರಸಾಧನಂ ॥೩೨॥

ಗುರುಪತ್ನೀ ತು ಯುವತೀ ನಾಭಿವಾದ್ಯಾ ತು ಪಾದಯೋಃ ।
ಕುರ್ವೀತ ವಂದನಂ ಭೂಮ್ಯಾಮಸಾವಹಮಿತಿ ಬ್ರುವನ್ ॥೩೩॥

---

೨೯. ಯಜ್ಞದ ವಿಷಯದಲ್ಲಿ ಚಿಕ್ಕವನಾದರೂ, ಶಿಷ್ಯನಾದರೂ, ಸರಿ ಅವರನ್ನು ಗೌರವಿಸಬೇಕು. ಗುರುವಿನ ಮಗನಿಗೆ ವಿದ್ಯೆ ಹೇಳುವಾಗ ಗುರುವಿನಂತೆ ಗೌರವಾರ್ಹನು.

೩೦. ಕೈಕಾಲು ಒತ್ತುವುದು. ಸ್ನಾನ ಮಾಡಿಸುವುದು. ಉಚ್ಛಿಷ್ಟ ಭೋಜನ, ಕಾಲು ತೊಳೆವುದು ಇವನ್ನು ಗುರುಪುತ್ರನಿಗೆ ವಿದ್ಯೆ ಹೇಳುವಾಗ ಮಾಡಬಾರದು.

೩೧. ತನ್ನ ಜಾತಿಗೆ ಸಮಾನರಾದ ಗುರುವಿನ ಹೆಂಡಿರನ್ನು ಗುರುವಿನಂತೆ ಸೇವಿಸಬೇಕು. ತನ್ನ ಜಾತಿಗಿಂತ ಕೀಳಾದ ಗುರುವಿನ ಹೆಂಡಿರನ್ನು ಎದುರುಗೊಳ್ಳುವುದು, ಅಭಿವಂದನೆಗಳಿಂದ ಗೌರವಿಸಬೇಕು.

೩೨. ಅಭ್ಯಂಜನಸ್ನಾನ, ಕೈಕಾಲೊತ್ತುವುದು, ತಲೆಬಾಚುವುದು, ಇವನ್ನು ಗುರುಪತ್ನಿಗೆ ಮಾಡಬಾರದು.

೩೩. ಗುರುಪತ್ನಿಯು ಯುವತಿಯಾಗಿದ್ದರೆ ಕಾಲುಮುಟ್ಟಿ ನಮಸ್ಕರಿಸಬಾರದು. ತನ್ನ ಗೋತ್ರನಾಮಗಳನ್ನು ಹೇಳುತ್ತಾ ಭೂಮಿಯಲ್ಲೇ ನಮಸ್ಕರಿಸಬೇಕು.

ವಿಪ್ರೋಷ್ಯ ಪಾದಗ್ರಹಣಮನ್ವಹಂ ಚಾಭಿವಾದನಂ ।
ಗುರುದಾರೇಷು ಕುರ್ವೀತ ಸತಾಂ ಧರ್ಮಮನುಸ್ಮರನ್ ॥೩೪॥

ಮಾತೃಷ್ವಸಾ ಮಾತುಲಾನೀ ಶ್ವಶ್ರೂಶ್ಚಾಥ ಪಿತೃಷ್ವಸಾ ।
ಸಂಪೂಜ್ಯಾ ಗುರುಪತ್ನೀವತ್ಸಮಾಸ್ತಾ ಗುರುಭಾರ್ಯಯಾ ॥೩೫॥

ಭ್ರಾತೃಭಾರ್ಯಾಶ್ಚ ಸಂಗ್ರಾಹ್ಯಾ ಸವರ್ಣಾಹನ್ಯಹನ್ಯಪಿ ।
ವಿಪ್ರೋಷ್ಯ ತೂಪಸಂಗ್ರಾಹ್ಯಾ ಜ್ಞಾತಿಸಂಬಂಧಯೋಷಿತಃ ॥೩೬॥

ಪಿತುರ್ಭಗಿನ್ಯಾ ಮಾತುಶ್ಚ ಜ್ಯಾಯಸ್ಯಾಂ ಚ ಸ್ವಸರ್ಯಪಿ ।
ಮಾತೃವದ್ವೃತ್ತಿಮಾತಿಷ್ಠೇನ್ಮಾತಾ ತಾಭ್ಯೋ ಗರೀಯಸೀ ॥೩೭॥

ಏವಮಾಚಾರಸಂಪನ್ನಮಾತ್ಮವಂತಮದಾಂಭಿಕಂ ।
ವೇದಮಧ್ಯಾಪಯೇದ್ಧರ್ಮಂ ಪುರಾಣಾನಿ ಚ ನಿತ್ಯಶಃ ॥೩೮॥

---

೩೪. ಎಲ್ಲಿಗಾದರೂ ಹೋಗಿಬಂದರೆ ಆಗಲೆಲ್ಲಾ ಗುರುವಿನ ಹೆಂಡತಿಗೂ ನಮಸ್ಕಾರ ಮಾಡಬೇಕು.

೩೫. ತಾಯಿಯ ಅಕ್ಕತಂಗಿಯರು ಸೋದರತ್ತೆಯರು ಹೆಣ್ಣು ಕೊಟ್ಟ ಅತ್ತೆ ತಂದೆಯ ಸೋದರಿಯರು ಕೂಡ ಗುರುಭಾರ್ಯೆಗೆ ಸಮರು. ಅವರಂತೆ ಗೌರವಾರ್ಹರು.

೩೬. ಸಮಾನಜಾತಿಯರಾದ ಅಣ್ಣನ ಹೆಂಡರಿಗೂ, ಜ್ಞಾತಿಗಳ ಹೆಂಡತಿಯರಿಗೂ ಹೊರಗಿನಿಂದ ಬಂದರೆ ನಮಸ್ಕಾರ ಮಾಡಬೇಕು.

೩೭. ಸೋದರತ್ತೆ, ದೊಡ್ಡಮ್ಮ, ಅಕ್ಕ ಇವರಲ್ಲಿಯೂ ತಾಯಿಯಂತಿರಬೇಕು. ಇವರೆಲ್ಲರಿಗೂ ತಾಯಿಯೇ ದೊಡ್ಡವಳು.

೩೮. ಈರೀತಿ ಆಚಾರಶೀಲನಾಗಿ ಜ್ಞಾನವುಳ್ಳ ಡಂಭಾಚಾರವಿಲ್ಲದವನಿಗೆ ವೇದವನ್ನೂ ಧರ್ಮವನ್ನೂ ಪುರಾಣಗಳನ್ನೂ ಹೇಳಿಕೊಡಬೇಕು.

ಸಂವತ್ಸರೋಷಿತೇ ಶಿಷ್ಯೇ ಗುರುರ್ಜ್ಞಾನಮನಿರ್ದಿಶನ್ ।
ಹರತೇ ದುಷ್ಕೃತಂ ತಸ್ಯ ಶಿಷ್ಯಸ್ಯ ವಸತೋ ಗುರುಃ ॥೩೯॥
ಆಚಾರ್ಯಪುತ್ರಃ ಶುಶ್ರೂಷುಃ ಜ್ಞಾನದೋ ಧಾರ್ಮಿಕಃ ಶುಚಿಃ ।
ಶಕ್ತೋಽನ್ನದೋಽಮ್ಬುದಃ ಸಾಧುರಧ್ಯಾಪ್ಯಾ ದಶ ಧರ್ಮತಃ॥೪೦॥
ಕೃತಕಂಠಸ್ತಥಾ ದ್ರೋಹೀ ಮೇಧಾವೀ ಗುರುಕೃನ್ನರಃ ।
ಆಪ್ತ ಪ್ರಿಯೋಽಥ ವಿಧಿವತ್ಷಡಧ್ಯಾಪ್ಯಾ ದ್ವಿಜಾತಯಃ ॥೪೧॥
ಏತೇಷು ಬ್ರಾಹ್ಮಣೇ ದಾನಮನ್ಯತ್ರ ತು ಯಥೋದಿತಂ ।
ಆಚಮ್ಯ ಸಂಯುತೋ ನಿತ್ಯಂ ಅಧೀಯೀತ ಉದಙ್ಮುಖಃ ॥೪೨॥
ಉಪಸಂಗೃಹ್ಯ ತತ್ಪಾದೌ ವೀಕ್ಷ್ಯಮಾಣೋ ಗುರೋರ್ಮುಖಂ ।
ಅಧೀಷ್ವ ಭೋ ಇತಿ ಬ್ರೂಯಾದ್ವಿರಾಮೋಽಸ್ತ್ವಿತಿ ಚಾರಮೇತ್ ॥

---

೩೯. ಒಂದು ವರ್ಷ ವಾಸಮಾಡಿದರೂ ಗುರುವು ವಿದ್ಯೆ ಹೇಳದಿದ್ದರೂ ಅವನ ಪಾಪವನ್ನು ನಾಶಮಾಡುತ್ತಾನೆ.

೪೦. ಮೇಲೆ ಹೇಳಿದಂಥವನು, ಗುರುಪುತ್ರ, ಶುಶ್ರೂಷಕ, ಜ್ಞಾನವನ್ನು ತನಗೆ ಭೋಧಿಸಿದವನು, ಧರ್ಮವುಳ್ಳವನು, ಶುಚಿಯಾದವನು, ಶಕ್ತನು, ಅನ್ನ, ನೀರುಗಳನ್ನು ಕೊಡುವವನು, ಸಾಧುವು, ಈ ಹತ್ತು ಜನರನ್ನು ಅಧ್ಯಯನ ಮಾಡಿಸಬೇಕು.

೪೧. ಕಂಠಸ್ವರ ಮಧುರವಾಗಿ ಉಳ್ಳವನು, ದ್ರೋಹ ಬಯಸದವನು, ಬುದ್ಧಿವಂತ, ಗುರುವನ್ನಾಗಿ ಮಾಡಿಕೊಳ್ಳಲು ಇಚ್ಛೆಯುಳ್ಳವನು, ಆಪ್ತ, ಪ್ರಿಯ, ಇಂಥಾ ದ್ವಿಜರನ್ನು ವಿಧವತ್ತಾಗಿ ಅಧ್ಯಯನ ಮಾಡಿಸಬೇಕು.

೪೨. ಇವರಲ್ಲಿ ಬ್ರಾಹ್ಮಣನಾದವನಿಗೆ ಎಲ್ಲವನ್ನೂ ಹೇಳಬಹುದು. ಮಿಕ್ಕವರಿಗೆ ಅವರಿಗೆ ಹೇಳಿರುವ ರೀತಿಯಲ್ಲಿ ಹೇಳಿಕೊಡಬೇಕು. ಆಚಮನಮಾಡಿ ಉತ್ತರಾಭಿಮುಖವಾಗಿ ಕುಳಿತು ಅಧ್ಯಯನ ಮಾಡಬೇಕು.

೪೩. ಪಾದಕ್ಕೆ ನಮಸ್ಕರಿಸಿ ಗುರುವಿನ ಮುಖನೋಡುತ್ತ ಹೇಳಿಕೊಡಿರೆಂದು ಕೇಳಿ ಹೇಳಿಸಿಕೊಳ್ಳಬೇಕು. ಸಾಕಾದಾಗ ಸಾಕೆಂದು ಹೇಳಬೇಕು.

ಪ್ರಾಕ್ಕೂಲಾನ್ಪರ್ಯುಪಾಸೀತ ಪವಿತ್ರೈಶ್ಚೈವ ಪಾವಕಃ ।
ಪ್ರಾಣಾಯಾಮೈಸ್ತ್ರಿಭಿಃ ಪೂತಃ ತತ ಓಂಕಾರಮರ್ಹತಿ ॥೪೪॥

ಬ್ರಾಹ್ಮಣಃ ಪ್ರಣವಂ ಕುರ್ಯಾದಂತೇ ಚ ವಿಧಿವದ್ದ್ವಿಜಾಃ ।
ಕುರ್ಯಾದಧ್ಯಾಪನಂ ನಿತ್ಯಂ ಸ ಬ್ರಹ್ಮಾಂಜಲಿಪೂರ್ವಕಃ ॥೪೫॥

ಸರ್ವೇಷಾಮೇವ ಭೂತಾನಾಂ ವೇದಶ್ಚಕ್ಷುಸ್ಸನಾತನಃ ।
ಅಧೀಯೀತಾಪ್ಯಯಂ ನಿತ್ಯಂ ಬ್ರಾಹ್ಮಣ್ಯಾಚ್ಚ್ಯವತೇಽನ್ಯಥಾ ॥೪೬॥

ಅಧೀಯೀತ ಋಚೋ ನಿತ್ಯಂ ಕ್ಷೀರಾಹುತ್ಯಾ ಸದೇವತಾಃ ।
ಪ್ರೀಣಾತಿ ತರ್ಪಯನ್ ಕಾಲಂ ಕಾಮೈರ್ಹೂತಾಸ್ಸದೇವತಾಃ ॥

ಯಜೂಂಷ್ಯಧೀತೇ ನಿಯತಂ ದಧ್ನಾ ಪ್ರೀಣಾತಿ ದೇವತಾಃ ।
ಸಾಮಾನ್ಯಧೀತೇ ಪ್ರೀಣಾತಿ ಘೃತಾಹುತಿಭಿರನ್ವಹಂ ॥೪೮॥

---

೪೪. ಗುರುವಿನೆದುರಿಗೆ ಕೂರಬಾರದು, ಗುರುವಿಗೆ ಪೂರ್ವದಿಕ್ಕಿನಲ್ಲಿ ಕುಳಿತು ಕೊಳ್ಳಬೇಕು. ( ಅನುಕೂಲವಾಗಿ ಕುಳಿತುಕೊಳ್ಳಬೇಕು ) ಕೈಗೆ ಪವಿತ್ರ ಹಾಕಿಕೊಳ್ಳಬೇಕು. ಮೂರುಬಾರಿ ಪ್ರಾಣಾಯಾಮ ಮಾಡಬೇಕು. ಆಮೇಲೆ ಓಂಕಾರವನ್ನುಚ್ಚರಿಸಬೇಕು.

೪೫. ಬ್ರಾಹ್ಮಣನು ಅಧ್ಯಯನದ ಆದ್ಯಂತಗಳಲ್ಲಿ ಪ್ರಾಣಾಯಾಮ ಮಾಡಬೇಕು. ಬೊಗಸೆಯ ಅಂಜಲಿಯನ್ನು ಕಟ್ಟಿಕೊಂಡು ಅಧ್ಯಯನ ಮಾಡಬೇಕು.

೪೬. ಎಲ್ಲಾ ಪ್ರಾಣಿಗಳಿಗೂ ವೇದವೇ ಕಣ್ಣು. ಆದ್ದರಿಂದ ನಿತ್ಯವೂ ಅಧ್ಯಯನ ಮಾಡಬೇಕು. ಇಲ್ಲದಿದ್ದರೆ ಬ್ರಾಹ್ಮಣಿಕೆ ಹೋಗುತ್ತದೆ.

೪೭. ನಿತ್ಯವೂ ಋಕ್ಕುಗಳನ್ನು ಅಧ್ಯಯನ ಮಾಡಬೇಕು. ಹಾಲನ್ನು ಆಹುತಿ ಕೊಡೋಣದರಿಂದ ದೇವತೆಗಳನ್ನು ತೃಪ್ತಿ ಪಡಿಸಬೇಕು. ಆಯಾ ಕಾಲದಲ್ಲಿ ಇಷ್ಟವನ್ನು ಅಪೇಕ್ಷಿಸುತ್ತ ದೇವತೆಗಳಿಗೆ ಹೋಮ ಮಾಡಬೇಕು.

೪೮. ಯಜುರಧ್ಯಯನದಲ್ಲಿ ದೇವತೆಗಳಿಗೆ ಮೊಸರಿನಿಂದ ಹೋಮ ಮಾಡಬೇಕು. ಸಾಮಾಧ್ಯಯನದಲ್ಲಿ ತುಪ್ಪದಿಂದ ಹೋಮ ಮಾಡುತ್ತಿರಬೇಕು.

ಅಥರ್ವಾಂಗಿರಸೋ ನಿತ್ಯಂ ಮಧ್ವಾ ಪ್ರೀಣಾತಿ ದೇವತಾಃ ।
ಧರ್ಮಾಂಗಾನಿ ಪುರಾಣಾನಿ ಮಾಂಸೈಸ್ತರ್ಪಯತೇ ಸುರಾನ್ ॥೪೯॥
ತಾಸಾಂ ಸಮೀಪೇ ನಿಯತೋ ನೈತ್ಯಕಂ ವಿಧಿಮಾಶ್ರಿತಃ ।
ಗಾಯತ್ರೀಂ ಸಮಧೀಯೀತ ಗತ್ವಾರಣ್ಯಂ ಸಮಾಹಿತಃ ॥೫೦॥
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ ।
ಗಾಯತ್ರೀಂ ವೈ ಜಪೇನ್ನಿತ್ಯಂ ಜಪಯಜ್ಞಃ ಪ್ರಕೀರ್ತಿತಃ ॥೫೧॥
ಗಾಯತ್ರೀಂ ಚೈವ ವೇದಾಂಶ್ಚ ತುಲಯಾಽತೋಲಯತ್ಪ್ರಭುಃ ।
ಏಕತಶ್ಚತುರೋ ವೇದಾ ಗಾಯತ್ರೀ ಚ ತಥೈಕತಃ ॥೫೨॥
ಓಂಕಾರಮಾದಿತಃ ಕೃತ್ವಾ ವ್ಯಾಹೃತೀಸ್ತದನಂತರಂ ।
ತತೋಽಧೀಯೀತ ಸಾವಿತ್ರೀಮೇಕಾಗ್ರಃ ಶ್ರದ್ಧಯಾನ್ವಿತಃ ॥೫೩॥

---

೪೯. ಅಥರ್ವಣವೇದ, ಶುಕ್ಲ ಯಜುಸ್ಸುಗಳನ್ನು ಅಧ್ಯಯನ ಮಾಡುವಾಗ ಜೇನಿನ ಹೋಮ ಮಾಡಬೇಕು. ಧರ್ಮಶಾಸ್ತ್ರಗಳನ್ನೂ ಪುರಾಣಗಳನ್ನೂ ಓದುವಾಗ ಮಾಂಸದಿಂದ ದೇವತೆಗಳನ್ನು ತರ್ಪಿಸಬೇಕು.

೫೦. ಈ ದೇವತೆಗಳ ಸಮೀಪದಲ್ಲಿ ನಿತ್ಯವಿಧಿ ಮಾಡಿಕೊಂಡು ಅರಣ್ಯದಲ್ಲಿ ಗಾಯತ್ರಿಯನ್ನು ಕಲಿಯಬೇಕು. ( ಸಾಧಿಸಬೇಕು )

೫೧. ಹೆಚ್ಚೆಂದರೆ ಸಾವಿರ, ಸಾಧಾರಣವೆಂದರೆ ನೂರು, ಕೊಂಚವೆಂದರೆ ಹತ್ತು ಈರೀತಿಯಾಗಿ ಗಾಯತ್ರೀ ಜಪ ಮಾಡಿದರೆ ಜಪಯಜ್ಞವೆಂದು ಹೇಳಿದೆ.

೫೨–೫೩. ಗಾಯತ್ರಿಯನ್ನೂ ಚತುರ್ವೇದಗಳನ್ನೂ ಬ್ರಹ್ಮನು ತೂಕಮಾಡಲು ಒಂದು ಕಡೆ ಗಾಯತ್ರಿಯೂ ಮತ್ತೊಂದು ಕಡೆ ವೇದಗಳೂ ಸಮವಾದುವು. ಓಂಕಾರವನ್ನು ಮೊದಲುಚ್ಚರಿಸಿ ಅನಂತರ ಭೂರ್ಭುವಸ್ಸುವಗಳೆಂಬ ವ್ಯಾಹೃತಿಗಳನ್ನುಚ್ಚರಿಸಬೇಕು. ಆಮೇಲೆ ಪುನಃ ಸಾವಿತ್ರಿಯನ್ನುಚ್ಚರಿಸಬೇಕು. ( ಜಪಿಸಬೇಕು. )

ಪುರಾ ಕಲ್ಪೇ ಸಮುತ್ಪನ್ನಾ ಭೂರ್ಭುವಸ್ಸ್ವಃ ಸನಾತನಃ ।
ಮಹಾವ್ಯಾಹೃತಯಸ್ತಿಸ್ರಃ ಸರ್ವಾऽಶುಭನಿಬರ್ಹಣಾಃ ॥೫೪॥
ಪ್ರಧಾನಂ ಪುರುಷಃ ಕಾಲೋ ವಿಷ್ಣುರ್ಬ್ರಹ್ಮಮಹೇಶ್ವರಾಃ ।
ಸತ್ತ್ವಂ ರಜಸ್ತಮಸ್ತಿಸ್ರಃ ಕ್ರಮಾದ್ವ್ಯಾಹೃತಯಃ ಸ್ಮೃತಾಃ ॥೫೫॥
ಓಂಕಾರಸ್ತತ್ಪರಂ ಬ್ರಹ್ಮ ಸಾವಿತ್ರೀ ಸ್ಯಾತ್ತದುತ್ತರಂ ।
ಏಷ ಮಂತ್ರೋ ಮಹಾಯೋಗಃ ಸಾರಾತ್ಸಾರ ಉದಾಹೃತಃ ॥೫೬॥
ಯೋऽಧೀತೇऽಹನ್ಯಹನ್ಯೇತಾಂ ಗಾಯತ್ರೀಂ ವೇದಮಾತರಂ ।
ವಿಜ್ಞಾಯಾರ್ಥಂ ಬ್ರಹ್ಮಚಾರೀ ಸ ಯಾತಿ ಪರಮಾಂ ಗತಿಂ ॥೫೭॥
ಗಾಯತ್ರೀ ವೇದಜನನೀ ಗಾಯತ್ರೀ ಲೋಕಪಾವನೀ ।
ಗಾಯತ್ರ್ಯಾ ನ ಪರಂ ಜಪ್ಯಮೇತದ್ವಿಜ್ಞಾಯ ಮುಚ್ಯತೇ ॥೫೮॥

---

೫೪. ಪೂರ್ವದ ಕಲ್ಪದಲ್ಲಿ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳು ಮೂರೂ ಉತ್ಪನ್ನವಾದವು. ಎಲ್ಲಾ ಅಶುಭಗಳನ್ನೂ ನಾಶ ಮಾಡುತ್ತವೆ.

೫೫. ಕಾಲವು ಪ್ರಧಾನ ಪುರುಷನು, ಬ್ರಹ್ಮ, ವಿಷ್ಣು, ಮಹೇಶ್ವರ, ಮತ್ತು ಸತ್ವ, ರಜಸ್ಸು ತಮಸ್ಸುಗಳು ಕ್ರಮವಾಗಿ ಮೂರು ವ್ಯಾಹೃತಿಗಳಾಗಿವೆ.

೫೬. ಓಂಕಾರವೇ ಆ ಬ್ರಹ್ಮವು. ಆಮೇಲೆ ಸಾವಿತ್ರಿಯು ಈ ಮಂತ್ರವೇ ಮಹಾ ಯೋಗವೆಂಬುದು. ಸಾರದಿಂದ ಸಾರವನ್ನು ತೆಗೆದು ಹೇಳಿದ್ದೇನೆ.

೫೭. ಯಾವನು ವೇದಮಾತೃವಾದ ಸಾವಿತ್ರಿಯನ್ನು ದಿನದಿನವೂ ಅರ್ಥವನ್ನು ತಿಳಿದು ಅಧ್ಯಯನ ಮಾಡುತ್ತಾನೋ ಆ ಬ್ರಹ್ಮಚಾರಿಯು ಉತ್ತಮ ಗತಿ ಹೊಂದುತ್ತಾನೆ.

೫೮. ಗಾಯತ್ರಿಯು ವೇದಕ್ಕೆ ತಾಯಿ. ಅದೇ ಲೋಕಪಾವನಿ. ಅದಕ್ಕಿಂತ ಮಂತ್ರ ಬೇರೆಯಿಲ್ಲ. ಇದನ್ನು ತಿಳಿದವನು ಮುಕ್ತನಾಗುತ್ತಾನೆ.

ಶ್ರಾವಣಸ್ಯ ತು ಮಾಸಸ್ಯ ಪೌರ್ಣಮಾಸ್ಯಾಂ ದ್ವಿಜೋತ್ತಮಾಃ ।
ಆಷಾಢ್ಯಾಂ ಪ್ರೌಷ್ಠಪದ್ಯಾಂ ವಾ ವೇದೋಪಾಕರಣಂ ಸ್ಮೃತಂ ॥

ಯತ್ಸೂರ್ಯಯಾಮ್ಯಗಮನಂ ಮಾಸಾನ್ವಿಪ್ರೋರ್ಧಪಂಚಮಾನ್ ।
ಅಧೀಯೀತ ಶುಚೌ ದೇಶೇ ಬ್ರಹ್ಮಚಾರೀ ಸಮಾಹಿತಃ ॥೬೦॥

ಪುಷ್ಯೇ ತು ಛಂದಸಾಂ ಕುರ್ಯಾದ್ಬಹಿರುತ್ಸರ್ಜನಂ ದ್ವಿಜಃ ।
ಪ್ರಾತಶ್ಶುಕ್ಲಸ್ಯ ಸಾಯಾಹ್ನೇ ಪೂರ್ವಾಹ್ನೇ ಬಹುಳೇ ದಳೇ ॥೬೧॥

ಛಂದಾಂಸಿ ಚ ದ್ವಿಜೋಽಭ್ಯಸ್ಯೇಚ್ಛುಕ್ಲಪಕ್ಷೇ ತು ವೈ ದ್ವಿಜಃ ।
ವೇದಾಂಗಾನಿ ಪುರಾಣಾನಿ ಕೃಷ್ಣಪಕ್ಷೇಷು ಮಾನವಃ ॥೬೨॥

ಇಮಾನ್ನಿತ್ಯಮನಧ್ಯಾಯಾನಧೀಯಾನೋ ವಿವರ್ಜಯೇತ್ ।
ಅಧ್ಯಾಪನಂ ತು ಕುರ್ವಾಣೋಽಭ್ಯಸ್ಯನ್ನಪಿ ಯತ್ನತಃ ॥೬೩॥

---

೫೯. ಶ್ರಾವಣಮಾಸದ ಹುಣಿಮೆ, ಆಷಾಢ ಅಥವಾ ಆಶ್ವಯುಜಗಳು ವೇದವನ್ನು ಮೊದಲು ಮಾಡುವುದಕ್ಕೆ ಸರಿಯಾದುವು. ಆಗಲೇ ಮೊದಲು ಮಾಡಬೇಕು.

೬೦. ಸೂರ್ಯನು ದಕ್ಷಿಣಾಯನವನ್ನು ಹೊಂದಿದ ಐದುವರೆ ತಿಂಗಳು ಬ್ರಾಹ್ಮಣನು ಶುಚಿ ದೇಶದಲ್ಲಿ ಕುಳಿತು ಬ್ರಹ್ಮಚಾರಿಯಾಗಿ ಅಧ್ಯಯನ ಮಾಡಬೇಕು.

೬೧–೬೨. ಪುಷ್ಯ ಮಾಸದಲ್ಲಿ ಬ್ರಾಹ್ಮಣನು ವೇದಗಳಿಗೆ ಉತ್ಸರ್ಜನ ಮಾಡಬೇಕು. ಶುಕ್ಲಪಕ್ಷದ ಪ್ರಾತಃಕಾಲದಲ್ಲಿಯಾಗಲಿ ಕೃಷ್ಣಪಕ್ಷದಲ್ಲಿ ಆದರೆ, ಪೂರ್ವಾಹ್ನ ಸಾಯಂಕಾಲಗಳಲ್ಲಿ ಉತ್ಸರ್ಜನ ಮಾಡಬೇಕು. ವೇದಗಳನ್ನು ಶುಕ್ಲಪಕ್ಷದಲ್ಲಿ ಅಧ್ಯಯನ ಮಾಡಬೇಕು. ವೇದಾಂಗಗಳನ್ನೂ ಪುರಾಣಗಳನ್ನೂ ಕೃಷ್ಣಪಕ್ಷದಲ್ಲಿ ಅಧ್ಯಯನ ಮಾಡಬೇಕು.

೬೩. ಓದುವವನೂ, ಓದಿಸುವವನೂ ಪ್ರಯತ್ನದಿಂದ ಮುಂದಿನ ಅನಧ್ಯಾಯಗಳನ್ನು ಬಿಡಬೇಕು.

ಕರ್ಣಶ್ರವೇಽನಿಲೇ ರಾತ್ರೌ ದಿವಾ ಪಾಂಸುಸಮೂಹನೇ ।
ವಿದ್ಯುತ್ಸ್ತನಿತವರ್ಷೇಷು ಮಹೋಲ್ಕಾನಾಂ ಚ ಸಂಪ್ಲವೇ ॥೬೪॥

ಅಕಾಲಿಕಮನಧ್ಯಾಯಮೇತೇಷ್ವಾಹ ಪ್ರಜಾಪತಿಃ ।
ಏತಾನಭ್ಯುದಿತಾನ್ವಿದ್ಯಾದ್ಯದಾ ಪ್ರಾದುಷ್ಕೃತಾಗ್ನಿಷು ।
ತದಾ ವಿದ್ಯಾದನಧ್ಯಾಯಮನೃತೌ ಚಾಭ್ರದರ್ಶನೇ ॥೬೫॥

ನಿರ್ಘಾತೇ ಭೂಮಿಚಲನೇ ಜ್ಯೋತಿಷಾಂ ಚೋಪದರ್ಶನೇ ।
ಏತಾನಕಾಲಿತಾನ್ ವಿದ್ಯಾದನಧ್ಯಾಯಾನೃತಾವಪಿ ॥೬೬॥

ಪ್ರಾದುಷ್ಕೃತೇಷ್ವಗ್ನಿಷು ತು ವಿದ್ಯುತ್ಸ್ತನಿತನಿಸ್ವನೇ ।
ಸಜ್ಯೋತಿಸ್ಸ್ಯಾದನಧ್ಯಾಯಃ ಶೇಷೇ ರಾತ್ರೌ ಯಥಾ ದಿವಾ ॥೬೭॥

ನಿತ್ಯಾನಧ್ಯಾಯ ಏವ ಸ್ಯಾದ್ಗ್ರಾಮೇಷು ನಗರೇಷು ಚ ।
ಧರ್ಮನೈಪುಣ್ಯಕಾಮಾನಾಂ ಮೂತ್ರಗಂಧೇನ ನಿತ್ಯಶಃ ॥೬೮॥

---

೬೪. ರಾತ್ರಿಯಲ್ಲಿ ಗಾಳಿ ಬಿರುಸಾಗಿ ಬೀಸುವಾಗ ಹಗಲಲ್ಲಿ ಧೂಳಿದ್ದಿರುವಾಗ ಮಿಂಚು ಗುಡುಗು ಮಳೆ ಬಂದಾಗ ಉಲ್ಕಾಪಾತ ಶಿಲಾಪಾತಗಳಾದಾಗ ಅಧ್ಯಯನ ಕೂಡದು.

೬೫. ಇವುಗಳು ಅಕಾಲವಾದ ಅನಧ್ಯಾಯಗಳೆಂದು ಬ್ರಹ್ಮನು ಹೇಳಿದ್ದಾನೆ. ಅಗ್ನಿಗಳು ವಿಕಾರವನ್ನು ಹೊಂದಿದರೆ ಅಥವ ಬಹು ಹೆಚ್ಚಿದರೆ ಅಭ್ಯುದಿತಾನದ್ಯಯನ. ಮಳೆಗಾಲವಲ್ಲದಿದ್ದು ಮೋಡ ಕಾಣಿಸಿಕೊಂಡರೆ ಅಂದೂ ಅನಧ್ಯಯನ.

೬೬. ಸಿಡಿಲು, ಭೂಕಂಪ, ಧೂಮಕೇತುದರ್ಶನ, ಇವುಗಳು ಕಾಣಿಸಿದರೆ ಎಲ್ಲಾ ಕಾಲಗಳಲ್ಲೂ ಅನಧ್ಯಾಯವು.

೬೭. ಅಗ್ನಿಯು ಕಾಣಿಸಿಕೊಂಡರೆ ಮಿಂಚು ಗುಡುಗುಗಳ ಧ್ವನಿ ಬಂದರೆ ಸೂರ್ಯನಿದ್ದರೆ ಅನಧ್ಯಾಯವು. ರಾತ್ರಿ ಶೇಷವಾಗಿದ್ದರೆ ಹಗಲಿನಂತೆ ಅನಧ್ಯಾಯವು.

೬೮. ಧರ್ಮದಲ್ಲಿ ಆಸಕ್ತರಾದವರಿಗೆ ಗ್ರಾಮಗಳಲ್ಲೂ, ನಗರಗಳಲ್ಲೂ ಮೂತ್ರ ಗಂಧ ಹೆಚ್ಚಾಗಿದ್ದರೆ ನಿತ್ಯಾನಧ್ಯಾಯ ವಾಗುತ್ತದೆ.

ಅಂತಶ್ಶವಗತೇ ಗ್ರಾಮೇ ವೃಷಲಸ್ಯ ಚ ಸನ್ನಿಧೌ ।
ಅನಧ್ಯಾಯೋ ರುದ್ಯಮಾನೇ ಸಮಯೇ ಜಲದಸ್ಯ ಚ ॥೬೯॥

ಉದಕೇ ಚಾರ್ಧರಾತ್ರೇ ಚ ವಿಣ್ಮೂತ್ರಂ ಚ ವಿಸರ್ಜಯೇತ್ ।
ಉಚ್ಛಿಷ್ಟಃ ಶ್ರಾದ್ಧಭುಕ್ಚೈವ ಮನಸಾಪಿ ನ ಚಿಂತಯೇತ್ ॥೭೦॥

ಪ್ರತಿಗೃಹ್ಯ ದ್ವಿಜೋ ವಿದ್ವಾನೇಕೋದ್ದಿಷ್ಟಸ್ಯ ವೇತನಂ।
ತ್ರ್ಯಹಂ ನ ಕಾರಯೇದ್ಬ್ರಹ್ಮ ರಾಜ್ಞೋ ರಾಹೋಶ್ಚ ಸೂತಕೇ॥೭೧॥

ಯಾವದೇಕಾನ್ನನಿಷ್ಠಸ್ಯಾತ್ಸ್ನೇಹಾಲೇಪಶ್ಚ ತಿಷ್ಠತಿ ।
ವಿಪ್ರಸ್ಯ ವಿದುಷೋ ದೇಹೇ ತಾವದ್ಬ್ರಹ್ಮ ನ ಕೀರ್ತಯೇತ್ ॥೭೨॥

ಶಯಾನಃ ಪ್ರೌಢಪಾದಶ್ಚ ಕೃತ್ವಾ ಚೈವಾವಸಕ್ಥಿಕಾಂ।
ನಾಧೀಯೀತಾಮಿಷಂ ಜಗ್ಧ್ವಾ ಶೂದ್ರಶ್ರಾದ್ಧಾನ್ನಮೇವ ಚ ॥೭೩॥

---

೬೯. ಊರಿನೊಳಗೆ ಹೆಣವಿದ್ದರೆ, ಶೂದ್ರನ ಸನ್ನಿಧಿಯಲ್ಲಿ ಅಳುತ್ತಿದ್ದರೆ (ದುಃಖದಲ್ಲಿ), ಮಳೆ ಬರುತ್ತಿದ್ದರೆ, ಅನಧ್ಯಾಯವು. ಅದು ನಿತವಾದುದು.

೭೦. ಅರ್ಧರಾತ್ರಿಯಲ್ಲಿ ನೀರಿನಲ್ಲಿ ಮಲ ಮೂತ್ರಗಳನ್ನು ವಿಸರ್ಜಿಸ್ಯಬಹುದು. ಶ್ರಾದ್ಧದ ಅನ್ನ ತಿಂದವನು ಬ್ರಾಹ್ಮಣಾರ್ಥ ಮಾಡಿದವನು ವೇದವನ್ನು ಮನಸ್ಸಿನಿಂದಲೂ ಚಿಂತಿಸಬಾರದು.

೭೧. ಬ್ರಾಹ್ಮಣನು ಏಕೋದ್ದಿಷ್ಟದ ದುಡ್ಡನ್ನು ತೆಗೆದುಕೊಂಡಿದ್ದರೆ, ರಾಜನ ಸೂತಕ, ಗ್ರಹಣಸೂತಕಗಳಲ್ಲಿ ಮೂರು ದಿನ ಅನಧ್ಯಾಯವು.

೭೨. ಭಿಕ್ಷಾನ್ನ ಮಾಡದಿರುವಾಗ, ಎಣ್ಣೆ ಹಚ್ಚಿಕೊಂಡು ಇರುವ ಪರ್ಯಂತರವೂ, ವೇದಾಧ್ಯಯನ ಕೂಡದು.

೭೩. ಮಲಗಿಕೊಂಡು, ಕಾಲುನೀಡಿಕೊಂಡು, ತೊಡೆಯಮೇಲೆ ತೊಡೆ ಹಾಕಿಕೊಂಡು, ಮಾಂಸವನ್ನು ತಿಂದು ಮತ್ತು ಶೂದ್ರಾನ್ನವನ್ನು ತಿಂದು ಅಧ್ಯಯನ ಮಾಡಬಾರದು.

ನೀಹಾರೇ ಬಾಣಶಬ್ದೇ ಚ ಸಂಧ್ಯಯೋರುಭಯೋರಪಿ।
ಅಮಾವಾಸ್ಯಾಚತುರ್ದಶ್ಯೋಃ ಪೌರ್ಣಮಾಸ್ಯಷ್ಟಮೀಷುಚ ॥೭೪॥

ಉಪಾಕರ್ಮಣಿ ಚೋತ್ಸರ್ಗೇ ತ್ರಿರಾತ್ರಂ ಕ್ಷಪಣಂ ಸ್ಮೃತಂ।
ಅಷ್ಟಕಾಸು ಅಹೋರಾತ್ರಂ ಋತ್ವಂತಾಸು ಚ ರಾತ್ರಿಷು ॥೭೫॥

ಮಾರ್ಗಶೀರ್ಷೇ ತಥಾ ಪೌಷೇ ಮಾಘೇ ಮಾಸೇ ತಥೈವ ಚ।
ತ್ರಿಸ್ರೋಽಷ್ಟಕಾಃ ಸಮಾಖ್ಯಾತಾಃ ಕೃಷ್ಣಪಕ್ಷೇಷು ಸೂರಿಭಿಃ ॥೭೬॥

ಶ್ಲೇಷಾತ್ಮಕಸ್ಯ ಛಾಯಾಯಾಂ ಶಾಲ್ಮಲ್ಯೋಃ ಮಧುಕಸ್ಯ ಚ।
ಕದಾಚಿದಪಿ ನಾಧ್ಯೇಯಂ ಕೋವಿದಾರಕಪಿತ್ಥಯೋಃ ॥೭೭॥

ಸಮಾನವಿದ್ಯೇ ಚ ಮೃತೇ ತಥಾ ಸಬ್ರಹ್ಮಚಾರಿಣಿ।
ಆಚಾರ್ಯೇ ಸಂಸ್ಥಿತೇ ಚಾಪಿ ತ್ರಿರಾತ್ರಂ ಕ್ಷಪಣಂ ಸ್ಮೃತಂ ॥೭೮॥

---

೭೪. ಹಿಮ ಬೀಳುತ್ತಿದ್ದರೆ, ಬಾಣಶಬ್ದ ಕೇಳಿದರೆ, ಪ್ರಾತಸ್ಸಾಯಂ ಕಾಲಗಳಲ್ಲಿ, ಅಮಾವಾಸ್ಯೆ ಚತುರ್ದಶಿಗಳಲ್ಲಿ, ಪೌರ್ಣಮಾಸಿ, ಅಷ್ಟಮಿಗಳಲ್ಲಿ ಅಧ್ಯಯನ ಮಾಡಬಾರದು.

೭೫. ಉಪಾಕರ್ಮ, ಉತ್ಸರ್ಗಗಳಲ್ಲಿ ಮೂರುದಿನ ಅನಧ್ಯಾಯವು ಅಷ್ಟಕೇಷ್ಟಿ ಮಾಡಿದಾಗ ಅಹೋರಾತ್ರಿ ಅನಧ್ಯಯನ. ಋತುವಿನ ಕೊನೆಗಳಲ್ಲಿ ರಾತ್ರಿಗಳಲ್ಲಿ ಮಾತ್ರ ಅನಧ್ಯಯನವು.

೭೬. ಮಾರ್ಗಶಿರ, ಪುಷ್ಯ, ಮಾಘಮಾಸಗಳಲ್ಲಿ ಕೃಷ್ಣಪಕ್ಷಗಳಲ್ಲಿ ಅಷ್ಟಕಗಳು ಬರುತ್ತವೆಂದು ಮೂರು ಅಷ್ಟಕಗಳನ್ನು ಹೇಳಿದ್ದಾರೆ.

೭೭. ಚೊಳ್ಳೆ, ಬೂರಗ, ಹಿಪ್ಪೆ, ಕಂಚುವಾಳ, ಬೇಲದಮರಗಳ ನೆರಳಿನಲ್ಲಿ ಅಧ್ಯಯನ ಮಾಡಬಾರದು.

೭೮. ಜೊತೆಯಲ್ಲಿ ಓದಿದವನು, ತನ್ನ ಗುರುವಿನಲ್ಲಿ ಓದಿದವನು, ಆಚಾರ್ಯರು, ಮೃತಪಟ್ಟರೆ ಮೂರುದಿನ ಅನಧ್ಯಾಯವು.

ಛಿದ್ರಾಣ್ಯೇತಾನಿ ವಿಪ್ರಾಣಾಂ ಅನಧ್ಯಾಯಾಃ ಪ್ರಕೀರ್ತಿತಾಃ ।
ಹಿಂಸಂತಿ ರಾಕ್ಷಸಾಸ್ತೇಷು ತಸ್ಮಾದೇತಾನ್ವಿವರ್ಜಯೇತ್ ॥೭೯॥

ನೈತ್ಯಕೇ ನಾಸ್ತ್ಯನಧ್ಯಾಯಃ ಸಂಧ್ಯೋಪಾಸನಮೇವ ಚ ।
ಉಪಾಕರ್ಮಣಿ ಚೋತ್ಸರ್ಗೇ ಹೋಮಸ್ಯಾಂತೇ ತಥೈವ ಚ ॥೮೦॥

ಏಕಾಮೃಚಮಥೈಕಂ ವಾ ಯಜುಃ ಸಾಮಾನಿ ವಾ ಪುನಃ ।
ಅಷ್ಟಕಾದ್ಯಾಸ್ತ್ವಧೀಯೀತ ಮಾರುತೇ ಚಾಭಿಧಾವತಿ ॥೮೧॥

ಅನಧ್ಯಾಯಸ್ತು ನಾಂಗೇಷು ಸೇತಿಹಾಸಪುರಾಣಯೋಃ ।
ನ ಧರ್ಮಶಾಸ್ತ್ರೇಷ್ವನ್ಯೇಷು ಸರ್ವಾಣ್ಯೇತಾನಿ ವರ್ಜಯೇತ್ ॥೮೨॥

ಏಷ ಧರ್ಮಸ್ಸಮಾಸೇನ ಕೀರ್ತಿತಾ ಬ್ರಹ್ಮಚಾರಿಣಃ ।
ಬ್ರಹ್ಮಣಾಭಿಹಿತಃ ಪೂರ್ವಂ ಋಷೀಣಾಂ ಭಾವಿತಾತ್ಮನಾಂ ॥೮೩॥

---

೭೯. ಇವುಗಳು ಛಿದ್ರಗಳು ಇವುಗಳಲ್ಲಿ ಅಧ್ಯಯನ ಮಾಡಿದರೆ ರಾಕ್ಷಸರು ಹಿಂಸಿಸುತ್ತಾರೆ. ಆದ್ದರಿಂದ ಅನಧ್ಯಯನವೆಂದು ಹೇಳಿದೆ.

೮೦–೮೧. ಆದರೆ ನಿತ್ಯಕರ್ಮಗಳಲ್ಲಿ, ಸಂಧ್ಯಾಕಾಲಗಳಲ್ಲಿ, ಉಪಾಕರ್ಮ, ಉತ್ಸರ್ಗಗಳಲ್ಲಿ, ಹೋಮದ ಕೊನೆಯಲ್ಲಿ, ಒಂದು ಋಕ್ಕು ಅಥವಾ ಒಂದು ಯಜಸ್ಸು ಅಥವಾ ಒಂದು ಸಾಮವನ್ನಾದರೂ ಅಧ್ಯಯನ ಮಾಡಬೇಕು. ಅಷ್ಟಕಾದಿಗಳಲ್ಲಿ, ಗಾಳಿ ಬಲವಾಗಿ ಬೀಸಿದರೂ, ಅಧ್ಯಯನ ಮಾಡಬಹುದು.

೮೨. ವೇದಾಂಗಗಳಿಗೂ, ಇತಿಹಾಸ ಪುರಾಣಗಳಿಗೂ ಧರ್ಮಶಾಸ್ತ್ರವೇ ಮೊದಲಾದವುಗಳಿಗೂ ಈ ಅನಧ್ಯಯನಗಳಿಲ್ಲ.

೮೩. ಪೂರ್ವದಲ್ಲಿ ಬ್ರಹ್ಮನು ಋಷಿಗಳಿಗೆ ಹೇಳಿದ ಅನಧ್ಯಯನಗಳನ್ನು ನಾನು ಸಂಗ್ರಹಿಸಿ ಬ್ರಹ್ಮಚಾರಿಗಳಿಗೆ ಹೇಳಿದ್ದೇನೆ.

ಯೋಽನ್ಯತ್ರ ಕುರುತೇ ಯತ್ನಮನಧೀತ್ಯ ಶ್ರುತಿಂ ದ್ವಿಜಃ ।
ಸ ಸಂಮೂಢೋ ನ ಸಂಭಾಷ್ಯೋ ವೇದಬಾಹ್ಯೋ ದ್ವಿಜಾತಿಭಿಃ ॥

ನ ವೇದಪಾಠಮಾತ್ರೇಣ ಸಂತುಷ್ಟೋ ವೈ ಭವೇದ್ದ್ವಿಜಃ ।
ಪಾಠಮಾತ್ರವಸಾನ್ಯಸ್ತು ಪಂಕೇ ಗೌರಿವ ಸೀದತಿ ॥೮೫॥

ಯೋಽಧೀತ್ಯ ವಿಧಿವದ್ವೇದಂ ವೇದಾರ್ಥಂ ನ ವಿಚಾರಯೇತ್ ।
ಸ ಸಂಮೂಢಶ್ಶೂದ್ರಕಲ್ಪಃ ಪಾತ್ರತಾಂ ನ ಪ್ರಪದ್ಯತೆ ॥೮೬॥

ಯದಿ ತ್ವಾತ್ಯಂತಿಕಂ ವಾಸಂ ಕರ್ತುಮಿಚ್ಛತಿ ವೈ ಗುರೌ ।
ಯುಕ್ತಃ ಪರಿಚರೇದೇನಮಾಶರೀರವಿಮೋಕ್ಷಣಂ ॥೮೭॥

ಗತ್ವಾ ವನಂ ಚ ವಿಧಿವಜ್ಜುಹುಯಾಜ್ಜಾತವೇದಸಂ ।
ಅಧೀಯೀತ ತಥಾ ನಿತ್ಯಂ ಬ್ರಹ್ಮನಿಷ್ಠಸ್ಸಮಾಹಿತಃ ॥೮೮॥

---

೮೪. ವೇದವನ್ನೋದದೆ ಮತ್ತಾವುದಕ್ಕಾದರೂ ಪ್ರಯತ್ನಪಟ್ಟರೆ ಅವನು ಮೂರ್ಖನು. ಅವನನ್ನು ಮಾತಾಡಿಸಬಾರದು. ಅವನು ವೇದ ಬಾಹ್ಯನೆಂದು ತಿಳಿಯಬೇಕು.

೮೫. ವೇದದ ಮೂಲ ಮಂತ್ರದ ಕಲಿಯುವಿಕೆಯಿಂದ ಬ್ರಾಹ್ಮಣನು ಸಂತುಷ್ಟನಾಗಬಾರದು. ಪಾಠಮಾತ್ರವನ್ನು ಕಲಿತವನು ಕೆಸರಿನಲ್ಲಿ ಹೂಳಿಕೊಂಡಿರುವ ಹಸುವಿನಂತೆ ಕಷ್ಟಪಡುತ್ತಾನೆ.

೮೬. ವಿಧಿವತ್ತಾಗಿ ವೇದವನ್ನು ಓದಿ ಅದರ ಅರ್ಥವನ್ನು ವಿಚಾರ ಮಾಡದವನು ದಡ್ಡ, ಶೂದ್ರನಿಗೆ ಸಮಾನನು ಅರ್ಹತೆಯನ್ನು ಹೊಂದುವುದಿಲ್ಲ.

೮೭. ಕೊನೆಯವರೆಗೂ ಗುರು ಶುಶ್ರೂಷೆಯಲ್ಲಿಯೇ ಇರಬೇಕೆಂದು ತೋರಿದರೆ ಶರೀರ ನಾಶವಾಗುವವರೆಗೂ ಸಾಯುವತನಕ ಶುಶ್ರೂಷಿಸಬೇಕು.

೮೮. ಕಾಡಿಗೆ ಹೋಗಿ ಅಗ್ನಿಕಾರ್ಯಾದಿಗಳನ್ನು ಮಾಡಿಕೊಂಡು, ಬ್ರಹ್ಮನಿಷ್ಠನಾಗಿಯೂ ಜಿತೇಂದ್ರಿಯನಾಗಿಯೂ ನಿತ್ಯವೂ ಅಧ್ಯಯನ ಮಾಡಬೇಕು.

ಸಾವಿತ್ರೀಂ ಶತರುದ್ರೀಯಂ ವೇದಾಂತಾಂಶ್ಚ ವಿಶೇಷತಃ ।
ಅಭ್ಯಸೇತ್ಸತತಂ ಯುಕ್ತೋಽಭಿಕ್ಷಾಶನ ಪರಾಯಣಃ ॥೮೯॥

ಏತದ್ವಿಧಾನಂ ಪರಮಂ ಪುರಾಣಂ ।
ವೇದಾಗಮೇ ಸಮ್ಯಗಿಹೋದಿತಂ ವಃ ॥
ಪುರಾಮಹರ್ಷಿಪ್ರವರಾಭಿಪೃಷ್ಟಃ ।
ಸ್ವಾಯಂಭುವೋ ಯನ್ಮನುರಾಹ ದೇವಃ ॥೯೦॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಕರ್ಮಯೋಗ ಕಥನಂ ತ್ರಿಪಂಚಾಶತ್ತಮೋಽಧ್ಯಾಯಃ

---

೮೯. ಸಾವಿತ್ರೀ, ಶತರುದ್ರೀಯ, ವೇದಾಂತಗಳನ್ನು ಹೆಚ್ಚಾಗಿ ಅಭ್ಯಾಸಮಾಡುತ್ತಿರಬೇಕು. ಭಿಕ್ಷಾನ್ನಮಾಡಬಾರದು.

೯೦. ವೇದಾಭ್ಯಾಸಮಾಡುವ ವಿಷಯದಲ್ಲಿ ಹಿಂದಿನಿಂದಲೂ ಬಂದ ಸಂಪ್ರದಾಯವನ್ನು ಹೇಳಿದ್ದೇನೆ. ಸ್ವಾಯಂಭುವಮನುವು ಹಿಂದೆ ಮಹರ್ಷಿಗಳಿಂದ ಪ್ರಶ್ನಿಸಲ್ಪಟ್ಟು ಅವರಿಗೆ ಹೇಳಿದುದನ್ನೇ ಈಗ ನಿಮಗೂ ಹೇಳಿದ್ದೇನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆಧಿಖಂಡದಲ್ಲಿ
ಕರ್ಮಯೋಗ ಕಥನದಲ್ಲಿ ಐವತ್ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಚತುಷ್ಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ವೇದಂ ವೇದೌ ತಥಾ ವೇದಾನ್ ವೇದಾಂಗಾನಿ ತಥಾ ದ್ವಿಜಾಃ ।**
**ಅಧೀತ್ಯ ಚಾಧಿಗಮ್ಯಾರ್ಥಂ ತತಃ ಸ್ನಾಯಾ ದ್ವಿಜೋತ್ತಮಃ ॥ ೧ ॥**
**ಗುರವೇ ತು ಧನಂ ದತ್ವಾ ಸ್ನಾಯೀತ ತದನುಜ್ಞಯಾ ।**
**ತೀರ್ಣವ್ರತೋಽಥ ಯುಕ್ತಾತ್ಮಾ ಶಕ್ತೋ ವಾ ಸ್ನಾತುಮರ್ಹತಿ ॥**
**ವೈಣವೀಂ ಧಾರಯೇದ್ಯಷ್ಟಿಮಂತರ್ವಾಸಸ್ತಥೋತ್ತರಮ್ ।**
**ಯಜ್ಞೋಪವೀತದ್ವಿತಯಂ ಸೋದಕಂ ಚ ಕಮಂಡಲುಮ್ ॥ ೩ ॥**

---

ಪದ್ಮಪುರಾಣದ ಆದಿಖಂಡದ ಐವತ್ತನಾಲ್ಕನೆಯ ಅಧ್ಯಾಯವು.

೧. ವ್ಯಾಸರು ಹೇಳುತ್ತಾರೆ : ಒಂದು ವೇದ, ಸಾಧ್ಯವಾದರೆ ಎರಡು, ಇನ್ನೂ ಕಾಲವಿದ್ದರೆ ಮೂರು ಮತ್ತೂ ಸಾಧ್ಯವಿದ್ದಲ್ಲಿ ನಾಲ್ಕು. ಈ ರೀತಿಯಾಗಿ ವೇದಗಳನ್ನಧ್ಯಯನಮಾಡಿ, ತಿಳಿಯ ಬೇಕಾದ ವಿಷಯವನ್ನು ತಿಳಿದು, ಆ ಮೇಲೆ ಸ್ನಾತಕನಾಗಬೇಕು. (ಮದುವೆಯಾಗಲು ಪ್ರಯತ್ನ ನಡೆಸಬೇಕು).

೨. ಗುರುವಿಗೆ ಗುರುದಕ್ಷಿಣೆಯನ್ನು ಕೊಟ್ಟು ಅವನ ಒಪ್ಪಿಗೆಯಿಂದ ಸ್ನಾತಕನಾಗಬೇಕು. ವೇದವ್ರತಮುಗಿಯಲು ಸಾಧ್ಯವಿರಲು ಸ್ನಾತಕ ನಾಗಲು ಯೋಗ್ಯನಾಗುತ್ತಾನೆ.

೩–೪. ಬಿದಿರು ದೊಣ್ಣೆ, ಹೊದಿಯುವಬಟ್ಟೆ, ಉಡುವಬಟ್ಟೆಗಳು, ಎರಡು ಯಜ್ಞೋಪವೀತಗಳು, ನೀರಿನಿಂದ ತುಂಬಿರುವ ಕಮಂಡಲು, ಛತ್ರಿ, ರುಮಾಲು, ಕೆರಗಳು, ಚಿನ್ನದಕುಂಡಲ, ಇವುಗಳನ್ನು ಧರಿಸಿ ಕ್ಷೌರ

ಛತ್ರಂ ಚೋಷ್ಣೀಷಮಮಲಂ ಪಾದುಕೇ ಚಾಪ್ಯುಪಾನಹೌ ।
ರೌಕ್ಮೇ ಚ ಕುಂಡಲೇ ಧಾರ್ಯೇ ಕೃತ್ತಕೇಶನಖಃ ಶುಚಿಃ ॥ ೪ ॥

ಅನ್ಯತ್ರ ಕಾಂಚನಾದ್ವಿಪ್ರೋ ನ ರಕ್ತಾಂ ಬಿಭೃಯಾತ್ ಸ್ರಜಂ ।
ಶುಕ್ಲಾಂಬರಧರೋ ನಿತ್ಯಂ ಸುಗಂಧಃ ಪ್ರಿಯದರ್ಶನಃ ।
ನ ಜೀರ್ಣಮಲವದ್ವಾಸಾ ಭವೇದ್ವೈ ವಿಭವೇ ಸತಿ ॥ ೫ ॥

ನ ರಕ್ತಮುಲ್ಬಣಂ ಚಾನ್ಯಧೃತಂ ವಾಸೋ ನ ಕುಂಡಲಂ ।
ನೋಪಾನಹೌ ಸ್ರಜಂ ಚಾಥ ಪಾದುಕೇ ಚ ಪ್ರಯೋಜಯೇತ್ ॥

ಉಪವೀತಮಲಂಕಾರಂ ಕೃಷ್ಣಾಜಿನಂ ಚ ದರ್ಶಯನ್ ।
ನಾಪಸವ್ಯಂ ಪರೀದಧ್ಯಾದ್ವಾಸೋ ನ ವಿಕೃತಂ ವಸೇತ್ ॥ ೭ ॥

ಆಹರೇದ್ವಿಧಿವದ್ದಾರಾನ್ ಸದೃಶಾನಾತ್ಮನಃ ಶುಭಾನ್ ।
ರೂಪಲಕ್ಷಣ ಸಂಯುಕ್ತಾನ್ ಯೋನಿದೋಷವಿವರ್ಜಿತಾನ್ ॥ ೮ ॥

---

ಮಾಡಿಸಿಕೊಂಡು ಉಗುರುಗಳನ್ನು ತೆಗೆಸಿಕೊಂಡು ಶುಚಿಯಾಗಿರಬೇಕು.

೫. ಕೆಂಪಗಿದ್ದರೂ ಚಿನ್ನದ ಮಾಲೆಯಾದರೆ ಹಾಕಿಕೊಳ್ಳಬಹುದು. ಬೇರೇ ಬಗೆಯದಾದರೆ ಬೇರೇ ಬಣ್ಣದ್ದಾಗಿರಬೇಕೇ ಹೊರತು ಕೆಂಪನೆಯ ಮಾಲೆ ಹಾಕಿಕೊಳ್ಳಬಾರದು. ಯಾವಾಗಲೂ ಬಿಳೀ ಬಟ್ಟೆಯನ್ನು ಹಾಕಿಕೊಂಡು ನೋಡಲು ಚೆನ್ನಾಗಿರುವವನಾಗಿರಬೇಕು. ಉತ್ಸವಕಾಲಗಳಲ್ಲಿ ಹಳೆಯದು ಅಥವಾ ಕೊಳಕಾದ ಬಟ್ಟೆಗಳನ್ನು ಹಾಕಿಕೊಳ್ಳಬಾರದು.

೬. ಕೆಂಪಗೆ ನೋಡಲು ಭಯಂಕರವಾದ ಬಟ್ಟೆ, ಕುಂಡಲಗಳನ್ನೂ, ಜೋಡು ಕೆರಗಳನ್ನೂ ಉಪಯೋಗಿಸಬಾರದು.

೭. ಉಪವೀತ, ಅಲಂಕಾರ, ಕೃಷ್ಣಾಜಿನಗಳು, ಈಚೆಗೆ ಕಾಣುವಂತಿರಬೇಕು. ಅಪಸವ್ಯವಾಗಿ ಧರಿಸಬಾರದು. ಬಟ್ಟೆಯನ್ನು ವಿಕಾರವಾಗಿ ಹೊದೆಯಲೂ ಬಾರದು, ಉಡಲೂ, ಬಾರದು.

೮. ತನಗೆ ಸದೃಶಳಾದ ಒಳ್ಳೆಯವಳಾಗಿರುವ ರೂಪಲಕ್ಷಣಗಳುಳ್ಳ, ತಾಯಿತಂದೆಗಳುಳ್ಳ, ದೋಷರಹಿತವಾಗಿರುವ ಹುಡುಗಿಯನ್ನು ಮದುವೆಯಾಗಬೇಕು.

ಅಮಾತೃಗೋತ್ರಜಭವಾಂ ಅನ್ಯಮಾನುಷಗೋತ್ರಜಾಂ ।
ಆಹರೇತ್ ಬ್ರಾಹ್ಮಣೋ ಭಾರ್ಯಾಂ ಶೀಲಶೌಚ ಸಮನ್ವಿತಾಂ ॥ ೯ ॥

ಋತುಕಾಲಾಭಿಗಾಮೀ ಸ್ಯಾತ್ ಯಾವತ್ಪುತ್ರೋಽಭಿಜಾಯತೇ ।
ವರ್ಜಯೇತ್ ಪ್ರತಿಷಿದ್ಧಾನಿ ಪ್ರಯತ್ನೇನ ದಿನಾನಿ ತು ॥೧೦॥

ಷಷ್ಠ್ಯಷ್ಟಮೀಂ ಪಂಚದಶೀಂ ದ್ವಾದಶೀಂ ಚ ಚತುರ್ದಶೀಂ ।
ಬ್ರಹ್ಮಚಾರೀ ಭವೇನ್ನಿತ್ಯಂ ತದ್ವಜ್ಜನ್ಮತ್ರಯಾಹನಿ ॥೧೧॥

ಆದಧೀತ ವಿವಾಹಾಗ್ನಿಂ ಜುಹುಯಾತ್ ಜಾತವೇದಸಂ ।
ಏತಾನಿ ಸ್ನಾತಕೋ ನಿತ್ಯಂ ಪಾವನಾನಿ ಚ ಪಾವಯೇತ್ ॥೧೨॥

ವೇದೋದಿತಂ ಸ್ವಕಂ ಕರ್ಮ ನಿತ್ಯಂ ಕುರ್ಯಾದತಂದ್ರಿತಃ ।
ಅಕುರ್ವಾಣಃ ಪತತ್ಯಾಶು ನರಕಾನತಿಭೀಷಣಾನ್ ॥೧೩॥

---

೯. ತಾಯಿಯ ಗೋತ್ರದಲ್ಲಿ ಹುಟ್ಟದ, ಅನ್ಯರ ಗೋತ್ರದಲ್ಲಿ ಹುಟ್ಟಿದ ಶೀಲ ಶೌಚಗಳಿಂದ ಕೂಡಿದ, ಹುಡುಗಿಯನ್ನು ಮದುವೆಯಾಗಬೇಕು.

೧೦. ಮಕ್ಕಳಾಗುವವರೆಗೂ ಋತುಕಾಲಗಳಲ್ಲಿ ಪತ್ನೀಸಂಗವು ಮಾಡಬೇಕು. ಪ್ರತಿಷಿದ್ಧವಾದ ದಿನಗಳನ್ನು ಬಿಟ್ಟುಬಿಡಬೇಕು.

೧೧. ಷಷ್ಠಿ, ಅಷ್ಟಮಿ, ಪೌರ್ಣಮಾಸಿ, ದ್ವಾದಶಿ, ಚತುರ್ದಶಿ, ಅಮಾವಾಸ್ಯೆ ಅದೇ ರೀತಿಯಾಗಿ ಹುಟ್ಟಿದ ಹಬ್ಬದ ದಿನ, ಅದರ ಹಿಂದು ಮುಂದಿನ ಎರಡು ದಿನಗಳನ್ನೂ ವರ್ಜಿಸಬೇಕು.

೧೨. ವಿವಾಹಾಗ್ನಿಯನ್ನು ಇಡಬೇಕು. ಔಪಾಸನಗಳನ್ನು ಮಾಡುತ್ತಿರಬೇಕು. ಸ್ನಾತಕನಾದವನು ಇವೆಲ್ಲವನ್ನೂ ಇಡಬೇಕು.

೧೩. ವೇದದಲ್ಲಿ ಹೇಳಿರುವ ತನ್ನ ಧರ್ಮವನ್ನು ನಿತ್ಯವೂ ಮಾಡಬೇಕು. ಮಾಡದಿದ್ದರೆ ಉಗ್ರವಾದ ನರಕವನ್ನು ಹೊಂದುತ್ತಾನೆ.

ಅಭ್ಯಸೇತ್ ಪ್ರಯತೋ ವೇದಂ ಮಹಾಯಜ್ಞಾನ್ನಹಾಪಯೇತ್ ।
ಕುರ್ಯಾತ್ ಗೃಹ್ಯಾಣಿ ಕಾರ್ಯಾಣಿ ಸಂಧ್ಯೋಪಾಸನಮೇವ ಚ ॥೧೪॥
ಸಖ್ಯಂ ಸಮಾಧಿಕೈಃ ಕುರ್ಯಾತ್ ಉಪೇಯಾದೀಶ್ವರಂ ಸದಾ ।
ದೈವತಾನ್ಯಭಿಗಚ್ಛೇತ ಕುರ್ಯಾತ್ ಭಾರ್ಯಾಭಿಪೋಷಣಂ ॥೧೫॥
ನ ಧರ್ಮಂ ಖ್ಯಾಪಯೇದ್ವಿದ್ವಾನ್ ನ ಪಾಪಂ ಗೂಹಯೇದಪಿ ।
ಕುರ್ವೀತಾಽಽತ್ಮಹಿತಂ ನಿತ್ಯಂ ಸರ್ವಭೂತಾನುಕಂಪಕಃ ॥೧೬॥
ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ ।
ದೇಶವಾಗ್ಬುದ್ಧಿಸಾರೂಪ್ಯಂ ಆಚರನ್ವಿಚರೇತ್ ಸದಾ ॥೧೭॥
ಶ್ರುತಿಸ್ಮೃತ್ಯುದಿತಂ ಸಮ್ಯಕ್ ಸಾಧುಭಿರ್ಯಶ್ಚ ಸೇವಿತಃ ।
ತಮಾಚಾರಂ ನಿಷೇವೇತ ನೇಹೇತಾನ್ಯತ್ರ ಕರ್ಹಿಚಿತ್ ॥೧೮॥

---

೧೪. ವೇದಗಳನ್ನು ಅಭ್ಯಾಸಮಾಡುತ್ತಲೇ ಇರಬೇಕು. ಮಹಾಯಜ್ಞಗಳನ್ನು ಬಿಡಬಾರದು. ಗೃಹ್ಯಕರ್ಮಗಳನ್ನೂ, ಸಂಧ್ಯಾವಂದನೆಗಳನ್ನೂ ಬಿಡಬಾರದು.

೧೫. ತನಗೆ ಸಮಾನರಾದವರು ಅಥವಾ ಅಧಿಕರೊಡನೆ ಸ್ನೇಹ ಮಾಡಬೇಕು. ಈಶ್ವರನನ್ನು ಭಜಿಸುತ್ತಿರಬೇಕು. ಮಿಕ್ಕ ದೇವತೆಗಳನ್ನೂ ಆಶ್ರಯಿಸಬೇಕು. ಹೆಂಡತಿಯ ಪೋಷಣೆಯನ್ನು ಬಿಡಬಾರದು.

೧೬. ಧರ್ಮವನ್ನು ಮಾಡಿ ಹೊಗಳುತ್ತಿರಬಾರದು. ಪಾಪವನ್ನು ಮುಚ್ಚಬಾರದು. ಎಲ್ಲಾಪ್ರಾಣಿಗಳಲ್ಲೂ ದಯಾವಂತನಾಗಿ ತನಗೆ ಹಿತವಾದ ಕರ್ಮಗಳನ್ನು ಮಾಡಿಕೊಳ್ಳುತ್ತಿರಬೇಕು.

೧೭. ವಯಸ್ಸು, ಕೆಲಸ, ದುಡ್ಡು, ಓದು, ಮನೆತನ, ದೇಶ, ಮಾತು, ಬುದ್ಧಿಗಳಿಗನುಸಾರವಾಗಿ ಯಾವಾಗಲೂ ವರ್ತಿಸುತ್ತಿರಬೇಕು.

೧೮. ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಯೋಗ್ಯರು ಅನುಸರಿಸುತ್ತಿರುವ ಆಚಾರಗಳನ್ನು ಆಚರಿಸಬೇಕು. ಬೇರೆಯದರಲ್ಲಿ ಅಭಿಲಾಷೆಪಡಬಾರದು.

ಯೇನಾಸ್ಯ ಪಿತರೋ ಯಾತಾ ಯೇನ ಯಾತಾಃ ಪಿತಾಮಹಾಃ ।
ತೇನ ಯಾಯಾತ್ ಸತಾಂ ಮಾರ್ಗಂ ತೇನ ಗಚ್ಛನ್ನ ದುಷ್ಯತಿ ॥೧೯॥

ನಿತ್ಯಂ ಸ್ವಾಧ್ಯಾಯಶೀಲಃ ಸ್ಯಾನ್ನಿತ್ಯಂ ಯಜ್ಞೋಪವೀತವಾನ್ ।
ಸತ್ಯವಾದೀ ಜಿತಕ್ರೋಧೋ ಲೋಭಮೋಹ ವಿವರ್ಜಿತಃ ॥೨೦॥

ಸಾವಿತ್ರೀ ಜಾಪನಿರತಃ ಶ್ರಾದ್ಧಕೃನ್ಮುಚ್ಯತೇ ಗೃಹೀ ।
ಮಾತಾಪಿತ್ರೋರ್ಹಿತೇ ಯುಕ್ತೋ ಬ್ರಾಹ್ಮಣಸ್ಯ ಹಿತೇ ರತಃ ॥೨೧॥

ದಾತಾ ಯಜ್ವಾ ವೇದಭಕ್ತೋ ಬ್ರಹ್ಮಲೋಕೇ ಮಹೀಯತೇ ।
ತ್ರಿವರ್ಗಸೇವೀ ಸತತಂ ದೇವಾನಾಂ ಚ ಸಮರ್ಚನಂ ॥೨೨॥

ಕುರ್ಯಾದಹರಹರ್ನಿತ್ಯಂ ನಮಸ್ಯೇತ್ ಪ್ರಯತಃ ಸುರಾನ್ ।
ವಿಭಾಗಶೀಲಃ ಸತತಂ ಕ್ಷಮಾಯುಕ್ತೋ ದಯಾಲುಕಃ ॥೨೩॥

---

೧೯. ಪಿತೃಪಿತಾಮಹರು ಅನುಸರಿಸುತ್ತಿದ್ದ ಮಾರ್ಗದಲ್ಲಿ ಹೋಗುತ್ತಿರಬೇಕು. ಅದೇ ಸತ್ಪುರುಷರ ಮಾರ್ಗ, ಹಾಗಾದರೆ ಅಪವಾದ ಬರುವುದಿಲ್ಲ.

೨೦. ನಿತ್ಯವೂ ಯಜ್ಞೋಪವೀತವನ್ನು ಧರಿಸಿ ವೇದಾಧ್ಯಯನ ಮಾಡುತ್ತ ಸತ್ಯವನ್ನೇ ಹೇಳುತ್ತ, ಲೋಭ ಮೋಹಗಳಿಂದ ಬಿಡಲ್ಪಟ್ಟವನಾಗಿರಬೇಕು.

೨೧. ಸಾವಿತ್ರೀ ಜಪವನ್ನು ಮಾಡುತ್ತಿರಬೇಕು. ಶ್ರಾದ್ಧಗಳನ್ನು ಮಾಡುತ್ತಿರಬೇಕು. ತಾಯಿತಂದೆ, ಬ್ರಾಹ್ಮಣರ ಹಿತದಲ್ಲಿ ಯುಕ್ತನಾಗಿರಬೇಕು.

೨೨-೨೪. ದಾನಮಾಡುವವನು, ಯಾಗಮಾಡುವವನು, ವೇದಭಕ್ತನು ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ. ಧರ್ಮ, ಅರ್ಥ, ಕಾಮಗಳನ್ನು ಯಾವಾಗಲೂ ಬಿಡಬಾರದು. ದಿನದಿನವೂ ದೇವತೆಗಳ ಪೂಜೆ ಮಾಡುತ್ತಿರಬೇಕು.

ಗೃಹಸ್ಥಸ್ತು ಸಮಾಖ್ಯಾತೋ ನ ಗೃಹೇಣ ಗೃಹೀ ಭವೇತ್ ॥೨೪॥
ಕ್ಷಮಾ ದಯಾ ಚ ವಿಜ್ಞಾನಂ ಸತ್ಯಂ ಚೈವ ದಮಃ ಶಮಃ ।
ಅಧ್ಯಾತ್ಮನಿತ್ಯತಾ ಜ್ಞಾನಮೇತತ್ ಬ್ರಾಹ್ಮಣಲಕ್ಷಣಂ ॥೨೫॥
ಏತಸ್ಮಾನ್ನ ಪ್ರಮಾದ್ಯೇತ ವಿಶೇಷೇಣ ದ್ವಿಜೋತ್ತಮಃ ।
ಯಥಾಶಕ್ತಿ ಚರೇತ್ ಧರ್ಮಂ ನಿಂದಿತಾನಿ ವಿವರ್ಜಯೇತ್ ॥೨೬॥
ವಿಧೂಯ ಮೋಹಕಲಿಲಂ ಲಬ್ಧ್ವಾ ಯೋಗಮನುತ್ತಮಂ ।
ಗೃಹಸ್ಥೋ ಮುಚ್ಯತೆ ಬಂಧಾತ್ ನಾತ್ರ ಕಾರ್ಯಾ ವಿಚಾರಣಾ ॥೨೭॥
ವಿಗರ್ಹಾತಿಜಯಾಕ್ಷೇಪ ಹಿಂಸಾಬಂಧವಧಾತ್ಮನಾಂ ।
ಅನ್ಯಮನ್ಯುಸಮುತ್ಥಾನಾಂ ದೋಷಾಣಾಂ ಮರ್ಷಣಂ ಕ್ಷಮಾ ॥
ಸ್ವದುಃಖೇಷು ಚ ಕಾರುಣ್ಯಂ ಪರದುಃಖೇಷು ಸೌಹೃದಂ ।
ದಯೇತಿ ಮುನಯಃ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಸಾಧನಂ ॥೨೯॥

---

ಎಲ್ಲವನ್ನೂ ಬೇರೆ ಮಾಡತಕ್ಕವನಾಗಿರಬೇಕು. ಕ್ಷಮೆ, ದಯೆಗಳನ್ನು ಹೊಂದಿದ್ದರೆ ಅವನೇ ಗೃಹಸ್ಥನು. ಎನ್ನಿಸಿ ಕೊಳ್ಳುತ್ತಾನೆ. ಗೃಹದಲ್ಲಿದ್ದ ಮಾತ್ರಕ್ಕೆ ಗೃಹಸ್ಥನಾಗುವುದಿಲ್ಲ.

೨೫. ಕ್ಷಮೆ, ದಯೆ, ವಿಜ್ಞಾನ, ದಮ, ಶಮ, ಆತ್ಮಜ್ಞಾನಗಳು ಬ್ರಾಹ್ಮಣನ ಲಕ್ಷಣಗಳು.

೨೬. ಬ್ರಾಹ್ಮಣನು ಇವುಗಳನ್ನು ಮಾಡಿಯೇ ಮಾಡಬೇಕು. ಶಕ್ತಿಗನುಗುಣವಾಗಿ ಧರ್ಮವನ್ನು ಮಾಡಬೇಕು. ಕೆಟ್ಟದ್ದನ್ನು ಬಿಡಬೇಕು.

೨೭. ಮೋಹವೆಂಬ ಪಾಶವನ್ನುಬಿಟ್ಟು ಯೋಗವನ್ನು ಹೊಂದಿ ಗೃಹಸ್ಥನು ಬಂಧನದಿಂದ ಮುಕ್ತನಾಗುತ್ತಾನೆ. ಸಂದೇಹವಿಲ್ಲ.

೨೮–೨೯. ನಿಂದೆ, ಜಯಿಸುವಿಕೆ, ತಿರಸ್ಕಾರ, ಹಿಂಸೆ, ಬಂಧ, ಕೊಲೆ ಇವಿಲ್ಲದಿರುವುದು, ಮತ್ತೊಬ್ಬರು ಕೋಪಬರುವಂತೆ ಮಾಡುವುದರಿಂದ ಉಂಟಾದ ದೋಷವನ್ನು ಕ್ಷಮಿಸುವ ರೂಪವಾದ ಕ್ಷಮೆ, ತನ್ನ ದುಃಖದಲ್ಲಿ ದಯೆ, ಪರರದುಃಖದಲ್ಲಿ ಸ್ನೇಹವೆಂಬ ದಯೆ, ಇವು ಸಾಕ್ಷಾತ್ತಾಗಿ ಧರ್ಮಕ್ಕೆ ಸಾಧನವಾದುವು.

ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಏತಾಶ್ಚತುರ್ದಶ ॥೩೦॥

ಚತುರ್ದಶಾನಾಂ ವಿದ್ಯಾನಾಂ ಧಾರಣಾ ಹಿ ಪರಾರ್ಥತಃ ।
ವಿಜ್ಞಾನಮಿತಿ ತದ್ವಿದ್ಯಾದ್ಯೇನ ಧರ್ಮೋ ವಿವರ್ಧತೇ ॥೩೧॥

ಅಧೀತ್ಯ ವಿಧಿವದ್ವಿದ್ಯಾಂ ಅರ್ಥಂ ಚೈವೋಪಲಭ್ಯ ತು ।
ಧರ್ಮಕಾರ್ಯಾಣಿ ಕುರ್ವೀತ ಹ್ಯೇತದ್ವಿಜ್ಞಾನಮುಚ್ಯತೆ ॥೩೨॥

ಸತ್ಯೇನ ಲೋಕಂ ಜಯತಿ ಸತ್ಯಂ ತತ್ಪರಮಂ ಪದಂ ।
ಯಥಾಭೂತಾಪ್ರಮಾದಂ ತು ಸತ್ಯಮಾಹುರ್ಮನೀಷಿಣಃ ॥೩೩॥

ದಮಃ ಶರೀರೋಪರತಿಃ ಶಮಃ ಪ್ರಜ್ಞಾಪ್ರಸಾದಕಃ ।
ಅಧ್ಯಾತ್ಮಮಕ್ಷರಂ ವಿದ್ಯಾದ್ಯತ್ರ ಗತ್ವಾ ನ ಶೋಚತಿ ॥೩೪॥

---

೩೦. ವೇದಾಂಗಗಳು, ವೇದಗಳು, ಮೀಮಾಂಸೆ, ನ್ಯಾಯ, ಪುರಾಣ ಧರ್ಮಶಾಸ್ತ್ರ, ಈ ವಿದ್ಯೆಗಳು ಒಟ್ಟು ಹದಿನಾಲ್ಕು. (ವೇದಾಂಗ) ಶಿಕ್ಷೆ, ವ್ಯಾಕರಣ, ಛಂದಸ್ಸು; ನಿರುಕ್ತ, ಜ್ಯೋತಿಷ, ಕಲ್ಪ, ಎಂದು ಆರು ಅಂಗಗಳು, ಋಗ್ಯಜುಸ್ಸಾಮಾಥರ್ವಣ ನಾಲ್ಕುವೇದಗಳು, ಮೇಲೆಹೇಳಿದ ನಾಲ್ಕು; ಈ ರೀತಿ ಒಟ್ಟು ಹದಿನಾಲ್ಕು ವಿದ್ಯೆ).

೩೧. ಈ ಹದಿನಾಲ್ಕು ವಿದ್ಯೆಗಳನ್ನು ಧರಿಸಿದ್ದರೆ ಬಹು ಉತ್ತಮವು, ಇತರರಿಗೂ ಪ್ರಯೋಜನವುಂಟು. ಇವುಗಳಿಂದ ಧರ್ಮವು ಹೆಚ್ಚುತ್ತಾದುದರಿಂದ ಇವಕ್ಕೆ ವಿಜ್ಞಾನಗಳೆಂದು ಹೆಸರು.

೩೨. ವಿಧಿವತ್ತಾಗಿ ವಿದ್ಯೆಗಳನ್ನು ಓದಿ ಅರ್ಥವನ್ನು ತಿಳಿದುಕೊಂಡು, ಧರ್ಮಕಾರ್ಯಗಳನ್ನು ಮಾಡಬೇಕು. ಇದೇ ವಿಜ್ಞಾನವೆಂದು ಹೇಳಲ್ಪಟ್ಟಿದೆ.

೩೩. ಸತ್ಯದಿಂದ ಲೋಕವು ತನ್ನ ಅಧೀನವಾಗುತ್ತದೆ. ಸತ್ಯವೇ ಉತ್ತಮವು. ಪ್ರಾಣಿಗಳು ಸತ್ಯದಿಂದ ಪ್ರಮಾದಮಾಡದಿರುವಿಕೆಯೇ ಸತ್ಯವೆನಿಸುತ್ತದೆ.

೩೪. ಶರೀರದಲ್ಲಿ ಶಾಂತಿ ಇರುವಿಕೆಯು ದಮ. ಬುದ್ಧಿವಂತಿಕೆಯಿಂದ ಪ್ರಮಾದವನ್ನು ಹೋಗಲಾಡಿಸುವುದು ಶಮ. ಆತ್ಮಸಂಬಂಧವಾದ ವಿದ್ಯೆಯು ಅಕ್ಷರವಿದ್ಯೆ (ಅನಾಶಕವಿದ್ಯೆ) ಅದುತಿಳಿದರೆ ಸ್ವರ್ಗವುಂಟು.

ಯಯಾ ಸ ದೇವೋ ಭಗವಾನ್ ವಿದ್ಯಯಾ ವೇದ್ಯತೇ ಪರಃ ।
ಸಾಕ್ಷಾದೇವ ಹೃಷೀಕೇಶಃ ತಜ್ಜ್ಞಾನಮಿತಿ ಕೀರ್ತಿತಂ ॥೩೫॥

ತನ್ನಿಷ್ಠಸ್ತತ್ಪರೋ ವಿದ್ವಾನ್ ನಿತ್ಯಮಕ್ರೋಧನಃ ಶುಚಿಃ ।
ಮಹಾಯಜ್ಞಪರೋ ವಿಪ್ರೋ ಲಭತೇ ತದನುತ್ತಮಂ ॥೩೬॥

ಧರ್ಮಸ್ಯಾಽಽಯತನಂ ಯತ್ನಾತ್ ಶರೀರಂ ಪರಿಪಾಲಯೇತ್ ।
ನ ಹಿ ದೇಹಂ ವಿನಾ ವಿಷ್ಣುಃ ಪುರುಷೈರ್ವಿದ್ಯತೇ ಪರಃ ॥೩೭॥

ನಿತ್ಯಂ ಧರ್ಮಾರ್ಥಕಾಮೇಷು ಯುಜ್ಯೇತ ನಿಯತೋ ದ್ವಿಜಃ ।
ನ ಧರ್ಮವರ್ಜಿತಂ ಕಾಮಮರ್ಥಂ ವಾ ಮನಸಾ ಸ್ಮರೇತ್ ॥೩೮॥

ಸೀದನ್ನಪಿ ಹಿ ಧರ್ಮೇಣ ನ ತ್ವಧರ್ಮಂ ಸಮಾಚರೇತ್ ।
ಧರ್ಮೋ ಹಿ ಭಗವಾನ್ ದೇವೋ ಗತಿಃ ಸರ್ವೇಷು ಜಂತುಷು ॥೩೯॥

---

೩೫. ಯಾವ ವಿದ್ಯೆಯಿಂದ ಸ್ವಾಮಿಯನ್ನು ತಿಳಿಯುತ್ತೇವೋ, ಯಾವ ವಿದ್ಯೆಯಲ್ಲಿಯೇ ದೇವರು ಇದ್ದಾನೋ, ಅದೇ ಜ್ಞಾನವೆಂದು ಹೇಳಲ್ಪಟ್ಟಿದೆ.

೩೬. ನಿತ್ಯವೂ ಜ್ಞಾನಿಯು ಆ ವಿದ್ಯೆಯಲ್ಲಿ ಆಸಕ್ತನಾಗಿ ಕ್ರೋಧವಿಲ್ಲದೆ ಶುಚಿಯಾಗಿ ಯಜ್ಞಗಳನ್ನು ಮಾಡುತ್ತಿದ್ದರೆ ಉತ್ತಮಪದವನ್ನು ಹೊಂದುತ್ತಾನೆ.

೩೭. ಧರ್ಮಕ್ಕೆ ಕಾರಣಭೂತವಾದುದರಿಂದ ಶರೀರವನ್ನು ಪ್ರಯತ್ನಪಟ್ಟು ಕಾಪಾಡಿಕೊಳ್ಳಬೇಕು. ವಿಷ್ಣುವು ದೇಹವನ್ನು ಬಿಟ್ಟು ಬೇರೆಯಾಗಿಲ್ಲ.

೩೮. ಬ್ರಾಹ್ಮಣನು ಧರ್ಮಾರ್ಥಕಾಮಗಳಲ್ಲಿ ಆವಶ್ಯಕತೆಯನ್ನು ಹೊಂದಿರಬೇಕು. ಧರ್ಮದಿಂದ ಬಿಡಲ್ಪಟ್ಟ, ಕಾಮ, ಅರ್ಥಗಳನ್ನು ಮನಸ್ಸಿನಲ್ಲೂ ಯೋಚಿಸಬಾರದು.

೩೯. ಧರ್ಮದಲ್ಲಿ ಕಷ್ಟಪಡುತ್ತಿದ್ದರೂ ಅಧರ್ಮವನ್ನು ಮಾಡಬಾರದು. ಧರ್ಮವೇ ದೇವರು. ಸರ್ವಜಂತುಗಳಿಗೂ ಅದೇ ಆಶ್ರಯವು.

ಭೂತಾನಾಂ ಪ್ರಿಯಕಾರೀ ಸ್ಯಾನ್ನ ಪರದ್ರೋಹಕರ್ಮಧೀಃ ।
ನ ವೇದ ದೇವತಾನಿಂದಾಂ ಕುರ್ಯಾತ್ತೈಶ್ಚ ನ ಸಂವಸೇತ್ ॥೪೦॥
ಯಸ್ತ್ವಿಮಂ ನಿಯತೋ ವಿಪ್ರೋ ಧರ್ಮಾಧ್ಯಾಯಂ ಪಠೇಚ್ಛುಚಿಃ।
ಅಧ್ಯಾಪಯೇತ್ ಶ್ರಾವಯೇದ್ವಾ ಬ್ರಹ್ಮಲೋಕೇ ಮಹೀಯತೇ ॥೪೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಧರ್ಮಕಥನಂ ಚತುಶ್ಪಂಚಾಶತ್ತಮೋಽಧ್ಯಾಯಃ

---

೪೦. ಪ್ರಾಣಿಗಳಿಗೆ'ಒಳ್ಳೆಯದನ್ನೇ ಮಾಡುತ್ತಿರಬೇಕು. ಪರದ್ರೋಹ ಕರ್ಮವನ್ನು ಮಾಡಬಾರದು. ವೇದ ದೇವತೆಗಳ ನಿಂದೆ ಮಾಡಬಾರದು. ಹಾಗೆ ನಿಂದಿಸುವವನೊಡನೆ ವಾಸಿಸಬಾರದು.

೪೧. ಬ್ರಾಹ್ಮಣನು ಈ ಧರ್ಮಾಧ್ಯಾಯವನ್ನು ನಿಯಮದಿಂದ ಓದಿದರೆ ಮತ್ತೊಬ್ಬರಿಗೆ ಓದಿ ಹೇಳಿದರೆ ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದ
ಧರ್ಮ ವಿವರಣೆಯಲ್ಲಿ ಐವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಪಂಚಾಪಂಚಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ನ ಹಿಂಸ್ಯಾತ್ಸರ್ವಭೂತಾನಿ ನಾನೃತಂ ವಾ ವದೇತ್ಕ್ವಚಿತ್ ।
ನಾಹಿತಂ ನಾಪ್ರಿಯಂ ವಾಚ್ಯಂ ನ ಸ್ತೇನಃ ಸ್ಯಾತ್ಕದಾಚನ ॥ ೧ ॥

ತೃಣಂ ವಾ ಯದಿ ವಾ ಶಾಕಂ ಮೃದಂ ವಾ ಜಲಮೇವ ವಾ ।
ಪರಸ್ಯಾಪಹರನ್ ಜಂತುಃ ನರಕಂ ಪ್ರತಿಪದ್ಯತೇ ॥ ೨ ॥

ನ ರಾಜ್ಞಃ ಪ್ರತಿಗೃಹ್ಣೀಯಾನ್ನ ಶೂದ್ರಾತ್ಪತಿತಾದಪಿ ।
ನ ಚಾನ್ಯಸ್ಮಾದಶಕ್ತಶ್ಚೇತ್ ನಿಂದಿತಾನ್ವರ್ಜಯೇತ್ ಬುಧಃ ॥ ೩ ॥

---

ಪದ್ಮಪುರಾಣದ ಆದಿಖಂಡದ ಐವತ್ತೈದನೆಯ ಅಧ್ಯಾಯವು

೧. ವ್ಯಾಸರು ಹೇಳುತ್ತಾರೆ: ಯಾವಪ್ರಾಣಿಯನ್ನೂ ಹಿಂಸಿಸಬಾರದು. ಸ್ವಲ್ಪವೂ ಸುಳ್ಳುಹೇಳಬಾರದು. ಅಹಿತವಾದ ಅಪ್ರಿಯವಾದ ಮಾತನ್ನಾಡಬಾರದು. ಯಾವಾಗಲೂ ಕದಿಯಬಾರದು.

೨. ಹುಲ್ಲನ್ನಾಗಲಿ, ಕಾಯಿಪಲ್ಯಗಳನ್ನಾಗಲಿ, ನೀರು, ಮಣ್ಣುಗಳನ್ನಾಗಲಿ ಇತರರವನ್ನು ಕದ್ದರೆ ಆ ಪ್ರಾಣಿಯು ನರಕವನ್ನು ಹೊಂದುತ್ತಾನೆ.

೩. ರಾಜನಿಂದ, ಶೂದ್ರನಿಂದ, ಪತಿತನಿಂದ ಕೊನೆಗೆ ಯಾರಿಂದಲೂ ಕೂಡ ದಾನ ತೆಗೆದುಕೊಳ್ಳಬಾರದು. ಅಶಕ್ತನಾಗಿದ್ದರೆ ನಿಂದಿತದಿಂದ ದಾನ ತೆಗೆದುಕೊಳ್ಳಬಾರದು.

ನಿತ್ಯಂ ಯಾಚನಕೋ ನ ಸ್ಯಾತ್ ಪುನಸ್ತಂ ನೈವ ಯಾಚಯೇತ್ ।
ಸ್ಪ್ರಾಣಾನಪಹರತ್ಯೇಷ ಯಾಚಕಸ್ತಸ್ಯ ದುರ್ಮತೇಃ ॥ ೪ ॥

ನ ದೇವದ್ರವ್ಯಹಾರೀ ಸ್ಯಾದ್ವಿಶೇಷೇಣ ದ್ವಿಜೋತ್ತಮಃ ।
ಬ್ರಹ್ಮಸ್ವಂ ವಾ ನಾಪಹರೇದಾಪತ್ಸ್ವಪಿ ಕದಾಚನ ॥ ೫ ॥

ನ ವಿಷಂ ವಿಷಮಿತ್ಯಾಹುಃ ಬ್ರಹ್ಮಸ್ವಂ ವಿಷಮುಚ್ಯತೇ ।
ದೇವಸ್ವಂ ಚಾಪಿ ಯತ್ನೇನ ಸದಾ ಪರಿಹರೇತ್ತತಃ ॥ ೬ ॥

ಪುಷ್ಪಂ ಶಾಕೋದಕಂ ಕಾಷ್ಠಂ ತಥಾ ಮೂಲಂ ಫಲಂ ತೃಣಂ ।
ಅದತ್ತಾನಿ ಚ ನ ಸ್ತೇಯಂ ಮನುಃ ಪ್ರಾಹ ಪ್ರಜಾಪತಿಃ ॥ ೭ ॥

ಗೃಹೀತವ್ಯಾನಿ ಪುಷ್ಪಾಣಿ ದೇವಾರ್ಚನವಿಧೌ ದ್ವಿಜಾಃ ।
ನೈಕಸ್ಮಾದೇವ ನಿಯತಮನನುಜ್ಞಾಯ ಕೇವಲಂ ॥ ೮ ॥

---

೪. ನಿತ್ಯವೂ ಯಾಚಿಸಬಾರದು. ಯಾಚಿಸಿದವನನ್ನೇ ಪುನಃ ಯಾಚಿಸಬಾರದು. ಹೀಗೆಮಾಡಿದರೆ ಯಾಚನೆ ಮಾಡಿದ ಯಾಚಕನು ತನ್ನ ಪ್ರಾಣವನ್ನು ತಾನೇ ಕಳೆದು ಕೊಳ್ಳುತ್ತಾನೆ.

೫. ಬ್ರಾಹ್ಮಣನು, ದೇವರ ಮತ್ತು ಬ್ರಾಹ್ಮಣರ ಸ್ವತ್ತುಗಳನ್ನು ಕಷ್ಟ ಬಂದರೂ ಅಪಹರಿಸಬಾರದು.

೬. ವಿಷವು ವಿಷವಲ್ಲ. ಬ್ರಾಹ್ಮಣನ ಸ್ವತ್ತೇ ವಿಷವೆನ್ನಿಸಿ ಕೊಳ್ಳುತ್ತದೆ. ದೇವರ ಸ್ವತ್ತನ್ನೂ ಕೂಡ ಯತ್ನಪಟ್ಟು ಬಿಟ್ಟು ಬಿಡಬೇಕು.

೭. ಹೂ, ಕಾಯಿಸೊಪ್ಪು, ನೀರು, ಸೌದೆ, ಗೆಡ್ಡೆ, ಹಣ್ಣು, ಹುಲ್ಲು, ಇವುಗಳನ್ನು ಕೈಯೆತ್ತಿ ಕೊಡದಿದ್ದರೂ ತೆಗೆದುಕೊಂಡರೆ ಕಳ್ಳತನವಲ್ಲವೆಂದು ಮನು ಹೇಳಿದ್ದಾನೆ.

೮. ಬ್ರಾಹ್ಮಣನು ದೇವತಾರ್ಚನೆಗೋಸ್ಕರ ಹೂಗಳನ್ನು ಕೊಯ್ದು ಕೊಳ್ಳಬಹುದು. ಒಬ್ಬನದರಲ್ಲಿಯೇ ಅವನ ಮಾತಿಲ್ಲದೆ ತೆಗೆದುಕೊಳ್ಳಬಾರದು.

ತೃಣಂ ಕಾಷ್ಠಂ ಫಲಂ ಪುಷ್ಪಂ ಪ್ರಕಾಶಂ ವೈ ಹರೇದ್ಬುಧಃ ।
ಧರ್ಮಾರ್ಥಂ ಕೇವಲಂ ಸ್ಪ್ರಾಹುರನ್ಯಥಾ ಪತಿತೋ ಭವೇತ್ ॥ ೯ ॥

ತಿಲಮುದ್ಗಯವಾದೀನಾಂ ಮುಷ್ಟಿರ್ಗ್ರಾಹ್ಯಾ ಪಥಿ ಸ್ಥಿತೈಃ ।
ಕ್ಷುಧಿತೈರ್ನಾನ್ಯಥಾ ವಿಪ್ರಾ ಧರ್ಮಾದಿಭಿರಿತಿ ಸ್ಥಿತಿಃ ॥೧೦॥

ನ ಧರ್ಮಸ್ಯಾಪದೇಶೇನ ಪಾಪಂ ಕೃತ್ವಾ ವ್ರತಂ ಚರೇತ್ ।
ವ್ರತೇನ ಪಾಪಂ ವ್ಯಾರುಹ್ಯ ಕುರ್ವನ್ ಸ್ತ್ರೀಶೂದ್ರದಂಭನಂ ॥೧೧॥

ಪ್ರೇತ್ಯೇಹ ಚೇದೃಶೋ ವಿಪ್ರೋ ಗರ್ಹ್ಯತೇ ಬ್ರಹ್ಮವಾದಿಭಿಃ ।
ಛದ್ಮನಾ ಚರಿತಂ ಯಚ್ಚ ವ್ರತಂ ರಕ್ಷಾಂಸಿ ಗಚ್ಛತಿ ॥೧೨॥

ಅಲಿಂಗೀ ಲಿಂಗವೇಷೇಣ ಯೋ ವೃತ್ತಿಮುಪತಿಷ್ಠತಿ ।
ಸ ಲಿಂಗಿನೋ ಹರೇದೇನಃ ತಿರ್ಯಗ್ಯೋನೌ ಚ ಜಾಯತೇ ॥೧೩॥

---

೯. ಹುಲ್ಲು, ಸೌದೆ, ಹಣ್ಣು ಹೂಗಳನ್ನು ಕಾಣುವ ಹಾಗೆಯೇ ಕೇಳದೆ ತೆಗೆದು ಕೊಳ್ಳಬಹುದು. ಧರ್ಮಕ್ಕಾದರೆ ಪಾಪವಿಲ್ಲ, ಇಲ್ಲದಿದ್ದರೆ ಪಾಪಬರುತ್ತದೆ.

೧೦. ಎಳ್ಳು, ಹೆಸರು, ಯವಧಾನ್ಯಗಳಿದ್ದರೆ (ದಾರಿಯಲ್ಲಿ) ಹಸಿವುಳ್ಳವನು ಒಂದು ಹಿಡಿಯನ್ನು ತೆಗೆದು ಕೊಳ್ಳಬಹುದು ಎಂದು ಧರ್ಮಸ್ಥಿತಿಯು.

೧೧-೧೨. ಧರ್ಮದನೆವದಿಂದ ಪಾಪಮಾಡಬಾರದು. ಪಾಪಮಾಡಿ ವ್ರತಮಾಡಬಾರದು. ವ್ರತದಿಂದ ಪಾಪವನ್ನು ಕಟ್ಟಿಕೊಂಡು ಸ್ತ್ರೀಶೂದ್ರರ ರೀತಿಯನಾಚರಿಸುತ್ತಿರುವವನು ಇಲ್ಲಿಯೂ ತಿರಸ್ಕರಿಸಲ್ಪಟ್ಟು ಮೃತನಾದ ಮೇಲೆ ಸದ್ಗತಿಯನ್ನು ಹೊಂದುವುದಿಲ್ಲ. ಕಪಟದಿಂದ ಮಾಡಿದ ವ್ರತವು ರಾಕ್ಷಸರ ಪಾಲಾಗುತ್ತದೆ.

೧೩. ಯತಿಯಲ್ಲದವನು ಕಾಷಾಯ ಧಾರಿಯಾಗಿ, ಇದರಂತೆ ಇತರರೂ ವೇಷದಿಂದ ಮೋಸಪಡಿಸಿ ಧರ್ಮವನ್ನು ತೆರೆದುಕೊಂಡರೆ ಆ ವೇಷದ ಮೂಲ ಭೂತದ ಪಾಪಗಳನ್ನು ವೇಷಹಾಕಿಕೊಂಡವನು ಹೊಂದುತ್ತಾನೆ. ಕೆಟ್ಟಜನ್ಮದಲ್ಲೂ ಹುಟ್ಟುತ್ತಾನೆ.

**ಯಾಚನಂ ಯೋನಿಸಂಬಂಧಂ ಸಹವಾಸಂ ಚ ಭಾಷಣಂ ।**
**ಕುರ್ವಾಣಃ ಪತತೇ ನಿತ್ಯಂ ತಸ್ಮಾದ್ಯತ್ನೇನ ವರ್ಜಯೇತ್ ॥೧೪॥**
**ದೇವದ್ರೋಹಂ ನ ಕುರ್ವೀತ ಗುರುದ್ರೋಹಂ ತಥೈವ ಚ ।**
**ದೇವದ್ರೋಹಾದ್ಗುರುದ್ರೋಹಃ ಕೋಟಿಕೋಟಿಗುಣಾಧಿಕಃ ॥**
**ಜನಾಪವಾದೋ ನಾಸ್ತಿಕ್ಯಂ ತಸ್ಮಾತ್ ಕೋಟಿಗುಣಾಧಿಕಂ ॥೧೫॥**
**ಗೋಭಿಶ್ಚ ದೈವತೈರ್ವಿಪ್ರೈಃ ಕೃಷ್ಯಾ ರಾಜೋಪಸೇವಯಾ ।**
**ಕುಲಾನ್ಯಕುಲತಾಂ ಯಾಂತಿ ಯಾನಿ ಹೀನಾನಿ ಧರ್ಮತಃ ॥೧೬॥**
**ಕುವಿಚಾರೈಃ ಕ್ರಿಯಾಲೋಪೈಃ ವೇದಾನಧ್ಯಯನೇನ ಚ ।**
**ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥೧೭॥**
**ಅನೃತಾತ್ಪಾರದಾರ್ಯಾಚ್ಚ ತಥಾಽಭಕ್ಷ್ಯಸ್ಯ ಭಕ್ಷಣಾತ್ ।**
**ಅಗೋತ್ರ ಧರ್ಮಾಚರಣಾತ್ ಕ್ಷಿಪ್ರಂ ನಶ್ಯತಿ ವೈ ಕುಲಂ ॥೧೮॥**

---

೧೪. ಅಂಥಹ ಅಯೋಗ್ಯನಲ್ಲಿ ಯಾಚನೆ, ನೆಂಟತನ, ಸಹವಾಸ, ಮಾತಾಡುವಿಕೆ, ಇವನ್ನುಮಾಡಿದರೆ ಪತಿತನಾಗುತ್ತಾನೆ. ಆದ್ದರಿಂದ ಪ್ರಯತ್ನಪಟ್ಟುಬಿಡಬೇಕು.

೧೫. ಗುರುದ್ರೋಹ ದೇವದ್ರೋಹಗಳನ್ನು ಮಾಡಬಾರದು. ದೇವದ್ರೋಹಕ್ಕಿಂತ ಗುರುದ್ರೋಹವು ಕೋಟಿಯಿಂದ ಕೋಟಿಯನ್ನು ಗುಣಿಸಿದಷ್ಟು ಅಧಿಕ. ಜನಾಪವಾದ, ನಾಸ್ತಿಕ್ಯಗಳು ಅದಕ್ಕಿಂತ ಇನ್ನೂ ಕೋಟಿಪಾಲು ಹೆಚ್ಚು.

೧೬. ಗೋವು, ದೇವತೆ, ಬ್ರಾಹ್ಮಣ ಇವರಿಂದ ಜೀವನ ಮತ್ತು ಕೃಷಿ, ರಾಜಸೇವೆ, ಇವನ್ನುಮಾಡಿದರೆ ಕುಲಗಳು ಕೆಟ್ಟುಹೋಗುತ್ತವೆ. ಇದು ಧರ್ಮದಿಂದ ಹೀನವು.

೧೭. ಅಯೋಗ್ಯವಾದ ವಿಚಾರಗಳನ್ನು ಮಾಡುವುದರಿಂದ, ಮಾಡತಕ್ಕ ಕೆಲಸಗಳನ್ನು ಮಾಡದಿರುವುದರಿಂದ, ವೇದಾಧ್ಯಯನ ಮಾಡದಿರುವುದರಿಂದ ಕುಲಗಳು ಕೆಟ್ಟು ಹೋಗುತ್ತವೆ. ಅಂತಯೇ ಬ್ರಾಹ್ಮಣನನ್ನು ತಿರಸ್ಕರಿಸುವುದರಿಂದಲೂ ಕೆಡುತ್ತದೆ.

೧೮. ಸುಳ್ಳುಹೇಳುವುದರಿಂದ, ಪರರ ಹೆಂಡರಗಮನದಿಂದ, ತಿನ್ನಬಾರದನ್ನು ತಿನ್ನುವುದರಿಂದ, ತನ್ನದಲ್ಲದ ಗೋತ್ರದ ಧರ್ಮವನ್ನು ಆಚರಿಸುವುದರಿಂದ ಜಾಗ್ರತೆಯಾಗಿ ಕುಲವು ನಾಶವಾಗುತ್ತದೆ.

ಅಶ್ರೋತ್ರಿಯೇಷು ವೈ ದಾನಂ ವೃಷಲೇಷು ತಥೈವ ಚ ।
ವಿಹಿತಾಚಾರಹೀನೇಷು ಕ್ಷಿಪ್ರಂ ನಶ್ಯತಿ ವೈ ಕುಲಂ ॥೧೯॥

ಅಧಾರ್ಮಿಕೈರ್ವೃತೇ ಗ್ರಾಮೇ ನ ವ್ಯಾಧಿ ಬಹುಲೇ ವಸೇತ್ ।
ಶೂದ್ರರಾಜ್ಯೇ ಚ ನ ವಸೇನ್ನ ಪಾಷಂಡಜನೈರ್ವೃತೇ ॥೨೦॥

ಹಿಮವದ್ವಿಂಧ್ಯಯೋರ್ಮಧ್ಯಂ ಪೂರ್ವಪಶ್ಚಿಮಯೋಃ ಶುಭಂ ।
ಮುಕ್ತ್ವಾ ಸಮುದ್ರಯೋರ್ದೇಶಂ ನಾನ್ಯತ್ರ ನಿವಸೇದ್ದ್ವಿಜಃ ॥೨೧॥

ಕೃಷ್ಣೋ ವಾ ಯತ್ರ ಚರತಿ ಮೃಗೋ ನಿತ್ಯಂ ಸ್ವಭಾವತಃ ।
ಪುಣ್ಯಾ ವಾ ವಿಶ್ರುತಾ ನದ್ಯಸ್ತತ್ರ ವಾ ನಿವಸೇದ್ದ್ವಿಜಃ ॥೨೨॥

ಅರ್ಧಕ್ರೋಶಂ ನದೀಕೂಲಂ ವರ್ಜಯಿತ್ವಾ ದ್ವಿಜೋತ್ತಮಃ ।
ನಾನ್ಯತ್ರ ನಿವಸೇತ್ಪುಣ್ಯಂ ನಾಸ್ತ್ಯತ್ರ ಗ್ರಾಮಸನ್ನಿಧೌ ॥೨೩॥

---

೧೯. ಶ್ರೋತ್ರಿಯನಲ್ಲದವನು. ಶೂದ್ರ, ಆಚಾರಹೀನ, ಇವರಲ್ಲಿ ದಾನ ಮಾಡಿದರೆ ಜಾಗ್ರತೆ ಕುಲ ನಾಶವಾಗುತ್ತದೆ.

೨೦. ಅಧರ್ಮನಿಷ್ಠರಿರುವ ಊರಿನಲ್ಲಿರಬಾರದು. ರೋಗಹೆಚ್ಚಾಗಿರುವ ಉರಿನಲ್ಲಿರಬಾರದು. ಶೂದ್ರರು ಹೆಚ್ಚಾಗಿರುವ ರಾಜ್ಯದಲ್ಲಿರಬಾರದು. ಪಾಷಂಡಜನರು ಹೆಚ್ಚಾಗಿರುವ ಜಾಗದಲ್ಲಿರಬಾರದು.

೨೧. ಪೂರ್ವಪಶ್ಚಿಮಗಳ ಮೇರೆ ಹಿಮವತ್ ಮತ್ತು ವಿಂಧ್ಯಪರ್ವತಗಳು, ಇವುಗಳಲ್ಲಿಯೂ ಮಿಕ್ಕಜಾಗದಲ್ಲಿ ಸಮುದ್ರಪ್ರದೇಶದಲ್ಲಿಯೂ ವಾಸಮಾಡಬೇಕು. ಇನ್ನೆಲ್ಲಿಯೂ ಇರಬಾರದು.

೨೨. ಕೃಷ್ಣಮೃಗ (ಜಿಂಕೆ)ವು ಸ್ವಭಾವವಾಗಿ ಇರುವ ಸ್ಥಳದರಲ್ಲಿ ಬಹುದು. ಪುಣ್ಯಪ್ರದವೂ ಪ್ರಸಿದ್ಧವೂ ಆದ ನದಿಗಳಿರುವಜಾಗದಲ್ಲಿ ಬ್ರಾಹ್ಮಣರು ವಾಸಮಾಡಬೇಕು.

೨೩. ಎಷ್ಟುದೂರವಾದರೂ ನದಿಗೆ ಅರ್ಧಕ್ರೋಶಕ್ಕಿಂತ ದೂರದಲ್ಲಿರಬಾರದು. ಗ್ರಾಮಗಳಲ್ಲಿದ್ದರೆ ಪುಣ್ಯವಿಲ್ಲ.

ನ ಸಂವಸೇಚ್ಚ ಪತಿತೈರ್ನ ಚಾಂಡಾಲೈರ್ನ ಪುಲ್ಕಸೈಃ ।
ನ ಮೂರ್ಖೈರ್ನಾವಲಿಪ್ತೈಶ್ಚ ನಾನ್ತ್ಯೈರ್ನಾಂತ್ಯಾವಸಾಯಿಭಿಃ ॥೨೪॥
ಏಕಶಯ್ಯಾಸನೇ ಪಂಕ್ತಿರ್ಭಾಂಡೇ ಪಕ್ವಾನ್ನಮಿಶ್ರಣಂ ।
ಯಜನಾಧ್ಯಾಪನೇ ಯೋನಿಸ್ತಥೈವ ಸಹಭೋಜನಂ ॥೨೫॥
ಸಹಾಧ್ಯಾಯಸ್ತು ದಶಮಃ ಸಹಯಾಜನಮೇವ ಚ ।
ಏಕಾದಶ ಸಮುದ್ದಿಷ್ಟಾ ದೋಷಾಃ ಸಾಂಕರ್ಯಸಂಜ್ಞಿತಾಃ ॥೨೬॥
ಸಮೀಪೇ ವಾಽಪ್ಯವಸ್ಥಾನಾತ್ಪಾಪಂ ಸಂಕ್ರಮತೇ ನೃಣಾಂ ।
ತಸ್ಮಾತ್ಸರ್ವಪ್ರಯತ್ನೇನ ಸಾಂಕರ್ಯಂ ಪರಿವರ್ಜಯೇತ್ ॥೨೭॥
ಏಕಪಂಕ್ತ್ಯುಪವಿಷ್ಟಾ ಯೇ ನ ಸ್ಪೃಶಂತಿ ಪರಸ್ಪರಂ ।
ಭಸ್ಮನಾ ಕೃತಮರ್ಯಾದಾ ನ ತೇಷಾಂ ಸಂಕರೋ ಭವೇತ್ ॥೨೮॥

---

೨೪. ಬ್ರಾಹ್ಮಣನು ಪತಿತರೊಡನೆ ಇರಬಾರದು. ಚಂಡಾಲರು, ಮಾದಿಗರೊಡನೆ, ಮೂರ್ಖರೊಡನೆ, ಕೊಬ್ಬಿದವರೊಡನೆ, ಇರಬಾರದು. ಕೇವಲ ಸಂಸಾರಮಾಡುವುದು ಮಾತ್ರ, ಜ್ಞಾನವಾಗಿ ಉಳ್ಳವರೊಡನೆ ಇರಬಾರದು.

೨೫–೨೬. ಒಂದೇ ಹಾಸಿಗೆಯಲ್ಲಿ ಮಲಗುವುದು, ಕೂರುವುದು, ಪಂಕ್ತಿಯಾಗಿ ಸೇರುವುದು. ಒಂದೇ ಪಾತ್ರೆಯ ಅಡಿಗೆ, ಭೋಜನ, ಇಬ್ಬರಮನೆಯ ಅನ್ನವನ್ನು ಸೇರಿಸಿತಿನ್ನುವುದು, ಯಾಗ, ಪಾಠಹೇಳುವುದು, ಹೆಣ್ಣು ಕೊಟ್ಟುತರುವುದು, ಅಂತೆಯೇ ಜೊತೆಯಲ್ಲಿ ಊಟ, ಜೊತೆಯಲ್ಲಿ ಓದುವುದು, ಜೊತೆಯಲ್ಲಿ ಪೂಜೆಮಾಡುವುದು. ಈ ಹನ್ನೊಂದೂ ಸಾಂಕರ್ಯವನ್ನುಂಟುಮಾಡುವ ದೋಷಗಳು.

೨೭. ಸಮೀಪದಲ್ಲಿ ಕುಳಿತರೂ ಪಾಪವು ಮನುಷ್ಯನಿಗೆ ಬರುತ್ತದೆ. ಆದ್ದರಿಂದ ಹೇಗಾದರೂ ಸಾಂಕರ್ಯವನ್ನು ಬಿಡಬೇಕು.

೨೮. ಯಾರು ಒಂದೇ ಪಂಕ್ತಿಯಲ್ಲಿ ಕುಳಿತು ಕೊಳ್ಳಬೇಕಾಗಿ ಒಬ್ಬರಿಗೊಬ್ಬರು ಮುಟ್ಟುವುದಿಲ್ಲವೋ ಅವರು ಬೂದಿಯಿಂದ ತಮ್ಮ ತಮ್ಮ ಜಾಗವನ್ನು ಗುರ್ತುಮಾಡಿಕೊಂಡರೆ ಸಾಂಕರ್ಯ ದೋಷವಿಲ್ಲ.

ಅಗ್ನಿನಾ ಭಸ್ಮನಾ ಚೈವ ಸಲಿಲೇನ ವಿಶೇಷತಃ ।
ದ್ವಾರೇಣ ಸ್ತಂಭಮಾರ್ಗೇಣ ಷಡ್ಭಿಃ ಪಂಕ್ತಿರ್ವಿಭಿದ್ಯತೇ ॥೨೯॥

ನ ಕುರ್ಯಾಚ್ಛುಷ್ಕವೈರಾಣಿ ವಿವಾದಂ ನ ಚ ಪೈಶುನಂ ।
ಪರಕ್ಷೇತ್ರೇ ಗಾಂ ಚರಂತೀಂ ನಾಽಽಚಕ್ಷೀತ ಚ ಕರ್ಹಿಚಿತ್ ॥೩೦॥

ನ ಸಂವಸೇತ್ಸೂಚಕೇನ ನ ಕಂ ವೈ ಮರ್ಮಣಿ ಸ್ಪೃಶೇತ್ ।
ನ ಸೂರ್ಯಪರಿವೇಷಂ ವಾ ನೇಂದ್ರಚಾಪಂ ಶರಾಗ್ನಿಕಂ ॥೩೧॥

ಪರಸ್ಮೈ ಕಥಯೇದ್ವಿದ್ವಾನ್ ಶಶಿನಂ ವಾಽಥ ಕಾಂಚನಂ ।
ನ ಕುರ್ಯಾದ್ಬಹುಭಿಃ ಸಾರ್ಧಂ ವಿರೋಧಂ ಬಂಧುಭಿಸ್ತಥಾ ॥೩೨॥

ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ।
ತಿಥಿಂ ಪಕ್ಷಸ್ಯ ನ ಬ್ರೂಯಾನ್ನ ನಕ್ಷತ್ರಾಣಿ ನಿರ್ದಿಶೇತ್ ॥೩೩॥

---

೨೯. ಅಗ್ನಿ, ಭಸ್ಮ, ನೀರು, ಬಾಗಿಲು, ಕಂಬ, ದಾರಿ, ಈ ಆರು ಪಂಕ್ತಿ ಭೇದಕಗಳು.

೩೦. ಉಪಯೋಗವಿಲ್ಲದ ವೈರವು ಬಾರದು. ಜಗಳ, ಚಾಡಿಗಳನ್ನು ಮಾಡಬಾರದು. ಮತ್ತೊಬ್ಬರ ನೆಲದಲ್ಲಿ ಹಸು ಮೇಯುತ್ತಿದ್ದರೆ ಯಾವಾಗಲೂ ಹೇಳಬಾರದು.

೩೧–೩೨. ಚಾಡಿ ಹೇಳುವವನೊಡನೆ ಇರಬಾರದು. ಮರ್ಮಭೇದಕವಾದ ಮಾತನ್ನಾಡಬಾರದು. ಸೂರ್ಯ ಪರಿವೇಶ, ಕಾಮನಬಿಲ್ಲು ಇವನ್ನು ನೋಡಿ ಒಬ್ಬರಿಗೂ ಹೇಳಬಾರದು. ಉಲ್ಕಾಪಾತವನ್ನು ಹೇಳಬಾರದು. ಚಂದ್ರನನ್ನು ತೋರಿ ಮತ್ತೊಬ್ಬರಿಗೆ ಹೇಳಬಾರದು. ಚಿನ್ನ ನೋಡಿ ಹೇಳಬಾರದು. ಅನೇಕರೊಡನೆ ಅಂತೆಯೇ ಬಂಧುಗಳೊಡನೆ ವಿರೋಧವನ್ನು ಮಾಡಿಕೊಳ್ಳಬಾರದು.

೩೩. ತನಗೆ ಅನಾನುಕೂಲವಾದವೆಂದು ತೋರಿದುದನ್ನು ಮತ್ತೊಬ್ಬರಿಗೆ ಮಾಡಬಾರದು. ಪಕ್ಷದ ತಿಥಿಯನ್ನು ಹೇಳಬಾರದು. ನಕ್ಷತ್ರಗಳನ್ನು ತೋರಿಸಬಾರದು.

ನೋದಕ್ಯಾಮಭಿಭಾಷೇತ ನಾಶುಚಿಂ ವಾ ದ್ವಿಜೋತ್ತಮಾಃ ।
ನ ದೇವಗುರುವಿಪ್ರಾಣಾಂ ದೀಯಮಾನಂ ತು ವಾರಯೇತ್ ॥೩೪॥

ನ ಚಾತ್ಮಾನಂ ಪ್ರಶಂಸೇದ್ವಾ ಪರನಿಂದಾಂ ಚ ವರ್ಜಯೇತ್ ।
ವೇದನಿಂದಾಂ ದೇವನಿಂದಾಂ ಪ್ರಯತ್ನೇನ ವಿವರ್ಜಯೇತ್ ॥೩೫॥

ಯಸ್ತು ದೇವಾನೃಷೀಂಶ್ಚೈವ ವೇದಾನ್ವಾ ನಿಂದತಿ ದ್ವಿಜಃ ।
ನ ತಸ್ಯ ನಿಷ್ಕೃತಿರ್ದೃಷ್ಟಾ ಶಾಸ್ತ್ರೇಷ್ವಿಹ ಮುನೀಶ್ವರಾಃ ॥೩೬॥

ನಿಂದಯೇದ್ವಾ ಗುರುಂ ದೇವಂ ವೇದಂ ವಾ ಸೋಪಬೃಂಹಣಂ ।
ಕಲ್ಪಕೋಟಿಶತಂ ಸಾಗ್ರಂ ರೌರವೇ ಪಚ್ಯತೇ ನರಃ ॥೩೭॥

ತೂಷ್ಣೀಮಾಸೀತ ನಿಂದಾಯಾಂ ನ ಬ್ರೂಯಾತ್ಕಿಂಚಿದುತ್ತರಂ ।
ಕರ್ಣೌ ಪಿಧಾಯ ಗಂತವ್ಯಂ ನ ಚೈವಮವಲೋಕಯೇತ್ ॥೩೮॥

---

೩೪. ವ್ಯಭಿಚಾರಿಣಿ, ಮುಟ್ಟಾದವಳು, ಅಶುಚಿ ಇವರೊಡನೆ ಮಾತಾಡಬಾರದು. ದೇವರು, ಗುರು, ಬ್ರಾಹ್ಮಣರಿಗೆ ಕೊಡುವದಾನವನ್ನು ತಪ್ಪಿಸಬಾರದು.

೩೫. ತನ್ನನ್ನು ತಾನು ಹೊಗಳಿಕೊಳ್ಳಬಾರದು. ಪರನಿಂದೆಯನ್ನು ಬಿಡಬೇಕು. ವೇದ, ದೇವರು, ಇವರುಗಳ ನಿಂದೆಯನ್ನು ಪ್ರಯತ್ನ ಪೂರ್ವಕವಾಗಿ ಬಿಡಬೇಕು.

೩೬. ದೇವರು, ಋಷಿಗಳು, ವೇದಗಳು ಇವನ್ನು ನಿಂದಿಸಿದವನ ಪಾಪನಿವಾರಣದ ಬಗೆಯನ್ನು ಶಾಸ್ತ್ರದಲ್ಲಿ ಎಲ್ಲಿಯೂ ನೋಡಿಲ್ಲ.

೩೭. ಗುರು, ವೇದ, ದೇವರನ್ನು ಉತ್ಪ್ರೇಕ್ಷಿಸಿ ಯಾವನು ನಿಂದಿಸುತ್ತಾನೋ ಅವನು ನೂರು ಕೋಟಿಕಲ್ಪಪೂರ್ತಿ ರೌರವ ನರಕದಲ್ಲಿ ತೊಂದರೆ ಪಡಿಸಲ್ಪಡುತ್ತಾನೆ.

೩೮. ನಿಂದಿಸುತ್ತಿದ್ದಾಗ ಸುಮ್ಮನಿರಬೇಕು. ಉತ್ತರಹೇಳಬಾರದು. ಕಿವಿಗಳನ್ನು ಮುಚ್ಚಿಕೊಂಡು ಹೊರಟುಹೋಗಬೇಕು. ಅವನನ್ನು ನೋಡಲೂ ಬಾರದು.

ವರ್ಜಯೇತ್ತ್ವಾಂ ಪರೇಷಾಂ ತು ಗೃಹೇಷು ಗರ್ಹಣಾಂ ಬುಧಃ।
ವಿವಾದಂ ಸುಜನೈಃ ಸಾರ್ಧಂ ನ ಕುರ್ಯಾದ್ವೈ ಕದಾಚನ ॥೩೯॥
ನ ಪಾಪಂ ಪಾಪಿನಾಂ ಬ್ರೂಯಾದಪಾಪಂ ವಾ ದ್ವಿಜೋತ್ತಮಾಃ।
ಸತ್ಯೇನ ತುಲ್ಯದೋಷಃ ಸ್ಯಾನ್ಮಿಥ್ಯಾಭಿರ್ದೋಷವಾನ್ಭವೇತ್ ॥೪೦॥
ನೃಣಾಂ ಮಿಥ್ಯಾಭಿಶಸ್ತಾನಾಂ ಪತಂತ್ಯಶ್ರೂಣಿ ರೋದನಾತ್ ।
ತಾನಿ ಪುತ್ರಾನ್ ಪಶೂನ್ ಘ್ನಂತಿ ತೇಷಾಂ ಮಿಥ್ಯಾಭಿಶಂಸಿನಾಂ ॥೪೧॥
ಬ್ರಹ್ಮಹತ್ಯಾಸುರಾಪಾನೇ ಸ್ತೇಯೆ ಗುರ್ವಂಗನಾಗಮೇ।
ದೃಷ್ಟಂ ವೈ ಶೋಧನಂ ವೃದ್ಧೈರ್ನಾಸ್ತಿ ಮಿಥ್ಯಾಭಿಶಂಸಿನಿ ॥೪೨॥
ನೇಕ್ಷೇತೋದ್ಯಂತಮಾದಿತ್ಯಂ ಶಶಿನಂ ವಾಽನಿಮಿತ್ತತಃ।
ನಾಸ್ತಂ ಯಾಂತಂ ನ ವಾರಿಸ್ಥಂ ನೋಪಸೃಷ್ಟಂ ನ ಮಧ್ಯಗಂ॥೪೩॥

---

೩೯. ಇತರರಮನೆಯಲ್ಲಿ ದೂಷಿಸುವುದನ್ನು ಬಿಡಬೇಕು. ಸತ್ಪುರುಷರೊಡನೆ ಯಾವಾಗಲೂ ಜಗಳವಾಡಬಾರದು.

೪೦. ಪಾಪಿಗಳ ಪಾಪವನ್ನು ಎತ್ತಿಆಡಬಾರದು. ಸುಳ್ಳು ಪಾಪ ಕಟ್ಟಿ ಹೇಳಲೂ ಬಾರದು. ಸತ್ಯಹೇಳಿದರೆ ಆ ಪಾಪಿಯೊಡನೆ ಸಮಾನ ದೋಷಿಯಾಗುತ್ತಾನೆ. ಸುಳ್ಳು ಹೇಳಿದರೆ ದೋಷಿಯಾಗುತ್ತಾನೆ.

೪೧. ಯಾರ ಮೇಲೆ ಸುಳ್ಳು ದೋಷವನ್ನು ಹೊರಿಸುತ್ತೇವೋ ಅವರ ಕಣ್ಣೀರು ಅಳುವುದುದರಿಂದ ಬೀಳುತ್ತದಷ್ಟೆ. ಆನೀರು ಪುತ್ರಪೌತ್ರ ಪಶುಗಳನ್ನು (ಪಾಪಹೊರಿಸಿದವನ) ನಾಶಮಾಡುತ್ತದೆ,

೪೨. ಬ್ರಹ್ಮಹತ್ಯೆ, ಸುರಾಪಾನ, ಕಳವು, ಗುರುಪತ್ನಿಗಮನಗಳಿಗೆ ಪ್ರತೀಕಾರವು ಶಾಸ್ತ್ರದಲ್ಲುಂಟು. ಮಿಥ್ಯಾಪವಾದವನ್ನು ಹೊರಿಸಿದವನಿಗೆ ಪ್ರತೀಕಾರವಿಲ್ಲ.

೪೩. ಹುಟ್ಟುತ್ತಿರುವ, ಅಸ್ತನಾಗುತ್ತಿರುವ, ನೀರಿನಲ್ಲಿರುವ, ಮೇಘ ಮುಚ್ಚಿರುವ, ಅಂತರಿಕ್ಷದ ಮಧ್ಯದಲ್ಲಿರುವ ಸೂರ್ಯ ಚಂದ್ರರನ್ನು ನಿಮಿತ್ತವಿಲ್ಲದೆ ನೋಡಬಾರದು.

ತಿರೋಹಿತಂ ಸಮೀಕ್ಷೇತ ನಾದರ್ಶಾದ್ಯನುಶಾಯಿನಂ ।
ನ ನಗ್ನಾಂ ಸ್ತ್ರಿಯಮೀಕ್ಷೇತ ಪುರುಷಂ ವಾ ಕದಾಚನ ॥೪೪॥

ನ ಚ ಮೂತ್ರಂ ಪುರೀಷಂ ವಾ ನ ಚ ಸಂಸ್ಪೃಷ್ಟಮೈಥುನಂ ।
ನಾಶುಚಿಃ ಸೂರ್ಯಸೋಮಾದೀನ್ ಗ್ರಹಾನಾಲೋಕಯೇದ್ಬುಧಃ ॥

ನಾಭಿಭಾಷೇತ ಚ ಪರಮುಚ್ಛಿಷ್ಟೋ ನಾಽವಗುಂಠಿತಃ ।
ನ ಪಶ್ಯೇತ್ ಪ್ರೇತಸಂಸ್ಪರ್ಶಂ ನ ಕ್ರುದ್ಧಸ್ಯ ಗುರೋರ್ಮುಖಂ ॥

ನ ತೈಲೋದಕಯೋಶ್ಛಾಯಾಂ ನ ಪಂಕ್ತಿಂ ಭೋಜನೇ ಸತಿ ।
ನ ಮುಕ್ತಬಂಧನಂ ಪಶ್ಯೇತ್ ನೋನ್ಮತ್ತಂ ಗಜಮೇವ ಚ ॥೪೭॥

ನಾಶ್ನೀಯಾದ್ಭಾರ್ಯಯಾ ಸಾರ್ಧಂ ನೈನಾಮೀಕ್ಷೇತ ಚಾಶ್ನತೀಂ ।
ಕ್ಷುವತೀಂ ಜೃಂಭಮಾಣಾಂ ವಾ ನಾಽಽಸನಸ್ಥಾಂ ಯಥಾಸುಖಂ ॥

---

೪೪. ಕನ್ನಡಿಯೇ ಮೊದಲಾದುವುಗಳಲ್ಲಿ ಪ್ರತಿಬಿಂಬದಿಂದ ಕಾಣುವ ಸೂರ್ಯನನ್ನೂ, ಚಂದ್ರನನ್ನೂ ನೋಡಬಾರದು. ಹಾಗೆಯೇ ಬೆತ್ತಲೆ ಇರುವ ಸ್ತ್ರೀಯನ್ನಾಗಲಿ ಗಂಡಸನ್ನಾಗಲಿ ನೋಡಬಾರದು.

೪೫. ಮಲ, ಮೂತ್ರ, ಗಂಡಹೆಂಡಿರು ಸೇರಿಸುಖಿಸುವುದು, ಇವನ್ನು ನೋಡಬಾರದು. ಅಶುಚಿಯಾಗಿ ಸೂರ್ಯ ಚಂದ್ರರನ್ನೂ ಗ್ರಹಗಳನ್ನೂ ನೋಡಬಾರದು.

೪೬. ಎಂಜಲಿನಿಂದ ಶುದ್ಧನಾಗದೆ, ತಲೆಗೆ ಕಟ್ಟಿಕೊಂಡು ಆಗಲಿ ಮಾತನಾಡಿಸಬಾರದು. ಹೆಣವನ್ನು ಮುಟ್ಟುವುದನ್ನು ನೋಡಬಾರದು. ಕೋಪಗೊಂಡ ಗುರುವಿನ ಮುಖವನ್ನು ನೋಡಬಾರದು

೪೭. ಎಣ್ಣೆ ನೀರುಗಳಲ್ಲಿ ನೆರಳನ್ನು ನೋಡಬಾರದು. ಊಟವಾಗ ದಿದ್ದಾಗ ಊಟಮಾಡುವವರ ಸಾಲನ್ನು ನೋಡಬಾರದು. ಬಂಧನದಿಂದ ಬಿಟ್ಟವನನ್ನು ನೋಡಬಾರದು. ಕೊಬ್ಬಿರುವ ಆನೆಯನ್ನು ನೋಡ ಬಾರದು.

೪೮. ಹೆಂಡತಿಯೊಡನೆ ಊಟಮಾಡಬಾರದು. ಊಟಮಾಡುತ್ತಿ ರುವ ಹೆಂಡತಿಯನ್ನು ನೋಡಬಾರದು. ಶೀನುತ್ತಿರುವ ಆಕಳಿಸುತ್ತಿ ರುವ ಇಷ್ಟಬಂದಂತೆ ಆಸನದಲ್ಲಿ ಕುಳಿತಿರುವ ಹೆಂಡತಿಯನ್ನು ಸಹ ನೋಡ ಬಾರದು.

ನೋದಕೇ ಚಾಽಽತ್ಮನೋ ರೂಪಂ ಶುಭಂ ವಾಽಶುಭಮೇವ ವಾ ।
ನ ಲಂಘಯೇಚ್ಚ ಮತಿಮಾನ್ನಾಧಿತಿಷ್ಠೇತ್ ಕದಾಚನ ॥೪೯॥

ನ ಶೂದ್ರಾಯ ಮತಿಂ ದದ್ಯಾತ್ ಕೃಸರಂ ಪಾಯಸಂ ದಧಿ ।
ನೋಚ್ಛಿಷ್ಟಂ ವಾ ಮಧು ಘೃತಂ ನ ಚ ಕೃಷ್ಣಾಜಿನಂ ಹವಿಃ ॥೫೦॥

ನ ಚೈವಾಸ್ಮೈ ವ್ರತಂ ಬ್ರೂಯಾನ್ನ ಚ ಧರ್ಮಂ ವದೇದ್ಬುಧಃ ।
ನ ಚ ಕ್ರೋಧವಶಂ ಗಚ್ಛೇದ್ದ್ವೇಗಂ ರಾಗಂ ಚ ವರ್ಜಯೇತ್ ॥೫೧॥

ಲೋಭಂ ದಂಭಂ ತಥಾಽವಜ್ಞಾಮಸೂಯಾಂ ಜ್ಞಾನಕುತ್ಸನಂ ।
ಈರ್ಷ್ಯಾಂ ಮದಂ ತಥಾ ಶೋಕಂ ಮೋಹಂ ಚ ಪರಿವರ್ಜಯೇತ್॥

ನ ಕುರ್ಯಾತ್ಕಸ್ಯಚಿತ್ಪೀಡಾಂ ಸುತಂ ಶಿಷ್ಯಂ ತು ತಾಡಯೇತ್ ।
ನ ಹೀನಾನುಪಸೇವೇತ ನ ಚ ತೃಷ್ಣಾಮತಿಃ ಕ್ವಚಿತ್ ॥೫೩॥

---

೪೯. ತನ್ನ ರೂಪವನ್ನು ನೀರಿನಲ್ಲಿ ನೋಡಿಕೊಳ್ಳಬಾರದು. ಒಳ್ಳೆಯದನ್ನಾಗಲಿ, ಕೆಟ್ಟದ್ದನ್ನಾಗಲಿ ಯಾವಾಗಲೂ ಮೀರಬಾರದು. ಅದರಲ್ಲಿ ಆಸಕ್ತನಾಗಬಾರದು.

೫೦. ಶೂದ್ರನಿಗೆ ಬುದ್ಧಿ ಹೇಳಿಕೊಡಬಾರದು. ಚಿಗಳಿ, ಪಾಯಸ, ಮೊಸರುಗಳನ್ನು ಕೊಡಬಾರದು. ಎಂಜಲು, ಜೇನುತುಪ್ಪ ತುಪ್ಪಗಳನ್ನೂ ಕೃಷ್ಣಾಜಿನ ಹವಿಸ್ಸುಗಳನ್ನೂ ಕೊಡಬಾರದು.

೫೧. ಶೂದ್ರನಿಗೆ ವ್ರತವನ್ನು ಹೇಳಬಾರದು. ದರ್ಮವನ್ನು ಬೋಧಿಸಬಾರದು. ಕೋಪಕ್ಕೆ ವಶನಾಗಬಾರದು.

೫೨. ಲೋಭ, ದಂಭ, ತಿರಸ್ಕಾರ. ಹೊಟ್ಟೆಗಿಚ್ಚು, ತಿರಸ್ಕರಿಸುವ ಬುದ್ಧಿ, ಅನ್ಯಶುಭಮತ್ಸರ, ಮದ, ದುಃಖ, ಮೋಹ, ಇವುಗಳನ್ನು ಬಿಡಬೇಕು.

೫೩. ಒಬ್ಬರಿಗೂ ತೊಂದರೆಮಾಡಬಾರದು. ಮಗನನ್ನೂ, ಶಿಷ್ಯನನ್ನೂ ಬುದ್ಧಿಗೋಸ್ಕರ ದಂಡಿಸಬೇಕು. ಅಯೋಗ್ಯರನ್ನು ಸೇವಿಸಬಾರದು. ಯಾವುದರಲ್ಲೂ ಆಸೆಪಡಬಾರದು.

ನಾಽತ್ಮಾನಂ ಚಾವಮನ್ಯೇತ ದೈನ್ಯಂ ಯತ್ನೇನ ವರ್ಜಯೇತ್ ।
ನ ವಿಶಿಷ್ಟಮಸತ್ಕುರ್ಯಾತ್ ನಾಽಽತ್ಮಾನಂ ನಾಮಯೇದ್ಬುಧಃ ॥

ನ ನಖೇನ ಲಿಖೇದ್ಭೂಮಿಂ ಗಾಂಚ ಸಂವೇಶಯೇನ್ನ ಹಿ ।
ನ ನದೀಷು ನದೀಂ ಬ್ರೂಯಾತ್ ಪರ್ವತೇಷು ಚ ಪರ್ವತಾನ್ ॥

ಆವಾಸೇ ಭೋಜನೇ ವಾಽಪಿ ನ ತ್ಯಜೇತ್ಸಹಯಾಜಿನಂ ।
ನಾವಗಾಹೇದಪೋ ನಗ್ನೋ ವಹ್ನಿಂ ನಾತಿವ್ರಜೇತ್ತಥಾ ॥೫೬

ಶಿರೋಭ್ಯಂಗಾವಶಿಷ್ಟೇನ ತೈಲೇನಾಂಗಂ ನ ಲೇಪಯೇತ್ ।
ನ ಚಾಪ್ಯಶಾಸ್ತ್ರೈಃ ಕ್ರೀಡೇತ ಸ್ವಾನಿ ಖಾನಿ ನ ಸಂಸ್ಪೃಶೇತ್ ॥

ರೋಮಾಣಿ ಚ ರಹಸ್ಯಾನಿ ನಾಶಿಷ್ಟೇನ ಸಹ ವ್ರಜೇತ್ ।
ನ ಪಾಣಿಪಾದವಾಙ್ನೇತ್ರಚಾಪಲ್ಯಂ ಸಮುಪಾಶ್ರಯೇತ್ ॥೫೮॥

---

೫೪. ತನ್ನನ್ನು ಅವಮಾನಿಸಿಕೊಳ್ಳಬಾರದು. ದೀನತೆಯನ್ನು ಬಿಡಬೇಕು. ಯೋಗ್ಯನಾದವನಿಗೆ ಸತ್ಕಾರ ಮಾಡಬೇಕು. ತನ್ನನ್ನು ತಗ್ಗಿಸಿಕೊಳ್ಳಬಾರದು.

೫೫. ಉಗುರಿನಿಂದ ಭೂಮಿಯನ್ನು ಗೀರಬಾರದು. ಗೋವನ್ನು ನಿರ್ಬಂಧಿಸ ಬಾರದು. ನದಿಗಳಲ್ಲಿ ಮತ್ತೊಂದು ನದಿಯನ್ನು ಹೇಳಬಾರದು. ಪರ್ವತದಲ್ಲಿ ಮತ್ತೊಂದು ಪರ್ವತವನ್ನು ಹೇಳಬಾರದು.

೫೬. ವಾಸದ ಜಾಗದಲ್ಲಿಯೂ, ಊಟದಲ್ಲಿಯೂ, ಜೊತೆಯಲ್ಲಿ ಯಾಗ ಮಾಡಿದವನ್ನು ಬಿಡಬಾರದು. ನೀರಿನಲ್ಲಿ ಬೆತ್ತಲೆಯಾಗಿ ಸ್ನಾನ ಮಾಡ ಬಾರದು. ಬೆಂಕಿಯನ್ನು ದಾಟ ಬಾರದು.

೫೭. ತಲೆಗೆ ತೊಡೆದುಕೊಂಡು ಆ ಎಣ್ಣೆ ಹೆಚ್ಚಾದರೆ ಆದನ್ನು ಮೈಗೆ ಬಳಿದುಕೊಳ್ಳಬಾರದು. ಶಾಸ್ತ್ರತಿಳಿಯದವರೊಡನೆ ಆಡಬಾರದು. ತನ್ನ ಇಂದ್ರಿಯಗಳನ್ನು ಮುಟ್ಟಿಕೊಳ್ಳ ಬಾರದು.

೫೮. ಗುಹ್ಯಸ್ಥಾನದಲ್ಲಿರುವ ರೋಮಗಳನ್ನು ಮುಟ್ಟಬಾರದು. ಅಯೋಗ್ಯರೊಡನೆ ಹೋಗಬಾರದು. ಕೈ, ಕಾಲು, ಮಾತು, ಕಣ್ಣುಗಳು ಕೇಳುವ ಚಾಪಲ್ಯ ಮಾಡಬಾರದು.

ನ ಶಿಶ್ನೋದರಚಾಪಲ್ಯಂ ನ ಚ ಶ್ರವಣಯೋಃ ಕ್ವಚಿತ್ ।
ನ ಚಾಂಗ ನಖವಾದ್ಯಂ ವೈ ಕುರ್ಯಾನ್ನಾಂಜಲಿನಾ ಪಿಬೇತ್ ॥೫೯॥

ನಾಭಿಹನ್ಯಾಜ್ಜಲಂ ಪದ್ಭ್ಯಾಂ ಪಾಣಿನಾ ವಾ ಕದಾಚನ ।
ನ ಶಾತಯೇದಿಷ್ಟಿಕಾಭಿರ್ಮೂಲಾನಿ ಚ ಫಲಾನಿ ಚ ॥೬೦॥

ನ ಮ್ಲೇಚ್ಛಭಾಷಣಂ ಶಿಕ್ಷೇತ್ ನಾಕರ್ಷೇಚ್ಚ ಪದಾಽಽಸನಂ ।
ನಖಭೇದನಮಾಸ್ಫೋಟಂ ಛೇದನಂ ವಾ ವಿಲೇಖನಂ ॥೬೧॥

ಕುರ್ಯಾದ್ವಿಮರ್ದನಂ ಧೀಮಾನ್ ನಾಕಸ್ಮಾದೇವ ನಿಷ್ಫಲಂ ।
ನೋತ್ಸಂಗೇ ಭಕ್ಷಯೇದ್ಭಕ್ಷ್ಯಂ ವೃಥಾಚೇಷ್ಟಾಂ ನ ಚಾಽಽಚರೇತ್॥

ನ ನೃತ್ಯೇದಥವಾ ಗಾಯೇನ್ನ ವಾದಿತ್ರಾಣಿ ವಾದಯೇತ್ ।
ನ ಸಂಹತಾಭ್ಯಾಂ ಪಾಣಿಭ್ಯಾಂ ಕಂಡೂಯೇದಾತ್ಮನಃ ಶಿರಃ ॥೬೩॥

---

೫೯. ಶಿಶ್ನಚಾಪಲ್ಯ, ಉದರಚಾಪಲ್ಯ, ಶ್ರವಣಚಾಪಲ್ಯಗಳನ್ನು ಬಿಡಬೇಕು. ಅಂಗವಾದ್ಯ (ಅಂಗ ಬಡಿವುದು) ನಖವಾದ್ಯ (ಉಗುರಿನಿಂದ ಬಾರಿಸುವುದು) ಇವನ್ನು ಮಾಡಬಾರದು. ಬೊಗಸೆಯಿಂದ ನೀರು ಕುಡಿಯಬಾರದು.

೬೦. ಕೈಕಾಲುಗಳಿಂದ ನೀರನ್ನು ಬಡಿಯಬಾರದು. ಇಟ್ಟಿಗೆಯಿಂದ ಹಣ್ಣು ಗೆಣಸುಗಳನ್ನು ತಿಕ್ಕಬಾರದು.

೬೧–೬೨. ಮ್ಲೇಚ್ಛರ ಮಾತನ್ನು ಕಲಿಯಬಾರದು. ಕಾಲಿನಿಂದ ಮಣೆ ಮುಂತಾದ ಆಸನಗಳನ್ನು ಎಳೆಯಬಾರದು. ಉಗುರು ತೆಗೆಯುವುದು, ನೆಟ್ಟಿಗೆ ಮುರಿಯುವುದು, ಉಗುರಿನಿಂದ ಕತ್ತರಿಸುವುದು, ಉಗರಿನಿಂದ ಬರೆಯುವುದು ಕೂಡದು. ಕೈಯಿಂದ ತಿಕ್ಕುವುದನ್ನೂ ಕೂಡ ಫಲವಿಲ್ಲದೆ ಮಾಡಬಾರದು. ತೊಡೆಯ ಮೇಲೆ ತಿಂಡಿಯನ್ನು ಇಟ್ಟುಕೊಂಡು ತಿನ್ನಬಾರದು. ವ್ಯರ್ಥರಿವಾಗಿ ಚೇಷ್ಟೆಯನ್ನು ಮಾಡಬಾರದು.

೬೩. ಕುಣಿಯಬಾರದು. ಹಾಡಬಾರದು. ವಾದ್ಯಗಳನ್ನು ವಾದಿಸಬಾರದು. ಎರಡು ಕೈಯಿಂದಲೂ ಒಟ್ಟಿಗೆ ತಲೆಯನ್ನು ಕೆರೆದುಕೊಳ್ಳಬಾರದು.

ನ ಲೌಕಿಕೈಃ ಸ್ತವೈರ್ದೇವಾಂಸ್ತೋಷಯೇದ್ವಾಕ್ಪತೇರಪಿ ।
ನಾಕ್ಷೈಃ ಕ್ರೀಡೇನ್ನ ಧಾವೇತ ನಾಪ್ಸು ವಿಣ್ಮೂತ್ರಮಾಚರೇತ್ ॥

ನೋಚ್ಛಿಷ್ಟಃ ಸಂವಿಶೇನ್ನಿತ್ಯಂ ನ ನಗ್ನಃ ಸ್ನಾನಮಾಚರೇತ್ ।
ನ ಗಚ್ಛಂಸ್ತು ಪಠೇದ್ವಾಪಿ ನ ಚೈವ ಸ್ವಶಿರಃ ಸ್ಪೃಶೇತ್ ॥೬೫॥

ನ ದಂತೈರ್ನಖರೋಮಾಣಿ ಛಿಂದ್ಯಾತ್ಸುಪ್ತಂ ನ ಬೋಧಯೇತ್ ।
ನ ಬಾಲಾತಪಮಾಸೇವೇತ್ಪ್ರೇತಧೂಮಂ ವಿವರ್ಜಯೇತ್ ॥೬೬॥

ನೈವ ಸ್ವಪ್ಯಾಚ್ಛೂನ್ಯಗೇಹೇ ಸ್ವಯಂ ನೋಪಾನಹೌ ಹರೇತ್ ।
ನಾಕಾರಣಾದ್ವಾ ನಿಷ್ಠೀವೇನ್ನ ಬಾಹುಭ್ಯಾಂ ನದೀಂ ತರೇತ್ ॥೬೭॥

ನ ಪಾದಕ್ಷಾಳನಂ ಕುರ್ಯಾತ್ ಪಾದೇನೈವ ಕದಾಚನ ।
ನಾಗ್ನೌ ಪ್ರತಾಪಯೇತ್ಪಾದೌ ನ ಕಾಂಸ್ಯೇ ಧಾವಯೆದ್ಬುಧಃ ॥೬೮॥

---

೬೪. ಲೌಕಿಕವಾದ ಸ್ತೋತ್ರದಿಂದ ದೇವತೆಗಳನ್ನು ಸಂತೋಷ ಪಡಿಸಬಾರದು. ಅವನು ಸಾಕ್ಷಾತ್ ಗುರುವಾದರೂ ಬಾರದು. ಪಗಡೆ ಯಾಡಬಾರದು. ಓಡಬಾರದು. ನೀರಿನಲ್ಲಿ ಜಲಮಲಗಳನ್ನು ಬಿಡ ಬಾರದು.

೬೫. ಶುಚಿಯಾಗದೆ ಕುಳಿತಕೊಳ್ಳಬಾರದು. ಮಲಗಿಕೊಳ್ಳಬಾರದು ಬೆತ್ತಲೆ ಸ್ನಾನ ಮಾಡಬಾರದು. ಹೋಗುತ್ತಾ ಓದಬಾರದು. ತಲೆ ಯನ್ನು ಮುಟ್ಟಿಕೊಳ್ಳುತ್ತಿರಬಾರದು.

೬೬. ಹಲ್ಲುಗಳಿಂದ ಉಗುರು ಕೂದಲುಗಳನ್ನು ಕತ್ತರಿಸಬಾರದು. ಮಲಗಿರುವವನ್ನು ಎಬ್ಬಿಸಬಾರದು. ಎಳೆಬಿಸಿಲನ್ನು ಕಾಸಬಾರದು. ಹೆಣದ ಧೂಮವನ್ನು ಸೇವಿಸಬಾರದು.

೬೭. ಹಾಳುಮನೆಯಲ್ಲಿ ಮಲಗಬಾರದು, ಜೋಡನ್ನುಕದಿಯ ಬಾರದು, ಕಾರಣವಿಲ್ಲದೆ ವಾಂತಿ ಮಾಡಬಾರದು, ತೋಳುಗಳಿಂದ ನದಿ ಯನ್ನು ದಾಟಬಾರದು.

೬೮. ಕಾಲಿನಿಂದ ಕಾಲನ್ನು ಉಜ್ಜುತ್ತಾ ತೊಳೆಯಬಾರದು. ಬೆಂಕಿಯಲ್ಲಿ ಕಾಲುಗಳನ್ನು ಕಾಸಬಾರದು. ಕಂಚಿನಪಾತ್ರೆಯಲ್ಲಿ ಕಾಲು ತೊಳೆಯಬಾರದು.

ನಾಭಿಪ್ರಸಾರಯೇದ್ದೇವಂ ಬ್ರಾಹ್ಮಣಾನ್ ಗಾಮಥಾಪಿ ವಾ ।
ವಾಯ್ವಗ್ನಿನೃಪವಿಪ್ರಾನ್ವಾ ಸೂರ್ಯಂ ವಾ ಶಶಿನಂ ಪ್ರತಿ ॥೬೯॥

ಅಶುದ್ಧಃ ಶಯನಂ ಯಾನಂ ಸ್ವಾಧ್ಯಾಯಂ ಸ್ನಾನಭೋಜನಂ ।
ಬಹಿರ್ನಿಷ್ಕ್ರಮಣಂ ಚೈವ ನ ಕುರ್ವೀತ ಕದಾಚನ ॥೭೦॥

ಸ್ವಪ್ನಮಾವಪನಂ ಸ್ನಾನಂ ಉದ್ವರ್ತನಂ ಭೋಜನಂ ಗತಿಂ ।
ಉಭಯೋಃ ಸಂಧ್ಯಯೋರ್ನಿತ್ಯಂ ಮಧ್ಯಾಹ್ನೇ ಚೈವ ವರ್ಜಯೇತ್॥

ನ ಸ್ಪೃಶೇತ್ಪಾಣಿನೋಚ್ಛಿಷ್ಟೋ ವಿಪ್ರೋ ಗೋಬ್ರಾಹ್ಮಣಾನಲಾನ್
ನ ಚಾಲನಂ ಪದಾ ವಾಽಪಿ ನ ದೇವಪ್ರತಿಮಾಂ ಸ್ಪೃಶೇತ್ ॥೭೨॥

ನಾಶುದ್ಧೋಽಗ್ನಿಂ ಪರಿಚರೇನ್ನ ದೇವಾನ್ ಕೀರ್ತಯೇದೃಷೀನ್ ।
ನಾವಗಾಹೇದಗಾಧಾಂಬು ಧಾವಯೇನ್ನಾನಿಮಿತ್ತತಃ ॥೭೩॥

---

೬೯. ದೇವರ, ಬ್ರಾಹ್ಮಣರು, ಗೋವುಗಳಿಗೆದುರಾಗಿ ಕಾಲುನೀಡ ಬಾರದು. ಇವರಿಗೆ ಎದುರಾಗಿ ಹೋಗಬಾರದು. ವಾಯು, ಅಗ್ನಿ, ರಾಜ, ಬ್ರಾಹ್ಮಣ, ಸೂರ್ಯ, ಚಂದ್ರರಿಗೆ ಮೀರಿ ಹೋಗ ಬಾರದು.

೭೦. ಅಶುದ್ಧವಾಗಿ ಮಲಗಬಾರದು. ಗಾಡಿಯನ್ನು ಹತ್ತಬಾರದು. ಅಧ್ಯಯನ ಮಾಡಬಾರದು, ಸ್ನಾನ ಭೋಜನಗಳನ್ನು ಮಾಡಬಾರದು. ಹೊರಗೂ ಕೂಡ ಹೋಗಬಾರದು.

೭೧. ನಿದ್ದೆ, ಕ್ಷೌರ, ಸ್ನಾನ, ಮೈತಿಕ್ಕಿಕೊಳ್ಳುವುದು, ಭೋಜನ, ಗಮನ, ಎರಡು ಸಂಧ್ಯೆಗಳಲ್ಲೂ ಮಾಡಬಾರದು ಮಧ್ಯಾಹ್ನದಲ್ಲೂ ಬಾರದು.

೭೨. ಶುಚಿಯಲ್ಲದ ಬ್ರಾಹ್ಮಣನು, ಕೈಯಿಂದ ಗೋವು, ಬ್ರಾಹ್ಮಣ, ಬೆಂಕಿ, ಇವುಗಳನ್ನು ಮುಟ್ಟಬಾರದು. ಕಾಲಿನಿಂದಲೂ ಅಲ್ಲಾಡಿಸ ಬಾರದು. ದೇವರ ಪ್ರತಿಮೆಯನ್ನು ಮುಟ್ಟಬಾರದು.

೭೩. ಅಶುದ್ಧನಾಗಿ ಅಗ್ನಿ ಶುಶ್ರೂಷೆ ಮಾಡಬಾರದು. ದೇವತೆ, ಋಷಿಗಳ ಹೆಸರನ್ನು ಹೇಳಬಾರದು. ಆಳವಾದ ನೀರನ್ನು ಇಳಿಯಬಾರದು. ಕಾರಣವಿಲ್ಲದೆ ಓಡಬಾರದು.

ನ ವಾಮಹಸ್ತೇನೋದ್ಧೃತ್ಯ ಪಿಬೇನ್ವಕ್ತ್ರೇಣ ವಾ ಜಲಂ ।
ನೋತ್ತರೇದನುಪಸ್ಪೃಶ್ಯ ನಾಪ್ಸು ರೇತಃ ಸಮುತ್ಸೃಜೇತ್ ॥೭೪॥

ಅಮೇಧ್ಯಾಲಿಪ್ತಮುರ್ಹಂ ವಾ ಲೋಹಿತಂ ವಾ ವಿಷಾಣಿ ವಾ ।
ವ್ಯತಿಕ್ರಾಮೇನ್ನ ಸ್ರವಂತೀಂ ನಾಪ್ಸು ಮೈಥುನಮಾಚರೇತ್ ॥೭೫॥

ಚೈತ್ಯವೃಕ್ಷಂ ನ ವೈ ಛಿಂದ್ಯಾತ್ ನಾಪ್ಸು ಷ್ಠೀವನಮಾಚರೇತ್ ।
ನಾಸ್ಥಿ ಭಸ್ಮಕಪಾಲಾನಿ ನ ಕೇಶೇನ್ನ ಚ ಕಂಟಿಕಾನ್ ॥೭೬॥

ತುಷಾಂಗಾರಕರೀಷಂ ವಾ ನಾಧಿತಿಷ್ಠೇತ್ಕದಾಚನ ॥
ನ ಚಾಗ್ನಿಂ ಲಂಘಯೇದ್ಧೀಮಾನ್ ನೋಪದಧ್ಯಾದಧಃ ಕ್ವಚಿತ್ ।
ನ ಚೈನಂ ಪಾದತಃ ಕುರ್ಯಾನ್ಮುಖೇನ ನ ಧಮೇದ್ಬುಧಃ ॥೭೭॥

---

೭೪. ಎಡಗೈಯಲ್ಲಿ ಒಂದರಲ್ಲಿಯೇ ನೀರೆತ್ತಿಕುಡಿಯ ಬಾರದು. ಬಗ್ಗಿಕೊಂಡು ಬಾಯಿಂದ ನೀರನ್ನು ಕುಡಿಯಬಾರದು. ನೀರಿನಲ್ಲಿ ಆಚಮನ ಮಾಡದೆ ದಾಟ ಕೂಡದು. ನೀರಿನಲ್ಲಿ ರೇತಸ್ಸನ್ನು ವಿಸರ್ಜಿಸ ಕೂಡದು.

೭೫. ಅಮೇಧ್ಯ ಬಳಿದುಕೊಂಡು ಇರುವಾಗ, ಪಾಯಿಖಾನೆಗೆ ಹೋಗಬೇಕಾಗಿರುವಾಗ ಮುಂದೆ ಹೋಗಬಾರದು. ರಕ್ತ, ವಿಷಗಳನ್ನು ದಾಟ ಬಾರದು. ಕರೆಯುತ್ತಿರುವ ಹಸುವನ್ನು ಸೇವಿಸದಿರ ಬಾರದು. ನೀರಿನಲ್ಲಿ ಮೈಥುನ ಮಾಡಬಾರದು.

೭೬. ಪೂಜಿಸಲ್ಪಡುವ ಅರಳಿ, ಬಿಲ್ವಮರಗಳನ್ನು ಕಡಿಯಬಾರದು. ನೀರಿನಲ್ಲಿ ವಮನ ಕ್ಯಾಕರಿಸಿ ಉಗುಳುವುದು ಕೂಡದು. ಮೂಳೆ, ಬೂದಿ, ಮಡಕೆಚೂರು, ಕೂದಲು, ಮುಳ್ಳುಗಳು, ಹೊಟ್ಟು, ಬೆಂಕಿ, ಸಗಣಿಗಳ ಮೇಲೆ ನಿಲ್ಲಬಾರದು. ಕೂರಲೂ ಬಾರದು.

೭೭. ಬೆಂಕಿಯನ್ನು ದಾಟ ಬಾರದು. ಹೂತು ಇಡಬಾರದು. ಕಾಲಿನ ಕೆಳಗೆ ಇರುವಂತೆ ಮಾಡಿಕೊಂಡಿರಬಾರದು. ಬಾಯಿಂದ ಊದ ಬಾರದು.

ನ ವೃಕ್ಷಮವರೋಹೇತ ನಾವೇಕ್ಷೇತಾಶುಚಿಃ ಕ್ವಚಿತ್ ।
ಅಗ್ನೌ ನ ಚ ಕ್ಷಿಪೇದಗ್ನಿಂ ನಾದ್ಭಿಃ ಪ್ರಶಮಯೇತ್ತಥಾ ॥೭೮॥
ಸುಹೃನ್ಮರಣಮಾತ್ರಂ ವಾ ಸ್ವಯಂ ನ ಶ್ರಾವಯೇತ್ಪರಾನ್ ।
ಅಪಣ್ಯಂ ಕೂಟಪಣ್ಯಂ ವಾ ವಿಕ್ರಯೇ ನ ಪ್ರಯೋಜಯೇತ್ ॥

ನ ವಹ್ನಿಂ ಮುಖನಿಶ್ವಾಸೈಃ ಜ್ವಾಲಯೇನ್ನಾಶುಚಿರ್ಬುಧಃ ।
ಪುಣ್ಯಸ್ಥಾನೋದಕಸ್ಥಾನೇ ಸೀಮಾಂತಂ ವಾಹಯೇನ್ನ ತು ॥೮೦॥
ನ ಭಿಂದ್ಯಾತ್ಪೂರ್ವಸಮಯಮಭ್ಯುಪೇತಂ ಕದಾಚನ ।
ಪರಸ್ಪರಂ ಪಶೂನ್ವ್ಯಾಘ್ರಾನ್ ಪಕ್ಷಿಣೋ ನಾವಯೋಧಯೇತ್॥೮೧॥
ಪರಬಾಧಾಂ ನ ಕುರ್ವೀತ ಜಲವಾತಾತಪಾದಿಭಿಃ ।
ಕಾರಯಿತ್ವಾ ಸುಕರ್ಮಾಣಿ ಗುರೂನ್ ಪಶ್ಚಾನ್ನ ವಂಚಯೇತ್॥೮೨॥

---

೭೮. ಮರವನ್ನು ಹತ್ತಬಾರದು. ಅಶುಚಿಯಾಗಿರುವಾಗ ಅತ್ತಿತ್ತ ನೋಡಬಾರದು. ಬೆಂಕಿಯೊಳಗೆ ಮತ್ತೊಂದು ಬೆಂಕಿಯನ್ನು ಹಾಕಬಾರದು. ಬೆಂಕಿಯನ್ನು ನೀರಿನಿಂದ ಆರಿಸಬಾರದು.

೭೯. ಇಷ್ಟರಾದವರು ಸತ್ತ ವಿಷಯವನ್ನು ತಾನಾಗಿ ತಿಳಿಸಬಾರದು ಮಾರಲು ಅನರ್ಹವಾದ ಪದಾರ್ಥಗಳನ್ನು ಮಾರಬಾರದು. ಒಪ್ಪಿಗೆ ರೀತಿಯಿಂದಲೂ ಮಾರಬಾರದು.

೮೦. ಅಶುಚಿಯಾಗಿರುವಾಗ ಬಾಯಿಂದ ಊದಿ ಬೆಂಕಿಯನ್ನು ಉರಿ ಮಾಡಬಾರದು. ಪುಣ್ಯಪ್ರದವಾದ ತೀರ್ಥಗಳ ಎಲ್ಲೆಕಟ್ಟನ್ನು ವಾಹನದ ಮೇಲೆ ಹತ್ತಿ ಹೋಗಬಾರದು.

೮೧. ಹಿಂದೆ ಕೊಟ್ಟಿದ್ದ ಮಾತನ್ನು ಮೀರಬಾರದು. ಹಸುಗಳು, ಗೂಳಿಗಳು, ಹುಲಿಗಳು, ಪಕ್ಷಿಗಳು ಇವುಗಳ ಜಗಳದ ಜೂಜನ್ನು ಮಾಡಬಾರದು.

೮೨. ನೀರು, ಗಾಳಿ, ಬಿಸಿಲು ಮೊದಲಾದವುಗಳಿಂದ ಪರಬಾಧೆಯನ್ನು ಮಾಡಬಾರದು. ಗುರುಗಳಿಗೆ ಉಪಕಾರಮಾಡಿ ಆಮೇಲೆ ವಂಚಿಸಬಾರದು.

ಸಾಯಂ ಪ್ರಾತರ್ಗೃಹದ್ವಾರಾಣ್ ರಕ್ಷಾರ್ಥಂ ಪರಿಘಟ್ಟಯೇತ್ ।
ಬಹಿರ್ಮಾಲ್ಯಂ ಸುಗಂಧಿಂ ವಾ ಭಾರ್ಯಯಾ ಸಹ ಭೋಜನಂ ॥೮೩॥

ವಿಗೃಹ್ಯವಾದಂ ಕೃತ್ವಾ ವಾ ಪ್ರವೇಶಂ ಚ ವಿವರ್ಜಯೇತ್ ।
ನ ಖಾದನ್ ಬ್ರಾಹ್ಮಣಸ್ತಿಷ್ಠೇನ್ನ ಜಲ್ಪನ್ವಾ ಹಸೇದ್ಬುಧಃ ।
ಸ್ವಮಗ್ನಿಂ ಚೈವ ಹಸ್ತೇನ ಸ್ಪೃಶೇನ್ನಾಪ್ಸು ಚಿರಂ ವಸೇತ್ ॥೮೪॥

ನ ಪಕ್ಷಕೇಣೋಪಧಮೇನ್ನ ಶೂರ್ಪೇಣ ಚ ಪಾಣಿನಾ ।
ಮುಖೇ ನಾಗ್ನಿಂ ಸಮಿಂಧೀತ ಮುಖಾದಗ್ನಿರಜಾಯತ ॥೮೫॥

ಪರಸ್ತ್ರಿಯಂ ನ ಭಾಷೇತ ನಾಯಾಜ್ಯಂ ಯಾಜಯೇದ್ಬುಧಃ ।
ನೈಕಶ್ಚರೇತ್ಸದಾ ವಿಪ್ರಃ ಸಮುದಾಯಂ ಚ ವರ್ಜಯೇತ್ ॥೮೬॥

ನ ದೇವಾಯತನಂ ಗಚ್ಛೇತ್ ಕದಾಚಿದ್ವಾ ಪ್ರದಕ್ಷಿಣಂ ।
ನ ಪೀಡಯೇದ್ವಾ ವಸ್ತ್ರಾಣಿ ನ ದೇವಾಯತನೇ ಸ್ವಪೇತ್ ॥೮೭॥

---

೮೩. ಬೆಳಿಗ್ಗೆ ಸಾಯಂಕಾಲಗಳು ರಕ್ಷಣೆಗೋಸ್ಕರ ಮನೆಯ ಹೆಬ್ಬಾಗಿಲನ್ನು ಬಡಿಯಬೇಕು. ಸುವಾಸನೆಯಿಂದ ಕೂಡಿದ್ದರೂ ನಿರ್ಮಾಲ್ಯವಾದರೆ ಧರಿಸಬಾರದು. ಹೆಂಡತಿಯೊಡನೆ ಊಟಮಾಡಬಾರದು. ಜಗಳವಾಡಿ ಅಥವಾ ವಾದಮಾಡಿ ಪುನಃ ಹೋಗಬಾರದು.

೮೪. ಬ್ರಾಹ್ಮಣನು ನಿಂತುಕೊಂಡು ತಿನ್ನಬಾರದು. ಹರಟೆ, ಹೊಡೆಯುತ್ತಾ ನಗುತ್ತಾ ಇರಕೂಡದು. ತನ್ನ ಔಪಾಸನ ಬೆಂಕಿಯನ್ನು ಕೈಲಿ ಮುಟ್ಟಬಾರದು. ನೀರಿನಲ್ಲಿ ಬಹಳ ಹೊತ್ತು ಇರಬಾರದು.

೮೫. ಸೆರೆಗಿನಿಂದ ಬೆಂಕಿಯನ್ನು ಬೀಸಬಾರದು. ಮೊರ ಕೈಗಳಿಂದ ಬೀಸಿ ಹತ್ತಿಸಬಾರದು. ಬಾಯಿಂದಲೂ ಊದಿ ಹತ್ತಿಸಬಾರದು. ಏಕೆಂದರೆ ಬಾಯಿಂದಲೇ ಬೆಂಕಿ ಹುಟ್ಟಿದುದು.

೮೬. ಪರಸ್ತ್ರೀಯನ್ನು ಮಾತನಾಡಿಸಬಾರದು. ಯಾಗಮಾಡಲು ಯೋಗ್ಯತೆಯಿಲ್ಲದವರಿಗೆ ಯಾಗಮಾಡಿಸಬಾರದು. ಒಬ್ಬನೇ ಸಂಚರಿಸಬಾರದು. ಸಮುದಾಯಕ್ಕೆ ಸೇರಬಾರದು.

೮೭. ಅಪ್ರದಕ್ಷಿಣವಾಗಿ ದೇವಸ್ಥಾನಕ್ಕೆ ಹೋಗಲೇ ಬಾರದು. ಬಟ್ಟೆಗಳನ್ನು ಹಿಂಡಬಾರದು. ದೇವಸ್ಥಾನದಲ್ಲಿ ಮಲಗಬಾರದು.

ನೈಕೋಽಧ್ವಾನಂ ಪ್ರಪದ್ಯೇತ ನಾಧಾರ್ಮಿಕ ಜನೈಃ ಸಹ ।
ನ ವ್ಯಾಧಿದೂಷಿತೈಃ ನಾಪಿ ನ ಶೂದ್ರೈಃ ಪತಿತೇನ ವಾ ॥೮೮॥

ನೋಪಾನದ್ವರ್ಜಿತೋ ವಾಽಥ ಜಲಾದಿರಹಿತಸ್ತಥಾ ।
ನ ವರ್ತ್ಮನಿ ಚಿತಿಂ ವಾಮುಮತಿಕ್ರಾಮೇತ್ ಕ್ವಚಿದ್ದ್ವಿಜಃ ॥೮೯॥

ನ ನಿಂದೇದ್ಯೋಗಿನಃ ಸಿದ್ಧಾನ್ ವ್ರತಿನೋ ವಾ ಯತೀಂಸ್ತಥಾ ।
ದೇವತಾಯತನಂ ಪ್ರಾಜ್ಞಾ ದೇವಾನಾಂ ಚೈವ ಸತ್ರಿಣಾಂ ॥೯೦॥

ನ ಕ್ರಾಮೇತ್ ಕಾಮತಶ್ಛಾಯಾಂ ಬ್ರಾಹ್ಮಣಾನಾಂ ಚ ಗೋರಪಿ ।
ಸ್ವಾಂ ತು ನಾಽಽಕ್ರಮಯೇಚ್ಛಾಯಾಂ ಪತಿತಾದ್ಯೈರ್ನ ರೋಗಿಭಿಃ॥

---

೮೮ ಪ್ರಯಾಣಮಾಡುವಾಗ ಒಬ್ಬನೇ ಹೋಗಬಾರದು. ಪಾಪಿಗಳೊಡನೆಯೂ, ರೋಗಿಗಳೊಡನೆಯೂ, ಶೂದ್ರರು ಪತಿತರೊಡನೆಯೂ ಸೇರಬಾರದು.

೮೯. ಬ್ರಾಹ್ಮಣನು ಕೆರವಿಲ್ಲದೆ ನಡೆಯಬಾರದು. ನೀರಿಲ್ಲದೆ ಹೋಗಬಾರದು. ದಾರಿಯಲ್ಲಿ ಚಿತೆಯನ್ನು ಸವ್ಯವಾಗಿ ಅತಿಕ್ರಮಿಸಬಾರದು.

೯೦. ಯೋಗಿಗಳನ್ನೂ, ಸಿದ್ಧರನ್ನೂ, ವ್ರತಿಗಳನ್ನೂ, ಯತಿಗಳನ್ನೂ ನಿಂದಿಸಬಾರದು. ದೇವಸ್ಥಾನ, ದೇವರು, ಯಾಜ್ಞಿಕರನ್ನೂ ನಿಂದಿಸಬಾರದು.

೯೧. ಬ್ರಾಹ್ಮಣರು, ಗೋವುಗಳ ನೆರಳನ್ನು ಅತಿಕ್ರಮಿಸಬಾರದು ಪತಿತರು, ರೋಗಿಗಳು ಇವರು ತನ್ನ ನೆರಳನ್ನು ಹೊಂದಬಾರದು. ಬೆಂಕಿ, ಬೂದಿ, ಕೂದಲುಗಳಮೇಲೆ ನಡೆಯಬಾರದು ಕುಳಿತುಕೊಳ್ಳಲೂ ಬಾರದು.

ನಾಂಗಾರ ಭಸ್ಮಕೇಶಾದಿಷ್ವಧಿತಿಷ್ಠೇತ್ ಕದಾಚನ ।
ವರ್ಜಯೇನ್ಮಾರ್ಜನೀರೇಣುಂ ಸ್ನಾನವಸ್ತ್ರಘಟೋದಕಂ ।
ನ ಭಕ್ಷಯೇದಭಕ್ಷ್ಯಾಣಿ ನಾಪೇಯಂ ಚ ಪಿಬೇದ್ದ್ವಿಜಃ ॥೯೨॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಧರ್ಮಕಥನಂ ಪಂಚಪಂಚಾಶತ್ತಮೋಽಧ್ಯಾಯಃ

---

೯೨. ಕಸಬರಲಿನ ಧೂಳು ಮೇಲೆ ಬೀಳಬಾರದು. ಸ್ನಾನವಸ್ತ್ರದ ನೀರೂ, ಮಡಕೆ ನೀರುಗಳನ್ನೂ ಉಪಯೋಗಿಸಬಾರದು. ಅಭಕ್ಷ್ಯಗಳನ್ನೂ ತಿನ್ನಬಾರದು. ಹೆಂಡಮೊದಲಾದ ಅಪೇಯಗಳನ್ನೂ ಕುಡಿಯಬಾರದು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದ
ಧರ್ಮ ವಿವರಣೆಯಲ್ಲಿ ಐವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಷಟ್‌ಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ನಾದ್ಯಾಚ್ಛೂದ್ರಸ್ಯ ವಿಪ್ರೋಽನ್ನಂ ಮೋಹಾದ್ವಾ ಯದಿ ಕಾಮತಃ ।
ಸ ಶೂದ್ರಯೋನಿಂ ವ್ರಜತಿ ಯಸ್ತು ಭುಂಕ್ತೇ ತ್ವನಾಪದಿ ॥ ೧ ॥
ಷಣ್ಮಾಸಾನ್ಯೋ ದ್ವಿಜೋ ಭುಂಕ್ತೇ ಶೂದ್ರಸ್ಯಾನ್ನಂ ವಿಗರ್ಹಿತಂ ।
ಜೀವನ್ನೇವ ಭವೇಚ್ಛೂದ್ರೋ ಮೃತಃ ಶ್ವಾ ಚಾಭಿಜಾಯತೇ ॥ ೨ ॥
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಸ್ಯ ಚ ಮುನೀಶ್ವರಾಃ ।
ಯಸ್ಯಾನ್ನೇನೋದರಸ್ಥೇನ ಮೃತಸ್ತದ್ಯೋನಿಮಾಪ್ನುಯಾತ್ ॥ ೩ ॥

---

ಪದ್ಮಪುರಾಣದ ಆದಿಖಂಡದ ಐವತ್ತಾರನೆಯ ಅಧ್ಯಾಯವು.

೧. ವ್ಯಾಸರು ಹೇಳುತ್ತಾರೆ: ಪ್ರೀತಿಯಿಂದಾಗಲಿ ಅಜ್ಞಾನದಿಂದಾಗಲಿ ಶೂದ್ರನು ಮುಟ್ಟಿದ ಅನ್ನವನ್ನು ಬ್ರಾಹ್ಮಣನು ತಿನ್ನಬಾರದು. ಕಷ್ಟಕಾಲದಲ್ಲಿ (ಆಪತ್ತುಬಂದಾಗ) ತಿನ್ನಬಹುದು. ಹಾಗೆ ಸರಿಯಾದ ಕಾಲದಲ್ಲಿ ತಿಂದರೆ ಶೂದ್ರಯೋನಿಯನ್ನು ಹೊಂದುತ್ತಾನೆ.

೨. ನಿಂದ್ಯವಾದ ಶೂದ್ರಾನ್ನವನ್ನು ಆರುತಿಂಗಳವರಗೂ ಬಿಡದೆ ತಿನ್ನುವವನು ಈಗಲೇ ಶೂದ್ರನಾಗುತ್ತಾನೆ. ಸತ್ತು ಪುನಃ ಜನ್ಮವನ್ನು ಹೊಂದವಾಗ ನಾಯಾಗಿ ಹುಟ್ಟುತ್ತಾನೆ.

೩. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರ ಅನ್ನದಲ್ಲಿ ಯಾರ ಸಂಭಂಧವಾದ ಅನ್ನವು ಸಾಯುವಾಗ ಹೊಟ್ಟೆಯಲ್ಲಿರುತ್ತದೆಯೋ ಅವನು ಆ ಜಾತಿಯಲ್ಲಿ ಹುಟ್ಟುತ್ತಾನೆ.

ನಟಾನ್ನಂ ನರ್ತಕಾನ್ನಂ ಚ ಚಂಡಾಲಾಚರ್ಮಕಾರಿಣಾಂ ।
ಗಣಾನ್ನಂ ಗಣಿಕಾನ್ನಂ ಚ ಷಡನ್ನಂ ಚ ವಿವರ್ಜಯೇತ್ ॥ ೪ ॥
ಚಕ್ರೋಪಜೀವಿರಜಕತಸ್ಕರಧ್ವಜಿನಾಂ ತಥಾ ।
ಗಾಂಧರ್ವಲೋಹಕಾರಾನ್ನಂ ಸೂತಕಾನ್ನಂ ವಿವರ್ಜಯೇತ್ ॥ ೫ ॥
ಕುಲಾಲಚಿತ್ರಕಾರಾನ್ನಂ ವಾರ್ಧುಷೇಃ ಪತಿತಸ್ಯ ಚ ।
ಪೌನರ್ಭವಚ್ಛತ್ರಿಕಯೋರಭಿಶಸ್ತಸ್ಯ ಚೈವ ಹಿ ॥ ೬ ॥
ಸುವರ್ಣಕಾರಶೈಲೂಷವ್ಯಾಧವಂಧ್ಯಾತುರಸ್ಯ ಚ ।
ಚಿಕಿತ್ಸಕಸ್ಯ ಚೈವಾನ್ನಂ ಪುಂಶ್ಚಲ್ಯಾ ವಂಚಕಸ್ಯ ಚ ॥ ೭ ॥
ಸ್ತೇನನಾಸ್ತಿಕಯೋರನ್ನಂ ದೇವತಾನಿಂದಕಸ್ಯ ಚ ।
ಸೋಮವಿಕ್ರಯಿಣಶ್ಚಾನ್ನಂ ಶ್ವಪಾಕಸ್ಯ ವಿಶೇಷತಃ ॥ ೮ ॥
ಭಾರ್ಯಾಜಿತಸ್ಯ ಚೈವಾನ್ನಂ ಯಸ್ಯ ಚೋಪಪತಿರ್ಗೃಹೇ ।
ಉತ್ಸೃಷ್ಟಸ್ಯ ಕದರ್ಯಸ್ಯ ತಥೈವೋಚ್ಛಿಷ್ಟಭೋಜಿನಃ ॥ ೯ ॥

---

೪. ನಟ, ನರ್ತಕ, ಚಂಡಾಲ, ಚಮ್ಮಾರ, ಗುಂಪಿನದು, ಸೂಳೆ, ಇವರ ಸಂಬಂಧವಾದ ಈ ಆರುಜನದ ಅನ್ನವನ್ನು ತಿನ್ನ ಕೂಡದು.

೫. ಗುಂಪಿನಿಂದ ಜೀವಿಸುವವನು, ಅಗಸ, ಕಳ್ಳ, ಧ್ವಜಹಿಡಿವವರು, ಸಂಗೀತ ಕಲಿಸುವವರು, ಅಕ್ಕಸಾಲೆ, ಸೂತಕದ ಮನೆ ಇವರ ಅನ್ನವನ್ನು ಬಿಡಬೇಕು.

೬–೮. ಕುಂಬಾರ, ಚಿತ್ರಕಾರ, ಬಡ್ಡಿಯಿಂದ ಜೀವಿಸುವವನು. ಪತಿತ, ಹೆಂಗಸುಎರಡನೆಯ ಮದುವೆಯಾದರೆ, ಎರಡನೆಯುವನಲ್ಲಿ ಹುಟ್ಟಿದ ಮಗನ ಅನ್ನ, ಛತ್ರಿಹಿಡಿಯುವನ, ಅಪವಾದ ಹೊಂದಿದವನು ಅಕ್ಕಸಾಲೆ, ನಟ, ಬೇಡರವ, ಬಂಜೆ, ರೋಗಿ, ಕಳ್ಳ, ನಾಸ್ತಿಕ, ದೇವ ನಿಂದಕ, ಸೋಮ ಮಾರುವವನು, ನಾಯಿತಿನ್ನುವವನು, ಇವರ ಅನ್ನ ವನ್ನು ತಿನ್ನಬಾರದು.

೯–೧೨. ಹೆಂಡತಿಯೇ ಮುಂದಾಳಾಗಿ ಉಳ್ಳವನ, ಮಿಂಡನನ್ನು ಮನೆಯಲ್ಲಿ ಇಟ್ಟುಕೊಂಡವನ, ಎಲ್ಲರೂತ್ಯಜಿಸಿರುವವನ, ಕೃಪಣನ,

**ಪಾಪೀಯೋಽನ್ನಂ ಚ ಸಂಘಾನ್ನಂ ಶಸ್ತ್ರಾಜೀವಸ್ಯ ಚೈವ ಹಿ ।**
**ಭೀತಸ್ಯ ರುದಿತಸ್ಯಾನ್ನಮವಕ್ರುಷ್ಟಂ ಪರಿಕ್ಷತಂ ॥೧೦॥**

**ಬ್ರಹ್ಮದ್ವಿಷಃ ಪಾಪರುಚೇಃ ಶ್ರಾದ್ಧಾನ್ನಂ ಮೃತಕಸ್ಯ ಚ ।**
**ವೃಥಾಪಾಕಸ್ಯ ಚೈವಾನ್ನಂ ಶಾವಾನ್ನಂ ಚಾಽಽತುರಸ್ಯ ಚ ॥೧೧॥**

**ಅಪ್ರಜಾನಾಂ ತು ನಾರೀಣಾಂ ಕೃತಘ್ನಸ್ಯ ತಥೈವ ಚ ।**
**ಕಾರುಕಾನ್ನಂ ವಿಶೇಷೇಣ ಶಸ್ತ್ರವಿಕ್ರಯಿಣಸ್ತಥಾ ॥೧೨॥**

**ಶೌಂಡಾನ್ನಂ ಘಾಂಟಿಕಾನ್ನಂ ಚ ಭಿಷಜಾಮನ್ನಮೇವ ಚ ।**
**ವಿದ್ಧಪ್ರಜನನ ಸ್ಯಾನ್ನಂ ಪರಿವೇತ್ರಾನ್ನಮೇವ ಚ ॥೧೩॥**

**ಪುನರ್ಭುವೋ ವಿಶೇಷೇಣ ತಥೈವ ದಿಧಿಷೂಪತೇಃ ।**
**ಅವಜ್ಞಾತಂ ಚಾವಧೂತಂ ಸರೋಷಂ ವಿಸ್ಮಯಾನ್ವಿತಂ ॥೧೪॥**

---

ಎಂಜಲುತಿನ್ನುವವನ, ಪಾಪಿಯ, ಸಂಘದ, ಶಸ್ತ್ರವನ್ನು ಮಾಡಿ ಜೀವಿಸುವವನ, ಭೀತನ, ಅಳುವವನ, ಕೆಳಗೆ ತುಳಿಯಲ್ಪಟ್ಟವನ, ಎಲ್ಲ ವಿಷಯದಲ್ಲೂ ನೊಂದವನ, ಬ್ರಹ್ಮದ್ವೇಷಿಯ, ಪಾಪದಲ್ಲಿ ಆಸಕ್ತನಾದವನ, ಶ್ರಾದ್ಧದ, ಸತ್ತವನ, ದೇವಾದಿಗಳಿಗಲ್ಲದೆ ತನಗೆ ಎಂದು ಅಡಿಗೆ ಮಾಡಿಕೊಳ್ಳುವವನ, ಶವದ, ರೋಗಿಯ, ಮಕ್ಕಳಿಲ್ಲದ ಹೆಂಗಸರ, ಉಪಕಾರಸ್ಮರಣೆಯಿಲ್ಲದವನ, ರಥವನ್ನು ಮಾಡುವವನ, ಶಸ್ತ್ರಮಾರುವವನ ಅನ್ನಗಳನ್ನು ತಿನ್ನಬಾರದು.

೧೩. ಸತ್ತ ಹನ್ನೆರಡನೇ ದಿನದ ಶ್ರಾದ್ಧಾನ್ನದ ಊಟ ಶೌಂಡ, ಆ ಅನ್ನವನ್ನೂ ಘಂಟೆಬಾರಿಸಿ ಜೀವಿಸುವವನ ಅನ್ನ, ವೈದ್ಯಾನ್ನ, ಮಕ್ಕಳು ಸಾಯುವವನ ಅನ್ನ, ತಮ್ಮನು ಮದುವೆಯಾಗಿ ತಾನು ಮದುವೆಯಾಗದವನ ಅನ್ನ, ಹಾದರಗಿತ್ತಿಯ ಮಗನ ಅನ್ನ, ಮುಂಡೆ ಗಂಡನ ಅನ್ನ, ಮುಂಡೆ ಮಗನ ಅನ್ನ, ಮುಟ್ಟಾದ ಮೇಲೆ ಮದುವೆಯಾದವನ ಆನ್ನ ಇವನ್ನು ತಿನ್ನಕೂಡದು.

೧೪–೧೫. ಚೆನ್ನಾಗಿಲ್ಲದ, ತಿರಸ್ಕೃತವಾದ, ಕೋಪದಿಂದ ಹಾಕುವ ಆಶ್ಚರ್ಯದಿಂದ ಬಡಿಸುವ, ಸಂಸ್ಕಾರವಿಲ್ಲದ ಅನ್ನವನ್ನು ಗುರುವಿನ

ಗುರೋರಪಿ ನ ಭೋಕ್ತವ್ಯಮನ್ನಂ ಸಂಸ್ಕಾರವರ್ಜಿತಂ ।
ದುಷ್ಕೃತಂ ಹಿ ಮನುಷ್ಯಸ್ಯ ಸರ್ವಮನ್ನೇ ವ್ಯವಸ್ಥಿತಂ ॥೧೫॥

ಯೋ ಯಸ್ಯಾನ್ನಂ ಸಮಶ್ನಾತಿ ಸ ತಸ್ಯಾಶ್ನಾತಿ ಕಿಲ್ಬಿಷಂ ।
ಅರ್ಧಕಾಕುಲಮಿತ್ರಂ ಚ ಗೋಪಾಲೋ ನಾಹನಾಪಿತೌ ॥೧೬॥

ಏತೇ ಶೂದ್ರೇಷು ಭೋಜ್ಯಾನ್ನಾ ಯಶ್ಚಾಽಽತ್ಮಾನಂ ನಿವೇದಯೇತ್
ಕುಶೀಲವಃ ಕುಂಭಕಶ್ಚ ಕ್ಷೇತ್ರಕರ್ಮಕ ಏವ ಚ ॥೧೭॥

ಏತೇ ಶೂದ್ರೇಷು ಭೋಜ್ಯಾನ್ನಾ ದತ್ವಾ ಸ್ವಲ್ಪಗುಣಂ ಬುಧೈಃ ।
ಪಾಯಸಂ ಸ್ನೇಹಪಕ್ವಂ ಚ ಗೋರಸಶ್ಚೈವ ಸಕ್ತವಃ ॥೧೮॥

---

ದಾದರೂ ಊಟಮಾಡಬಾರದು. ಮನುಷ್ಯನು ಮಾಡುವ ಪಾಪವೆಲ್ಲವೂ ಅನ್ನದಲ್ಲಿ ನಿಂತಿರುತ್ತದೆ.

೧೬. ಯಾವನು ಯಾವನ ಅನ್ನವನ್ನು ತಿನ್ನುತ್ತಾನೋ ಅವನು ಅವನ ಪಾಪವನ್ನು ತಿನ್ನುತ್ತಾನೆ. ಮನೆಯಲ್ಲಿಯೇ ಯಾಚಿಸುವವನು, ತನ್ನ ವಂಶಕ್ಕೆ ಹಿತಕೋರುವವನು, ಗೋಪಾಲ (ಗೊಲ್ಲ) ಪಲಕ್ಕಿ ಹೊರುವವರು, ಕ್ಷೌರಕ ಇವರುಗಳು ಶೂದ್ರರಾದರೂ ಇವರ ಮನೆಯ ಅನ್ನವನ್ನು ತಿನ್ನಬಹುದು, ಯಾವನು ತಾನು ಇಂಥವನೆಂದು ಹೇಳುತ್ತಾನೋ ಅವನ ಮನೆಯ ಅನ್ನವನ್ನೂ ತಿನ್ನಬಹುದು.

೧೭. ಗಾಯಕ, ಕುಂಬಾರ, ಕೃಷಿಗಾರ, ಇವರ ಅನ್ನವನ್ನು ತಿನ್ನಬಹುದು. ಇವರಿಗೆ ಅದರ ಪ್ರತೀಕಾರವನ್ನು ಸ್ವಲ್ಪಕೊಟ್ಟು ಊಟ ಮಾಡಬೇಕು.

೧೮. ಹಾಲಿನಿಂದ ಮಾಡಿದ ಪದಾರ್ಥ, ಎಣ್ಣೆಯಿಂದ ಬೆಂದ ಪದಾರ್ಥ, ಮಜ್ಜಿಗೆ, ಹಿಟ್ಟಿನ ಸಂಬಂಧವಾದುದು, ಹಿಂಡಿ, ಎಣ್ಣೆ, ಇವನ್ನು ಶೂದ್ರನಿಂದ ತೆಗೆದುಕೊಳ್ಳಬಹುದು.

ಪಿಣ್ಯಾಕಂ ಚೈವ ತೈಲಂ ಚ ಶೂದ್ರಾದ್ಗ್ರಾಹ್ಯಂ ದ್ವಿಜಾತಿಭಿಃ ।
ವೃಂತಾಕಂ ನಾಲಿಕಾಶಾಕಂ ಕುಸುಂಭಂ ಭಸ್ಮಕಂ ತಥಾ ॥೧೯॥

ಪಲಾಂಡುಂ ಲಶುನಂ ಶುಕ್ತಂ ನಿರ್ಯಾಸಂ ಚೈವ ವರ್ಜಯೇತ್ ।
ಛತ್ರಾಕಂ ವಿಡ್ವರಾಹಂ ಚ ಸ್ವಿನ್ನಂ ಪೀಯೂಷಮೇವ ಚ ॥೨೦॥

ವಿಲಯಂ ವಿಮುಖಂ ಚೈವ ಕರಕಾಣಿ ವಿವರ್ಜಯೇತ್ ।
ಗೃಂಜನಂ ಕಿಂಶುಕಂ ಚೈವ ಕೂಷ್ಮಾಂಡಂ ಚ ತಥೈವ ಚ ॥೨೧॥

ಉದುಂಬರಮಲಾಬುಂ ಚ ಜಗ್ಧ್ವಾ ಪತತಿ ವೈ ದ್ವಿಜಃ ।
ತಥಾ ಕಸರಸಂಯಾವೌ ಪಾಯಸಾಪೂಪಮೇವ ಚ ॥೨೨॥

ಅನುಪಾಕೃತಮಾಂಸಂ ಚ ದೇವಾನ್ನಾನಿ ಹವೀಂಷಿ ಚ ।
ಯವಾಗೂಂ ಮಾತುಲಿಂಗಂ ಚ ಮತ್ಸ್ಯಾನಪ್ಯನುಪಾಕೃತಾನ್ ॥

---

೧೯. ಬದನೇಕಾಯಿ, ಈರುಳ್ಳಿಯ ಹೂವಿನಂತಿರವ ಶಾಕ, ಕಸುಬೆ, ಲೋಳಿಯಾಗಿರುವ ಒಂದು ಬಗೆ ಸೊಪ್ಪು, ಈರುಳ್ಳಿ, ಬೆಳ್ಳುಳ್ಳಿ, ಆಲೂ ಗಡ್ಡೆಯಂತಹ ಗೆಡ್ಡೆ, ಗೋಂದಾಗಿ ಬರುವ ಪದಾರ್ಥಗಳು ಇವನು ಉಪಯೋಗಿಸಬಾರದು.

೨೦. ಅಣಬೆ (ನಾಯಿಕೊಡೆ) ವರಾಹಕಂದವೆಂಬ ಗೆಡ್ಡೆ (ಹಂದಿ ಗೆಡ್ಡೆ) ಸೋರಿರುವುದು, ಗಂಜಿ, ಹಳಸಲು, ಬಣ್ಣಾತಿರುಗಿರುವುದ್ನು ಆನಕಲ್ಲು (ಮಂಜಿನಗೆಡ್ಡೆ) ಇವನ್ನು ತಿನ್ನಬಾರದು.

೨೧. ರವುಟೆ, ಮೂಲಂಗಿ, ಕುಂಬಳಕಾಯಿ, ಅತ್ತಿ, ಸೋರೆ, ಮುಂತಾದುವನ್ನು ತಿಂದರೆ ಪತಿತನಾಗುತ್ತಾನೆ.

೨೨–೨೪. ಕುಸುಬೆರಸ, ಯವರಸ (ಎಣ್ಣೆ) ಹಾಲಿನಿಂದಬೆಂದ ತಿಂಡಿ (ಹಾಲೊಬ್ಬಟ್ಟು) ಸಂಸ್ಕಾರಶೂನ್ಯವಾದ ಮಾಂಸ, ದೇವರಿಗೆ ನಿವೇದನ ಮಾಡಿದ ಅನ್ನ, ಹವಿಸ್ಸು, ಗಂಜಿ, ಮಾದಲ, ಸಂಸ್ಕಾರಹೀನವಾದ ಮೀನು, ಪೌಂಸೆ, ಬೇಲ, ಬಸುರಿ ಇವುಗಳ ಸಂಬಂಧವಾದುದನ್ನೇ

**ನೀಪಂ ಕಪಿತ್ಥಂ ಪ್ಲಕ್ಷಂ ಚ ಪ್ರಯತ್ನೇನ ವಿವರ್ಜಯೇತ್ ।**
**ಪಿಣ್ಯಾಕಂ ಚೋದ್ಧೃತಸ್ನೇಹಂ ದೇವಧಾನ್ಯಂ ತಥೈವ ಚ ॥೨೪॥**
**ರಾತ್ರೌ ಚ ತಿಲಸಂಬಂಧಂ ಪ್ರಯತ್ನೇನ ದಧಿ ತ್ಯಜೇತ್ ।**
**ನಾಶ್ನೀಯಾತ್ಪಯಸಾ ತಕ್ರಂ ಸ ಕ್ಷಾರಾನ್ನಂ ನ ಯೋಜಯೇತ್ ॥**
**ಕೃಮಿ ದುಷ್ಟಂ ಭಾವದುಷ್ಟಂ ಅಸತ್ಸಂಸರ್ಗವರ್ತಿ ಯತ್ ।**
**ಕೃಮಿಕೀಟಾವಪನ್ನಂ ಚ ಸುಹೃತ್ಕ್ಲೇದಂ ಚ ನಿತ್ಯಶಃ ॥೨೬॥**
**ಶ್ವಾಘ್ರಾತಂ ಚ ಪುನಃಸಿದ್ಧಂ ಚಾಂಡಾಲಾವೇಕ್ಷಿತಂ ತಥಾ ।**
**ಉದಕ್ಯಯಾ ಚ ಪತಿತೈರ್ಗವಾ ಸಂಘ್ರಾತಮೇವ ಚ ॥೨೭॥**
**ಅಸಂಗತಂ ಪರ್ಯುಷಿತಂ ಪರ್ಯಸ್ತಾನ್ನಂ ಚ ನಿತ್ಯಶಃ ।**
**ಕಾಕಕುಕ್ಕುಟಸಂಸ್ಪೃಷ್ಟಂ ಕೃಮಿಭಿಶ್ಚೈವ ಸಂಗತಂ ॥೨೮॥**

---

ಪ್ರಯತ್ನಪಟ್ಟು ಬಿಡಬೇಕು. ಹಾಗೆಯೇ ಎಣ್ಣೆ ತೆಗೆದಿರುವ ಪದಾರ್ಥ, ಹಿಂಡಿ, ನವಗ್ರಹದ ಕಾಳುಗಳು ಇವನ್ನು ಬಿಡಬೇಕು.

೨೫. ರಾತ್ರಿಯಲ್ಲಿ ಎಣ್ಣೆ ಸಂಬಂಧವಾದ ತಿಂಡಿ ಬಿಡಬೇಕು, ಮೊಸರನ್ನು ಬಿಡಬೇಕು. ಹಾಲಿನೊಡನೆ ಮಜ್ಜಿಗೆ ಸೇರಿಸಿ ಊಟ ಮಾಡಬಾರದು. ಉಪ್ಪನ್ನು ಅಥವಾ ಅದು ಸೇರಿರುವ ಪದಾರ್ಥವನ್ನು ಹಾಲಿನೊಡನೆ ಸೇವಿಸಬಾರದು.

೨೬. ಹುಳು ತಿಂದದ್ದು, ದುರುದ್ದೇಶವುಳ್ಳದ್ದು, ಕೆಟ್ಟದರೊಡನೆ ಬೆರಕೆಯಾಗಿರುವುದು. ಹುಳು ಹೊಪ್ಪಲುಗಳು ಬಿದ್ದಿರುವುದು, ಪದಾರ್ಥದಿಂದ ನೀರು ಈಚೆಗೆ ಬರುತ್ತಿರುವುದು (ಹಳಸಿ), ಇಂಥಹವನ್ನು ಯಾವಾಗಲೂ ಬಿಡಬೇಕು.

೨೭. ನಾಯಿಮೂಸಿದ್ದು. ಮತ್ತೊಂದು ಬಾರಿ ಬೇಯಿಸಿದ್ದು, ಚಂಡಾಲರು ನೋಡಿದ್ದು, ಮುಟ್ಟಾದವಳು, ಪತಿತರು, ಗೋವುಗಳಿಂದ ಮೂಸಲ್ಪಟ್ಟದ್ದು ಇವನ್ನು ಬಿಡಬೇಕು.

೨೮–೨೯. ಯೋಗ್ಯವಲ್ಲದ್ದು, ಹಳಸಿದ್ದು, ತಿರಸ್ಕೃತವಾದ ಅನ್ನವನ್ನು ಯಾವಾಗಲೂ ತಿನ್ನಬಾರದು. ಕಾಗೆ, ಕೋಳಿ, ಗಳಿಂದ ಮುಟ್ಟಲ್ಪಟ್ಟದ್ದು, ಹುಳುಬಿದ್ದಿರುವುದು. ಮನುಷ್ಯರು ಮೂಸಿ ನೋಡಿದ್ದು

ಮನುಷ್ಯೈರಪ್ಯವಘ್ರಾತಂ ಕುಷ್ಠಿನಾ ಸ್ಪೃಷ್ಟಮೇವ ಚ ।
ನ ರಜಸ್ವಲಯಾ ದತ್ತಂ ನ ಪುಂಶ್ಚಲ್ಯಾ ಸರೋಗಯಾ ॥೨೯॥

ಮಲವದ್ವಾಸಸಾ ವಾಽಪಿ ಪರವಾಸೋಽಥ ವರ್ಜಯೇತ್ ।
ವಿವತ್ಸಾಯಾಶ್ಚ ಗೋಃಕ್ಷೀರಂ ಮೇಷಸ್ಯಾನಿರ್ದಶಸ್ಯ ಚ ॥೩೦॥

ಆವಿಕಂ ಬಂಧಕೀಕ್ಷೀರಮಪೇಯಂ ಮನುರಬ್ರವೀತ್ ।
ಬಲಾಕಂ ಹಂಸದಾತ್ಯೂಹಂ ಕಲವಿಂಕಂ ಶುಕಂ ತಥಾ ॥೩೧॥

ಕುರರಂ ಚ ಚಕೋರಂ ಚ ಜಾಲಪಾದಂ ಚ ಕೋಕಿಲಂ ।
ವಾಯಸಾರ್ ಖಂಜರೀಟಾಂಶ್ಚ ಶ್ಯೇನಂ ಗೃಧ್ರಂ ತಥೈವ ಚ ॥೩೨॥

ಉಲೂಕಂ ಚಕ್ರವಾಕಂ ಚ ಭಾಸಂ ಪಾರಾವತಂ ತಥಾ ।
ಕಪೋತಂ ಟಿಟ್ಟಿಭಂ ಚೈವ ಗ್ರಾಮಕುಕ್ಕುಟಮೇವ ಚ ॥೩೩॥

---

ಕುಷ್ಠರೋಗದವನು ಮುಟ್ಟಿದ್ದು, ಮುಟ್ಟಾದವಳು ಮುಟ್ಟಿದ್ದು, ಗಂಡು ಬೀರಿಯ ಅನ್ನ, ರೋಗವುಳ್ಳವಳು ಬಡಿಸವುದು, ಇಂತಹ ಅನ್ನಗಳನ್ನು ತಿನ್ನಬಾರದು. ಕೊಳಕು ಬಟ್ಟೆಯವಳು ಬಡಿಸುವುದು, ಈ ಅನ್ನವನ್ನು ಬಿಡಬೇಕು. ಮತ್ತೊಬ್ಬರ ಮನೆಯಲ್ಲಿರಬಾರದು.

೩೧. ಕರುವಿಲ್ಲದ ಹಸುವಿನ ಹಾಲು, ಕೋಡುಬರದಿರುವ ಆಡಿನ ಹಾಲು, ಕುರಿಯ ಹಾಲು, ಕಾಲುಕಟ್ಟಿಸಿಕೊಳ್ಳುವ ಹಸುವಿನ ಹಾಲು, ಇವು ಕುಡಿಯುವುದಕ್ಕೆ ಯೋಗ್ಯವಲ್ಲವೆಂದು ಮನು ಹೇಳಿದ್ದಾನೆ.

೩೧–೩೪. ಕೊಕ್ಕರೆ, ಹಂಸ, ಬಾತು, ಗುಬ್ಬಚ್ಚಿ, ಗಿಳಿ, ಕುರರ, ಚಕೊರ, ಕಾಲುಜಾಲದಂತಿರುವ ಪಕ್ಷಿಗಳು ಕೋಗಿಲೆ, ಕಾಗೆ, ಕಪಟದ ಹಕ್ಕಿ, ಗಿಡುಗ, ಹದ್ದು, ಗೂಬೆ, ಚಕ್ರವಾಕ, ಕೀಚ ಬಾಲದಹಕ್ಕಿ,

ಸಿಂಹಂ ವ್ಯಾಘ್ರಂ ಚ ಮಾರ್ಜಾರಂ ಶ್ವಾನಂ ಸೂಕರಮೇವ ಚ ।
ಶೃಗಾಲಂ ಮರ್ಕಟಂ ಚೈವ ಗರ್ದಭಂ ಚ ನ ಭಕ್ಷಯೇತ್ ॥೩೪॥

ನ ಭಕ್ಷಯೇತ್ ಸರ್ವಮೃಗಾನ್ ಶಿಖಿನೋಽನ್ಯಾನ್ ವನೇಚರಾನ್ ।
ಜಲೇಚರಾನ್ ಸ್ಥಳಚರಾನ್ ಪ್ರಾಣಿನಶ್ಚೇತಿ ಧಾರಣಾ ॥೩೫॥

ಗೋಧಾ ಕೂರ್ಮಃ ಶಶಃ ಖಡ್ಗಃ ಶಲ್ಲಕಶ್ಚೇತಿ ಸತ್ತಮಾಃ ।
ಭಕ್ಷ್ಯಾನ್ ಪಂಚನಖ್ಯಾನ್ನಿತ್ಯಂ ಮನುರಾಹ ಪ್ರಜಾಪತಿಃ ॥೩೬॥

ಮತ್ಸ್ಯಾನ್ ಸಶಲ್ಕಾನ್ ಭುಂಜೀತ ಮಾಂಸಂ ರೌರವಮೇವ ಚ ।
ನಿವೇದ್ಯ ದೇವತಾಭ್ಯಸ್ತು ಬ್ರಾಹ್ಮಣೇಭ್ಯಶ್ಚ ನಾನ್ಯಥಾ ॥೩೭॥

ಮಯೂರಂ ತಿತ್ತಿರಂ ಚೈವ ಕಪೋತಂ ಚ ಕಪಿಂಜಲಂ ।
ವಾರ್ಧ್ರೀಣಸಂ ಬಕಂ ಭಕ್ಷ್ಯಂ ಮೀನಂ ಪ್ರಾಹ ಪ್ರಜಾಪತಿಃ ॥೩೮॥

---

ಪಾರಿವಾಳ, ಕಾಡುಪಾರಿವಾಳ, ಟಿಟ್ಟಿಭ (ಕೆಂಬೂತ) ಊರುಕೋಳಿ, ಸಿಂಹ, ಹುಲಿ, ಬೆಕ್ಕು, ನಾಯಿ, ಹಂದಿ, ನರಿ, ಕಪಿ, ಕತ್ತೆ, ಇವನ್ನು ತಿನ್ನಬಾರದು.

೩೫. ಮೃಗಜಾತಿಯೆಲ್ಲವನ್ನೂ, ನವಿಲು ಮೊದಲಾದ ಕಾಡುಪಕ್ಷಿಗಳನ್ನೂ ನೀರು, ನೆಲಗಳಲ್ಲಿ ಸಂಚರಿಸುವ ಎಲ್ಲಾ ಪ್ರಾಣಿಗಳನ್ನು ವರ್ಜಿಸಬೇಕು.

೩೬. ಉಡ, ಆಮೆ, ಮೊಲ ಖಡ್ಗಮೃಗ, ಶಲ್ಲಕವೆಂಬ ಮೃಗ (ಹುಲ್ಲೆಜಾತಿ) ಈ ಐದು ಮೃಗಗಳನ್ನೂ ತಿನ್ನಬಹುದೆಂದು ಮನುವು ಹೇಳಿದ್ದಾನೆ.

೩೭. ಮುಳ್ಳುಳ್ಳ ಮೀನುಗಳನ್ನೂ, ರುರುವೆಂಬ (ಹುಲ್ಲೆಯ) ಮಾಂಸವನ್ನೂ, ದೇವತೆ, ಬ್ರಾಹ್ಮಣರಿಗೆ ನಿವೇದಿಸಿ ತಿನ್ನಬೇಕು.

೩೮. ನವಿಲು, ತಿತ್ತಿರಿಪಕ್ಷಿ, ಪಾರಿವಾಳ, ಕಪಿಂಜಲವೆಂಬ ಹಕ್ಕಿ ವಾರ್ಧೀಣಸ, ಬಕ, ಮೀನುಗಳನ್ನು ತಿನ್ನಬಹುದೆಂದು ಬ್ರಹ್ಮನು ಹೇಳಿದ್ದಾನೆ.

ಶಫರೀ ಸಿಂಹತುಂಡಶ್ಚ ತಥಾ ಪಾಠೀನರೋಹಿತೌ ।
ಮತ್ಸ್ಯಾಶ್ಚೈತೇ ಸಮುದ್ದಿಷ್ಟಾಃ ಭಕ್ಷಣೀಯಾ ದ್ವಿಜೋತ್ತಮಾಃ ॥

ಪ್ರೋಕ್ಷಿತಂ ಭಕ್ಷಯೇದೇಷಾಂ ಮಾಂಸಂ ಚ ದ್ವಿಜಕಾಮ್ಯಯಾ।
ಯಥಾವಿಧಿಪ್ರಯುಕ್ತಂ ಚ ಪ್ರಾಣಾನಾಮಪಿ ಚಾತ್ಯಯೇ ॥೪೦॥

ಭಕ್ಷಯೇ ನ್ನೈವ ಮಾಂಸಾನಿ ಶೇಷಭೋಜೀ ನ ಲಿಪ್ಯತೇ ।
ಔಷಧಾರ್ಥಮಶಕ್ತೋ ವಾ ನ ಯೋಗಾದ್ಯಜ್ಞಕಾರಣಾತ್ ॥೪೧॥

ಆಮಂತ್ರಿತಸ್ತು ಯಃ ಶ್ರಾದ್ಧೇ ದೈವೇ ವಾ ಮಾಂಸಮುತ್ಸೃಜೇತ್।
ಯಾವಂತಿ ಪಶುರೋಮಾಣಿ ತಾವನ್ನರಕಮೃಚ್ಛತಿ ॥೪೨॥

ಅದೇಯಂ ವಾಽಪ್ಯಪೇಯಂ ಚ ತಥೈವಾಸ್ಪೃಶ್ಯಮೇವ ವಾ ।
ದ್ವಿಜಾತೀನಾಮನಾಲೋಕ್ಯಂ ನಿತ್ಯಂ ಮದ್ಯಮಿತಿ ಸ್ಥಿತಿಃ ॥೪೩॥

---

೩೯. ಶಫರೀ, ಸಿಂಹತುಂಡ, ಪಾಠೀನ, ರೋಹಿತ, ಈ ಮೀನುಗಳು ತಿನ್ನಲ್ಪಡತಕ್ಕವುಗಳೆಂದು ಹೇಳಲ್ಪಟ್ಟಿದೆ.

೪೦. ಈ ಮೇಲೆ ಹೇಳಿದ ಮಾಂಸಗಳನ್ನು ಪ್ರೋಕ್ಷಿಸಿ ತಿನ್ನಬೇಕು. ಅದೂ ಶಾಸ್ತ್ರವತ್ತಾಗಿ ಪ್ರೋಕ್ಷಿಸಬೇಕು ಪ್ರಾಣ ಹೋಗುವಾಗಲಾದರೂ ಪ್ರೋಕ್ಷಿಸುವುದನ್ನು ಬಿಡಬಾರದು.

೪೧. ಮಾಂಸವನ್ನು ತಿನ್ನಲೇ ಬಾರದು. ಒಬ್ಬನುತಿಂದು ಮಿಕ್ಕಿದ್ದನ್ನು ತಿಂದರೆ ಆ ಮಾಂಸವು ಪಾಪಕಾರಣವಾಗುವುದಿಲ್ಲ. ಔಷಧಕ್ಕೋಸ್ಕರವಾಗಲಿ, ಅಶಕ್ತನಾಗಲಿ, ಯಜ್ಞದ ಕಾರಣವಾಗಲಿ, ಈ ಸಂಬಂಧಗಳಿದ್ದಲ್ಲಿ ಪಾಪವಿಲ್ಲ.

೪೨. ಶ್ರಾದ್ಧವಾಗಲಿ, ದೇವಕರ್ಮವಾಗಲಿ, ಇದ್ದು ಬ್ರಾಹ್ಮಣನನ್ನು ಕರೆದು ಮಾಂಸವನ್ನು ಭಕ್ಷಣಮಾಡಿಸ ಬಾರದು. ಹಾಗೆ ಮಾಡಿದರೆ ಆಪಶುವಿಗೆ ಎಷ್ಟು ರೋಮಗಳಿವೆಯೋ ಅಷ್ಟುದಿದ ನರಕದಲ್ಲಿರಬೇಕಾಗುತ್ತದೆ.

೪೩. ಬ್ರಾಹ್ಮಣನು ಮದ್ಯವನ್ನು ತೆಗೆದುಕೊಳ್ಳಬಾರದು. ಕುಡಿಯಬಾರದು. ಕೊನೆಗೆ ಮುಟ್ಟಲೂಕೂಡದು. ನೋಡಲೂಬಾರದು. ಇದು ಲೋಕದ ನಡತೆ.

ತಸ್ಮಾತ್ಸರ್ವಪ್ರಯತ್ನೇನ ಮದ್ಯಂ ಸರ್ವಂ ವಿವರ್ಜಯೇತ್ ।
ಪೀತ್ವಾ ಪತತಿ ಕರ್ಮಭ್ಯಃ ತ್ವಸಂಭಾಷ್ಯೋ ಭವೇದ್ದ್ವಿಜಃ ॥೪೪॥

ಭಕ್ಷಯಿತ್ವಾಪ್ಯಭಕ್ಷ್ಯಾಣಿ ಪೀತ್ವಾಽಪೇಯಾನಪಿ ದ್ವಿಜಃ ।
ನಾಧಿಕಾರೀ ಭವೇತ್ತಾವತ್ ಯಾವತ್ತನ್ನ ಜಹಾತ್ಯಧಃ ॥೪೫॥

ತಸ್ಮಾತ್ಪರಿಹರೇನ್ನಿತ್ಯಂ ಅಭಕ್ಷ್ಯಾಣಿ ಪ್ರಯತ್ನತಃ ।
ಅಪೇಯಾನಿ ಚ ವಿಪ್ರೋ ವೈ ತಥಾ ಚೇದ್ಯಾತಿ ರೌರವಂ ॥೪೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ
ಆದಿಖಂಡೇ ಭಕ್ಷ್ಯಾಭಕ್ಷ್ಯ ನಿಯಮಕಥನೇ ಷಟ್ ಪಂಚಾಶತ್ತಮೋಽಧ್ಯಾಯಃ

---

೪೪. ಆದ್ದರಿಂದ ಪ್ರಯತ್ನ ಪಟ್ಟು ಮದ್ಯವನ್ನು ಕುಡಿಯಬಾರದು. ಕುಡಿದರೆ ಕರ್ಮಗಳಿಗೆ ಅನರ್ಹನಾಗುತ್ತಾನೆ. ಅವನನ್ನು ಒಬ್ಬರೂ ಮಾತಾಡಿಸ ಕೂಡದು.

೪೫. ತಿನ್ನಬಾರದನ್ನು ತಿಂದು, ಕುಡಿಯಬಾರದ್ದನ್ನು ಕುಡಿದು, ಎಲ್ಲಿಯವರೆಗೆ ಇರುವನೋ ಅಲ್ಲಿಯವರೆಗೂ ಕರ್ಮಾಧಿಕಾರಿಯಾಗುವುದಿಲ್ಲ ಅದನ್ನು ಬಿಟ್ಟಮೇಲೆ ಅಧಿಕಾರ ಬರುತ್ತದೆ.

೪೬. ಆದ್ದರಿಂದ ಅಪೇಯ, ಅಭಕ್ಷ್ಯಗಳನ್ನು ಪ್ರಯತ್ನ ಪಟ್ಟು ಬಿಡಬೇಕು. ಹಾಗಿ ಬಿಡದಿದ್ದರೆ ರೌರವಾದಿ ನರಕಗಳನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಭಕ್ಷ್ಯಾಭಕ್ಷ್ಯ ನೇಮ ಕಥನದಲ್ಲಿ ಐವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಸಪ್ತಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಅಥಾತಃ ಸಂಪ್ರವಕ್ಷ್ಯಾಮಿ ದಾನಧರ್ಮಮನುತ್ತಮಂ।
ಬ್ರಹ್ಮಣಾಽಭಿಹಿತಂ ಪೂರ್ವಮೃಷೀಣಾಂ ಬ್ರಹ್ಮವಾದಿನಾಂ ॥೧॥

ಅರ್ಥಾನಾಮುಚಿತೇ ಪಾತ್ರೇ ಶ್ರದ್ಧಯಾ ಪ್ರತಿಪಾದನಂ।
ತದೋಮಿತ್ಯಭಿನಿರ್ದಿಷ್ಟಂ ಭುಕ್ತಿಮುಕ್ತಿ ಫಲಪ್ರದಂ ॥೨॥

ಯೋ ದದಾತಿ ವಿಶಿಷ್ಟೇಭ್ಯಃ ಶ್ರದ್ಧಯಾ ಪರಯಾ ಯುತಃ।
ತದ್ವೈ ದತ್ತಮಹಂ ಮನ್ಯೇ ಶೇಷಂ ಕಸ್ಯಾಪಿ ರಕ್ಷತಿ ॥೩॥

---

ಪದ್ಮಪುರಾಣದ ಆದಿಖಂಡದ ಐವತ್ತೇಳನೆಯ ಅಧ್ಯಾಯವು

೧. ವ್ಯಾಸನು ಹೇಳುತ್ತಾನೆ: ಇನ್ನುಮುಂದೆ ಬ್ರಹ್ಮನು ಪೂರ್ವದಲ್ಲಿ ಋಷಿಗಳಿಗೆ ಹೇಳಿದ ಉತ್ತಮೋತ್ತಮವಾದ ದಾನ ಧರ್ಮಗಳನ್ನು ಹೇಳುತ್ತೇನೆ.

೨. ತಾನು ಹೊಂದಿರುವ ದುಡ್ಡನ್ನು ಯೋಗ್ಯರಲ್ಲಿ ದಾನಮಾಡಬೇಕು. ಅದೇ ಓಂಕಾರವು ಅದರಿಂದ ಇಹಪರಗಳಲ್ಲಿ ಸೌಖ್ಯ ಬರುತ್ತದೆ.

೩. ಯೋಗ್ಯರಿಗೆ ಶ್ರದ್ಧೆಯಿಂದ ಕೊಟ್ಟಿದ್ದೇ ದಾನವೆನಿಸುತ್ತದೆ. ಹಾಗಿಲ್ಲದುದನ್ನು ಯಾರಿಗೊಸ್ಕರಲೋ ಕಾಪಾಡುತ್ತಾನೆ.

ನಿತ್ಯಂ ನೈಮಿತ್ತಿಕಂ ಕಾಮ್ಯಂ ತ್ರಿವಿಧಂ ದಾನಮುಚ್ಯತೇ।
ಚತುರ್ಥಂ ವಿಮಲಂ ಪ್ರೋಕ್ತಂ ಸರ್ವದಾನೋತ್ತಮೋತ್ತಮಂ ॥೪॥
ಅಹನ್ಯಹನಿ ಯತ್ಕಿಂಚಿದ್ದೀಯತೇಽನುಪಕಾರಿಣೇ।
ಅನುದ್ದಿಶ್ಯ ಫಲಂ ತಸ್ಮಾತ್ ಬ್ರಾಹ್ಮಣಾಯ ತು ನಿತ್ಯಕಂ ॥೫॥
ಯತ್ತು ಪಾಪೋಪಶಾಂತ್ಯರ್ಥಂ ದೀಯತೇ ವಿದುಷಾಂ ಕರೇ।
ನೈಮಿತ್ತಿಕಂ ತದುದ್ದಿಷ್ಟಂ ದಾನಂ ಸದ್ಭಿರನುತ್ತಮಂ ॥೬॥
ಅಪತ್ಯ ವಿಜಯೈಶ್ವರ್ಯಸುಖಾರ್ಥಂ ಯತ್ಪ್ರದೀಯತೇ।
ದಾನಂ ತತ್ಕಾಮ್ಯಮಾಖ್ಯಾತಂ ಋಷಿಭಿರ್ಧರ್ಮಚಿಂತಕೈಃ ॥೭॥
ಯದೀಶ್ವರಸ್ಯ ಪ್ರೀತ್ಯರ್ಥಂ ಬ್ರಹ್ಮವಿತ್ಸು ಪ್ರದೀಯತೇ।
ಚೇತಸಾ ಧರ್ಮಯುಕ್ತೇನ ದಾನಂ ತದ್ವಿಮಲಂ ಶಿವಂ ॥೮॥

---

೪. ದಾನಗಳು, ನಿತ್ಯ, ನೈಮಿತ್ತಿಕ, ಕಾಮ್ಯ, ಎಂದು ಮೂರು ಬಗೆಯಾಗಿವೆ. ನಾಲ್ಕನೆಯದಾದುದು ವಿಮಲವೆಂದು ಹೆಸರುಪಡೆದು ಉತ್ತಮೊತ್ತಮವಾದುದಾಗಿದೆ.

೫. ಪ್ರತಿನಿತ್ಯವೂ ತನಗೆ ಯಾವ ಉಪಕಾರವನ್ನೂ ಮಾಡದ ಬ್ರಾಹ್ಮಣನಿಗೆ ಯಾವ ಪ್ರತಿಪಲವನ್ನೂ ಅಪೇಕ್ಷಿಸದೇ ಕೊಡುತ್ತಾನೋ ಅದು ನಿತ್ಯಕ ದಾನವೆನಿಸುವುದು.

೬. ಪಾಪಶಾಂತಿಗೋಸ್ಕರ ಕೊಡತಕ್ಕ ದಾನವು ನೈಮಿತ್ತಿಕವೆನಿಸುತ್ತದೆ.

೭. ಮಕ್ಕಳಾಗುವುದು, ಐಶ್ವರ್ಯಹೊಂದುವುದು, ಜಯಶೀಲನಾಗುವುದು, ಈ ಸುಖಗಳಿಗೋಸ್ಕರ ಕೊಡತಕ್ಕ ದಾನವು ಕಾಮ್ಯವೆನಿಸುತ್ತದೆ.

೮. ಈಶ್ವರ ಪ್ರೀತಿಯನ್ನು ಉದ್ದೇಶಿಸಿ ಕೊಡತಕ್ಕ ದಾನವು ವಿಮಲವೆನಿಸುತ್ತದೆ.

ದಾನಧರ್ಮಂ ನಿಷೇವೇತ ಪಾತ್ರಮಾಸಾದ್ಯ ಶಕ್ತಿತಃ ।
ಉಪಾಸ್ಯತೇ ತು ತತ್ಪಾತ್ರಂ ಯತ್ತ್ರಾರಯತಿ ಸರ್ವತಃ ॥೯॥

ಕುಟುಂಬಭುಕ್ತಿವಸನಾದ್ದೇಯಂ ಯದತಿರಿಚ್ಯತೇ ।
ಅನ್ಯಥಾ ದೀಯತೇ ಯದ್ಧಿ ನ ತದ್ದಾನಫಲಪ್ರದಂ ॥೧೦॥

ಶ್ರೋತ್ರಿಯಾಯ ಕುಲೀನಾಯ ವಿನೀತಾಯ ತಪಸ್ವಿನೇ ।
ವೃತಸ್ಥಾಯ ದರಿದ್ರಾಯ ಪ್ರದೇಯಂ ಭಕ್ತಿಪೂರ್ವಕಂ ॥೧೧॥

ಯಸ್ತು ದದ್ಯಾನ್ಮಹೀಂ ಭಕ್ತ್ಯಾ ಬ್ರಾಹ್ಮಣಾಯಾಽಹಿತಾಗ್ನಯೇ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥೧೨॥

ಇಕ್ಷುಭಿಃ ಸಂವೃತಾಂ ಭೂಮಿಂ ಯವಗೋಧೂಮಶಾಲಿನೀಂ ।
ದದಾತಿ ವೇದವಿದುಷೇ ಯಃ ಸ ಭೂಯೋ ನ ಜಾಯತೇ ॥೧೩॥

---

೯. ದಾನ ಧರ್ಮಗಳನ್ನು ಯೋಗ್ಯರಾದವರಿಗೆ ಶಕ್ತ್ಯನುಗುಣವಾಗಿ ಕೊಡಬೇಕು. ಹಾಗೆಮಾಡಿದರೆ ಅದು ಎಲ್ಲಾ ಕಷ್ಟದಿಂದ ಕಾಪಾಡುತ್ತದೆ.

೧೦. ಕುಟುಂಬ ಭರಣಕ್ಕೆ, ಊಟಕ್ಕೆ, ಬಟ್ಟೆಗೆ, ಸಾಕಾಗುವಷ್ಟು ಕೊಡಬೇಕು. ಹೆಚ್ಚಾಗಿ ಕೊಟ್ಟರೆ ಅದರಿಂದ ದಾನಫಲವು ಉಂಟಾಗುವುದಿಲ್ಲ.

೧೧. ಶ್ರೋತ್ರಿಯನಾಗಿಯೂ, ಕುಲೀನನಾಗಿಯೂ, ವಿನೀತನಾಗಿಯೂ, ತಪಸ್ವಿಯಾಗಿಯೂ ಇರುವ ಬ್ರಾಹ್ಮಣನಿಗೆ ಭಕ್ತಿಯಿಂದ ದಾನ ಮಾಡಬೇಕು. ವ್ರತದಲ್ಲಿರುವವನಿಗೂ, ದರಿದ್ರನಿಗೂ ಕೊಡಬೇಕು.

೧೨. ಆಹಿತಾಗ್ನಿಯಾದ ಬ್ರಾಹ್ಮಣನಿಗೆ ಭಕ್ತಿಯಿಂದ ಭೂಮಿಯನ್ನು ಕೊಟ್ಟರೆ ಉತ್ತಮವಾದ ಲೋಕವು ಸಿಕ್ಕುತ್ತದೆ.

೧೩. ಕಬ್ಬು, ಯವೆ, ಗೋಧಿ ಬೆಳೆಗಳಿಂದ, ಕೂಡಿರುವ ಭೂಮಿಯನ್ನು ಕೊಟ್ಟರೆ ಅವನಿಗೆ ಪುನರ್ಜನ್ಮವಿಲ್ಲ.

ಗೋಚರ್ಮಮಾತ್ರಾಮಪಿ ವಾ ಯೋ ಭೂಮಿಂ ಸಂಪ್ರಯಚ್ಛತಿ ।
ಬ್ರಾಹ್ಮಣಾಯ ದರಿದ್ರಾಯ ಸರ್ವಪಾಪೈಃ ಪ್ರಮುಚ್ಯತೇ ॥೧೪॥

ಭೂಮಿದಾನಾತ್ಪರಂ ದಾನಂ ವಿದ್ಯತೇ ನೇಹ ಕಿಂಚನ ।
ಅನ್ನದಾನಂ ತೇನ ತುಲ್ಯಂ ವಿದ್ಯಾದಾನಂ ತತೋಽಧಿಕಂ ॥೧೫॥

ಯೋ ಬ್ರಾಹ್ಮಣಾಯ ಶಾಂತಾಯ ಶುಚಯೇ ಧರ್ಮಶೀಲಿನೇ ।
ದದಾತಿ ವಿದ್ಯಾಂ ವಿಧಿನಾ ಬ್ರಹ್ಮಲೋಕೇ ಮಹೀಯತೇ ॥೧೬॥

ದದ್ಯಾದಹರಹಃ ಸ್ವರ್ಣಂ ಶ್ರದ್ಧಯಾ ಬ್ರಹ್ಮಚಾರಿಣೇ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಣಃ ಸ್ಥಾನಮಾಪ್ನುಯಾತ್ ॥೧೭॥

ಗೃಹಸ್ಥಾಯಾನ್ನದಾನೇನ ಫಲಮಾಪ್ನೋತಿ ಮಾನವಃ ।
ಅನ್ನಮೇವಾಸ್ಯ ದಾತವ್ಯಂ ದತ್ವಾಽಽಪ್ನೋತಿ ಪರಾಂ ಗತಿಂ ॥೧೮॥

---

೧೪. ದರಿದ್ರನಾದ ಬ್ರಾಹ್ಮಣನಿಗೆ ಗೋಚರ್ಮದಷ್ಟು ಭೂಮಿಯನ್ನು ದಾನಮಾಡಿದರೂ ಪಾಪವೆಲ್ಲವೂ ನಾಶವಾಗುತ್ತದೆ.

೧೫. ಭೂಮಿದಾನಕ್ಕಿಂತ ಉತ್ತಮವಾದ ಬೇರೆ ದಾನವಿಲ್ಲ. ಅನ್ನದಾನವು ಅದಕ್ಕೆ ಸಮಾನವಾದುದು. ವಿದ್ಯಾದಾನವು ಅದಕ್ಕಿಂತ ಹೆಚ್ಚಿನದು.

೧೬. ಶಾಂತ, ಶುಚಿ, ಧರ್ಮಗಳಿಂದ ಕೂಡಿದ ಬ್ರಾಹ್ಮಣನಿಗೆ ವಿಧಿಪೂರ್ವಕವಾಗಿ ವಿದ್ಯೆಯನ್ನು ಕೊಟ್ಟರೆ ಅವನು ಬ್ರಹ್ಮಲೋಕದಲ್ಲಿ ಸುಖಿಸುತ್ತಾನೆ.

೧೭. ಪ್ರತಿದಿನವೂ ಶ್ರದ್ಧೆಯಿಂದ ಬಹ್ಮನಿಷ್ಠನಾದವನಿಗೆ ಸ್ವರ್ಣ (ಚಿನ್ನ) ದಾನಮಾಡಿದರೆ ಸರ್ವಪಾಪಗಳೂ ಹೋಗಿ ಉತ್ತಮವಾದ ಸ್ಥಾನವು ಲಭಿಸುತ್ತದೆ.

೧೮. ಗೃಹಸ್ಥನಿಗೆ ಅನ್ನದಾನಮಾಡಿದರೆ ಫಲವುಂಟು. ಗೃಹಸ್ಥನಿಗೆ ಅನ್ನವನ್ನೇಕೊಡಬೇಕು. ಅದರಿಂದಲೇ ಉತ್ತಮಗತಿಯು ಬರುತ್ತದೆ.

ವೈಶಾಖ್ಯಾಂ ಪೌರ್ಣಮಾಸ್ಯಾಂ ತು ಬ್ರಾಹ್ಮಣಾನ್ ಸಪ್ತ ಪಂಚ ವಾ ।
ಉಪೋಷ್ಯ ವಿಧಿನಾ ಶಾಂತಃ ಶುಚಿಃ ಪ್ರಯತಮಾನಸಃ ॥೧೯॥

ಪೂಜಯಿತ್ವಾ ತಿಲೈಃ ಕೃಷ್ಣೈಃ ಮಧುನಾ ಚ ವಿಶೇಷತಃ ।
ಪ್ರಿಯತಾಂ ಧರ್ಮರಾಜೇತಿ ಯದಾ ಮನಸಿ ವರ್ತತೇ ॥೨೦॥

ಯಾವಜ್ಜೀವಂ ತು ಯತ್ಪಾಪಂ ತತ್‌ಕ್ಷಣಾದೇವ ನಶ್ಯತಿ ॥
ಕೃಷ್ಣಾಜಿನೇ ತಿಲಾನ್ ಕೃತ್ವಾ ಹಿರಣ್ಯಂ ಮಧುಸರ್ಪಿಷೀ ।
ದದಾತಿ ಯಸ್ತು ವಿಪ್ರಾಯ ಸರ್ವಂ ತರತಿ ದುಷ್ಕೃತಂ ॥೨೧॥

ಘೃತಾನ್ನಮುದಕುಂಭಂ ಚ ವೈಶಾಖ್ಯಾಂ ತು ವಿಶೇಷತಃ ।
ನಿರ್ದಿಶ್ಯ ಧರ್ಮರಾಜಾಯ ವಿಪ್ರೇಭ್ಯೋ ಮುಚ್ಯತೇ ಭಯಾತ್ ॥

ಸುವರ್ಣತಿಲಯುಕ್ತೈಸ್ತು ಬ್ರಾಹ್ಮಣಾನ್ ಸಪ್ತ ಪಂಚ ವಾ ।
ತರ್ಪಯೇದುದಪಾತ್ರೈಸ್ತು ಬ್ರಹ್ಮಹತ್ಯಾಂ ವ್ಯಪೋಹತಿ ॥೨೩॥

ಮಾಘಮಾಸೇ ತಮಿಸ್ರೇ ತು ದ್ವಾದಶ್ಯಾಂ ಸಮುಪೋಷಿತಃ ।
ಶುಕ್ಲಾಂಬರಧರಃ ಕೃಷ್ಣೈಸ್ತಿಲೈರ್ಹುತ್ವಾ ಹುತಾಶನಂ ॥೨೪॥

---

೧೯–೨೦. ವೈಶಾಖಮಾಸದ ಹುಣ್ಣಿಮೆಯಲ್ಲಿ, ಏಳು ಅಥವಾ ಐದು ಜನ ಬ್ರಾಹ್ಮಣರನ್ನು ಕರೆದು ಶುಚಿಯಾಗಿ ಕರಿಎಳ್ಳು, ಮಧುಗಳಿಂದ ಪೂಜೆ ಮಾಡಿ ಧರ್ಮರಾಜನು ಪ್ರೀತನಾಗಲಿ ಎಂದು ದಾನಮಾಡಿದರೆ ಅಥವಾ ಅನ್ನಹಾಕಿದರೆ ಆ ಜನ್ಮದಲ್ಲಿ ಮಾಡಿದ ಪಾಪವೆಲ್ಲವೂ ನಾಶವಾಗುತ್ತದೆ.

೨೧. ಕೃಷ್ಣಾಜಿನದಲ್ಲಿ ಎಳ್ಳನ್ನು ಕಟ್ಟಿ, ಚಿನ್ನ, ಜೇನುತುಪ್ಪ, ತುಪ್ಪಗಳನ್ನು ಬ್ರಾಹ್ಮಣರಿಗೆ ಕೊಟ್ಟರೆ ಎಲ್ಲಾ ಪಾಪಗಳೂ ಹೋಗುತ್ತವೆ.

೨೨. ತುಪ್ಪದ ಅನ್ನ, ಉದಕುಂಭಗಳನ್ನು ವೈಶಾಖಮಾಸದಲ್ಲಿ ಧರ್ಮರಾಜನ ಹೆಸರು ಹೇಳಿ ಕೊಟ್ಟರೆ, ನರಕಭಯವು ತಪ್ಪುವುದು.

೨೩. ಎಳ್ಳಿನ ಜೊತೆಗೆ ಚಿನ್ನವನ್ನು ಸೇರಿಸಿ, ಉದಕಪಾತ್ರೆಯನ್ನು ಇಟ್ಟು, ಏಳು ಅಥವಾ ಐದು ಜನಗಳಿಗೆ, ತರ್ಪಣಮಾಡಿ ಅವನ್ನು ಕೊಟ್ಟರೆ ಬ್ರಹ್ಮಹತ್ಯೆ ಹೋಗುವುದು.

೨೪–೨೫. ಮಾಘಮಾಸದ ಕೃಷ್ಣಪಕ್ಷದ ದ್ವಾದಶೀ ದಿನ, ಉಪವಾಸಮಾಡಿ ಬಿಳಿಯ ಬಟ್ಟೆಯನ್ನುಟ್ಟು, ಕರಿಯ ಎಳ್ಳಿನಿಂದ ಹೋಮ

ಪ್ರದದ್ಯಾತ್ ಬ್ರಾಹ್ಮಣೇಭ್ಯಸ್ತು ತಿಲಾನೇವ ಸಮಾಹಿತಃ ।
ಜನ್ಮಪ್ರಭೃತಿ ಯತ್ಪಾಪಂ ಸರ್ವಂ ಹರತಿ ವೈ ದ್ವಿಜಃ ॥೨೫॥

ಅಮಾವಾಸ್ಯಾಮನುಪ್ರಾಪ್ಯ ಬ್ರಾಹ್ಮಣಾಯ ತಪಸ್ವಿನೇ ।
ಯತ್ಕಿಂಚಿದ್ದೇವದೇವೇಶಂ ದದ್ಯಾಚ್ಚೋದ್ದಿಶ್ಯ ಕೇಶವಂ ॥೨೬॥

ಪ್ರೀಯತಾಮೀಶ್ವರೋ ವಿಷ್ಣುಃ ಹೃಷೀಕೇಶಃ ಸನಾತನಃ ।
ಸಪ್ತಜನ್ಮಕೃತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥೨೭॥

ಯಸ್ತು ಕೃಷ್ಣಚತುರ್ದಶ್ಯಾಂ ಸ್ನಾತ್ವಾ ದೇವಂ ಪಿನಾಕಿನಂ ।
ಆರಾಧಯೇದ್ದ್ವಿಜಮುಖೇ ನ ತಸ್ಯಾಸ್ತಿ ಪುನರ್ಭವಃ ॥೨೮॥

ಕೃಷ್ಣಾಷ್ಟಮ್ಯಾಂ ವಿಶೇಷೇಣ ಧಾರ್ಮಿಕಾಯ ದ್ವಿಜಾತಯೇ ।
ಸ್ನಾತ್ವಾಽಭ್ಯರ್ಚ್ಯ ಯಥಾನ್ಯಾಯಂ ಪಾದಪ್ರಕ್ಷಾಳನಾದಿಭಿಃ ॥೨೯॥

ಪ್ರೀಯತಾಂ ಮೇ ಮಹಾದೇವೋ ದದ್ಯಾದ್ದ್ರವ್ಯಂ ಸ್ವಕೀಯಕಂ ।
ಸ ಸರ್ವಪಾಪವನಿರ್ಮುಕ್ತಃ ಪ್ರಾಪ್ನೋತಿ ಪರಮಾಂ ಗತಿಂ ॥೩೦॥

---

ಮಾಡಿ ಅಂಥಹ ಕರೀ ಎಳ್ಳನ್ನೇ ಬ್ರಾಹ್ಮಣರಿಗೂ ಕೊಟ್ಟರೆ ಎಲ್ಲಾ ಪಾಪವೂ ಹೋಗುತ್ತದೆ.

೨೬-೨೭. ಅಮಾವಾಸ್ಯೆಯದಿನ ಯೋಗ್ಯನಾದ ಬ್ರಾಹ್ಮಣನಿಗೆ ದೇವರ ಹೆಸರನ್ನುದ್ದೇಶಿಸಿ ಅವನಿಗೆ ಪ್ರೀತಿಯಾಗಲೆಂದು ಆ ಎಳ್ಳನ್ನು ಕೊಟ್ಟರೆ ಏಳು ಜನ್ಮದಲ್ಲಿಮಾಡಿದ ಪಾಪಗಳು ತೊಲಗುತ್ತವೆ.

೨೮. ಕೃಷ್ಣ ಚತುರ್ದಶಿಯದಿನ ಶಿವನನ್ನು ಆರಾಧಿಸಿ ಬಾಹ್ಮಣನನ್ನು ಕರೆದು ಅವನನ್ನು ಈಶ್ವರನೆಂದು ಭಾವಿಸಿ ತೃಪ್ತಿಪಡಿಸಿದರೆ ಪುನರ್ಜನ್ಮವಿಲ್ಲ.

೨೯-೩೦. ಕೃಷ್ಣಾಷ್ಟಮಿಯ ದಿನ ಬ್ರಾಹ್ಮಣನಿಗೆ ಕೈಕಾಲು ತೊಳೆದು ಪೂಜೆಮಾಡಿ ಮಹಾದೇವನಿಗೆ ಪ್ರೀತಿಯಾಗಲೆಂದು ತನ್ನ ದ್ರವ್ಯವನ್ನು ಕೊಟ್ಟರೆ ಸರ್ವಪಾಪಗಳೂ ಹೋಗಿ ಉತ್ತಮಗತಿಯನ್ನು ಹೊಂದುತ್ತಾನೆ.

ದ್ವಿಜೈಃ ಕೃಷ್ಣಚತುರ್ದಶ್ಯಾಂ ಕೃಷ್ಣಾಷ್ಟಮ್ಯಾಂ ವಿಶೇಷತಃ ।
ಅಮಾವಾಸ್ಯಾಯಾಂ ಭಕ್ತ್ಯೈಸ್ತು ಪೂಜನೀಯಸ್ತ್ರಿಲೋಚನಃ ॥೩೧॥

ಏಕಾದಶ್ಯಾಂ ನಿರಾಹಾರೋ ದ್ವಾದಶ್ಯಾಂ ಪುರುಷೋತ್ತಮಂ ।
ಅರ್ಚಯೇದ್ಬ್ರಾಹ್ಮಣಮುಖೇ ಸ ಗಚ್ಛೇತ್ಪರಮಂ ಪದಂ ॥೩೨॥

ಏಷಾ ತಿಥಿರ್ವೈಷ್ಣವೀ ಸ್ಯಾತ್ ದ್ವಾದಶೀ ಶುಕ್ಲಪಕ್ಷಕಃ ।
ತಸ್ಯಾಮಾರಾಧಯೇದ್ದೇವಂ ಪ್ರಯತ್ನೇನ ಜನಾರ್ದನಂ ॥೩೩॥

ಯತ್ಕಿಂಚಿದ್ದೇವಮೀಶಾನಮುದ್ದಿಶ್ಯ ಬ್ರಾಹ್ಮಣೇ ಶುಚೌ ।
ದೀಯತೇ ವಿಷ್ಣುಮೇವಾಪಿ ತದನಂತಫಲಂ ಸ್ಮೃತಂ ॥೩೪॥

ಯೋ ಹಿ ಯಾಂ ದೇವತಾಮಿಚ್ಛೇತ್ ಸಮಾರಾಧಯಿತುಂ ನರಃ ।
ಬ್ರಾಹ್ಮಣಾನ್ ಪೂಜಯೇದ್ಯತ್ನಾತ್ ಸ ತಸ್ಯಾಸ್ತೋಷಯೇತ್ತತಃ ॥

---

೩೧. ಕೃಷ್ಣ ಚತುರ್ದಶೀ, ಕೃಷ್ಣಾಷ್ಟಮೀ, ಅಮಾವಾಸ್ಯೆಗಳಲ್ಲಿ ಈಶ್ವರನನ್ನು ಭಕ್ತಿಯಿಂದ ಪೂಜಿಸಬೇಕು.

೩೨. ಏಕಾದಶಿಯಲ್ಲಿ ಉಪವಾಸಮಾಡಿ ದ್ವಾದಶಿಯದಿನ, ವಿಷ್ಣುವನ್ನು ಪೂಜಿಸಿದರೆ ಅವನು ಉತ್ತಮಲೋಕವನ್ನು ಹೊಂದುತ್ತಾನೆ.

೩೩. ಶುಕ್ಲಪಕ್ಷದ ತಿಥಿಯು ವೈಷ್ಣವತಿಥಿ. ಆದ್ದರಿಂದ ಆ ದಿನ ವಿಷ್ಣುವನ್ನು ಪೂಜಿಸಬೇಕು.

೩೪. ವಿಷ್ಣು ಮಹೇಶ್ವರರನ್ನುದ್ದೇಶಿಸಿ ಬ್ರಾಹ್ಮಣನಿಗೇಕೊಟ್ಟ ದಾನವು ಅನಂತಫಲಗಳನ್ನು ಕೊಡುತ್ತದೆ.

೩೫. ಯಾವನು ಯಾವ ದೇವರನ್ನು ತೃಪ್ತಿಪಡಿಸಬೇಕೆಂದಿರುವನೋ ಅವನು ಬ್ರಾಹ್ಮಣರನ್ನು ಆ ದೇವತೆಯನ್ನುದ್ಧೇಶಿಸಿ ಪೂಜಿಸಿದರೆ ಆ ದೇವತೆ ತೃಪ್ತಿಹೊಂದುತ್ತದೆ.

ದ್ವಿಜಾನಾಂ ವಪುರಾಸ್ಥಾಯ ನಿತ್ಯಂ ತಿಷ್ಠಂತಿ ದೇವತಾಃ ।
ಪೂಜ್ಯಂತೇ ಬ್ರಾಹ್ಮಣಾಲಾಭೇ ಪ್ರತಿಮಾದಿಷು ತೈಃ ಕ್ವಚಿತ್ ॥೩೬॥

ಪ್ರತಿಮಾದಿಷು ಯತ್ನೇನ ತಸ್ಮಾತ್ಫಲಮಭೀಪ್ಸಯಾ ।
ದ್ವಿಜೇಷು ದೇವತಾ ನಿತ್ಯಂ ಪೂಜನೀಯಾ ವಿಶೇಷತಃ ॥೩೭॥

ವಿಭೂತಿಕಾಮಃ ಸತತಂ ಪೂಜಯೇದ್ಧಿ ಪುರಂದರಂ ।
ಬ್ರಹ್ಮವರ್ಚಸಕಾಮಸ್ತು ಬ್ರಹ್ಮಾಣಂ ಜ್ಞಾನಕಾಮುಕಃ ॥೩೮॥

ಆರೋಗ್ಯಕಾಮೋಽಥ ರವಿಂ ಧನಕಾಮೋ ಹುತಾಶನಂ ।
ಕರ್ಮಣಾಂ ಸಿದ್ಧಿಕಾಮಾಸ್ತು ಪೂಜಯೇದ್ವೈ ವಿನಾಯಕಂ ॥೩೯॥

ಭೋಗಕಾಮಾಸ್ತು ಶಶಿನಂ ಬಲಕಾಮಃ ಸಮೀರಣಂ ।
ಮುಮುಕ್ಷುಃ ಸರ್ವ ಸಂಸಾರಾತ್ ಪ್ರಯತ್ನೇನಾರ್ಚಯೇದ್ಧರಿಂ ॥
ಯಸ್ತು ಯೋಗಂ ತಥಾ ಮೋಕ್ಷಮನ್ವಿಚ್ಛೇತ್ ಜ್ಞಾನಮೈಶ್ವರಂ ।
ಅರ್ಚಯೇತ ವಿರೂಪಾಕ್ಷಂ ಪ್ರಯತ್ನೇನ ಸುರೇಶ್ವರಂ ॥೪೧॥

---

೩೬. ದೇವತೆಗಳು ಬ್ರಾಹ್ಮಣರ ದೇಹವನ್ನು ಹೊಂದಿರುತ್ತಾರೆ. ಆದ್ದರಿಂದ ಅವರನ್ನು ಪೂಜಿಸಬೇಕು. ಅವರು ಸಿಕ್ಕದಿದ್ದರೆ ಪ್ರತಿಮೆಗಳನ್ನು ಪೂಜಿಸಬೇಕು.

೩೭. ಪ್ರತಿಮೆಗಳಲ್ಲಿ ದೇವತೆಗಳಿದ್ದರೂ ಬ್ರಾಹ್ಮಣರಲ್ಲಿಯೇ ಹೆಚ್ಚಾಗಿ ಪೂಜೆಮಾಡಿದರೆ ಫಲವುಂಟು.

೩೮–೩೯. ಐಶ್ವರ್ಯಬೇಕಾದರೆ ಇಂದ್ರನನ್ನೂ, ಬ್ರಹ್ಮವರ್ಚಸ್ಸು ಜ್ಞಾನಗಳು ಬೇಕಾದರೆ ಬ್ರಹ್ಮನನ್ನೂ, ಆರೋಗ್ಯ ಬೇಕಾದರೆ ಸೂರ್ಯನನ್ನೂ, ಧನಬೇಕಾದರೆ ಅಗ್ನಿಯನ್ನೂ, ಕರ್ಮಗಳ ಸಿದ್ಧಿಯಾಗಬೇಕಾದರೆ ವಿನಾಯಕನನ್ನೂ ಪೂಜಿಸಬೇಕು.

೪೦. ಭೋಗಬೇಕಾದವನು ಚಂದ್ರನನ್ನೂ, ಬಲಬೇಕಾದವನು ವಾಯುವನ್ನೂ, ಮೋಕ್ಷಬೇಕಾದವನು ಶ್ರೀ ಹರಿಯನ್ನೂ ಪೂಜಿಸಬೇಕು.

೪೧. ಯೋಗ, ಮೋಕ್ಷ, ಜ್ಞಾನಗಳು ಬೇಕಾದರೆ ಸರ್ವೇಶ್ವರನಾದ ವಿರೂಪಾಕ್ಷನನ್ನು (ಶಿವನನ್ನು) ಪೂಜಿಸಬೇಕು.

ಯೇ ವಾಂಛಂತಿ ಮಹಾಭೋಗಾನ್ ಜ್ಞಾನಾನಿ ಚ ಮಹೇಶ್ವರಂ ।
ತೇ ಪೂಜಯಂತಿ ಭೂತೇಶಂ ಕೇಶವಂ ಚಾಪಿ ಭೋಗಿನಃ ॥೪೨॥

ವಾರಿದಸ್ತೃಪ್ತಿಮಾಪ್ನೋತಿ ಜಲದಾನಂ ತತೋಽಧಿಕಂ ।
ತೈಲಪ್ರದಃ ಪ್ರಜಾಮಿಷ್ಟಾಂ ದೀಪದಶ್ಚಕ್ಷುರುತ್ತಮಂ ॥೪೩॥
ಭೂಮಿದಃ ಸರ್ವಮಾಪ್ನೋತಿ ದೀರ್ಘಮಾಯುರ್ಹಿರಣ್ಯದಃ ।
ಗೃಹದೋಽಗ್ರ್ಯಾಣಿ ವೇಶ್ಮಾನಿ ರೂಪ್ಯದೋ ರೂಪಮುತ್ತಮಂ ॥
ವಾಸೋದಶ್ಚಂದ್ರಸಾಲೋಕ್ಯಂ ಅಶ್ವದೋ ಯಾನಮುತ್ತಮಂ ।
ಅನ್ನದಾತಾ ಶ್ರಿಯಂ ಸ್ವೇಷ್ಟಾಂ ಗೋದೋ ಬ್ರಧ್ನಸ್ಯ ವಿಷ್ಟಪಂ ॥
ಯಾನಶಯ್ಯಾಪ್ರದೋ ಭಾರ್ಯಾಮೈಶ್ವರ್ಯಮಭಯಪ್ರದಃ ।
ಧಾನ್ಯದಃ ಶಾಶ್ವತಂ ಸೌಖ್ಯಂ ಬ್ರಹ್ಮದೋ ಬ್ರಹ್ಮ ಶಾಶ್ವತಂ ॥೪೬॥

---

೪೨. ಮಹಾಭೋಗ, ಜ್ಞಾನಗಳು ಬೇಕಾದರೆ ಈಶ್ವರನನ್ನು ಪೂಜಿಸಬೇಕು. ಕೇಶವನನ್ನು ಪೂಜಿಸಿದರೂ ಅವು ಸಿಕ್ಕುತ್ತವೆ.

೪೩. ನೀರನ್ನು ದಾನಮಾಡುವವನು ಅದಕ್ಕಿಂತ ಹೆಚ್ಚಾದ ನೀರನ್ನು ಹೊಂದುತ್ತಾನೆ. ತೈಲದಾನಮಾಡಿದರೆ ಮಕ್ಕಳಾಗುತ್ತವೆ. ದೀಪ ದಾನ ಮಾಡಿದರೆ ಒಳ್ಳೆಯ ಕಣ್ಣುಗಳು ಸಿಕ್ಕುತ್ತವೆ.

೪೪. ಭೂಮಿ ದಾನಮಾಡಿದರೆ ಎಲ್ಲವೂ ಸಿಕ್ಕುತ್ತವೆ. ಚಿನ್ನದ ದಾನ ಮಾಡಿದರೆ ದೀರ್ಘಾಯುಷ್ಯವೂ, ಗೃಹದಾನ ಮಾಡಿದರೆ ಮನೆಯೂ, ಬೆಳ್ಳಿದಾನ ಮಾಡಿದರೆ ರೂಪವೂ ಸಿಕ್ಕುತ್ತವೆ.

೪೫. ಬಟ್ಟೆದಾನ ಮಾಡುವವನು ಚಂದ್ರನ ಸಾಲೋಕ್ಯವನ್ನೂ ಕುದುರೆದಾನ ಮಾಡುವವನು ಉತ್ತಮವಾದ ಯಾನವನ್ನೂ ಅನ್ನದಾನ ಮಾಡುವವನು ಸಂಪತ್ತನ್ನೂ, ಗೋದಾನ ಮಾಡುವವನು ಸೂರ್ಯನ ಲೋಕವನ್ನು ಹೊಂದುತ್ತಾನೆ.

೪೬. ವಾಹನ, ಹಾಸಿಗೆಗಳನ್ನು ದಾನಮಾಡಿದರೆ ಒಳ್ಳೆಯ ಹೆಂಡತಿಯೂ, ಅಭಯದಾನ ಮಾಡಿದರೆ ಐಶ್ವರ್ಯವೂ, ಧಾನ್ಯ ದಾನಮಾಡಿದರೆ ಶಾಶ್ವತವಾದ ಸೌಖ್ಯವೂ, ಬ್ರಹ್ಮದಾನ ಮಾಡಿದರೆ ಶಾಶ್ವತವಾದ ಬ್ರಹ್ಮವೂ ಸಿಕ್ಕುತ್ತವೆ.

ಧಾನ್ಯಾನ್ಯಪಿ ಯಥಾಶಕ್ತ್ಯಾ ವಿಪ್ರೇಷು ಪ್ರತಿಪಾದಯೇತ್।
ವೇದವಿದ್ಯಾವಿಶಿಷ್ಟೇಷು ಪ್ರೇತ್ಯ ಸ್ವರ್ಗಂ ಸಮಶ್ನುತೇ ॥೪೭॥
ಗವಾಂ ಚಾನ್ನಪ್ರದಾನೇನ ಸರ್ವಪಾಪೈಃ ಪ್ರಮುಚ್ಯತೇ।
ಇಂಧನಾನಾಂ ಪ್ರದಾನೇನ ದೀಪ್ತಾಗ್ನಿರ್ಜಾಯತೇ ನರಃ ॥೪೮॥
ಫಲಮೂಲಾನಿ ಪಾನಾನಿ ಶಾಕಾನಿ ವಿವಿಧಾನಿ ಚ।
ಪ್ರದದ್ಯಾದ್ಬ್ರಾಹ್ಮಣೇಭ್ಯಸ್ತು ಮುದಾ ಯುಕ್ತಃ ಸದಾ ಭವೇತ್ ॥
ಔಷಧಂ ಸ್ನೇಹಮಾಹಾರಂ ರೋಗಿಣೋ ರೋಗಶಾಂತಯೇ।
ದದಾನೋ ರೋಗರಹಿತಃ ಸುಖೀ ದೀರ್ಘಾಯುರೇವ ಚ ॥೫೦॥
ಅಸಿಪತ್ರವನಂ ಮಾರ್ಗಂ ಕ್ಷುರಧಾರಾ ಸಮನ್ವಿತಂ।
ತೀಕ್ಷ್ಣತಾಪಂ ಚ ತರತಿ ಛತ್ರೋಪಾನತ್ಪ್ರದೋ ನರಃ ॥೫೧॥
ಯದ್ಯದಿಷ್ಟತಮಂ ಲೋಕೇ ಯಚ್ಚಾಪ್ಯಾಪೇಕ್ಷಿತಂ ಗೃಹೇ
ತತ್ತದ್ಗುಣವತೇ ದೇಯಂ ತದೇವಾಕ್ಷಯಮಿಚ್ಛತಾ ॥೫೨॥

---

೪೭. ಧಾನ್ಯಗಳನ್ನು ಯಥಾಶಕ್ತಿಯಾಗಿ ವೇದ ಓದಿರುವ ಬ್ರಾಹ್ಮಣರಿಗೆ ದಾನಮಾಡಿದರೆ ಸತ್ತನಂತರ ಸ್ವರ್ಗವು ಬರುತ್ತದೆ.

೪೮. ಗೋದಾನ, ಅನ್ನದಾನಗಳನ್ನು ಮಾಡಿದರೆ ಪಾಪವೆಲ್ಲವೂ ಹೋಗುತ್ತದೆ. ಸೌದೆಗಳನ್ನು ದಾನಮಾಡಿದರೆ ಜ್ವಲಿಸುವ ಅಗ್ನಿಯಾಗಿ ಹುಟ್ಟುತ್ತಾನೆ.

೪೯. ಹಣ್ಣು, ಗೆಡ್ಡೆಗೆಣಸು, ಸೊಪ್ಪು ಮುಂತಾದುವನ್ನು ಬ್ರಾಹ್ಮಣನಿಗೆ ಕೊಟ್ಟರೆ ಯಾವಾಗಲೂ ಸಂತೋಷಿಯಾಗಿರುತ್ತಾನೆ.

೫೦. ಔಷಧ, ಎಣ್ಣೆ, ಆಹಾರಗಳನ್ನು ರೋಗಿಗಳ ಉಪಯೋಗಕ್ಕೋಸ್ಕರ ಕೊಟ್ಟರೆ ದಾತೃವು ರೋಗರಹಿತನಾಗಿ, ಸುಖಿಯಾಗಿ ದೀರ್ಘಾಯುಸ್ಸುಳ್ಳವನಾಗಿರುತ್ತಾನೆ.

೫೧. ಛತ್ರಿ, ಕೆರಗಳನ್ನು ದಾನಮಾಡಿದರೆ, ಕತ್ತಿಯ ಅಲಗಿನಿಂದ ಕೂಡಿರುವ ಅಸಿಪತ್ರವನದ ಮಾರ್ಗವನ್ನು ದಾಟುತ್ತಾನೆ.

೫೨. ಮನುಷ್ಯನಿಗೆ ಯಾವುದು ಇಷ್ಟವೋ, ಯಾವುದು ಅಪೇಕ್ಷಿತವೋ ಅವನ್ನು ಉತ್ತಮವಾದ ಗುಣವುಳ್ಳವನಿಗೆ ಕೊಟ್ಟರೆ ಅದೇ ಅಕ್ಷಯವಾಗುತ್ತದೆ.

ಅಯನೇ ವಿಷುವೇ ಚೈವ ಗ್ರಹಣೇ ಚಂದ್ರಸೂರ್ಯಯೋಃ ।
ಸಂಕ್ರಾನ್ತ್ಯಾದಿಷು ಕಾಲೇಷು ದತ್ತಂ ಭವತಿ ಚಾಕ್ಷಯಂ ॥೫೩॥

ಪ್ರಯಾಗಾದಿಷು ತೀರ್ಥೇಷು ಪುಣ್ಯೇಷ್ವಾಯತನೇಷು ಚ ।
ದತ್ವಾ ಚಾಕ್ಷಯಮಾಪ್ನೋತಿ ನದೀಷು ಚ ವನೇಷು ಚ ॥೫೪॥

ದಾನಧರ್ಮಾತ್ಪರೋ ಧರ್ಮೋ ಭೂತಾನಾಂ ನೇಹವಿದ್ಯತೇ ।
ತಸ್ಮಾದ್ವಿಪ್ರಾಯ ದಾತವ್ಯಂ ಶ್ರೋತ್ರಿಯಾಯ ದ್ವಿಜಾತಿಭಿಃ ॥೫೫॥

ಸ್ವರ್ಗಾಯ ಭೂತಿಕಾಮೇನ ತಥಾ ಪಾಪೋಪಶಾಂತಯೇ ।
ಮುಮುಕ್ಷುಣಾ ತು ದಾತವ್ಯಂ ಬ್ರಾಹ್ಮಣೇಭ್ಯಸ್ತಥಾಽನ್ವಹಂ ॥೫೬॥

ದೀಯಮಾನಂ ತು ಯೋ ಮೋಹಾದ್ಗೋವಿಪ್ರಾಗ್ನಿಸುರೇಷು ಚ ।
ನಿವಾರಯತಿ ಪಾಪಾತ್ಮಾ ತಿರ್ಯಗ್ಯೋನಿಂ ವ್ರಜೇತ ಸಃ ॥೫೭॥

---

೫೩. ಉತ್ತರಾಯಣ, ದಕ್ಷಿಣಾಯಣ, ಪುಣ್ಯಕಾಲಗಳಲ್ಲಿಯೂ, ವಿಷುವತ್ಪುಣ್ಯಕಾಲದಲ್ಲಿ, ಚಂದ್ರಸೂರ್ಯರ ಗ್ರಹಣದಲ್ಲಿ, ಸಂಕ್ರಾಂತಿಗಳಲ್ಲಿ ದಾನಮಾಡಿದುದು ಅಕ್ಷಯವಾಗುತ್ತದೆ.

೫೪. ಪ್ರಯಾಗ ಮುಂತಾದ ತೀರ್ಥ, ಪುಣ್ಯಪ್ರದವಾದ ಊರುಗಳು, ನದಿಗಳು, ವನಗಳಲ್ಲಿ ಕೊಟ್ಟುದುದು ಅಕ್ಷಯವಾಗುತ್ತದೆ.

೫೫. ದಾನಧರ್ಮಕ್ಕಿಂತ ಮತ್ತೊಂದು ಧರ್ಮವು ಈ ಲೋಕದಲ್ಲಿಲ್ಲ. ಆದುದರಿಂದ ಶ್ರೋತ್ರಿಯನಾದವನಿಗೆ ಬಾಹ್ರಣರು ದಾನ ಮಾಡಬೇಕು.

೫೬. ಐಶ್ವರ್ಯವನ್ನು ಅಪೇಕ್ಷಿಸುವವನಿಂದ ಸ್ವರ್ಗಕ್ಕೋಸ್ಕರವೂ ಪಾಪದಶಾಂತಿಗೂ, ಮೋಕ್ಷಹೊಂದುವುದಕ್ಕೂ ಬ್ರಾಹ್ಮಣರಿಗೆ ದಾನ ಮಾಡಬೇಕು.

೫೭. ಗೋವು, ಬ್ರಾಹ್ಮಣ, ಅಗ್ನಿ, ದೇವತೆಗಳ ವಿಷಯದಲ್ಲಿ ದಾನ ಮಾಡುತ್ತಿರುವುದನ್ನು ತಡೆದರೆ ನೀಚವಾದ ಜನ್ಮದಲ್ಲಿ ಹುಟ್ಟುತ್ತಾನೆ.

ಯಸ್ತು ದ್ರವ್ಯಾರ್ಜನಂ ಕೃತ್ವಾ ನಾರ್ಚಯೇದ್ಬ್ರಾಹ್ಮಣಾನ್ ಸುರಾನ್ ।
ಸರ್ವಸ್ವಮುಪಹೃತ್ಯೈನಂ ರಾಜಾ ರಾಷ್ಟ್ರಾತ್ಪ್ರವಾಸಯೇತ್ ॥೫೮॥

ಯಸ್ತು ದುರ್ಭಿಕ್ಷವೇಲಾಯಾಮನ್ನಾದ್ಯಂ ನ ಪ್ರಯಚ್ಛತಿ ।
ಮ್ರಿಯಮಾಣೇಷು ವಿಪ್ರೇಷು ಬ್ರಾಹ್ಮಣಃ ಸ ತು ಗರ್ಹಿತಃ ॥೫೯॥

ನ ತಸ್ಮಾತ್ಪ್ರತಿಗೃಹ್ಣೀಯುಃ ನ ವಸೇಯುಶ್ಚ ತೇನ ಹಿ ।
ಅಂಕಯಿತ್ವಾ ಸ್ವಕಾದ್ರಾಷ್ಟ್ರಾತ್ ರಾಜಾ ತಂ ವಿಪ್ರವಾಸಯೇತ್ ॥

ಪಶ್ಚಾತ್ಸದ್ಭ್ಯೋ ದದಾತೀಹ ಸ್ವದ್ರವ್ಯಂ ಧರ್ಮಸಾಧನಂ ।
ಸ ಪೂರ್ವಾಭ್ಯಧಿಕಃ ಪಾಪೀ ನರಕೇ ಪಚ್ಯತೇ ನರಃ ॥೬೧॥

ಸ್ವಾಧ್ಯಾಯವಂತೋ ಯೇ ವಿಪ್ರಾ ವಿದ್ಯಾವಂತೋ ಜಿತೇಂದ್ರಿಯಾಃ ।
ಸತ್ಯಸಂಯಮಸಂಯುಕ್ತಾಸ್ತೇಭ್ಯೋ ದದ್ಯಾದ್ದ್ವಿಜೋತ್ತಮಾಃ ॥

---

೫೮. ಹಣವನ್ನು ಸಂಪಾದಿಸಿ ಯಾವನು ದೇವರನ್ನೂ ಬ್ರಾಹ್ಮಣರನ್ನೂ ಪೂಜಿಸುವುದಿಲ್ಲವೋ ಅವನ ಸ್ವತ್ತನ್ನೆಲ್ಲಾ ಕಿತ್ತುಕೊಂಡು ರಾಜನು ಅವನನ್ನು ದೇಶದಿಂದ ಓಡಿಸಬೇಕು.

೫೯. ದುರ್ಭಿಕ್ಷ, ಕಷ್ಟಕಾಲಗಳಲ್ಲಿ ಯಾವನು ಅನ್ನಾದಿಗಳನ್ನು ಹಾಕುವುದಿಲ್ಲವೋ, ಬ್ರಾಹ್ಮಣರು ದುಃಸ್ಥಿತಿಯಲ್ಲಿರುವಾಗ ಅನ್ನಹಾಕುವುದಿಲ್ಲವೋ ಅವನು ನಿಂದಿತನು.

೬೦. ಅವನಿಂದ ದಾನ ತೆಗೆದುಕೊಳ್ಳಬಾರದು. ಅವನೊಡನೆ ವಾಸ ಮಾಡಬಾರದು. ರಾಜನು ಅವನಿಗೆ ಗುರುತುಮಾಡಿ ರಾಜ್ಯದಿಂದ ಓಡಿಸಬೇಕು.

೬೧. ಹಾಗೆ ರಾಜನು ರಾಜ್ಯದಿಂದಲೂ ಓಡಿಸಿದ ಮೇಲೆ ತನ್ನ ಹಣವನ್ನು ದಾನಮಾಡದಿದ್ದರೆ ಅದು ಹಿಂದಿನ ದೋಷಕ್ಕಿಂತಲೂ ಹೆಚ್ಚಿನದು. ನರಕ ಬರುತ್ತದೆ.

೬೨. ವೇದಾಧ್ಯಯನಸಂಪನ್ನರಾಗಿಯೂ, ವಿದ್ಯಾವಂತರಾಗಿಯೂ, ಜಿತೇಂದ್ರಿಯರಾಗಿಯೂ, ಸತ್ಯವಂತರಾಗಿಯೂ, ಇರುವವರಿಗೆ ದಾನ ಮಾಡಬೇಕು.

ಪ್ರಭುಕ್ತಮಪಿ ವಿದ್ವಾಂಸಂ ಧಾರ್ಮಿಕಂ ಭೋಜಯೇದ್ದ್ವಿಜಂ ।
ನ ಚ ಮೂರ್ಖಮವೃತ್ತಸ್ಥಂ ದಶರಾತ್ರಮುಪೋಷಿತಂ ॥೬೩॥

ಸನ್ನಿಕೃಷ್ಟಮತಿಕ್ರಮ್ಯ ಶ್ರೋತ್ರಿಯಂ ಯಃ ಪ್ರಯಚ್ಛತಿ ।
ಸ ತೇನ ಕರ್ಮಣಾ ಪಾಪೀ ದಹ್ಯತ್ಯಾಸಪ್ತಮಂ ಕುಲಂ ॥೬೪॥

ಯದಿ ಸ್ಯಾದಧಿಕೋ ವಿಪ್ರಃ ಶೀಲವಿದ್ಯಾದಿಭಿಃ ಸ್ವಯಂ ।
ತಸ್ಮೈ ಯತ್ನೇನ ದಾತವ್ಯಮತಿಕ್ರಮ್ಯ ಚ ಸಂನಿಧಿಂ ॥೬೫॥

ಯೋಽರ್ಚಿತಂ ಪ್ರತಿ ಗೃಹ್ಣೀಯಾತ್ ದದ್ಯಾದರ್ಚಿತಮೇವ ಚ ।
ತಾವುಭೌ ಗಚ್ಛತಃ ಸ್ವರ್ಗಂ ನರಕಂ ತು ವಿಪರ್ಯಯೇ ॥೬೬॥

ನ ವಾರ್ಯಪಿ ಪ್ರಯಚ್ಛೇತ ನಾಸ್ತಿಕೇಽಹೈತುಕೇಪಿ ಚ ।
ನ ಪಾಷಂಡೇಷು ಸರ್ವೇಷು ನಾವೇದವಿದಿ ಧರ್ಮವಿತ್ ॥೬೭॥

---

೬೩. ವಿದ್ವಾಂಸನೂ, ಧಾರ್ಮಿಕನೂ, ಆದವನಿಗೆ ಎಷ್ಟು ಕೊಟ್ಟಿದ್ದರೂ ಪುನಃ ಕೊಡುತ್ತಿರಬೇಕು. ಮೂರ್ಖನೂ, ತನ್ನ ವೃತ್ತಿಯನ್ನು ಬಿಟ್ಟವನೂ ಆದವನಿಗೆ ಹತ್ತುದಿವಸ ಉಪವಾಸವಿದ್ದರೂ ಕೊಡಬಾರದು.

೬೪. ಹತ್ತಿರದಲ್ಲಿ ಶ್ರೋತ್ರಿಯನಾಗಿರುವ ಬ್ರಾಹ್ಮಣನಿರುವಾಗ ಅವನನ್ನು ಬಿಟ್ಟು ಮತ್ತೊಬ್ಬನಿಗೆ ಕೊಟ್ಟರೆ ಆ ಪಾಪದಿಂದ ತನ್ನ ಕುಲವನ್ನು ಬಂಧಿಸುತ್ತಾನೆ.

೬೫. ದೂರದವನು ಶೀಲವಿದ್ಯಾದಿಗಳಿಂದ ಅಧಿಕನಾಗಿದ್ದರೆ ಆಗ್ಗೆ ಮೀರಿ ಕೊಡಬಹುದು.

೬೬. ದಾನಕೊಟ್ಟುದನ್ನು ತೆಗೆದುಕೊಳ್ಳಬೇಕು. ಕೊಡುವವನು ಕೊಡಬೇಕು. ಹಾಗಾದರೆ ಇಬ್ಬರೂ ಸ್ವರ್ಗಕ್ಕೆ ಹೋಗುತ್ತಾರೆ. ಅವನು ತೆಗೆದುಕೊಳ್ಳದಿದ್ದರೂ, ಇವನು ಕೊಡದಿದ್ದರೂ, ಇಬ್ಬರೂ ನರಕವನ್ನು ಹೊಂದುತ್ತಾರೆ.

೬೭. ನಾಸ್ತಿಕ ಹೇತುವಾದವನ್ನು ತಿಳಿಯದವನು, ಪಾಷಂಡ, ವೇದ ಧರ್ಮಗಳನ್ನು ತಿಳಿಯದವನು, ಇಂಥವರಿಗೆ ನೀರನ್ನೂ ಕೂಡ ಕೊಡಬಾರದು.

ರೂಪ್ಯಂ ಚೈವ ಹಿರಣ್ಯಂ ಚ ಗಾಮಶ್ವಂ ಪೃಥಿವೀಂ ತಿಲಾನ್ ॥
ಅವಿದ್ವಾನ್ ಪ್ರತಿಗೃಹ್ಣೀಯಾತ್ ಭಸ್ಮೀ ಭವತಿ ಕಾಷ್ಠವತ್ ॥೬೮॥
ದ್ವಿಜಾತಿಭ್ಯೋ ಧನಂ ಲಿಪ್ಸೇತ್ ಪ್ರಶಸ್ತೇಭ್ಯೋ ದ್ವಿಜೋತ್ತಮಾಃ ।
ಅಪಿ ರಾಜನ್ಯ ವೈಶ್ಯಾಭ್ಯಾಂ ನ ತು ಶೂದ್ರಾತ್ಕಥಂ ಚನ ॥೬೯॥
ವೃತ್ತಿಸಂಕೋಚಮನ್ವಿಚ್ಛೇತ್ ನೇಹೇತ ಧನವಿಸ್ತರಂ ।
ಧನಲೋಭೇ ಪ್ರಸಕ್ತಸ್ತು ಬ್ರಾಹ್ಮಣ್ಯಾದೇವ ಹೀಯತೇ ॥೭೦॥
ವೇದಾನಧೀತ್ಯ ಸಕಲಾನ್ ಯಜ್ಞಾಂಶ್ಚಾವಾಪ್ಯ ಸರ್ವಶಃ ।
ನ ತಾಂ ಗತಿಮವಾಪ್ನೋತಿ ಸಂತೋಷಾದ್ಯಾಮವಾಪ್ನುಯಾತ್ ॥
ಪ್ರತಿಗ್ರಹರುಚಿರ್ನ ಸ್ಯಾತ್ ಶೂದ್ರಾನ್ನ ತು ಸಮಾಹರೇತ್ ।
ಸ್ಥಿತ್ಯರ್ಥಾದಧಿಕಂ ಗೃಹ್ಣನ್ ಬ್ರಾಹ್ಮಣೋ ಯಾತ್ಯಧೋಗತಿಂ ॥೭೨॥

---

೬೮. ಬೆಳ್ಳಿ, ಚಿನ್ನ, ಗೋವು, ಕುದುರೆ, ಭೂಮಿ, ಎಳ್ಳುಗಳನ್ನು ವಿದ್ವಾಂಸನಲ್ಲದವನು ದಾನ ತೆಗೆದುಕೊಂಡರೆ ಅದು ಭಸ್ಮವಾಗಿ ದಾನ ಫಲವಿಲ್ಲದೆ ಹೋಗುತ್ತದೆ.

೬೯. ದಾನತೆಗೆದುಕೊಳ್ಳಬೇಕಾದರೆ ಬ್ರಾಹ್ಮಣರಿಂದಲೇ ತೆಗೆದು ಕೊಳ್ಳಬೇಕು. ಅದಾಗದಿದ್ದರೂ ಕ್ಷತ್ರಿಯ, ವೈಶ್ಯರಿಂದ ಬೇಕಾದರೂ ತೆಗೆದುಕೊಳ್ಳಬಹುದು. ಶೂದ್ರನಿಂದ ತೆಗೆದುಕೊಳ್ಳಲೇ ಬಾರದು.

೭೦. ಪ್ರತಿಗ್ರಹ ವೃತ್ತಿಯನ್ನು ಕಡಿಮೆಮಾಡಿಕೊಳ್ಳಬೇಕು. ಹೆಚ್ಚು ಧನವನ್ನು ಕೂಡಿಹಾಕಬಾರದು. ಧನದ ಆಸೆಯು ಬ್ರಾಹ್ಮಣಿಕೆಯನ್ನೇ ಹಾಳುಮಾಡುತ್ತದೆ.

೭೧. ಸಕಲ ವೇದಗಳನ್ನೂ ಓದಿ ಯಜ್ಞಯಾಗಾದಿಗಳ್ನು ಮಾಡಿ ಯಾವ ಗತಿಯನ್ನು ಹೊಂದುತ್ತಾನೋ, ಆ ಗತಿಯು ಮನುಷ್ಯನು ಸಂತೋಷದಿಂದ ಇರುವ ಗತಿಗೆ ಸಮತೂಗಲಾರದು.

೭೨. ದಾನತೆಗೆದುಕೊಳ್ಳುವುದರಲ್ಲಿ ಆಸೆಮಾಡಬಾರದು. ಶೂದ್ರನಿಂದ ತೆಗೆದುಕೊಳ್ಳಲೇ ಬಾರದು. ಜೀವನಕ್ಕಿಂತ ಹೆಚ್ಚಾಗಿ ತೆಗೆದುಕೊಂಡರೆ ನರಕಬರುತ್ತದೆ.

ಯಸ್ತು ಯಾತಿ ನ ಸಂತೋಷಂ ನ ಸ ಸ್ವರ್ಗಸ್ಯ ಭಾಜನಂ ।
ಉದ್ವೇಜಯತಿ ಭೂತಾನಿ ಯಥಾ ಚೌರಸ್ತಥೈವ ಸಃ ॥೭೩॥

ಗುರೂನ್ ಭೃತ್ಯಾಂಶ್ಚೋಜ್ಜಿಹೀರ್ಷುಃ ತರ್ಪಯನ್ದೇವತಾತಿಥೀನ್ ।
ಸರ್ವತಃ ಪ್ರತಿಗೃಹ್ಣೀಯಾನ್ನ ತು ತೃಪ್ಯೇತ್ಸ್ವಯಂ ತತಃ ॥೭೪॥

ಏವಂ ಗೃಹಸ್ಥೋ ಯುಕ್ತಾತ್ಮಾ ದೇವತಾತಿಥಿಪೂಜಕಃ ।
ವರ್ತಮಾನಃ ಸಂಯತಾತ್ಮಾ ಯಾತಿ ತತ್ಪರಮಂ ಪದಂ ॥೭೫॥

ಪುತ್ರೇಷು ಭಾರ್ಯಾಂ ನಿಕ್ಷಿಪ್ಯ ಗತ್ವಾಽರಣ್ಯಂ ತು ತತ್ತ್ವವಿತ್ ।
ಏಕಾಕೀ ವಿಚರೇನ್ನಿತ್ಯಮುದಾಸೀನಃ ಸಮಾಹಿತಃ ॥೭೬॥

ಏಷ ವಃ ಕಥಿತೋ ಧರ್ಮೋ ಗೃಹಸ್ಥಾನಾಂ ದ್ವಿಜೋತ್ತಮಾಃ ।
ಜ್ಞಾತ್ವಾ ತು ತಿಷ್ಠೇನ್ನಿಯತಂ ತಥಾಽನುಷ್ಠಾಪಯೇದ್ದ್ವಿಜಾನ್ ॥೭೭॥

---

೭೩. ಯಾವನು ಸಂತೋಷದಿಂದಿರುವುದಿಲ್ಲವೋ ಅವನು ಸ್ವರ್ಗವನ್ನು ಹೊಂದುವುದಿಲ್ಲ. ಪ್ರಾಣಿಗಳನ್ನು ಕೋಪಗೊಳಿಸುವವನು ಖಂಡಿತವಾಗಿಯೂ ಕಳ್ಳನಾಗುತ್ತಾನೆ.

೭೪. ಹಿರಿಯರನ್ನು, ಆಳುಗಳನ್ನು ಅನುಕೂಲಸ್ಥಿತಿಯಲ್ಲಿಡುತ್ತಾ, ದೇವತೆಗಳು, ಅತಿಥಿಗಳನ್ನು ತೃಪ್ತಿಪಡಿಸುತ್ತಾ ಇರುವವನು ಎಲ್ಲರಲ್ಲೂ ದಾನತೆಗೆದುಕೊಳ್ಳಬಹುದು. ತೃಪ್ತಿಪಡಿಸುವಿಕೆಯಿಂದ ತಾನು ತೃಪ್ತನಾಗಬಾರದು.

೭೫. ಈ ರೀತಿ ಗೃಹಸ್ಥನು ಜಿತೇಂದ್ರಿಯನಾಗಿ, ದೇವತೆ, ಅತಿಥಿ, ಇವರುಗಳ ಪೂಜಕನಾಗಿದ್ದುಕೊಂಡರೆ, ಅವನು ಪರಮಪದವನ್ನು ಹೊಂದುತ್ತಾನೆ.

೭೬. ಯೋಗ್ಯನಾದವನು ಹೆಂಡತಿಯನ್ನು ಮಕ್ಕಳವಶಕ್ಕೆ ಬಿಟ್ಟು ಒಬ್ಬಂಟಿಗನಾಗಿ ಉದಾಸೀನನಾಗಿರಬೇಕು.

೭೭. ಗೃಹಸ್ಥನ ಈ ಧರ್ಮಗಳನ್ನು ನಿಮಗೆ ಹೇಳಿದ್ದೇನೆ. ಈ ಧರ್ಮಗಳನ್ನು ತಿಳಿದು ತಾನೂ ಆಚರಿಸುತ್ತಾ ಇತರ ಬ್ರಾಹ್ಮಣರೂ ಆಚರಿಸುವಂತೆ ಮಾಡಬೇಕು.

ಇತಿ ದೇವಮನಾದಿಮೇಕಮೀಶಂ
ಗೃಹಧರ್ಮೇಣ ಸಮರ್ಚಯೇದಜಸ್ರಂ।
ಸಮತೀತ್ಯ ಸ ಸರ್ವಭೂತಯೋನಿಂ
ಪ್ರಕೃತಿಂ ಯಾತಿ ಪರಂ ನ ಯಾತಿ ಜನ್ಮ ॥೭೮॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ
ಗೃಹಸ್ಥಧರ್ಮ ನಿರ್ಣಯೋನಾಮ ಸಪ್ತಪಂಚಾಶತ್ತಮೋಽಧ್ಯಾಯಃ

---

೭೮. ಗೃಹಸ್ಥನು ತನ್ನ ಧರ್ಮದಿಂದ ಅನಾದಿಯಾದ, ಆ ಈಶ್ವರನನ್ನು ಪೂಜಿಸುತ್ತಿದ್ದರೆ ಪುನರ್ಜನ್ಮವನ್ನು ದಾಟಿ ಪ್ರಕೃತಿಯಲ್ಲಿ ಐಕ್ಯನಾಗುತ್ತಾನೆ. ಪುನಃ ಎಂದೆಂದಿಗೂ ಜನ್ಮವಿಲ್ಲ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ ಆದಿಖಂಡದಲ್ಲಿ
ಗೃಹಸ್ಥಧರ್ಮ ವಿವರಣೆಯಲ್ಲಿ ಐವತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಅಷ್ಟಪಂಚಾಶತ್ತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಏವಂ ಗೃಹಾಶ್ರಮೇ ಸ್ಥಿತ್ವಾ ದ್ವಿತೀಯಂ ಭಾಗಮಾಯುಷಃ ।
ವಾನಪ್ರಸ್ಥಾಶ್ರಮಂ ಗಚ್ಛೇತ್ ಸದಾರಃ ಸಾಗ್ನಿರೇವ ಚ ॥ ೧ ॥

ನಿಕ್ಷಿಪ್ಯ ಭಾರ್ಯಾಂ ಪುತ್ರೇಷು ಗಚ್ಛೇದ್ವನಮಥಾಪಿ ವಾ ।
ದೃಷ್ಟ್ವಾಽಪತ್ಯಸ್ಯ ವಾಽಪತ್ಯಂ ಜರ್ಜರೀಕೃತವಿಗ್ರಹಃ ॥ ೨ ॥

ಶುಕ್ಲಪಕ್ಷಸ್ಯ ಪೂರ್ವಾಹ್ಣೇ ಪ್ರಶಸ್ತೇ ಚೋತ್ತರಾಯಣೇ ।
ಗತ್ವಾಽರಣ್ಯಂ ನಿಯಮವಾನ್ ತಪಃ ಕುರ್ಯಾತ್ಸಮಾಹಿತಃ ॥ ೩ ॥

---

### ಪದ್ಮಪುರಾಣದ ಆದಿಖಂಡದ ಐವತ್ತೆಂಟನೆಯ ಅಧ್ಯಾಯವು.

೧. ವ್ಯಾಸನು ಹೇಳುತ್ತಾನೆ: ಆಯುಸ್ಸಿನ ದ್ವಿತೀಯಭಾಗದಲ್ಲಿ ಹೀಗೆ ಗೃಹಸ್ಥಾಶ್ರಮವನ್ನು ಕಳೆದು, ಹೆಂಡತಿ, ಅಗ್ನಿಗಳೊಂದಿಗೆ ವಾನಪ್ರಸ್ಥಾಶ್ರಮವನ್ನು ಹೊಂದಬೇಕು.

೨–೩. ಅಥವಾ ಹೆಂಡತಿಯನ್ನು ಮಗನ ಅಧೀನಕ್ಕೆ ಬಿಟ್ಟು ಕಾಡಿಗೆ ಹೋಗಬೇಕು. ಅದೂ ಇಲ್ಲದಿದ್ದರೆ ಮಗನಿಗೆ ಮಕ್ಕಳಾಗುವ ಪರ್ಯಂತವೂ ಇದ್ದು ಶರೀರವು ಗಳಿತವಾದಮೇಲೆ ಉತ್ತರಾಯಣದ ಶುಕ್ಲಪಕ್ಷದ ಪೂರ್ವಾಹ್ಣದ ಒಳ್ಳೆಯದಿನದಲ್ಲಿ ಕಾಡಿಗೆಹೋಗಿ ಜಿತೇಂದ್ರಿಯನಾಗಿ ತಪಸ್ಸುಮಾಡಬೇಕು.

ಫಲಮೂಲಾನಿ ಪೂತಾನಿ ನಿತ್ಯಮಾಹಾರಮಾಹರೇತ್ ।
ಯದಾಹಾರೋ ಭವೇತ್ತೇನ ಪೂಜಯೇತ್ಪಿತೃದೇವತಾಃ ॥ ೪ ॥

ಪೂಜಯೇದತಿಥಿಂ ನಿತ್ಯಂ ಸ್ನಾತ್ವಾ ಚಾಭ್ಯರ್ಚಯೇತ್ಸುರಾನ್ ।
ಗೃಹಾದಾದಾಯ ಚಾಶ್ನೀಯಾದಷ್ಟೌ ಗ್ರಾಸಾನ್ ಸಮಾಹಿತಃ ॥ ೫ ॥

ಜಟಾಶ್ಚ ಬಿಭೃಯಾನ್ನಿತ್ಯಂ ನಖರೋಮಾಣಿ ನೋತ್ಸೃಜೇತ್ ।
ಸ್ವಾಧ್ಯಾಯಂ ಸರ್ವಥಾ ಕುರ್ಯಾತ್ ನಿಯಚ್ಛೇದ್ವಾಚಮನ್ಯತಃ ॥ ೬ ॥

ಅಗ್ನಿಹೋತ್ರಂ ತು ಜುಹುಯಾತ್ ಪಂಚಯಜ್ಞಾನ್ ಸಮಾಚರೇತ್ ।
ಉತ್ಪನ್ನೈರ್ವಿವಿಧೈಃ ಮೇಧ್ಯೈಃ ಶಾಕಮೂಲಫಲೇನ ವಾ ॥ ೭ ॥

ಚೀರವಾಸಾ ಭವೇನ್ನಿತ್ಯಂ ಸ್ನಾಯಾತ್ತ್ರಿಷವಣಂ ಶುಚಿಃ ।
ಸರ್ವಭೂತಾನುಕಂಪಶ್ಚ ಪ್ರತಿಗ್ರಹವಿವರ್ಜಿತಃ ॥ ೮ ॥

---

೪. ಪವಿತ್ರವಾದ ಗೆಡ್ಡೆಗೆಣಸುಗಳನ್ನು ಆಹಾರಕ್ಕೋಸ್ಕರ ತರಬೇಕು. ಅವನು ತಿನ್ನುವ ಆಹಾರದಿಂದ ಪಿತೃಗಳನ್ನೂ, ದೇವತೆಗಳನ್ನೂ, ಪೂಜಿಸಬೇಕು.

೫. ಅತಿಥಿಗಳನ್ನು ನಿತ್ಯವೂ ಪೂಜಿಸಬೇಕು. ಸ್ನಾನಮಾಡಿ ದೇವತೆಗಳನ್ನರ್ಚಿಸಬೇಕು. ಅದಿಲ್ಲದಿದ್ದರೆ ಮನೆಯಿಂದ ಎಂಟು ಗ್ರಾಸಕ್ಕೆ ಆಗುವ ಆಹಾರವನ್ನು ತಂದು ತಿನ್ನಬಹುದು.

೬. ಜಟೆಗಳನ್ನು ಧರಿಸಬೇಕು. ಉಗುರು ರೋಮಗಳನ್ನು ಕತ್ತರಿಸಬಾರದು. ವೇದವನ್ನು ಆವರ್ತಿಸುತ್ತಿರಬೇಕು. ಬೇರೆ ವಿಷಯದಲ್ಲಿ ಹೆಚ್ಚು ಮಾತಾಡಬಾರದು.

೭. ಅಗ್ನಿಹೋತ್ರವನ್ನು ಮಾಡುತ್ತ, ಪಂಚಯಜ್ಞಗಳನ್ನೂ ಮಾಡುತ್ತಿರಬೇಕು. ನಾನಾವಿಧವಾದ ಗೆಡ್ಡೆಗೆಣಸುಗಳಿಂದ ಮೇಲೆ ಹೇಳಿದುವನ್ನಾಚರಿಸಬೇಕು.

೮. ಯಾವಾಗಲೂ ನಾರುಬಟ್ಟೆಯನ್ನು ಹಾಕಿಕೊಂಡಿರಬೇಕು. ಮೂರು ಹೊತ್ತು ಸ್ನಾನ ಮಾಡುತ್ತಾ ಶುಚಿಯಾಗಿರಬೇಕು. ಸರ್ವಪ್ರಾಣಿಗಳಲ್ಲಿಯೂ ದಯೆ ಇರಬೇಕು. ದಾನವಿಮುಖನಾಗಿರಬೇಕು.

ದರ್ಶೇನ ಪೌರ್ಣಮಾಸೇನ ಯಜೇತ ನಿಯತಂ ದ್ವಿಜಃ ।
ಋತ್ವಿಷ್ಟ್ಯಾಗ್ರಯಣೇ ಚೈವ ಚಾತುರ್ಮಾಸ್ಯಾನಿ ಕಾರಯೇತ್॥ ೯ ॥
ಉತ್ತರಾಯಣಂ ಚ ಕ್ರಮಶೋ ದಕ್ಷಸ್ಯಾಯನಮೇವ ಚ ।
ವಾಸಂತಶಾರದೈರ್ಮೇಧ್ಯೈರುತ್ಪನ್ನೈಃ ಸ್ವಯಮಾಹೃತೈಃ ॥೧೦॥
ಪುರೋಡಾಶಾ ಚರೂಂಶ್ಚೈವ ವಿಧಿವನ್ನಿರ್ವಪೇತ್ ಪೃಥಕ್ ।
ದೇವತಾಭ್ಯಶ್ಚ ತದ್ಧುತ್ವಾ ವನ್ಯಂ ಮೇಧ್ಯತರಂ ಹವಿಃ ॥೧೧॥
ಶೇಷಂ ಸಮುಪಭುಂಜೀತ ಲವಣಂ ಚ ಸ್ವಯಂ ಕೃತಂ ।
ವರ್ಜಯೇನ್ಮದ್ಯಮಾಂಸಾನಿ ಭೌಮಾನಿ ಕರಕಾನಿ ಚ ॥೧೨॥
ಭೂಸ್ತೃಣಂ ಶಷ್ಪಕಂ ಚೈವ ಶ್ಲೇಷ್ಮಾತಕಫಲಾನಿ ಚ ।
ನ ಫಾಲಕೃಷ್ಟಮಶ್ನೀಯಾತ್ ಉತ್ಸೃಷ್ಟಮಪಿ ಕೇನಚಿತ್ ॥೧೩॥

---

೯. ಬ್ರಾಹ್ಮಣನು ದರ್ಶಪೂರ್ಣಮಾಸಗಳನ್ನು ಮಾಡುತ್ತಿರಬೇಕು. ಋತುಯಜ್ಞ, ಇಷ್ಟಿ, ಆಗ್ರಹಾಯಣಗಳನ್ನು ಮಾಡುತ್ತ ಚಾತುರ್ಮಾಸ್ಯ ವ್ರತವನ್ನುಮಾಡಬೇಕು.

೧೦. ಚಾಂದ್ರಾಯಣಾದಿಗಳನ್ನು ಮಾಡುತ್ತಾ ವಸಂತ, ಶರತ್, ಗಳಲ್ಲಿ ಹುಟ್ಟಿದ ಪವಿತ್ರವಾದ ತಾನಾಗಿಯೇತಂದ ಆಹಾರವನ್ನು ಉಪಯೋಗಿಸುತ್ತಿರಬೇಕು.

೧೧. ಹಾಗೆ ತಾನು ತಂದ ಪದಾರ್ಥದಿಂದಲೇ ಪುರೋಡಾಶ, ಚರುಗಳನ್ನುಮಾಡಿ ಹೋಮಮಾಡುತ್ತಾ ಆಪವಿತ್ರವಾದ ಹವಿಸ್ಸನ್ನು ದೇವತೆಗಳಿಗೆ ಹೋಮಮಾಡಬೇಕು.

೧೨. ಶೇಷವಾದುದನ್ನು ತಾನು ತಿನ್ನಬೇಕು. ಉಪ್ಪನ್ನು ತಾನೇ ಮಾಡಿಕೊಳ್ಳಬೇಕು. ಮದ್ಯ, ಮಾಂಸ, ಭೂಮಿಯಲ್ಲಿ ಹುಟ್ಟಿದ ಅಣಬೆ ಮೊದಲಾದುವನ್ನು ಬಿಡಬೇಕು.

೧೩. ಲಾಮಂಚ, ಸಣ್ಣ ಹುಲ್ಲುಗಳು, ಮೂರು ಮುರುಕದ ಹಣ್ಣು ಇವುಗಳನ್ನು ಉಪಯೋಗಿಸಬಾರದು. ಉತ್ತ ಹೊಲದಲ್ಲಿ ಬೆಳೆದುದನ್ನು ತಿನ್ನಬಾರದು. ಅಲ್ಲಿ ಒಂದುವೇಳೆ ಬಿಟ್ಟಿದ್ದರೂ ಅದನ್ನು ಉಪಯೋಗಿಸಬಾರದು.

ನ ಗ್ರಾಮ ಜಾತಾನ್ಯಾರ್ತೋಽಪಿ ಪುಷ್ಪಾಣಿ ಚ ಫಲಾನಿ ಚ ।
ಶ್ರಾವಣೇನೈವ ವಿಧಿನಾ ವಹ್ನಿಂ ಪರಿಚರೇತ್ ಸದಾ ॥೧೪॥

ನ ದ್ರುಹ್ಯೇತ್ಸರ್ವಭೂತಾನಿ ನಿರ್ದ್ವಂದ್ವೋ ನಿರ್ಭಯೋ ಭವೇತ್ ।
ನ ನಕ್ತಂ ಕಿಂಚಿದಶ್ನೀಯಾತ್ ರಾತ್ರೌ ಧ್ಯಾನಪರೋ ಭವೇತ್ ॥

ಜಿತೇಂದ್ರಿಯೋ ಜಿತಕ್ರೋಧಃ ತತ್ತ್ವಜ್ಞಾನವಿಚಿಂತಕಃ ।
ಬ್ರಹ್ಮಚಾರೀ ಭವೇನ್ನಿತ್ಯಂ ನ ಪತ್ನೀಮಪಿ ಸಂಶ್ರಯೇತ್ ॥೧೬॥

ಯಸ್ತು ಪತ್ನ್ಯಾ ವನಂ ಗತ್ವಾ ಮೈಥುನಂ ಕಾಮತಶ್ಚರೇತ್ ।
ತದ್ವ್ರತಂ ತಸ್ಯ ಲುಪ್ಯೇತ ಪ್ರಾಯಶ್ಚಿತ್ತೀಯತೇ ದ್ವಿಜಃ ॥೧೭॥

ತತ್ರ ಯೋ ಜಾಯತೇ ಗರ್ಭೋ ನ ಸ ಸ್ಪೃಶ್ಯೋ ದ್ವಿಜಾತಿಭಿಃ ।
ನ ಹಿ ವೇದೇಽಧಿಕಾರೋಽಸ್ಯ ತದ್ವಂಶೇಽಪ್ಯೇವಮೇವ ಹಿ ॥೧೮॥

---

೧೪. ಊರಲ್ಲಿ ಬೆಳೆದ ಹಣ್ಣು ಹೂಗಳನ್ನುಪಯೋಗಿಸಬಾರದು. ಶ್ರವಣದಲ್ಲಿ ಹೇಳಿರುವ ವಿಧಿಯಿಂದ ಹೋಮಾದಿಗಳನ್ನು ಮಾಡುತ್ತಿರಬೇಕು.

೧೫. ಯಾವಪ್ರಾಣಿಯಲ್ಲೂ ದ್ವೇಷಮಾಡಬಾರದು. ದ್ವಂದ್ವ ಸುಖಕ್ಕೆ ಗಮನಕೊಡದೆ ನಿರ್ಭಯನಾಗಿರಬೇಕು. ರಾತ್ರಿಯಲ್ಲಿ ಊಟ ಮಾಡಬಾರದು. ರಾತ್ರಿಯಲ್ಲಿ ಧ್ಯಾನಮಾಡುತ್ತಿರಬೇಕು.

೧೬. ಜಿತೇಂದ್ರಿಯನಾಗಿ ಕ್ರೋಧವಿಲ್ಲದೆ ತತ್ತ್ವಚಿಂತಕನಾಗಿ ಬ್ರಹ್ಮಚಾರಿಯಾಗಿರಬೇಕು. ಹೆಂಡತಿಯನ್ನು ಗಮಿಸಕೂಡದು.

೧೭. ಹೆಂಡತಿಯೊಡನೆ ಕಾಡಿಗೆಹೋಗಿ ಯಾವನು ಲೋಲುಪನಾಗಿ ಮೈಥುನವನ್ನು ಮಾಡುತ್ತಾನೆಯೋ ಅವನ ಆ ವ್ರತವು ನಾಶವಾಗುತ್ತದೆ. ಪ್ರಾಯಶ್ಚಿತ್ತಾರ್ಹನಾಗುತ್ತಾನೆ.

೧೮. ಅಲ್ಲಿ ಹುಟ್ಟಿದ ಗರ್ಭವು ಬ್ರಾಹ್ಮಣರಿಂದ ಮುಟ್ಟಲು ಅರ್ಹವಾದುದಲ್ಲ. ಅವನಿಗೆ ವೇದಾಧಿಕಾರವಿಲ್ಲ. ಅವನ ವಂಶವೂ ನಿಕೃಷ್ಟವಾದುದು.

ಭೂಮೌ ಶಯೀತ ಸತತಂ ಸಾವಿತ್ರೀ ಜಪ್ಯತತ್ಪರಃ ।
ಶರಣ್ಯಃ ಸರ್ವಭೂತಾನಾಂ ಸದ್ವಿಭಾಗಪರಃ ಸದಾ ॥೧೯॥

ಪರೀವಾದಂ ಮೃಷಾವಾದಂ ನಿದ್ರಾಲಸ್ಯೇ ಚ ವರ್ಜಯೇತ್ ।
ಏಕಾಗ್ನಿರನಿಕೇತಃ ಸ್ಯಾತ್ ಪ್ರೋಕ್ಷಿತಾಂ ಭೂಮಿಮಾಶ್ರಯೇತ್ ॥

ಮೃಗೈಃ ಸಹ ಚರೇದ್ದಾಂತಃ ತೈಃ ಸಹೈವ ಚ ಸಂವಸೇತ್ ।
ಶಿಲಾಯಾಂ ಶರ್ಕರಾಯಾಂ ವಾ ಶಯೀತ ಸುಸಮಾಹಿತಃ ॥೨೧॥

ಸದ್ಯಃ ಪ್ರಕ್ಷಾಲತೋ ವಾ ಸ್ಯಾತ್ ಮಾಸಸಂಚಯಿಕೋಽಪಿ ವಾ ।
ಷಣ್ಮಾಸನಿಚಯೋ ವಾಽಪಿ ಸಮಾ ನಿಚಯ ಏವ ವಾ ॥೨೨॥

ನಕ್ತಂ ಚಾನ್ನಂ ಸಮಶ್ನೀಯಾತ್ ದಿವಾ ಚಾಽಽಹೃತ್ಯ ಶಕ್ತಿತಃ ।
ಚತುರ್ಥಕಾಲಿಕೋ ವಾ ಸ್ಯಾತ್ ಕಿಂ ವಾಽಪ್ಯಷ್ಟಮಕಾಲಿಕಃ ॥೨೩॥

---

೧೯. ಯಾವಾಗಲೂ ನೆಲದಮೇಲೆ ಮಲಗಬೇಕು. ಸಾವಿತ್ರೀ ಜಪವನ್ನು ಮಾಡುತ್ತಿರಬೇಕು. ಎಲ್ಲಾ ಪ್ರಾಣಿಗಳಿಗೂ ಆಶ್ರಿತನಾಗಿರಬೇಕು. ಸತ್ಪುರುಷರಲ್ಲಿ ಆದರವಿರಬೇಕು.

೨೦. ಬಯ್ಯುವಿಕೆ, ಸುಳ್ಳು, ನಿದ್ದೆ, ಸೋಮಾರಿತನಗಳನ್ನು ಬಿಡಬೇಕು. ಒಂದೇ ಅಗ್ನಿಯನ್ನಾಶ್ರಯಿಸಿರಬೇಕು. ಮನೆ ಯಿರಬಾರದು. ಪ್ರೋಕ್ಷಣೆಮಾಡಿದ ಭೂಮಿಯಲ್ಲಿಯೇ, ಇರಬೇಕು.

೨೧. ಮೃಗಗಳೊಡನೆ ಸಂಚರಿಸುತ್ತಾ ಅವುಗಳೊಡನೆಯೇ ಇರಬೇಕು. ಕಲ್ಲುಗಳಮೇಲಾಗಲಿ, ಮರಳಿನ ಮೇಲಾಗಲಿ, ಮಲಗಬೇಕು.

೨೨. ಒಡನೆಯೇ ಶುಚಿಯಾಗಬೇಕು. ಒಂದು ತಿಂಗಳು, ಆರು ತಿಂಗಳು ಅಥವಾ ಒಂದುವರ್ಷದ ಕೊಳೆಯನ್ನು ಹೊಂದಬಹುದು.

೨೩. ಹಗಲು ಕೈಲಾದಷ್ಟು ತಂದು ರಾತ್ರಿಯಲ್ಲಿ ಊಟಮಾಡಬೇಕು. ಅಥವಾ ನಾಲ್ಕನೇ ಜಾವದಲ್ಲಿ ಊಟಮಾಡಬಹುದು. ಇಲ್ಲದಿದ್ದರೆ, ಎಂಟನೇ ಜಾವದಲ್ಲಿ ಊಟಮಾಡಬೇಕು.

ಚಾಂದ್ರಾಯಣವಿಧಾನೈರ್ವಾ ಶುಕ್ಲೇ ಕೃಷ್ಣೇ ಚ ವರ್ಜಯೇತ್ ।
ಪಕ್ಷೇ ಪಕ್ಷೇ ಸಮಶ್ನೀಯಾದ್ಯವಾಗೂಂ ಕ್ವಥಿತಾಂ ಸಕೃತ್ ॥೨೪॥
ಪುಷ್ಪಮೂಲಫಲೈರ್ವಾಪಿ ಕೇವಲೈರ್ವರ್ತಯೇತ್ಸದಾ ।
ಸ್ವಾಭಾವಿಕೈಃ ಸ್ವಯಂ ಶೀರ್ಣೈಃ ವೈಖಾನಸಮತೇ ಸ್ಥಿತಃ ॥೨೫॥
ಭೂಮೌ ವಾ ಪರಿವರ್ತೇತ ತಿಷ್ಠೇದ್ವಾ ಪ್ರಪತೇದ್ದಿನಂ ।
ಸ್ಥಾನಾಸನಾಭ್ಯಾಂ ವಿಹರೇನ್ನ ಕ್ವಚಿದ್ಧೈರ್ಯಮುತ್ಸೃಜೇತ್ ॥೨೬॥
ಗ್ರೀಷ್ಮೇ ಪಂಚತಪಾಶ್ಚ ಸ್ಯಾತ್ ವರ್ಷಾಸ್ವಭ್ರಾವಕಾಶಿಕಃ ।
ಆರ್ದ್ರವಾಸಾಶ್ಚ ಹೇಮಂತೇ ಕ್ರಮಶೋ ಶರ್ಧಯೇತ್ತಪಃ ॥೨೭॥
ಉಪಸ್ಪೃಶೇತ್ತ್ರಿಷವಣಂ ಪಿತೃದೇವಾಂಶ್ಚ ತರ್ಪಯೇತ್ ।
ಏಕಪಾದೇನ ತಿಷ್ಠೇತ ಮರೀಚಿಂ ವಾ ಪಿಬೇತ್ಸದಾ ॥೨೮॥

---

೨೪. ಶುಕ್ಲೋಪವಾಸ, ಕೃಷ್ಣೋಪವಾಸಗಳನ್ನು ಬಿಟ್ಟು ಚಾಂದ್ರಾಯಣ ವಿಧಿಯಿಂದಿರಬೇಕು. ಪ್ರತಿಪಕ್ಷದಲ್ಲೂ ಒಂದೊಂದುಸಾರಿ ಕುದಿಸಿದ ಗಂಜಿಯನ್ನು ಕುಡಿಯಬೇಕು.

೨೫. ಕೇವಲ ಪುಷ್ಪ ಮೂಲ ಹಣ್ಣುಗಳಿಂದಲೇ ಇರಬೇಕು. ಅವುಗಳು ಸ್ವಾಭಾವಿಕವಾದುವೂ ತಾವಾಗಿಯೇ ಪಕ್ವವಾದವೂ ಆಗಿರಬೇಕು. ಇಂತು ವೈಖಾನಸಮತವನ್ನು ಆಶ್ರಯಿಸಿರಬೇಕು.

೨೬. ಭೂಮಿಯಲ್ಲಿ ಹೊರಳುತ್ತಿರಬಹುದು. ಅಥವಾ ತುದಿಗಾಲಿನಲ್ಲಿ ದಿನವೆಲ್ಲ ನಿಂತಿರಬಹುದು. ಸ್ಥಾನ, ಆಸನಗಳಿಂದ ಕೂಡಿರಬೇಕು. ಧೈರ್ಯವನ್ನು ಬಿಡಬಾರದು.

೨೭. ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿಗಳಮಧ್ಯೇ ತಪಸ್ಸುಮಾಡಬೇಕು. ವರ್ಷರ್ತುವಿನಲ್ಲಿ ಮಳೆಯಲ್ಲಿ ಹೊರಗಿರಬೇಕು. ಹಿಮಂತ ಋತುವಿನಲ್ಲಿ ಒದ್ದೆಬಟ್ಟೆಯನ್ನು ಹಾಕಿಕೊಂಡಿರಬೇಕು. ಈ ರೀತಿ ತಪಸ್ಸನ್ನು ಹೆಚ್ಚಿಸಿ ಕೊಳ್ಳಬೇಕು.

೨೮. ಮೂರುಹೊತ್ತು ಸ್ನಾನಮಾಡಬೇಕು. ಪಿತೃಗಳನ್ನೂ, ದೇವತೆಗಳನ್ನೂ ತೃಪ್ತಿಪಡಿಸಬೇಕು. ಒಂದೇಕಾಲಿನಿಂದ ನಿಂತಿರಬೇಕು. ಯಾವಾಗಲೂ ಬಿಸಿಲಿನಲ್ಲೇ ಇರಬೇಕು.

ಪಂಚಾಗ್ನಿಧೂಮಗೋ ವಾ ಸ್ಯಾತ್ ಊಷ್ಮಗಃ ಸೋಮಪೋಽಪಿವಾ।
ಪಯಃ ಪಿಬೇಚ್ಛುಕ್ಲಪಕ್ಷೇ ಕೃಷ್ಣಪಕ್ಷೇ ತು ಗೋಮಯಂ ॥೨೯॥

ಶೀರ್ಣಪರ್ಣಾಶನೋ ವಾಸ್ಯಾತ್ ಕೃಚ್ಛ್ರೈರ್ವಾ ವರ್ತಯೇತ್ಸದಾ।
ಯೋಗಾಭ್ಯಾಸರತಶ್ಚ ಸ್ಯಾತ್ ರುದ್ರಾಧ್ಯಾಯೀ ಭವೇತ್ಸದಾ ॥೩೦॥

ಅಥರ್ವಶಿರಸೋಽಧ್ಯೇತಾ ವೇದಾಂತಾಭ್ಯಾಸತತ್ಪರಃ ।
ಯಮಾನ್ಸೇವೇತ ಸತತಂ ನಿಯಮಾಂಶ್ಚಾಪ್ಯತಂದ್ರಿತಃ ॥೩೧॥

ಕೃಷ್ಣಾಜಿನೀ ಸೋತ್ತರೀಯಃ ಶುಕ್ಲಯಜ್ಞೋಪವೀತವಾನ್ ।
ಅಥವಾಗ್ನೀನ್ ಸಮಾರೋಪ್ಯ ಸ್ವಾತ್ಮನಿ ಧ್ಯಾನತತ್ಪರಃ ॥೩೨॥

ಅನಗ್ನಿರನಿಕೇತೋ ವಾ ಮುನಿರ್ಮೋಕ್ಷಪರೋ ಭವೇತ್ ।
ತಾಪಸೇಷ್ವೇವ ವಿಪ್ರೇಷು ಯಾತ್ರಿಕಂ ಭೈಕ್ಷಮಾಹರೇತ್ ॥೩೩॥

---

೨೯. ಪಂಚಾಗ್ನಿ ಮಧ್ಯದಲ್ಲಿದ್ದುಕೊಂಡಿರಬೇಕು. ಅಥವಾ ಬಿಸಲಿನಲ್ಲಿದ್ದಾದರೂ ಇರಬೇಕು. ಅದಿಲ್ಲದಿದ್ದರೆ ಶೀತದಲ್ಲಿರುತ್ತಿರಬೇಕು. ಶುಕ್ಲಪಕ್ಷದಲ್ಲಿ ಹಾಲು ಕುಡಿಯಬೇಕು. ಕೃಷ್ಣಪಕ್ಷದಲ್ಲಿ ಸಗಣಿಯನ್ನು ತಿನ್ನಬೇಕು.

೩೦. ಹಣ್ಣೆಲೆಗಳನ್ನು ತಿಂದುಕೊಂಡಿರಬೇಕು. ಕೃಚ್ಛ್ರವನ್ನು ತಿಂದಾದರೂ ಇರಬಹುದು. ಯೋಗಾಭ್ಯಾಸದಲ್ಲಿ ಆಸಕ್ತನಾಗಿರಬೇಕು ರುದ್ರಾಧ್ಯಾಯವನ್ನು ಪಠಿಸುತ್ತಿರಬೇಕು.

೩೧. ಅಥರ್ವ ಉಪನಿಷತ್ತನ್ನು ಅಧ್ಯಯನ ಮಾಡುತ್ತಿರಬೇಕು. ವೇದಾಂತಾಭ್ಯಾಸ ಮಾಡುತ್ತಿರಬೇಕು. ಇಂದ್ರಿಯ ಜಯವನ್ನು ಅಭ್ಯಸಿಸಬೇಕು. ಆಲಸ್ಯಪಡದೆ ನಿಯಮಗಳನ್ನು ಅಭ್ಯಸಿಸಿ ಆಚರಿಸುತ್ತಿರಬೇಕು.

೩೨. ಕೃಷ್ಣಾಜಿನವನ್ನು ಹೊದ್ದಿರಬೇಕು. ಬಿಳಿಯ ಯಜ್ಞೋಪವೀತವನ್ನು ಹಾಕಿರಬೇಕು. ಹಾಗಿಲ್ಲದಿದ್ದರೆ ಅಗ್ನಿಯನ್ನು ಆತ್ಮಸಮಾರೋಪಣಮಾಡಿ ಧ್ಯಾನದಲ್ಲಿರಬೇಕು. ಅಗ್ನಿಯೂ ಮನೆಯೂ ಇಲ್ಲದ ಮುನಿಯಾಗಿ ಮೋಕ್ಷದಲ್ಲಿ ಆಸಕ್ತಿಯುಳ್ಳವನಾಗಬೇಕು.

೩೩. ತಪಸ್ವಿಗಳಾದ ಬ್ರಾಹ್ಮಣರಲ್ಲಿಯೇ ಯಾತ್ರಿಕನಾಗಿ ಭಿಕ್ಷೆ ಬೇಡಬೇಕು.

**ಗೃಹಮೇಧಿಷು ಚಾನ್ಯೇಷು ದ್ವಿಜೇಷು ವನಚಾರಿಷು ।**
**ಗ್ರಾಮಾದಾಹೃತ್ಯ ವಾಽಶ್ನೀಯಾತ್ ಅಷ್ಟೌ ಗ್ರಾಸಾನ್ವನೇ ವಸನ್ ॥**
**ಪ್ರತಿಗೃಹ್ಯ ಪುಟೇನೈವ ಪಾಣಿನಾ ಶಕಲೇನ ವಾ ।**
**ವಿವಿಧಾಶ್ಚೋಪನಿಷದಃ ಆತ್ಮಸಂಸಿದ್ಧಯೇ ಜಪೇತ್ ॥೩೫॥**
**ವಿದ್ಯಾವಿಶೇಷಾನ್ ಸಾವಿತ್ರೀಂ ರುದ್ರಾಧ್ಯಾಯಂ ತಥೈವ ಚ ।**
**ಮಹಾಪ್ರಸ್ಥಾನಿಕಂ ವಾಽಸೌ ಕುರ್ಯಾದನಶನಂ ತಥಾ ॥**
**ಅಗ್ನಿಪ್ರವೇಶಮನ್ಯದ್ವಾ ಬ್ರಹ್ಮಾರ್ಪಣವಿಧೌ ಸ್ಥಿತಃ ॥೩೬॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ**
**ವಾನಪ್ರಸ್ಥಾಶ್ರಮಾಚಾರ ಕಥನಂ ನಾಮ ಅಷ್ಟಪಂಚಾಶತ್ತಮೋಽಧ್ಯಾಯಃ**

---

೩೪. ಅಥವಾ ಕಾಡಿನಲ್ಲಿ ಸಂಚರಿಸುವ ಗೃಹಸ್ಥರಲ್ಲಿ ಯಾಚಿಸಬೇಕು. ಅಥವಾ ಗ್ರಾಮಗಳಿಂದ ಎಂಟು ಗ್ರಾಸಗಳಿಗಾಗುವಷ್ಟನ್ನು ತಂದು ತಿನ್ನಬೇಕು. ಕಾಡಿನಲ್ಲಿ ವಾಸಮಾಡುತ್ತಿರಬೇಕು.

೩೫. ದೊನ್ನೆಯಿಂದಾಗಲಿ, ಕೈಯಿಂದಾಗಲಿ, ಎಲೆಗಳಲ್ಲಿ ತೆಗೆದುಕೊಂಡು ತಿನ್ನಬೇಕು. ಆತ್ಮಸಿದ್ಧಿಗೋಸ್ಕರ ಉಪನಿಷತ್ತುಗಳನ್ನು ಜಪಿಸಬೇಕು.

೩೬. ಆತ್ಮಸಿದ್ಧಿಗೋಸ್ಕರ ವಿಶೇಷ ವಿದ್ಯೆಗಳನ್ನಾಗಲಿ, ರುದ್ರಾಧ್ಯಾಯವನ್ನಾಗಲಿ ಜಪಿಸುತ್ತಿರಬೇಕು. ಸಾಯುವ ಪರ್ಯಂತವೂ ಉಪವಾಸರೂಪವಾದ ಮಹಾಪ್ರಾಸ್ಥಾನಿಕವನ್ನಾಶ್ರಯಿಸಬೇಕು. ಅಥವಾ ಅಗ್ನಿಪ್ರವೇಶವನ್ನಾದರೂ, ಬ್ರಹ್ಮಾರ್ಪಣ ವಿಧಿಯಿಂದ ಮಾಡಬೇಕು.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ವಾನಪ್ರಸ್ಥಾಶ್ರಮ ಧರ್ಮಕಥನದಲ್ಲಿ ಐವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಏಕೋನಷಷ್ಟಿತಮೋಽಧ್ಯಾಯಃ

॥ ವ್ಯಾಸ ಉವಾಚ ॥

**ಏವಂ ವನಾಶ್ರಮೇ ಸ್ಥಿತ್ವಾ ತೃತೀಯಂ ಭಾಗಮಾಯುಷಃ ।**
**ಚತುರ್ಥಂ ಚಾಽಽಯುಷೋ ಭಾಗಂ ಸಂನ್ಯಾಸೇನ ನಯೇತ್ಕ್ರಮಾತ್**

**ಅಗ್ನೀನಾತ್ಮನಿ ಸಂಸ್ಥಾಪ್ಯ ದ್ವಿಜಃ ಪ್ರವ್ರಜಿತೋ ಭವೇತ್ ।**
**ಯೋಗಾಭ್ಯಾಸರತಃ ಶಾಂತೋ ಬ್ರಹ್ಮವಿದ್ಯಾಪರಾಯಣಃ ॥ ೨ ॥**

**ಯದಾ ಮನಸಿ ಸಂಪನ್ನಂ ವೈತೃಷ್ಣ್ಯಂ ಸರ್ವವಸ್ತುಷು ।**
**ತದಾ ಸನ್ಯಾಸಮಿಚ್ಛೇಚ್ಚ ಪತಿತಃ ಸ್ಯಾದ್ವಿಪರ್ಯಯೆ ॥ ೩ ॥**

---

ಪದ್ಮ ಪುರಾಣದ ಆದಿಖಂಡದ ಐವತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸನು ಹೇಳುತ್ತಾನೆ: ಹೀಗೆ ವಾನಪ್ರಸ್ಥಾಶ್ರಮದಲ್ಲಿ ಆಯುಸ್ಸಿನ ಮೂರನೇ ಭಾಗವನ್ನು ಕಳೆದು ಆಯುಸ್ಸಿನ ನಾಲ್ಕನೇ ಭಾಗವನ್ನು ಸನ್ಯಾಸದಿಂದ ಕಳೆಯಬೇಕು.

೨. ಅಗ್ನಿಯನ್ನು ಆತ್ಮಾರೋಪಣ ಮಾಡಿಕೊಂಡು ಬ್ರಾಹ್ಮಣನು ಸನ್ಯಾಸಿಯಾಗಬೇಕು. ಯಾವಾಗಲೂ ಯೋಗಾಭ್ಯಾಸ ಮಾಡುತ್ತ ಬ್ರಹ್ಮವಿದ್ಯೆಯಲ್ಲಿ ಆಸಕ್ತನಾಗಿರಬೇಕು.

೩. ಮನುಷ್ಯನಿಗೆ ಯಾವಾಗ ಸರ್ವವಸ್ತುಗಳಲ್ಲೂ ಆಸೆಯು ಹೋಗುತ್ತದೋ ಆಗ ಸನ್ಯಾಸವನ್ನು ಹೊಂದಬೇಕು. ಹಾಗಿಲ್ಲದಿದ್ದರೆ ಪತಿತನಾಗುತ್ತಾನೆ.

ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಂ ಆಗ್ನೇಯೀಮಥವಾ ಪುನಃ ।
ದಾಂತಃ ಶುಕ್ಲಕಷಾಯೋಽಸೌ ಬ್ರಹ್ಮಾಶ್ರಮಮುಪಾಶ್ರಯೇತ್ ॥
ಜ್ಞಾನಸಂನ್ಯಾಸಿನಃ ಕೇಚಿತ್ ವೇದಸಂನ್ಯಾಸಿನೋಽಪರೇ ।
ಕರ್ಮಸಂನ್ಯಾಸಿನಸ್ತ್ವನ್ಯೇ ತ್ರಿವಿಧಾಃ ಪರಿಕೀರ್ತಿತಾಃ ॥ ೫ ॥
ಯಃ ಸರ್ವತ್ರ ವಿನಿರ್ಮುಕ್ತೋ ನಿರ್ದ್ವಂದ್ವಶ್ಚೈವ ನಿರ್ಭಯಃ ।
ಪ್ರೋಚ್ಯತೆ ಜ್ಞಾನಸಂನ್ಯಾಸೀ ಆತ್ಮನ್ಯೇವ ವ್ಯವಸ್ಥಿತಃ ॥ ೬ ॥
ವೇದಮೇವಾಭ್ಯಸೇನ್ನಿತ್ಯಂ ನಿರಾಶೀ ನಿಷ್ಪರಿಗ್ರಹಃ ।
ಪ್ರೋಚ್ಯತೇ ವೇದಸಂನ್ಯಾಸೀ ಮುಮುಕ್ಷುರ್ವಿಜಿತೇಂದ್ರಿಯಃ॥ ೭ ॥
ಯಸ್ತ್ವಗ್ನಿಮಾತ್ಮಸಾತ್ಕೃತ್ವಾ ಬ್ರಹ್ಮಾರ್ಪಣಪರೋ ದ್ವಿಜಃ ।
ಜ್ಞೇಯಃ ಸ ಕರ್ಮಸಂನ್ಯಾಸೀ ಮಹಾಯಜ್ಞಪರಾಯಣಃ ॥ ೮ ॥

---

೪. ಪ್ರಾಜಾಪತ್ಯ, ಅಥವಾ ಆಗ್ನೇಯ ಇಷ್ಟಿಗಳನ್ನು ಮಾಡಿ, ಶಾಂತನಾಗಿ, ಬಿಳುಪಿನಿಂದ ಕೂಡಿದ ಕಷಾಯ ವಸ್ತ್ರವನ್ನು ಧರಿಸಿ, ಸನ್ಯಾಸಾಶ್ರಮವನ್ನು ಹೊಂದಬೇಕು.

೫. ಜ್ಞಾನ ಸಂನ್ಯಾಸಿಗಳೆಂದೂ, ವೇದಸನ್ಯಾಸಿಗಳೆಂದೂ, ಕರ್ಮ ಸಂನ್ಯಾಸಿಗಳೆಂದೂ ಸಂನ್ಯಾಸಿಗಳಲ್ಲಿ ಮೂರು ಬಗೆ.

೬. ಯಾವನು ಎಲ್ಲದರಲ್ಲೂ ಆಶೆಯನ್ನು ಬಿಟ್ಟು ಭಯವಿಲ್ಲದೆ ಉಷ್ಣ ಶೀತಗಳೆಂಬ ದ್ವಂದ್ವ ಸುಖಕ್ಕೆ ಹೆದರದೆ ಆತ್ಮಚಿಂತನೆ ಮಾಡು ತ್ತಾನೋ ಅವನು ಜ್ಞಾನ ಸಂನ್ಯಾಸೀ ಎನಿಸಿಕೊಳ್ಳುತ್ತಾನೆ.

೭. ಯಾವಾಗಲೂ ವೇದವನ್ನೇ ಹೇಳುತ್ತ ದಾನ ತೆಗೆದುಕೊಳ್ಳದೆ ಜಿತೇಂದ್ರಿಯನಾಗಿ ಮೋಕ್ಷವನ್ನು ಅಪೇಕ್ಷಿಸುತ್ತಾನೋ ಅವನು ವೇದ ಸಂನ್ಯಾಸಿಯು.

೮. ಅಗ್ನಿ ಸಮಾರೋಪಣ ಮಾಡಿಕೊಂಡು ಮಹಾಯಜ್ಞದಲ್ಲಿ ಆಸಕ್ತನಾಗಿ, ಬ್ರಹ್ಮಾರ್ಪಣ ಪರಾಯಣನಾಗಿದ್ದರೆ ಕರ್ಮಸಂನ್ಯಾಸೀ ಎನ್ನಿಸಿಕೊಳ್ಳುತ್ತಾನೆ.

ತ್ರಯಾಣಾಮಪಿ ಚೈತೇಷಾಂ ಜ್ಞಾನೀ ತ್ವಭ್ಯಧಿಕೋ ಮತಃ ।
ನ ತಸ್ಯ ವಿದ್ಯತೇ ಕಾರ್ಯಂ ನ ಲಿಂಗಂ ವಾ ವಿಪಶ್ಚಿತಃ ॥ ೯ ॥

ನಿರ್ಮಮೋ ನಿರ್ಭಯಃ ಶಾಂತೋ ನಿರ್ದ್ವಂದ್ವಃ ಪರ್ಣಭೋಜನಃ ।
ಜೀರ್ಣಕೌಪೀನವಾಸಾಃ ಸ್ಯಾನ್ನಗ್ನೋ ವಾ ಜ್ಞಾನತತ್ಪರಃ ॥೧೦॥

ಬ್ರಹ್ಮಚಾರೀ ಜಿತಾಹಾರೋ ಗ್ರಾಮಾದನ್ನಂ ಸಮಾಹರೇತ್ ।
ಅಧ್ಯಾತ್ಮರತಿರಾಸೀತ ನಿರಪೇಕ್ಷೋ ನಿರಾಮಿಷಃ ॥೧೧॥

ಆತ್ಮನೈವಸಹಾಯೇನ ಸುಖಾರ್ಥಂ ವಿಚರೇದಿಹ ।
ನಾಭಿನಂದೇತ ಮರಣಂ ನಾಭಿನಂದೇತ ಜೀವನಂ ॥೧೨॥

ಕಾಲಮೇವ ಪ್ರತೀಕ್ಷೇತ ನಿದೇಶಂ ಭೃತಕೋ ಯಥಾ ।
ನಾಧ್ಯೇತವ್ಯಂ ನ ವಕ್ತವ್ಯಂ ಶ್ರೋತವ್ಯಂ ನ ಕದಾಚನ ॥೧೩॥

---

೯. ಈ ಮೂವರಲ್ಲಿ ಜ್ಞಾನಸಂನ್ಯಾಸವೇ ಶ್ರೇಷ್ಠವಾದುದು. ಇವನಿಗೆ ಏನೂ ಕೆಲಸವಿರುವುದಿಲ್ಲ. ಗುರುತಾದ ವೇಷವೂ ಬೇಕಿಲ್ಲ.

೧೦. ಆಸೆ, ಭಯಗಳಿಲ್ಲದೆ ಶಾಂತನಾಗಿ ಜಿತೇಂದ್ರಿಯನಾಗಿ ಎಲೆಗಳನ್ನು ತಿನ್ನುತ್ತಾ ಹರಕು ಕೌಪೀನ ಧಾರಿಯಾಗಿರಬೇಕು. ಅಥವಾ ಬೆತ್ತಲೆಯಾದರೂ ಇರಬೇಕು. ಬ್ರಹ್ಮ ಸಂಬಂಧವಾದ ಜ್ಞಾನಮಾತ್ರ ಬಿಡಬಾರದು.

೧೧. ಬ್ರಹ್ಮಚಾರಿಯಾಗಿ ಗ್ರಾಮಗಳಿಂದ ಅನ್ನವನ್ನು ತಂದುಕೊಳ್ಳಬಹುದು. ಆತ್ಮನಲ್ಲಿ ನಿರತನಾಗಿ ಆಸೆ ಬಿಟ್ಟಿರಬೇಕು. ಮಾಂಸ ತಿನ್ನಬಾರದು.

೧೨. ಮತ್ತೊಬ್ಬರ ಸಹಾಯವಿಲ್ಲದೆ ಸುಖಕ್ಕೋಸ್ಕರ ಸುತ್ತುತ್ತಿರಬೇಕು. ಜೀವವನ್ನಾಗಲಿ, ಸಾವನ್ನಾಗಲಿ ಅನುಮೋದಿಸಬಾರದು.

೧೩. ಆಳು, ಅಪ್ಪಣೆಯನ್ನು ನಿರೀಕ್ಷಿಸುವಂತೆ, ಕಾಲವನ್ನೇ ನೋಡುತ್ತಿರಬೇಕು. ಅಧ್ಯಯನ, ಮಾತನಾಡುವುದು, ಕೇಳುವುದು, ಇವೊಂದನ್ನೂ ಮಾಡಬಾರದು.

ಏವಂ ಜ್ಞಾನಪರೋ ಯೋಗೀ ಬ್ರಹ್ಮಭೂಯಾಯಕಲ್ಪತೇ ।
ಏಕವಾಸಾಽಥವಾ ವಿದ್ವಾನ್ ಕೌಪೀನಾಚ್ಛಾದನೋಽಪಿ ವಾ ॥೧೪॥

ಮುಂಡೀ ಶಿಖೀ ವಾಽಥ ಭವೇತ್ತ್ರಿದಂಡೀ ನಿಷ್ಪರಿಗ್ರಹಃ ।
ಕಷಾಯವಾಸಾಃ ಸತತಂ ಧ್ಯಾನಯೋಗಪರಾಯಣಃ ॥೧೫॥

ಗ್ರಾಮಾಂತೇ ವೃಕ್ಷಮೂಲೇ ವಾ ವಸೇದ್ದೇವಾಲಯೇಽಪಿ ವಾ ।
ಸಮಃ ಶತ್ರೌ ತಥಾ ಮಿತ್ರೇ ತಥಾ ಮಾನಾಪಮಾನಯೋಃ ।
ಭೈಕ್ಷೇಣ ವರ್ತಯೇನ್ನಿತ್ಯಂ ನೈಕಾನ್ನಾದೀ ಭವೇತ್ಕ್ವಚಿತ್ ॥೧೬॥

ಯಸ್ತು ಮೋಹೇನ ವಾಽನ್ಯಸ್ಮಾತ್ ಏಕಾನ್ನಾದೀ ಭವೇದ್ಯತಿಃ ।
ನ ತಸ್ಯ ನಿಷ್ಕೃತಿಃ ಕಾಚಿದ್ಧರ್ಮಶಾಸ್ತ್ರೇಷು ದೃಶ್ಯತೇ ॥೧೭॥

---

೧೪. ಈರೀತಿ ಯೋಗಿಯು ಜ್ಞಾನಿಯಾಗಿ ಬ್ರಹ್ಮಸಾರೂಪ್ಯವನ್ನು ಹೊಂದಬೇಕು. ಒಂದು ಬಟ್ಟೆಯನ್ನುಟ್ಟಿದ್ದರೂ ಸರಿ ಕೌಪೀನವನ್ನು ಹಾಕಿಕೊಂಡಿದ್ದರೂ ಸರಿ.

೧೫. ತಲೆ ಬೋಳಿಸಿಕೊಂಡಾಗಲಿ, ಜುಟ್ಟು ಬಿಟ್ಟುಕೊಂಡಾಗಲಿ ಇರಬಹುದು. ಅಥವಾ ತ್ರಿದಂಡಿಯಾಗಿರಬಹುದು. ದಾನ ತೆಗೆದು ಕೊಳ್ಳಬಾರದು. ಕಾವಿಬಟ್ಟೆಯನ್ನು ಯಾವಾಗಲೂ ಹಾಕಿರಬೇಕು. ಧ್ಯಾನಯೋಗಗಳಲ್ಲಿ ಆಸಕ್ತನಾಗಿರಬೇಕು. ಗ್ರಾಮದ ಕೊನೆಯಲ್ಲಾಗಲಿ, ಮರದ ಬುಡದಲ್ಲಾಗಲಿ, ದೇವಸ್ಥಾನದಲ್ಲಾಗಲೀ ವಾಸಮಾಡುತ್ತಿರ ಬೇಕು.

೧೬. ಶತ್ರು ಮಿತ್ರರುಗಳಲ್ಲಿಯೂ, ಮಾನಾಪಮಾನಗಳಲ್ಲಿಯೂ ಒಂದೇ ರೀತಿಯಾಗಿದ್ದು ಭಿಕ್ಷಾನ್ನದಿಂದ ಜೀವಿಸಬೇಕು. ಒಬ್ಬನ ಅನ್ನ ವನ್ನೇ ತಿನ್ನಕೂಡದು.

೧೭. ಯಾವನು ವಿವೇಕವಿಲ್ಲದೆ ಒಬ್ಬನ ಮನೆಯ ಅನ್ನವನ್ನೇ ತಿನ್ನು ತ್ತಾನೋ ಆ ಪಾಪಕ್ಕೆ ಪ್ರತೀಕಾರವು ಧರ್ಮಶಾಸ್ತ್ರಗಳಲ್ಲಿಲ್ಲ.

ರಾಗದ್ವೇಷವಿಯುಕ್ತಾತ್ಮಾ ಸಮಲೋಷ್ಟಾಶ್ಮ ಕಾಂಚನಃ ।
ಪ್ರಾಣಿಹಿಂಸಾನಿವೃತ್ತಶ್ಚ ಮೌನೀ ಸ್ಯಾತ್ಸರ್ವನಿಸ್ಪೃಹಃ ॥೧೮॥

ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯಪೂತಾಂ ವದೇದ್ವಾಣೀ ಮನಃಪೂತಂ ಸಮಾಚರೇತ್ ॥೧೯॥

ನೈಕತ್ರ ನಿವಸೇದ್ದೇಶೇ ವರ್ಷಾಭ್ಯೋಽನ್ಯತ್ರ ಭಿಕ್ಷುಕಃ ।
ಸ್ನಾತ್ವಾ ಶೌಚವೃತೋ ನಿತ್ಯಂ ಕಮಂಡಲುಕರಃ ಶುಚಿಃ ॥೨೦॥

ಬ್ರಹ್ಮಚರ್ಯರತೋ ನಿತ್ಯಂ ವನವಾಸರತೋ ಭವೇತ್ ।
ಮೋಕ್ಷಶಾಸ್ತ್ರೇಷು ನಿರತೋ ಬ್ರಹ್ಮಸೂತ್ರೀ ಜಿತೇಂದ್ರಿಯಃ ॥೨೧॥

ದಂಭಾಹಂಕಾರ ನಿರ್ಮುಕ್ತೋ ನಿಂದಾಪೈಶುನ್ಯವರ್ಜಿತಃ ।
ಆತ್ಮಜ್ಞಾನಗುಣೋಪೇತೋ ಯದಿ ಮೋಕ್ಷಮವಾಪ್ನುಯಾತ್ ॥

---

೧೮. ರಾಗ ದ್ವೇಷಗಳನ್ನು ಬಿಟ್ಟು, ಹೊನ್ನು ಮಣ್ಣುಗಳನ್ನೊಂದನ್ನಾಗಿ ಕಾಣುತ್ತ, ಪ್ರಾಣಿಹಿಂಸೆಯಿಂದ ನಿವೃತ್ತನಾಗಿ ನಿಸ್ಪೃಹನಾಗಿ ಮೌನದಿಂದಿರಬೇಕು.

೧೯. ನೋಡಿ ಹೆಜ್ಜೆಯನ್ನಿಡಬೇಕು. ಬಟ್ಟೆಯಲ್ಲಿ ಶೋಧಿಸಿ ನೀರನ್ನು ಕುಡಿಯಬೇಕು. ಸತ್ಯವನ್ನಾಡಬೇಕು. ಮನಸ್ಸನ್ನು ಒಪ್ಪಿಸಿ ಮಾತನಾಡಬೇಕು.

೨೦. ಮಳೆಗಾಲದಲ್ಲಿ ಹೊರತಾದ ಬೇರೆಕಾಲಗಳಲ್ಲಿ ಒಂದೇಜಾಗದಲ್ಲಿ ವಾಸಮಾಡಬಾರದು. ಸ್ನಾನ, ಶೌಚ, ಕೈಯಲ್ಲಿ ಕಮಂಡಲುಗಳಿರಬೇಕು. ಬ್ರಹ್ಮಚರ್ಯದಲ್ಲಿದ್ದುಕೊಂಡು ವನವಾಸಮಾಡುತ್ತಿರಬೇಕು.

೨೧–೨೨. ಮೋಕ್ಷಶಾಸ್ತ್ರದಲ್ಲಿ ಆಸಕ್ತನಾಗಿ, ಬ್ರಹ್ಮಸೂತ್ರವನ್ನು ಹಾಕಿಕೊಂಡು, ಜಿತೇಂದ್ರಿಯನಾಗಿ, ದಂಭ, ಅಹಂಕಾರಗಳನ್ನು ಬಿಟ್ಟು, ನಿಂದೆ, ಚಾಡಿಗಳನ್ನು ಬಿಟ್ಟು, ಆತ್ಮಜಾನವುಳ್ಳವನು ಮೋಕ್ಷವನ್ನು ಹೊಂದುತ್ತಾನೆ.

ಅಭ್ಯಸೇತ್ಸತತಂ ದೇವಂ ಪ್ರಣವಾಖ್ಯಂ ಸನಾತನಂ ।
ಸ್ನಾತ್ವಾಚಮ್ಯ ವಿಧಾನೇನ ಶುಚಿರ್ದೇವಾಲಯಾದಿಷು ॥೨೩॥
ಯಜ್ಞೋಪವೀತೀ ಶಾಂತಾತ್ಮಾ ಕುಶಪಾಣಿಃ ಸಮಾಹಿತಃ ।
ಧೌತಕಾಷಾಯವಸನೋ ಭಸ್ಮಚ್ಛನ್ನತನೂರುಹಃ ॥೨೪॥
ಅಧಿಯಜ್ಞಂ ಬ್ರಹ್ಮ ಜಪೇತ್ ಆಧಿದೈವಿಕಮೇವ ಚ ।
ಆಧ್ಯಾತ್ಮಿಕಂ ಚ ಸತತಂ ವೇದಾಂತಾಭಿಹಿತಂ ಚ ಯತ್ ॥೨೫॥
ಪುತ್ರೇಷು ವಾಥ ನಿವಸನ್ ಬ್ರಹ್ಮಚಾರೀ ಯತಿರ್ಮುನಿಃ ।
ವೇದಮೇವಾಭ್ಯಸೇನ್ನಿತ್ಯಂ ಸ ಯಾತಿ ಪರಮಾಂ ಗತಿಂ ॥೨೬॥
ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಪಃ ಪರಂ ।
ಕ್ಷಮಾ ದಯಾ ಚ ಸಂತೋಷೋ ವ್ರತಾನ್ಯಸ್ಯ ವಿಶೇಷತಃ ॥೨೭॥

---

೨೩–೨೪. ಯಾವಾಗಲೂ ಓಂ ಎಂಬ ಪ್ರಣವರೂಪವಾದ ಪರಮಾತ್ಮನನ್ನು ಅಭ್ಯಸಿಸಬೇಕು. ಸ್ನಾನ, ಆಚಮನಮಾಡಿ ದೇವಾಲಯದಲ್ಲಿದ್ದುಕೊಂಡು ಓಂಕಾರವನ್ನು ಸಾಧಿಸಬೇಕು. ಯಜ್ಞೋಪವೀತವನ್ನು ಧರಿಸಿರಬೇಕು, ಶಾಂತಾತ್ಮನಾಗಿರಬೇಕು, ಕೈಯಲ್ಲಿ ದರ್ಭೆಯಿರಬೇಕು, ಕಾಷಾಯದ ಬಟ್ಟೆಯನ್ನು ಮಡಿಮಾಡಿಕೊಂಡು ಹೊದೆಯಬೇಕು. ಬೂದಿ ಬಳಿದುಕೊಳ್ಳಬೇಕು.

೨೫. ಯಜ್ಞಕ್ಕೆಬದಲಾಗಿ ಬ್ರಹ್ಮವನ್ನೇ ಜಪಿಸಬೇಕು. ದೇವರಿಗೆ ಬದಲಾಗಿಯೂ ಬ್ರಹ್ಮವನ್ನೇ ಜಪಿಸಬೇಕು. ಆಧ್ಯಾತ್ಮಿಕಚಿಂತನೆಯಲ್ಲಿದ್ದು ವೇದಾಂತದಲ್ಲಿ ಆಸೆಯುಳ್ಳವನಾಗಿಯೇ ಇರಬೇಕು.

೨೬. ಮಗನ ಹತ್ತಿರದಲ್ಲಿಯಾದರೂ ಇದ್ದುಕೊಂಡು ಬ್ರಹ್ಮಚಾರಿಯಾಗಿ ವೇದವನ್ನೇ ಅಭ್ಯಾಸಮಾಡುವವನು ಉತ್ತಮ ಗತಿಯನ್ನು ಹೊಂದುತ್ತಾನೆ.

೨೭. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಕ್ಷಮೆ, ದಯೆ ಸಂತೋಷವೆಂಬುವು ಇವನಿಗೆ ವಿಶೇಷವ್ರತಗಳು.

ವೇದಾಂತಜ್ಞಾನನಿಷ್ಠೋ ವಾ ಪಂಚಯಜ್ಞಾನ್ ಸಮಾಹಿತಃ ।
ಕುರ್ಯಾದಹರಹಃ ಸ್ನಾತ್ವಾ ಭಿಕ್ಷಾರ್ಥೇನೈವ ತೇನ ಹಿ ॥೨೮॥
ಹೋಮಮಂತ್ರಾನ್ ಜಪೇನ್ನಿತ್ಯಂ ಕಾಲೇ ಕಾಲೇ ಸಮಾಹಿತಃ ।
ಸ್ವಾಧ್ಯಾಯಂ ಚಾನ್ವಹಂ ಕುರ್ಯಾತ್ ಸಾವಿತ್ರೀಂ ಸಂಧ್ಯಯೋ
ರ್ಜಪೇತ್ ॥೨೯॥
ಧ್ಯಾಯೀತ ಸತತಂ ದೇವಮೇಕಾಂತೇ ಪರಮೇಶ್ವರಂ ।
ಏಕಾನ್ನಂ ವರ್ಜಯೇನ್ನಿತ್ಯಂ ಕಾಮಕ್ರೋಧಂ ಪರಿಗ್ರಹಂ ॥೩೦॥
ಏಕವಾಸಾ ದ್ವಿವಾಸಾಃಥ ಶಿಖೀ ಯಜ್ಞೋಪವೀತವಾನ್ ।
ಕಮಂಡಲುಕರೋ ವಿದ್ವಾನ್ ತ್ರಿದಂಡೋ ಯಾತಿ ತತ್ಪರಂ ॥೩೧॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ
ಯತಿಧರ್ಮ ನಿರೂಪಣಂ ನಾಮ ಏಕೋನಷಷ್ಟಿತಮೋಽಧ್ಯಾಯಃ

---

೨೮. ವೇದಾಂತ ಜ್ಞಾನದಲ್ಲಿ ಆಸಕ್ತನಾಗಿ ಪಂಚಯಜ್ಞಗಳನ್ನು ಮಾಡುತ್ತ, ಪ್ರತಿನಿತ್ಯವೂ ಸ್ನಾನ ಮಾಡುತ್ತ ಭಿಕ್ಷವನ್ನು ಮಾಡಬೇಕು.

೨೯. ಹೋಮಕಾಲಗಳಲ್ಲಿ ಆಯಾ ಹೋಮಮಂತ್ರಗಳನ್ನು ಜಪಿಸಬೇಕು. ವೇದಾಧ್ಯಯನವನ್ನು ನಿತ್ಯವೂಮಾಡಬೇಕು. ಸಂಧ್ಯೆಗಳಲ್ಲಿ ಸಾವಿತ್ರಿಯನ್ನು ಜಪಿಸುತ್ತಿರಬೇಕು.

೩೦. ಏಕಾಂತದಲ್ಲಿ ಯಾವಾಗಲೂ ಪರಮೇಶ್ವರನನ್ನು ಧ್ಯಾನಮಾಡುತ್ತಿರಬೇಕು. ಕಾಮ, ಕ್ರೋಧ, ಪ್ರತಿಗ್ರಹಗಳನ್ನು ಬಿಟ್ಟುಬಿಡಬೇಕು. ಒಬ್ಬನ ಮನೆಯಲ್ಲಿಯೇ ಊಟಮಾಡುವುದನ್ನು ಬಿಡಬೇಕು.

೩೧. ಒಂದೇಬಟ್ಟೆ ಹಾಕಿಕೊಳ್ಳಬೇಕು. ಎರಡುಬಟ್ಟೆ ಇದ್ದರೂ ಬಾಧಕವಿಲ್ಲ. ಶಿಖೆ, ಯಜ್ಞೋಪವೀತಗಳನ್ನು ಧರಿಸಿಯೂ, ಕಮಂಡಲುಗಳಿದ್ದ ತ್ರಿದಂಡ ಯತಿಯು ಉತ್ತಮ ಲೋಕವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದಲ್ಲಿ ಆದಿಖಂಡದ
ಯತಿಧರ್ಮ ನಿರೂಪಣದಲ್ಲಿ ಐವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ಷಷ್ಟಿತಮೋಽಧ್ಯಾಯಃ

### ॥ ವ್ಯಾಸ ಉವಾಚ ॥

**ಏವಂ ತ್ವಾಶ್ರಮನಿಷ್ಠಾನಾಂ ಯತೀನಾಂ ನಿಯತಾತ್ಮನಾಂ ।**
**ಭೈಕ್ಷ್ಯೇಣ ವರ್ತನಂ ಪ್ರೋಕ್ತಂ ಫಲಮೂಲೈರಥಾಪಿ ವಾ ॥ ೧ ॥**

**ಏಕಕಾಲಂ ಚರೇದ್ಭೈಕ್ಷ್ಯಂ ನ ಪ್ರಸಜ್ಯೇತ ವಿಸ್ತರಂ ।**
**ಭೈಕ್ಷ್ಯೇ ಪ್ರಸಕ್ತೋ ಹಿ ಯತಿರ್ವಿಷಯೇಷ್ವಪಿ ಸಜ್ಜತಿ ॥ ೨ ॥**

**ಸಪ್ತಾಗಾರಂ ಚರೇದ್ಭೈಕ್ಷ್ಯಂ ಅಲಾಭೇ ನ ಪುನಶ್ಚರೇತ್ ।**
**ಗೋದೋಹಮಾತ್ರಂ ತಿಷ್ಠೇತ ಕಾಲಂ ಭಿಕ್ಷುರಧೋಮುಖಃ ॥**

---

ಪದ್ಮಪುರಾಣದ ಆದಿಖಂಡದ ಅರವತ್ತನೆಯ ಅಧ್ಯಾಯವು

೧. ವ್ಯಾಸನು ಹೇಳುತ್ತಾನೆ: ಯತ್ಯಾಶ್ರಮದಲ್ಲಿ ನಿರತನಾಗಿರುವ ಜಿತೇಂದ್ರಿಯರಿಗೆ ಭಿಕ್ಷಾಟನವು ಹೇಳಲ್ಪಟ್ಟಿದೆ· ಅಥವಾ ಹಣ್ಣು, ಗೆಡ್ಡೆ ಗೆಣಸುಗಳನ್ನು ತಿಂದು ಇರಬಹುದು.

೨. ಒಂದೇ ಹೊತ್ತು ಭಿಕ್ಷೆಮಾಡಬೇಕು. ಹೆಚ್ಚಾಗಿ ಭಿಕ್ಷದಲ್ಲಿ ಆಸಕ್ತನಾದವನು ವಿಷಯಸುಖದಲ್ಲೂ ಆಸಕ್ತನಾಗುತ್ತಾನೆ.

೩. ಏಳು ಮನೆಗಳಿಗೆ ಹೋಗಬೇಕು. ಸಿಕ್ಕದಿದ್ದಲ್ಲಿ ಪುನಃ ಬೇರೆ ಕಡೆ ಹೋಗಬಾರದು. ಮತ್ತು ಹಸುವನ್ನು ಕರೆಯುವಷ್ಟು ಹೊತ್ತು ಮಾತ್ರ ತಲೆ ಬಗ್ಗಿಸಿಕೊಂಡು ನಿಂತುಕೊಂಡಿರಬೇಕು.

ಭಿಕ್ಷೇತ್ಯುಕ್ತ್ವಾ ಸಕೃತ್ತೂಷ್ಣೀಂ ಅಶ್ನೀಯಾದ್ವಾಗ್ಯತಃ ಶುಚಿಃ ।
ಪ್ರಕ್ಷಾಳ್ಯ ಪಾಣಿಪಾದೌ ಚ ಸಮಾಚಮ್ಯ ಯಥಾವಿಧಿ ॥ ೪ ॥

ಆದಿತ್ಯೇ ದರ್ಶಯಿತ್ವಾಽನ್ನಂ ಭುಂಜೀತ ಪ್ರಾಙ್ಮುಖೋ ನರಃ ।
ಹುತ್ವಾ ಪ್ರಾಣಾಹುತೀಃ ಪಂಚ ಗ್ರಾಸಾನಷ್ಟೌ ಸಮಾಹಿತಃ ॥ ೫ ॥

ಆಚಮ್ಯ ದೇವಂ ಬ್ರಹ್ಮಾಣಂ ಧ್ಯಾಯೇತ ಪರಮೇಶ್ವರಂ ।
ಅಲಾಬುದಾರುಪಾತ್ರೇ ಚ ಮೃಣ್ಮಯಂ ವೈಣವಂ ತಥಾ ॥ ೬ ॥

ಚತ್ವಾರಿ ಯತಿಪಾತ್ರಾಣಿ ಮನುರಾಹ ಪ್ರಜಾಪತಿಃ ।
ಪ್ರಾಗ್ರಾತ್ರೇಃ ಮಧ್ಯರಾತ್ರೇ ಚ ಪರರಾತ್ರೇ ತಥೈವ ಚ ॥ ೭ ॥

ಸಂಧ್ಯಾಸೂಕ್ತವಿಶೇಷೇಣ ಚಿಂತಯೇನ್ನಿತ್ಯಮೀಶ್ವರಂ ।
ಕೃತ್ವಾಹೃತ್ಪದ್ಮನಿಲಯೇ ವಿಖ್ಯಾತಂ ವಿಶ್ವಸಂಭವಂ ॥ ೮ ॥

---

೪. "ಭಿಕ್ಷಾ" ಎಂದು ಒಂದಾವರ್ತಿ ಕೂಗಿ ಸುಮ್ಮನಿರಬೇಕು. ತಂದಮೇಲೆ ಕೈಕಾಲು ತೊಳೆದುಕೊಂಡು ಶುಚಿಯಾಗಿ ಆಚಮನ ಮಾಡಿ ಊಟ ಮಾಡಬೇಕು.

೫. ಸೂರ್ಯನಿಗೆ ಆ ಅನ್ನವನ್ನು ತೋರಿಸಿ ಪೂರ್ವ ಮುಖವಾಗಿ ಕುಳಿತುಕೊಂಡು ಐದುಬಾರಿ ಪ್ರಾಣಾಹುತಿಯನ್ನು ಹೋಮಮಾಡಿ ಎಂಟು ಗ್ರಾಸಗಳನ್ನು ಮಾತಾಡದೆ ತಿನ್ನಬೇಕು.

೬. ಊಟವಾದ ಮೇಲೆ ಆಚಮನಮಾಡಿ ಬ್ರಹ್ಮನನ್ನು ಧ್ಯಾನಿಸುತ್ತಿರಬೇಕು. ಸೋರೆಬುರುಡೆ, ಮಣ್ಣಿನಪಾತ್ರೆ ಬಿದಿರುಪಾತ್ರೆ, ಮರದ ಪಾತ್ರೆಗಳು ಈ ನಾಲ್ಕು ಬಗೆಗಳು ಯತಿಗೆ ಉತ್ತಮವಾಗಿರುವ ಪಾತ್ರೆಗಳು.

೭. ರಾತ್ರಿಯ ಆದಿಯಲ್ಲಿ, ಮಧ್ಯರಾತ್ರೆಯಲ್ಲಿ, ಅಪರ ರಾತ್ರಿಯಲ್ಲಿ ಸಂಧ್ಯಾವದನದ (ಯತಿಯ) ರೀತಿಯಲ್ಲಿ ಈಶ್ವರನನ್ನು ಚಿಂತಿಸಬೇಕು.

೮–೧೦. ಪದ್ಮಾಕಾರವಾದ ಹೃದಯದಲ್ಲಿ, ವಿಶ್ವಾತ್ಮಕನಾದ ಸರ್ವ ಪ್ರಾಣಿಗಳಿಗೂ ಅತಿರಿಕ್ತನಾದ, ಅಜ್ಞಾನಕ್ಕಿಂತ ದೂರನಾದ, ಸರ್ವಾಧಾರ

ಆತ್ಮಾನಂ ಸರ್ವಭೂತಾನಾಂ ಪರಸ್ತಾತ್ತಮಸಃ ಸ್ಥಿತಂ।
ಸರ್ವಸ್ಯಾಽಧಾರಮವ್ಯಕ್ತಂ ಆನಂದಂ ಜ್ಯೋತಿರವ್ಯಯಂ ॥ ೯ ॥

ಪ್ರಧಾನಪುರುಷಾತೀತಮಾಕಾಶಂ ದಹನಂ ಶಿವಂ।
ತದಂತಂ ಸರ್ವಭಾವಾನಾಂ ಈಶ್ವರಂ ಬ್ರಹ್ಮರೂಪಿಣಂ ॥೧೦॥

ಓಂಕಾರಾಂತೇಽಥ ಚಾಽಽತ್ಮಾನಂ ಸಮಾಪ್ಯ ಪರಮಾತ್ಮನಿ।
ಆಕಾಶೇ ದೇವಮೀಶಾನಂ ಧ್ಯಾಯೇತಾಽಽಕಾಶಮಧ್ಯಗಂ ॥೧೧॥

ಕಾರಣಂ ಸರ್ವಭಾವಾನಾಂ ಆನಂದೈಕಸಮಾಶ್ರಯಂ।
ಪುರಾಣಪುರುಷಂ ವಿಷ್ಣುಂ ಧ್ಯಾಯೇನ್ಮುಚ್ಯೇತ ಬಂಧನಾತ್ ॥೧೨॥

ಯದ್ವಾ ಗುಹಾದೌ ಪ್ರಕೃತೌ ಜಗತ್ಸಂಮೋಹನಾಲಯೇ।
ವಿಚಿಂತ್ಯಂ ಪರಮಂ ವ್ಯೋಮ ಸರ್ವಭೂತೈಕ ಕಾರಣಂ ॥೧೩॥

---

ನಾದ, ಅವ್ಯಯ ಮತ್ತು ಜ್ಯೋತಿರೂಪನಾದ, ಪ್ರಧಾನ ಪುರುಷನಿಗಿಂತ ಬೇರೆಯಾದ ಶಿವನಾದ ಆಕಾಶರೂಪನಾದ, ಸರ್ವಪ್ರಾಣಿಗಳಿಗೂ ಕೊನೆಯವನಾದ ಬ್ರಹ್ಮರೂಪಿಯಾದ ಈಶ್ವರನನ್ನು ಧ್ಯಾನಿಸಬೇಕು.

೧೧. ಓಂಕಾರವನ್ನು ಧ್ಯಾನಿಸಿ ಆದಾದಮೇಲೆ ಜೀವಾತ್ಮನನ್ನು ಪರಮಾತ್ಮನಲ್ಲಿ ಲೀನಮಾಡಿ ಹೃದಯಾಕಾಶದಲ್ಲಿ ಈಶ್ವರನನ್ನು ಧ್ಯಾನ ಮಾಡಬೇಕು.

೧೨. ಸರ್ವ ಪ್ರಾಣಿಗಳಿಗೂ ಕಾರಣನಾದ ಆನಂದ ಸ್ವರೂಪನಾದ ಪುರಾಣ ಪುರುಷನಾದ ವಿಷ್ಣುವನ್ನು ಧ್ಯಾನಿಸಿದರೆ ಬಂಧನದಿಂದ ಮುಕ್ತನಾಗುವನು.

೧೩. ಹಾಗಿಲ್ಲದಿದ್ದರೆ, ಹೃದಯರೂಪವಾದ ಗುಹೆಯಲ್ಲಿ, ಅಥವಾ ಪ್ರಕೃತಿಯಲ್ಲಿ, ಪ್ರಪಂಚವು ಲಯವಾಗುವ ಜಾಗದಲ್ಲಿ, ಸರ್ವ ಪ್ರಾಣಿಗಳಿಗೆ ಕಾರಣನಾದ ಪರಮಾತ್ಮನನ್ನು ಚಿಂತಿಸಬೇಕು.

ಜೀವನಂ ಸರ್ವಭೂತಾನಾಂ ಯತ್ರಲೋಕಃ ಪ್ರಲೀಯತೇ ।
ಆನಂದಂ ಬ್ರಹ್ಮಣಃ ಸೂಕ್ಷ್ಮಂ ಯತ್ಪಶ್ಯಂತಿ ಮುಮುಕ್ಷವಃ ॥೧೪॥
ತನ್ಮಧ್ಯೇ ನಿಹಿತಂ ಬ್ರಹ್ಮ ಕೇವಲಂ ಜ್ಞಾನಲಕ್ಷಣಂ ।
ಅನಂತಂ ಸತ್ಯಮೀಶಾನಂ ವಿಚಿಂತ್ಯಾಽಽಸೀತ ವಾಗ್ಯತಃ ॥೧೫॥
ಗುಹ್ಯಾದ್ಗುಹ್ಯತಮಂ ಜ್ಞಾನಂ ಯತೀನಾಮೇತದೀರಿತಂ ।
ಯೋಽತ್ರ ತಿಷ್ಠೇತ್ಸದಾಽನೇನ ಸೋಽಶ್ನುತೇ ಯೋಗಮೈಶ್ವರಂ॥೧೬॥
ತಸ್ಮಾಜ್ಜ್ಞಾನರತೋ ನಿತ್ಯಂ ಆತ್ಮವಿದ್ಯಾಪರಾಯಣಃ ।
ಜ್ಞಾನಂ ಸಮಭ್ಯಸೇದ್ಬ್ರಹ್ಮ ಯೇನ ಮುಚ್ಯೇತ ಬಂಧನಾತ್ ॥೧೭॥
ಮತ್ವಾ ಪೃಥಕ್ತ್ವಮಾತ್ಮಾನಂ ಸರ್ವಸ್ಮಾದೇವ ಕೇವಲಂ ।
ಆನಂದಮಕ್ಷರಂ ಜ್ಞಾನಂ ಧ್ಯಾಯೇತ ಚ ತತಃ ಪರಂ ॥೧೮॥

---

೧೪. ಸರ್ವ ಭೂತಗಳಿಗೂ ಯಾವ ಜೀವನದಿಂದ ಪ್ರಪಂಚವು ಲಯ ಹೊಂದುವುದೋ ಅಂಥಹ ಪರಮಾತ್ಮನನ್ನು ಧ್ಯಾನಿಸಬೇಕು. ಅಲ್ಲಿ ತಿಳಿಯ ತಕ್ಕದ್ದು, ಮುಮುಕ್ಷುಗಳು ನೋಡುವ ಬ್ರಹ್ಮನ ಸೂಕ್ಷ್ಮರೂಪ ವಾದ ಆನಂದವನ್ನು, ಎಂದು ತಿಳಿ.

೧೫. ಆ ಆನಂದ ಮಧ್ಯದಲ್ಲಿ ಜ್ಞಾನಲಕ್ಷಣವಾದ ಬ್ರಹ್ಮವು ಇದೇ. ಅನಂತನೂ, ಸತ್ವಸ್ವರೂಪನೂ ಆದ ಆ ಬ್ರಹ್ಮನನ್ನು ಮಾತಾಡದೆ ಚಿಂತಿಸಬೇಕು.

೧೬. ಇದು ಅತಿ ಗುಹ್ಯವಾದ ಜ್ಞಾನವು ಯತಿಗಳಿಗೆ ಹೇಳಲ್ಪಟ್ಟಿದೆ. ಇದರಲ್ಲಿ ಕ್ರೀಡಿಸುವವನು ಈಶ್ವರನ ಸಂಬಂಧವಾದ ಯೋಗವನ್ನು ತಿಳಿ ಯುತ್ತಾನೆ.

೧೭. ಆದ್ದರಿಂದ ಯಾವಾಗಲೂ ಜ್ಞಾನಾಸಕ್ತನಾಗಿ ಆತ್ಮವಿದ್ಯೆ ಯಲ್ಲಿರುವವನು ಜ್ಞಾನವನ್ನು ತಿಳಿದು ಬ್ರಹ್ಮ ಪರಾಯಣನಾಗುತ್ತಾನೆ. ಹೀಗೆ ಮಾಡಿದರೆ ಬಂಧನದಿಂದ ಮುಕ್ತನಾಗುತ್ತಾನೆ.

೧೮. ಆ ಆತ್ಮನನ್ನು ಎಲ್ಲಕ್ಕಿಂತ ಬೇರೆಯೆಂದು ಆನಂದರೂಪವಾದ ಅದನ್ನು ತಿಳಿದು ಆಮೇಲೆ ಪರಬ್ರಹ್ಮನನ್ನು ತಿಳಿಯಬೇಕು.

ಯಸ್ಮಾದ್ಭವತಿ ಭೂತಾನಿ ಯಜ್ಜ್ಞಾತ್ವಾ ನೇಹ ಜಾಯತೇ ।
ಸ ತಸ್ಮಾದೀಶ್ವರೋ ದೇವಃ ಪರಸ್ಮಾದ್ಯೋಽಧಿತಿಷ್ಠತಿ ॥
ಯದಂತರೆ ತದ್ಗಮನಂ ಶಾಶ್ವತಂ ಶಿವಮವ್ಯಯಂ ॥೧೯॥

ಯ ಇದಂ ಸ್ವಪರೋಕ್ಷ್ಯಸ್ತು ಸ ದೇವಃ ಸ್ಯಾನ್ಮಹೇಶ್ವರಃ ।
ವ್ರತಾನಿ ಯಾನಿ ಭಿಕ್ಷೂಣಾಂ ತಥಾಯುಕ್ತ ವ್ರತಾನಿ ಚ ॥
ಏಕೈಕಾತಿಕ್ರಮೇ ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ॥೨೦॥

ಉಪೇತ್ಯ ಚ ಸ್ತ್ರಿಯಂ ಕಾಮಾತ್ಪ್ರಾಯಶ್ಚಿತ್ತಂ ಸಮಾಹಿತಃ ।
ಪ್ರಾಣಾಯಾಮ ಸಮಾಯುಕ್ತಂ ಕುರ್ಯಾತ್ ಸಾಂತಪನಂ ಶುಚಿಃ ॥

ತತಶ್ಚರೇತ ನಿಯಮೋ ಕೃಚ್ಛ್ರಂ ಸಂಯತಮಾನಸಃ ।
ಪುನರಾಶ್ರಮಮಾಗಮ್ಯ ಚರೇದ್ಭಿಕ್ಷುರತಂದ್ರಿತಃ ॥೨೧॥

---

೧೯. ಯಾವುದರಿಂದ ಪ್ರಾಣಿಗಳು ಹುಟ್ಟುತ್ತವೋ, ಯಾವುದನ್ನು ತಿಳಿದರೆ ಲೋಕದಲ್ಲಿ ಹುಟ್ಟುವುದಿಲ್ಲವೋ, ಈಶ್ವರನಿಗಿಂತ ಕೊನೆಯಲ್ಲಿ ಯಾವುದು ನಿಲ್ಲುತ್ತದೆಯೋ, ಯಾವುವು ನಾಶವಾದ ಮೇಲೆ ತಾನೂ ಹೋಗುತ್ತದೋ, ಅಂಥಾಶಾಶ್ವತವಾದುದೂ, ಶಿವವೂ ಆದ ಪದಾರ್ಥವನ್ನು ಧ್ಯಾನಿಸಿ ಮುಕ್ತನಾಗಬೇಕು.

೨೦. ಹೀಗೆ ಪರೋಕ್ಷದಿಂದ ಪ್ರತ್ಯಕ್ಷಮಾಡಿಕೊಳ್ಳುವ ಮಹೇಶ್ವರನೇ ಪರಾತ್ಪರವಸ್ತು. ಭಿಕ್ಷುಗಳಿಗೆ ಉಕ್ತವಾದ ವ್ರತವನ್ನು ಕೇಳಿದಂತೆ ಆಯುಕ್ತವಾದವುಗಳನ್ನೂ ಕೇಳು. ಒಂದೊಂದನ್ನು ತಪ್ಪಿದರೂ ಪ್ರಾಯಶ್ಚಿತ್ತವು ಹೇಳಲ್ಪಟ್ಟಿದೆ.

೨೧. ಕಾಮದಿಂದ ಯತಿಯು ಸ್ತ್ರೀ ಸಂಗಮಾಡಿದರೆ ಪ್ರಾಣಾಯಾಮಗಳನ್ನು ಮಾಡುತ್ತ ಸಾಂತಪನ ವ್ರತವನ್ನು ಮಾಡಬೇಕು.

೨೨. ಆಮೇಲೆ ಜಿತೇಂದ್ರಿಯನಾಗಿ ಕೃಚ್ಛ್ರವನ್ನಾಚರಿಸಬೇಕು. ಆಮೇಲೆ ಪುನಃ ಆ ಆಶ್ರಮವನ್ನ ಹೊಂದಿ ಜೋಪಾನವಾಗಿ ಭಿಕ್ಷೆ ಮಾಡಬೇಕು.

ನ ಧರ್ಮಯುಕ್ತಮನೃತಂ ಹಿನಸ್ತೀತಿ ಮನೀಷಿಣಃ ।
ತಥಾಪಿ ನ ಚ ಕರ್ತವ್ಯಃ ಪ್ರಸಂಗೋಹ್ಯೇಷ ದಾರುಣಃ ॥೨೩॥

ಏಕರಾತ್ರೋಪವಾಸಶ್ಚ ಪ್ರಾಣಾಯಾಮಶತಂ ತಥಾ ।
ಉಕ್ತ್ವಾನೃತಂ ಪ್ರಕರ್ತವ್ಯಂ ಯತಿನಾ ಧರ್ಮಲಿಪ್ಸುನಾ ॥೨೪॥

ಪರಮಾಪದ್ಗತೇನಾಪಿ ನ ಕಾರ್ಯಂ ಸ್ತೇಯಮನ್ಯತಃ ।
ಸ್ತೇಯಾದಭ್ಯಧಿಕಃ ಕಶ್ಚಿನ್ನಾಸ್ತ್ಯಧರ್ಮ ಇತಿ ಸ್ಮೃತಃ ॥೨೫॥

ಹಿಂಸಾ ಚೈವಾಪರಾ ತೃಷ್ಣಾ ಯಾಚ್ಞಾತ್ಮಜ್ಞಾನನಾಶಿಕಾ ।
ಯದೇತ್ದ್ದ್ರವಿಣಂ ನಾಮ ಪ್ರಾಣಾ ಹ್ಯೇತೇ ಬಹಿಶ್ಚರಾಃ ॥೨೬॥

ಸ ತಸ್ಯ ಹರತೇ ಪ್ರಾಣಾನ್ಯೋಯಸ್ಯ ಹರತೇ ಧನಂ ।
ಏವಂ ಕೃತ್ವಾ ಸ ದುಷ್ಟಾತ್ಮಾ ಭಿನ್ನವೃತ್ತೋ ವ್ರತಾಚ್ಚ್ಯುತಃ ॥

---

೨೩. ಧರ್ಮದಿಂದ ಕೂಡಿದ ಸುಳ್ಳನು ಹೇಳಿದರೆ ಪಾತಕವಿಲ್ಲವೆಂದು ದೊಡ್ಡವರು ಹೇಳುತ್ತಾರೆ. ಆದರೂ ಆ ವಿಷಯವು ಕೆಟ್ಟದಾದುದರಿಂದ ಸುಳ್ಳನ್ನು ಹೇಳಲೇ ಬಾರದು.

೨೪. ಯತಿಯು ಸುಳ್ಳು ಹೇಳಿದರೆ ಒಂದು ರಾತ್ರಿ ಉಪವಾಸವನ್ನೂ ನೂರು ಪ್ರಾಣಾಯಾಮವನ್ನೂ ಮಾಡಬೇಕು.

೨೫. ಎಷ್ಟೇ ಕಷ್ಟ ಬಂದರೂ ಕಳ್ಳತನ ಮಾಡಬಾರದು. ಕಳ್ಳತನಕ್ಕಿಂತ ಹೆಚ್ಚಾದ ಅಧರ್ಮವು ಇನ್ನಿಲ್ಲ.

೨೬. ಹಿಂಸೆ, ಹಣದಾಸೆ, ಬೇಡುವಿಕೆ, ಇವು ಆತ್ಮಜ್ಞಾನಗಳನ್ನು ನಾಶಮಾಡುತ್ತವೆ. ಹಣವೆಂಬುದು ಹೊರಗೆ ಸಂಚರಿಸುವ ಪ್ರಾಣಗಳಲ್ಲವೇ ?

೨೭. ಒಬ್ಬನು ಧನವನ್ನು ಮತ್ತೊಬ್ಬನು ಕದ್ದರೆ, ಅವನ ಪ್ರಾಣ ಕದ್ದಂತಾಯಿತು. ಹಾಗೆ ಮಾಡಿದರೆ ಇನ್ನೂ ಆ ಯತಿಯು ವ್ರತದಿಂದ ಚ್ಯುತನಾಗುತ್ತಾನೆ.

ಭೂಯೋ ನಿರ್ವೇದಮಾಪನ್ನಃ ಚರೇದ್ಭಿಕ್ಷುರತಂದ್ರಿತಃ ।
ಅಕಸ್ಮಾದೇವ ಹಿಂಸಾಂ ತು ಯದಿ ಭಿಕ್ಷುಃ ಸಮಾಚರೇತ್ ॥೨೮॥

ಕುರ್ಯಾತ್ಕೃಚ್ಛ್ರಾತಿಕೃಚ್ಛ್ರಂ ತು ಚಾಂದ್ರಾಯಣಮಥಾಪಿ ವಾ ।
ಸ್ಕಂದೇತೇಂದ್ರಿಯದೌರ್ಬಲ್ಯಾತ್ ಸ್ತ್ರಿಯಂ ದೃಷ್ಟ್ವಾ ಯತಿರ್ಯದಿ ॥

ತೇನ ಧಾರಯಿತವ್ಯಾ ವೈ ಪ್ರಾಣಾಯಾಮಸ್ತು ಷೋಡಶ ।
ದಿವಾ ಸ್ಕಂದೇ ತ್ರಿರಾತ್ರಂ ಸ್ಯಾತ್ ಪ್ರಾಣಾಯಾಮಶತಂ ಬುಧಾಃ ॥

ಏಕಾನ್ನೇ ಮಧುಮಾಂಸೇ ಚ ನವಶ್ರಾದ್ಧೇ ತಥೈವ ಚ ।
ಪ್ರತ್ಯಕ್ಷ ಲವಣೇ ಚೋಕ್ತಂ ಪ್ರಾಜಾಪತ್ಯಂ ವಿಶೋಧನಂ ॥೩೧॥

ಧ್ಯಾನನಿಷ್ಠಸ್ಯ ಸತತಂ ನಶ್ಯತೇ ಸರ್ವಪಾತಕಂ ।
ತಸ್ಮಾನ್ಮಹೇಶ್ವರಂ ಧ್ಯಾತ್ವಾ ತಸ್ಯ ಧ್ಯಾನಪರೋ ಭವೇತ್ ॥೩೨॥

---

೨೮. ಅಕಸ್ಮಾತ್ತಾಗಿ ಯತಿಯು ಹಿಂಸೆಮಾಡಿದರೆ ಅತಿಕೃಚ್ಛ್ರವನ್ನೂ, ಚಾಂದ್ರಾಯಣವನ್ನೂ ಮಾಡಬೇಕು.

೨೯. ಹೆಂಗಸನ್ನು ನೋಡಿ ಮನಸ್ಸಿನ ದೌರ್ಬಲ್ಯದಿಂದ ಇಂದ್ರಿಯ ಸ್ಖಲನವಾದರೆ ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕು.

೩೦. ಹಗಲಿನಲ್ಲಿ ಇಂದ್ರಿಯ ಸ್ಖಲನವಾದರೆ ಮೂರು ರಾತ್ರಿಗಳು ಪಾಣಾಯಾಮಶತಗಳನ್ನು ಮಾಡಬೇಕು.

೩೧. ಒಬ್ಬನ ಮನೆಯಲ್ಲಿ ಅನ್ನ ತಿನ್ನುತ್ತಿದ್ದರೂ, ಜೇನನ್ನು ಕುಡಿದರೂ, ಮಾಂಸತಿಂದರೂ, ನವಶ್ರಾದ್ಧದಲ್ಲಿ ಭಾಗಿಯಾದರೂ, ಪ್ರತ್ಯಕ್ಷವಾಗಿ ಉಪ್ಪನ್ನು ತಿಂದರೂ, ಪ್ರಾಜಾಪತ್ಯ ವ್ರತವನ್ನು ಮಾಡಿದರೆ ಶುಧ್ಧನಾಗುತ್ತಾನೆ.

೩೨. ಧ್ಯಾನನಿಷ್ಠನಾಗಿರುವವನ ಸರ್ವಪಾಪವೂ ನಾಶವಾಗುತ್ತವೆ. ಆದ್ದರಿಂದ ಧ್ಯಾನನಿಷ್ಠನಾಗಿ ಬ್ರಹ್ಮಧ್ಯಾನದಲ್ಲಿರಬೇಕು.

ಯದ್ಬ್ರಹ್ಮ ಪರಮಂ ಜ್ಯೋತಿಃ ಪ್ರತಿಷ್ಠಾಕ್ಷರಮವ್ಯಯಂ ।
ಯೋಂತರಾತ್ಮಾ ಪರಂ ಬ್ರಹ್ಮ ಸ ವಿಜ್ಞೇಯೋ ಮಹೇಶ್ವರಃ ॥೩೩॥

ಏಷ ದೇವೋ ಮಹಾದೇವಃ ಕೇವಲಃ ಪರಮಃ ಶಿವಃ ।
ತದೇವಾಕ್ಷರಮದ್ವೈತಂ ಸದಾನಿತ್ಯಂ ಪರಂ ಪದಂ ॥೩೪॥

ತಸ್ಮಾನ್ಮಹೀಯತೇ ದೇವೇ ಸ್ವಧಾಮ್ನಿ ಜ್ಞಾನಸಂಜ್ಞಿತೇ ।
ಆತ್ಮಯೋಗಾತ್ಮಕೆ ತತ್ತ್ವೇ ಮಹಾದೇವಸ್ತತಃಸ್ಮೃತಃ ॥೩೫॥

ನಾನ್ಯಂ ದೇವಂ ಮಹಾದೇವಾತ್ ವ್ಯತಿರಿಕ್ತಂ ಪ್ರಪಶ್ಯತಿ ।
ತಮೇವಾऽऽತ್ಮಾನಮನ್ವೇತಿ ಯಃ ಸ ಯಾತಿ ಪರಂ ಪದಂ ॥೩೬॥

ಮನ್ಯಂತೇ ಯೇ ಸ್ವಮಾತ್ಮಾನಂ ವಿಭಿನ್ನಂ ಪರಮೇಶ್ವರಾತ್ ।
ನ ತೇ ಪಶ್ಯಂತಿ ತಂ ದೇವಂ ವೃಥಾ ತೇಷಾಂ ಪರಿಶ್ರಮಃ ॥೩೭॥

---

೩೩. ಜ್ಯೋತಿಸ್ವರೂಪನಾದ, ಅವ್ಯಯನಾದ, ಎಲ್ಲರಲ್ಲೂ ಅಂತರಾತ್ಮನಾದ ಪರಬ್ರಹ್ಮನನ್ನೇ ಈಶ್ವರನೆಂದು ತಿಳಿಯಬೇಕು.

೩೪. ಇವನೇ ಮಹಾದೇವನು, ಕೇವಲನು, ಪರಮಶಿವನು, ಅಕ್ಷರನು, ಒಂದಾದವನು, ನಿತ್ಯನೂ, ಪರನೂಆದವನೂ ಆಗಿರುತ್ತಾನೆ.

೩೫. ಜ್ಞಾನ ಸಂಜ್ಞಿಕವಾದ, ಆತ್ಮಯೋಗಾತ್ಮಕವಾದ ತತ್ವದಲ್ಲಿ ರಮಿಸುವುದರಿಂದ ಮಹಾದೇವನೆಂದು ಹೆಸರಾಯಿತು.

೩೬. ಆ ಧ್ಯಾನಕಾಲದಲ್ಲಿ ಮಹಾದೇವನಿಗಿಂತಲೂ ಬೇರೆ ಯಾವುದನ್ನೂ ಅವನು ಕಾಣುವುದಿಲ್ಲ. ಅದೇ ಆತ್ಮವೆನಿಸಿಕೊಳ್ಳುತ್ತದೆ. ಅದೇ ಪರಮಪದವೆಂದೂ ಎನ್ನಿಸಿಕೊಳ್ಳುತ್ತದೆ.

೩೭. ಆತ್ಮನನ್ನು ಪರಮೇಶ್ವರನಿಗಿಂತಲೂ ಬೇರೆಯೆಂದು ಯಾರು ತಿಳಿಯುತ್ತಾರೋ ಅವರು ಆ ಮಹಾದೇವನನ್ನು ನೋಡಲಾರರು. ಅವರಪರಿಶ್ರಮವೂ ವ್ಯರ್ಥವಾಗುವುದು.

ಏಕಮೇವ ಪರಂ ಬ್ರಹ್ಮ ವಿಜ್ಞೇಯಂ ತತ್ತ್ವಮವ್ಯಯಂ।
ಸ ದೇವಸ್ತು ಮಹಾದೇವೋ ನೈತದ್ವಿಜ್ಞಾಯ ಬಧ್ಯತೆ ॥೩೮॥
ತಸ್ಮಾದ್ಯತೇತ ನಿಯತಂ ಯತಿಃ ಸಂಯತಮಾನಸಃ।
ಜ್ಞಾನಯೋಗರತಃ ಶಾಂತೋ ಮಹಾದೇವಪರಾಯಣಃ ॥೩೯॥
ಏಷ ವಃ ಕಥಿತೋ ವಿಪ್ರಾಃ ಯತೀನಾಮಾಶ್ರಮಃ ಶುಭಃ।
ಪಿತಾಮಹೇನ ಮುನಿನಾ ವಿಭುನಾ ಪೂರ್ವಮಿರಿತಃ ॥೪೦॥
ನಾಪುತ್ರಶಿಷ್ಯಯೋಗಿಭ್ಯೋ ದದ್ಯಾದಿದಮನುತ್ತಮಂ।
ಜ್ಞಾನಂ ಸ್ವಯಂಭುವಾ ಪ್ರೋಕ್ತಂ ಯತಿಧರ್ಮಾಶ್ರಯಂ ಶಿವಂ ॥
ಇತಿ ಯತಿನಿಯಮಾನಾಮೇತದುಕ್ತಂ ವಿಧಾನಂ।
ಸುರವರಪರಿತೋಷೇಯದ್ಭವೇದೇಕಹೇತುಃ ॥
ನ ಭವತಿ ಪುನರೇಷಾಮುದ್ಭವೋ ವಾ ವಿನಾಶಃ।
ಪ್ರಣಿತಮನಸೋ ಯೇ ನಿತ್ಯಮೇವಾಽಽಚರಂತಿ ॥೪೨॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಷಷ್ಟಿತಮೋಽಧ್ಯಾಯಃ

---

೩೮. ಇದು ಒಂದೇ ಒಂದು ಪರಬ್ರಹ್ಮವು. ಇದು ತತ್ವರೂಪವಾದದು. ಅವ್ಯಯವು. ಅದನ್ನೇ ತಿಳಿಯಬೇಕು. ಅದೇ ಮಹಾದೇವನು. ಇದನ್ನು ತಿಳಿದರೆ ಬಂಧನವಿಲ್ಲ.

೩೯. ಆದ್ದರಿಂದ ಜಿತೇಂದ್ರಿಯನಾಗಿ ಯತಿಯು ಜ್ಞಾನಯೋಗರತನಾಗಿ ಮಹಾದೇವನಲ್ಲಿ ಆಸಕ್ತನಾಗಿರಬೇಕು.

೪೦. ಈ ಯತಿಗಳ ಆಶ್ರಮಧರ್ಮವನ್ನು ನಿಮಗೆ ಹೇಳಿದ್ದೇನೆ. ಬ್ರಹ್ಮನು ಇದನ್ನೇ ಪೂರ್ವದಲ್ಲಿ ಋಷಿಗಳಿಗೆ ಹೇಳಿದ್ದನು.

೪೧. ಪುತ್ರ, ಶಿಷ್ಯ, ಯೋಗಿಗಳಲ್ಲದವರಿಗೆ ಇದನ್ನು ಹೇಳಬಾರದು. ಯತಿಧರ್ಮಾಶ್ರಯವಾದ ಈ ಜ್ಞಾನವನ್ನು ಬ್ರಹ್ಮನು ಹೇಳಿದ್ದಾನೆ.

೪೨. ಹೀಗೆ ಯತಿ ನಿಯಮಗಳನ್ನು ಅನೇಕವಾಗಿ ಹೇಳಿದ್ದೇನೆ. ಇವುಗಳೊಳಗೆ ಒಂದಾದರೂ ಸ್ವಾಮಿಯ ಸಂತೋಷಕ್ಕೆ ಕಾರಣವಾದರೆ ಅವನಿಗೆ ಹುಟ್ಟುಸಾವುಗಳಿಲ್ಲ. ಜಿತೇಂದ್ರಿಯರು ಪ್ರತಿ ದಿವಸದಲ್ಲೂ ಇದನ್ನು ಆಚರಿಸುತ್ತಾರೆ.

ಶ್ರೀ ಪದ್ಮಮಹಾಪುರಾಣದ ಆದಿಖಂಡದ ಅರವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

ಅಥ ಪದ್ಮಪುರಾಣೇ ಆದಿಖಂಡೇ ಏಕಷಷ್ಟಿತಮೋಽಧ್ಯಾಯಃ

**॥ ಸೂತ ಉವಾಚ ॥**

**ಏವಮುಕ್ತಂ ಪುರಾ ವಿಪ್ರಾ ವ್ಯಾಸೇನಾಮಿತತೇಜಸಾ ।**
**ಏತಾವದುಕ್ತ್ವಾ ಭಗವಾನ್ ವ್ಯಾಸಃ ಸತ್ಯವತೀಸುತಃ ॥೧॥**

**ಸಮಾಶ್ವಾಸ್ಯ ಮುನೀನ್ ಸರ್ವಾನ್ ಜಗಾಮ ಚ ಯಥಾಗತಂ ।**
**ಭವದ್ಭ್ಯಸ್ತು ಮಯಾ ಪ್ರೋಕ್ತಂ ವರ್ಣಾಶ್ರಮವಿಧಾನಕಂ ॥೨॥**

**ಏವಂ ಕೃತ್ವಾ ಪ್ರಿಯೋ ವಿಷ್ಣೋಃ ಭವತ್ಯೇವ ನ ಚಾನ್ಯಥಾ ।**
**ರಹಸ್ಯಂ ತತ್ರ ವಕ್ಷ್ಯಾಮಿ ಶೃಣುತ ದ್ವಿಜಸತ್ತಮಾಃ ॥೩॥**

**ಯೇ ಚಾತ್ರ ಕಥಿತಾ ಧರ್ಮಾ ವರ್ಣಾಶ್ರಮನಿಬಂಧನಾಃ ।**
**ಹರಿಭಕ್ತಿಕಲಾಂಶಾಂಶಸಮಾನಾ ನ ಹಿ ತೇ ದ್ವಿಜಾಃ ॥೪॥**

---

ಪದ್ಮ ಪುರಾಣದ ಆದಿಖಂಡದ ಅರವತ್ತೊಂದನೆಯ ಅಧ್ಯಾಯವು

೧. ಸೂತನು ಹೇಳುತ್ತಾನೆ: ವ್ಯಾಸರು ಪೂರ್ವದಲ್ಲಿ ಈ ಧರ್ಮಗಳನ್ನು ಈ ರೀತಿ ಹೇಳಿ ಋಷಿಗಳಿಗೆ ಸಮಾಧಾನ ಪಡಿಸಿ ಹೊರಟು ಹೋದರು.

೨. ಆ ವರ್ಣಾಶ್ರಮ ವಿಧಾನಗಳನ್ನು ನಿಮಗೆ ನಾನು ಹೇಳಿದ್ದೇನೆ.

೩. ಈ ರೀತಿಮಾಡಿದರೆ ವಿಷ್ಣುವಿಗೆ ಖಂಡಿತವಾಗಿಯೂ ಪ್ರಿಯನಾಗುತ್ತಾನೆ. ಅದರ ಗುಟ್ಟನ್ನು ಹೇಳುತ್ತೇನೆ ಕೇಳಿ.

೪. ವರ್ಣಾಶ್ರಮಗಳಿಗೆ ಇಲ್ಲಿ ಅನೇಕವಿಧವಾದ ಧರ್ಮಗಳನ್ನು ಹೇಳಿದ್ದೇನೆ. ಆದರೂ ಕೂಡ ಈ ಧರ್ಮಗಳು ಹರಿಭಕ್ತಿಯ ಹದಿನಾರರಲ್ಲೊಂದು ಪಾಲಿನ ಅಂಶದಲ್ಲಿ ಅಂಶವನ್ನೂ ಕೂಡ ಹೋಲಲಾರದು.

ಪುಂಸಾಮೇಕೇಹ ವೈ ಸಾಧ್ಯಾ ಹರಿಭಕ್ತಿಃ ಕಲೌ ಯುಗೆ ।
ಯುಗಾಂತರೇಽನ್ಯಧರ್ಮಾ ಹಿ ಸೇವಿತವ್ಯಾ ನರೇಣ ಹಿ ॥೩॥

ಕಲೌ ನಾರಾಯಣಂ ದೇವಂ ಯಜತೇ ಯಃ ಸ ಧರ್ಮಭಾಕ್ ।
ದಾಮೋದರಂ ಹೃಷೀಕೇಶಂ ಪುರುಹೂತಂ ಸನಾತನಂ ॥೬॥

ಹೃದಿ ಕೃತ್ವಾ ಪರಂ ಶಾಂತಂ ಜಿತಮೇವ ಜಗತ್ತ್ರಯಂ ।
ಕಲಿಕಾಲೋರಗಾದಂಶಾತ್ ಕಿಲ್ಬಿಷಾತ್ಕಾಲಕೂಟತಃ ॥೭॥

ಹರಿಭಕ್ತಿಸುಧಾಂ ಪೀತ್ವಾ ಉಲ್ಲಂಘ್ಯೋ ಭವತಿ ದ್ವಿಜಃ ।
ಕಿಂ ಜಪೈಃ ಶ್ರೀಹರೇರ್ನಾಮ ಗೃಹೀತಂ ಯದಿಮಾನುಷೈಃ ॥೮॥

ಕಿಂ ಸ್ನಾನೈರ್ವಿಷ್ಣುಪಾದಾಂಭೋ ಮಸ್ತಕೇ ಯೇನ ಧಾರ್ಯತೇ ।
ಕಿಂ ಯಜ್ಞೇನ ಹರೇಃ ಪಾದಪದ್ಮಂ ಯೇನ ಹೃದಿ ಧೃತಂ ॥೯॥

---

೫. ಕಲಿಯುಗದಲ್ಲಿ ಹರಿಭಕ್ತಿಯೊಂದೇ ಸಾಧ್ಯವಾದುದು. ಮಿಕ್ಕ ಯುಗಗಳಲ್ಲಾದರೆ ಬೇರೆ ಧರ್ಮಗಳನ್ನು ಮಾಡಬಹುದು. ಈ ಯುಗದಲ್ಲಿ ಹಾಗಲ್ಲ.

೬. ಕಲಿಯುಗದಲ್ಲಿ ಯಾವನು ನಾರಾಯಣನನ್ನು ಪೂಜಿಸುತ್ತಾನೋ ಅವನೇ ಧರ್ಮಭಾಗಿಯು, ಸನಾತನನಾದ ವಿಷ್ಣುವನ್ನು ಯಾವನು ಮನಸ್ಸಿನಲ್ಲಿಟ್ಟುಕೊಂಡು ಇರುತ್ತಾನೋ ಅವನು ಮೂರು ಲೋಕವನ್ನೂ ಜಯಿಸಿದಂತೆ.

೭. ಕಲಿಕಾಲವೆಂಬ ಕೃಷ್ಣಸರ್ಪದಿಂದ ಕಚ್ಚಲ್ಪಟ್ಟವನು, ಹರಿಭಕ್ತಿಯೆಂಬ ಅಮೃತವನ್ನು ಪಾನಮಾಡಿದರೆ ಆ ವಿಷವು ನಾಶವಾಗುತ್ತದೆ

೮-೯. ಯಾವನು ಹರಿನಾಮ ಸ್ಮರಿಸುತ್ತಾನೋ ಅವನು ಜಪಾದಿಗಳನ್ನು ಮಾಡಬೇಕಾದ್ದಿಲ್ಲ. ವಿಷ್ಣುಪಾದೋದಕವು ತಲೆಯಲ್ಲಿ ಬಿದ್ದ ಮೇಲೆ ಸ್ನಾನಗಳು ಬೇಕಿಲ್ಲ. ಹರಿಯಪಾದವನ್ನು ಸ್ಮರಿಸುತ್ತಿದ್ದರೆ ಯಜ್ಞಯಾಗಾದಿಗಳು ಬೇಕಿಲ್ಲ.

ಕಿಂ ದಾನೇನ ಹರೇಃ ಕರ್ಮ ಸಭಾಯಾಂ ಯೈಃ ಪ್ರಕಾಶಿತಂ ।
ಹರೇರ್ಗುಣಗಣಾನ್ ಶ್ರುತ್ವಾ ಯಃ ಪ್ರಹೃಷ್ಯೇತ್ಪುನಃ ಪುನಃ ॥೧೦॥

ಸಮಾಧಿನಾ ಪ್ರಹೃಷ್ಟಸ್ಯ ಸ ಗತಿಃ ಕೃಷ್ಣಚೇತಸಃ ।
ತತ್ರ ವಿಘ್ನಕರಾಃ ಪ್ರೋಕ್ತಾಃ ಪಾಷಂಡಾಃ ಪಾಪಪೇಶಲಾಃ ।
ನಾರ್ಯಸ್ತತ್ಸಂಗಿನಶ್ಚಾಪಿ ಹರಿಭಕ್ತಿವಿಘಾತಕಾಃ ॥೧೧॥

ನಾರೀಣಾಂ ನಯನಾದೇಶಃ ಸುರಾಣಾಮಪಿ ದುರ್ಜಯಃ ।
ಸ ಯೇನ ವಿಜಿತೋ ಲೋಕೇ ಹರಿಭಕ್ತಃ ಸ ಉಚ್ಯತೇ ॥೧೨॥

ಮಾದ್ಯಂತಿ ಮುನಯೋಽಪ್ಯತ್ರ ನಾರೀ ಚರಿತಲೋಲುಪಾಃ ।
ಹರಿಭಕ್ತಿಃ ಕುತಃ ಪುಂಸಾಂ ನಾರೀಭಕ್ತಿಜುಷಾಂ ದ್ವಿಜಾಃ ॥೧೩॥

ರಾಕ್ಷಸ್ಯಃ ಕಾಮಿನೀವೇಷಾತ್ ಚರಂತಿ ಜಗತಿ ದ್ವಿಜಾಃ ।
ನರಾಣಾಂ ಬುದ್ಧಿಕವಳಂ ಕುರ್ವಂತಿ ಸತತಂ ಹಿ ತಾಃ ॥೧೪॥

---

೧೦. ಸಭೆಯಲ್ಲಿ ಹರಿನಾಮವನ್ನು ಪ್ರಕಾಶಮಾಡಿದರೆ ದಾನಗಳು ಬೇಕಿಲ್ಲ. ಹರಿಯ ಗುಣಗಳನ್ನು ಧ್ಯಾನಮಾಡುತ್ತಾ ಯಾವ ಮಾನವನು ಸಂತೋಷಗೊಳ್ಳುತ್ತಾನೋ ಅವನಿಗೆ, ಸಮಾಧಿಯನ್ನು ಹೊಂದಿದವನು ಯಾವಗತಿಯನ್ನು ಹೊಂದುತ್ತಾನೋ ಆಗತಿ ಬರುತ್ತದೆ.

೧೧. ಪಾಪಿಗಳಾದ ಪಾಷಂಡಿಗಳು, ಹೆಂಗಸರು, ಅವರ ಜೊತೆಯಲ್ಲಿರುವವರು ಇವರು ಈ ಧ್ಯಾನಕ್ಕೆ ವಿಘ್ನಕಾರಿಗಳು.

೧೨. ಹೆಂಗಸರ ಹುಬ್ಬಿನ ಅಲ್ಲಾಟಕ್ಕೆ ದೇವತೆಗಳೂ ಅಧೀನರಾಗುತ್ತಾರೆ. ಅದನ್ನು ಯಾರು ಜಯಿಸುತ್ತಾರೋ ಅವರೇ ಹರಿಭಕ್ತರೆನಿಸುತ್ತಾರೆ.

೧೩. ಹೆಂಗಸರ ವಿಷಯದಲ್ಲಿ ಮುನಿಗಳೂ ಆಸಕ್ತರಾಗಿ ಮೋಹ ಹೊಂದುತ್ತಾರೆ. ಹೆಂಗಸರನ್ನೇ ಸೇವಿಸುವ ಮನುಜರಿಗೆ ಹರಿಭಕ್ತಿ ಎಲ್ಲಿಂದ ಬರಬೇಕು?

೧೪. ರಾಕ್ಷಸಿಯರು ಹೆಂಗಸರ ರೂಪದಿಂದ ಭೂಮಿಯಲ್ಲಿ ಸಂಚರಿಸುತ್ತಾರೆ. ಜನರ ಬುದ್ಧಿಯನ್ನು ಯಾವಾಗಲೂ ನುಂಗುತ್ತಿರುತ್ತಾರೆ.

ತಾವದ್ವಿದ್ಯಾ ಪ್ರಭವತಿ ತಾವತ್ ಜ್ಞಾನಂ ಪ್ರವರ್ತತೇ।
ತಾವತ್ಸುನಿರ್ಮಲಾ ಮೇಧಾ ಸರ್ವಶಾಸ್ತ್ರವಿಧಾರಿಣೀ ॥೧೫॥

ತಾವಜ್ಜಪಸ್ತಪಸ್ತಾವತ್ ತಾವತ್ತೀರ್ಥನಿಷೇವಣಂ।
ತಾವಚ್ಚ ಗುರುಶುಶ್ರೂಷಾ ತಾವದ್ಧಿ ತರಣೇ ಮತಿಃ ॥೧೬॥

ತಾವತ್ಪ್ರಬೋಧೋ ಭವತಿ ವಿವೇಕಸ್ತಾವದೇವ ಹಿ।
ತಾವತ್ಸತಾಂ ಸಂಗರುಚಿಸ್ತಾವತ್ ಪೌರಾಣಲಾಲಸಾ ॥೧೭॥

ಯಾವತ್ಸೀಮಂತಿನೀಲೋಲನಯನಾಂದೋಲನಂ ನ ಹಿ।
ಜನೋಪರಿ ಪತೇದ್ವಿಪ್ರಾಃ ಸರ್ವಧರ್ಮವಿಲೋಪನಂ ॥೧೮॥

ತತ್ರ ಯೇ ಹರಿಪಾದಾಬ್ಜಮಧುಲೇಶಪ್ರಮೋದಿತಾಃ।
ತೇಷಾಂ ನ ನಾರೀಲೋಲಾಕ್ಷಿಕ್ಷೇಪಣಂ ಹಿ ಪ್ರಭುರ್ಭವೇತ್ ॥೧೯॥

ಜನ್ಮ ಜನ್ಮ ಹೃಷೀಕೇಶಸೇವನಂ ಯೈಃ ಕೃತಂ ದ್ವಿಜಾಃ।
ದ್ವಿಜೇ ದತ್ತಂ ಹುತಂ ವಹ್ನೌ ವಿರತಿಸ್ತತ್ರ ತತ್ರ ಹಿ ॥೨೦॥

---

೧೫–೧೬. ಎಲ್ಲಿಯವರೆಗೆ ಹೆಂಗಸರ ಅಧೀನಕ್ಕೆ ಸಿಕ್ಕುವುದಿಲ್ಲವೋ ಅಲ್ಲಿಯ ವರೆಗೆ ವಿದ್ಯೆ, ಬುದ್ಧಿ, ಶಾಸ್ತ್ರಜ್ಞಾನ, ಜಪ, ತಪಸ್ಸು, ತೀರ್ಥ ಸೇವೆ, ಗುರುಶುಶ್ರೂಷಾ, ಉದ್ಧಾರನಾಗಬೇಕೆಂಬ ಬುದ್ಧಿ, ತೋರುತ್ತವೆ.

೧೭–೧೮. ಎಲ್ಲಿಯ ವರೆಗೂ ಹೆಂಗಸರ ಚಂಚಲ ನಯನವು ಜನಗಳ ಮೇಲೆ ಬೀಳುವುದಿಲ್ಲವೋ ಅಲ್ಲಿಯವರೆಗೆ ಎಚ್ಚರಿಕೆ, ವಿವೇಕ, ಸಜ್ಜನ ಸಹವಾಸ, ಪುರಾಣೇಚ್ಛೆ ಇರುತ್ತವೆ.

೧೯. ಅದರಲ್ಲೂ ಕೂಡ ಯಾರು ಹರಿಪಾದವನ್ನು ಸ್ವಲ್ಪವಾದರೂ ಸ್ಮರಿಸುತ್ತಾರೋ ಅವರನ್ನು ಆ ಹೆಂಗಸರೂ ಜಯಿಸಲಾರರು.

೨೦. ಜನ್ಮ ಜನ್ಮದಲ್ಲೂ ಯಾರು ವಿಷ್ಣುವನ್ನು ಸೇವೆಮಾಡಿದ್ದಾರೆಯೋ ಅದು ಆಯಾ ಜನ್ಮದಲ್ಲಿ ಬ್ರಾಹ್ಮಣನಿಗೆ ಕೊಟ್ಟದಾನ, ಮತ್ತು ಯಾಗದಫಲವಾಗಿ, ವಿರಾಮವನ್ನು ಹೊಂದುತ್ತದೆ.

ನಾರೀಣಾಂ ಕಿಲ ಕೇ ನಾಮ ಸೌಂದರ್ಯಂ ಪರಿಚಕ್ಷತೇ।
ಭೂಷಣಾನಾಂ ಚ ವಸ್ತ್ರಾಣಾಂ ಚಾಕಚಕ್ಯಂ ತದುಚ್ಯತೇ ॥೨೦॥
ಸ್ನೇಹಾತ್ಮಜ್ಞಾನರಹಿತಂ ನಾರೀರೂಪಂ ಕುತಃ ಸ್ಮೃತಂ।
ಪೂಯಮೂತ್ರಪುರೀಷಾಸೃಕ್ತ್ವಙ್ಮೇದೋಽಸ್ಥಿವಸಾನ್ವಿತಂ ॥೨೧॥
ಕಳೇವರಂ ಹಿ ತನ್ನಾಮ ಕುತಃ ಸೌಂದರ್ಯಮತ್ರ ಹಿ।
ತದೇವ ಪೃಥಗಾಚಿಂತ್ಯ ಸ್ಪೃಷ್ಟ್ವಾ ಸ್ನಾತ್ವಾ ಶುಚಿರ್ಭವೇತ್ ॥೨೨॥
ಸಹಿತಂ ತೈಃ ಶರೀರಂ ಹಿ ದೃಶ್ಯತೇ ಸುಂದರಂ ಜನೈಃ।
ಅಹೋಽತಿದುರ್ದಶಾ ನೄಣಾಂ ದುರ್ದೈವಘಟಿಕಾ ದ್ವಿಜಾಃ ॥೨೩॥
ಕುಚಾವೃತೇಽಂಗೇ ಪುರುಷೋ ನಾರೀಂ ಬುದ್ಧ್ವಾ ಪ್ರವರ್ತತೇ।
ಕಾ ನಾರೀ ವಾ ಪುಮಾನ್ ಕೋ ವಾ ವಿಚಾರೇ ಸತಿ ಕಿಂಚ ನ ॥೨೪॥

---

೨೦. ಒಡವೆ, ಬಟ್ಟೆ, ಅವರ ಚಾಕಚಕ್ಯತೆ ಇವಲ್ಲವೇ ಹೆಂಗಸರ ಸೌಂದರ್ಯ. ಸ್ನೇಹಾತ್ಮಜ್ಞಾನಗಳಿಲ್ಲದಿರುವುದಲ್ಲವೇ ನಾರೀರೂಪ ವೆಂಬುದು.

೨೧. ಕೀವು, ಮೂತ್ರ, ಮಲ, ರಕ್ತ, ಚರ್ಮ, ಮೇದಸ್ಸು, ಮೂಳೆ ಗಳಿಂದ ಕೂಡಿದ ಆ ಶರೀರದಲ್ಲಿ ಸೌಂದರ್ಯವೆಲ್ಲಿಂದ ಬಂತು ?

೨೨. ಅದನ್ನು ಯೋಚಿಸಿಕೊಂಡು ಮುಟ್ಟಿದರೆ ಸ್ನಾನಮಾಡಿ ಶುಚಿ ಯಾಗಬೇಕು.

೨೩. ಅವುಗಳಿಂದ ಕೂಡಿದ ಶರೀರವು ಸುಂದರವಾಗಿ ಕಾಣುತ್ತದೆ. ಅಯ್ಯೋ ! ಮನುಷ್ಯರ ದೈವಘಟಿತವಾದ ದುರ್ದಶೆಯನ್ನು ಏನೆಂದು ಹೇಳಲಿ.

೨೪. ಕುಚಗಳಿಂದ ಕೂಡಿರುವ ಅವಯವದಲ್ಲಿ, ಗಂಡಸು ಹೆಂಗ ಸೆಂದು ಮೋಹಗೊಳ್ಳುತ್ತಾನೆ. ವಿಚಾರಮಾಡಿದರೆ ಪುರುಷನಾರು? ಹೆಂಗ ಸಾರು? ಒಂದೂ ಇಲ್ಲ.

ತಸ್ಮಾತ್ಸರ್ವಾತ್ಮನಾ ಸಾಧುಃ ನಾರೀಸಂಗಂ ವಿವರ್ಜಯೇತ್ ।
ಕೋ ನಾಮ ನಾರೀಮಾಸಾದ್ಯ ಸಿದ್ಧಿಂ ಪ್ರಾಪ್ನೋತಿ ಭೂತಲೇ ॥

ಕಾಮಿನೀಕಾಮಿನೀಸಂಗಿಸಂಗಮಿತ್ಯಪಿ ಸಂತ್ಯಜೇತ್ ।
ತತ್ಸಂಗಾದ್ರೌರವಮಿತಿ ಸಾಕ್ಷಾದೇವ ಪ್ರತೀಯತೇ ॥೨೭॥

ಅಜ್ಞಾನಾಲ್ಲೋಲುಪಾ ಲೋಕಾಸ್ತತ್ರ ದೈವೇನ ವಂಚಿತಾಃ ।
ಸಾಕ್ಷಾನ್ನರಕಕುಂಡೇಽಸ್ಮಿನ್ ನಾರೀಯೋನೌ ಪಚೇನ್ನರಃ ॥೨೮॥

ಯತ ಏವಾಽಗತಃ ಪೃಥ್ವ್ಯಾಂ ತಸ್ಮಿನ್ನೇವ ಪುನಾರಮೇತ್ ।
ಯತಃ ಪ್ರಸರತೇ ನಿತ್ಯಂ ಮೂತ್ರಂ ರೇತೋ ಮಲೋತ್ಥಿತಂ ॥೨೯॥

ತತ್ರೈವ ರಮತೇ ಲೋಕಃ ಕಸ್ತಸ್ಮಾದ್ಧಿ ಶುಚಿರ್ಭವೇತ್ ।
ತತ್ರಾತಿಕಷ್ಟಂ ಲೋಕೇಽಸ್ಮಿನ್ ಅಹೋ ದೈವವಿಡಂಬನಾ ॥೩೦॥

---

೨೬, ಆದ್ದರಿಂದ ಸತ್ಪುರುಷನು ಸ್ತ್ರೀಸಂಗವನ್ನು ಖಂಡಿತವಾಗಿ ಬಿಡಬೇಕು. ಹೆಂಗಸನ್ನು ಹೊಂದಿದವನಾವನು ತಾನೆ ಪ್ರಪಂಚದಲ್ಲಿ ಸಿದ್ಧಿಯನ್ನು ಹೊಂದಿದ್ದಾನೆ?

೨೭. ಆದ್ದರಿಂದ ಹೆಂಗಸನ್ನೂ, ಅವಳ ಸಂಗವನ್ನೂ ಬಿಡಬೇಕು. ಆ ಸಹವಾಸದಿಂದ ರೌರವನರಕವು ಬರುತ್ತದೆ ಎಂದು ತಿಳಿಯುತ್ತದೆ.

೨೮. ದೈವವಂಚಿತರಾದವರು ಅಜ್ಞಾನದಿಂದ ಹೆಂಗಸರಲ್ಲಿ ಆಸಕ್ತರಾಗಿ ನಾರೀಯೋನಿ ಎಂಬ ನರಕದಲ್ಲಿ ಪಚನ ಮಾಡಲ್ಪಡುತ್ತಾರೆ.

೨೯. ಪೃಥಿವಿಗೆ ಎಲ್ಲಿಂದ ಬಂದನೋ ಅಲ್ಲೇ ಪುನಃ ರಮಿಸಬೇಕು. ಅದೇ ಜಾಗದಲ್ಲಿ ಅಲ್ಲಿಯೇ ನಿತ್ಯವೂ ಮೂತ್ರಬರುತ್ತಿರುವುದು.

೩೦. ಅದರಿಂದ ಅಕೆಯನ್ನು ಹೊಂದಿ ಯಾವನು ತಾನೇ ಶುಚಿಯಾದಾನು! ಆದರೂ ಜನವು ಅಲ್ಲೇರಮಿಸುತ್ತದೆ. ಅಯ್ಯೋ ಬಹು ಕಷ್ಟವು. ದೈವದ ವಿಡಂಬನೆಯೇ ಹೀಗಲ್ಲವೆ !

ಪುನಃ ಪುನಾ ರಮೇತ್ತತ್ರ ಅಹೋ ನಿಸ್ತ್ರಪತಾ ನೃಣಾಂ ।
ತಸ್ಮಾದ್ವಿಚಾರಚೇದ್ಧೀಮಾನ್ ನಾರೀದೋಷಗಣಾನ್ ಬಹೂನ್ ॥೩೧॥
ಮೈಥುನಾದ್ಬಲಹಾನಿಃ ಸ್ಯಾತ್ ನಿದ್ರಾತಿತರುಣಾಯತೇ ।
ನಿದ್ರಯಾಽಪಹೃತಜ್ಞಾನೋ ಹ್ಯಲ್ಪಾಯುರ್ಜಾಯತೇ ನರಃ ॥೩೨॥
ತಸ್ಮಾತ್ಪ್ರಯತ್ನತೋ ಧೀಮಾನ್ ನಾರೀಂ ಮೃತ್ಯುಮಿವಾತ್ಮನಃ ।
ಪಶ್ಯೇದ್ಗೋವಿಂದಪಾದಾಬ್ಜೇ ಮನೋ ವೈ ರಮಯೇದ್ಬುಧಃ ॥೩೩॥
ಇಹಾಮುತ್ರ ಸುಖಂ ತದ್ಧಿ ಗೋವಿಂದಪದಸೇವನಂ ।
ವಿಹಾಯ ಕೋ ಮಹಾಮೂಢೋ ನಾರೀಪದಂ ಹಿ ಸೇವತೇ॥೩೪॥
ಜನಾರ್ದನಾಂಘ್ರಿಸೇವಾ ಹಿ ಹ್ಯಪುನರ್ಭವದಾಯಿನೀ ।
ನಾರೀಣಾಂ ಯೋನಿಸೇವಾ ಹಿ ಯೋನಿಸಂಕಟಕಾರಿಣೀ ॥೩೫॥

---

೩೧. ತಿಳಿದೂ ತಿಳಿದೂ ಅಲ್ಲಿಯೇ ಪದೇ ಪದೇ ರಮಿಸುತ್ತಾರೆ. ಮನುಷ್ಯರಿಗೆ ನಾಚಿಕೆಯೇ ಇಲ್ಲ. ಆದ್ದರಿಂದ ನಾರಿಯ ದೋಷಗಳನ್ನೂ, ಗುಣಗಳನ್ನೂ ಯೋಚಿಸಿ ವಿಚಾರಮಾಡಬೇಕು.

೩೨. ಸಂಭೋಗಿಸುವುದರಿಂದ ಬಲವು ನಾಶವಾಗುತ್ತದೆ. ನಿದ್ರೆಯು ಬಹಳ ಹೆಚ್ಚುತ್ತದೆ. ನಿದ್ದೆಯಿಂದ ಜ್ಞಾನವು ನಷ್ಟವಾಗಿ ಮನುಜನು ಅಲ್ಪಾಯುವಾಗುತ್ತಾನೆ.

೩೩. ಆದ್ದರಿಂದ ವಿದ್ವಾಂಸನು ಹೆಂಗಸನ್ನು ಮೃತ್ಯುವಂತೆ ತಿಳಿದು ಗೋವಿಂದನ ಪಾದಾರವಿಂದದಲ್ಲಿ ಮನಸ್ಸನ್ನು ಇಡಬೇಕು.

೩೪. ಇಹಪರಗಳಲ್ಲಿ ಸುಖವನ್ನು ಕೊಡುವ ಗೋವಿಂದನಪಾದ ಸೇವೆಯನ್ನು ಬಿಟ್ಟು ಯಾವ ಮೂಢನು ತಾನೇ ನಾರೀಪಾದವನ್ನು ಸೇವಿಸುತ್ತಾನೆ?

೩೫. ಜನಾರ್ದನನ ಪಾದಸೇವೆಯು ಪುನರುತ್ಪತ್ತಿಯನ್ನು ಕೊಡುವುದಿಲ್ಲ. ನಾರಿಯರ ಯೋನಿಸೇವೆಯಾದರೋ ಯೋನಿಯಲ್ಲಿ ಹುಟ್ಟುವ ಸಂಕಟವನ್ನು ಮಾಡುತ್ತದೆ.

ಪುನಃ ಪುನಃ ಪತೇದ್ಯೋನೌ ಯಂತ್ರ ನಿಷ್ಪಾಟಿತೋ ಯಥಾ ।
ಪುನಸ್ತಾಮೇವಾಭಿಲಷೇತ್ ವಿಂದ್ಯಾದಸ್ಯ ವಿಡಂಬನಂ ॥೩೬॥

ಊರ್ಧ್ವಬಾಹುರಹಂ ವಚ್ಮಿ ಶೃಣು ಮೇ ಪರಮಂ ವಚಃ ।
ಗೋವಿಂದೇ ಧೇಹಿ ಹೃದಯಂ ನ ಯೋನೌ ಯಾತನಾಜುಷಿ ॥೩೭॥

ನಾರೀಸಂಗಂ ಪರಿತ್ಯಜ್ಯ ಯಶ್ಚಾಪಿ ಪರಿವರ್ತತೇ ।
ಪದೇ ಪದೇಽಶ್ವಮೇಧಸ್ಯ ಫಲಮಾಪ್ನೋತಿ ಮಾನವಃ ॥೩೮॥

ಕುಲಾಂಗನಾ ದೈವದೋಷಾದೂಢಾ ಯದಿ ನೃಣಾಂ ಸತೀ ।
ಪುತ್ರಂ ಉತ್ಪಾದ್ಯತೇ ಯಸ್ಮಿನ್ ತತ್ಸಂಗಂ ಪರಿವರ್ಜಯೇತ್ ॥೩೯॥

ತಸ್ಯ ತುಷ್ಟೋ ಜಗನ್ನಾಥೋ ಭವತ್ಯೇವ ನ ಸಂಶಯಃ ।
ನಾರೀಸಂಗೋ ಹಿ ಧರ್ಮಜ್ಞೈಃ ಅಸತ್ಸಂಗಃ ಪ್ರಕೀರ್ತ್ಯತೇ ॥೪೦॥

---

೩೬. ಯಂತ್ರದಲ್ಲಿ ಪುನಃ ಪುನಃ ಬಂದದ್ದೇ ಬರುವಂತೆ ಯೋನಿಯಲ್ಲಿ ಬರುತ್ತಿರಬೇಕು. ಆದರೂ ಅದರ ವಿಡಂಬನೆಯನ್ನು ತಿಳಿದಿದ್ದರೂ ಅದನ್ನೇ ಅಪೇಕ್ಷಿಸುತ್ತಾನೆ.

೩೭. ಕೈಯನ್ನು ಮೇಲಕ್ಕೆ ಎತ್ತಿಕೊಂಡು ಹೇಳುತ್ತೇನೆ. ನನ್ನ ಮಾತನ್ನು ಕೇಳು. ಗೋವಿಂದನಲ್ಲಿ ಮನಸ್ಸಿಡು. ಯಾತನೆಯನ್ನುಂಟು ಮಾಡುವ ಯೋನಿಯನ್ನು ಸೇವಿಸಬೇಡ.

೩೮. ನಾರಿಯ ಸಂಗವನ್ನು ಬಿಟ್ಟು ಯಾವನು ವಿಮುಖನಾಗುತ್ತಾನೋ ಅವನು ಹೆಜ್ಜೆಹೆಜ್ಜೆಗೂ ಅಶ್ವಮೇಧಫಲವನ್ನು ಹೊಂದುತ್ತಾನೆ.

೩೯. ದೈವದೋಷದಿಂದ ಕುಲಾಂಗನೆಯನ್ನು ವರಿಸಿದರೆ ಆಕೆಯಲ್ಲಿ ಮಗನನ್ನು ಉತ್ಪಾದನೆಮಾಡಿ ಅದರ ಸಂಗವನ್ನು ಖಂಡಿತವಾಗಿ ಬಿಡಬೇಕು.

೪೦. ಆದರಿಂದ ಅವನ ವಿಷಯದಲ್ಲಿ ಖಂಡಿತವಾಗಿಯೂ ದೇವರು ತೃಪ್ತನಾಗುತ್ತಾನೆ. ನಾರಿಯ ಸಂಗವು ವಿದ್ವಾಂಸರಿಂದ ಅಯೋಗ್ಯ ಸಂಗವೆಂದು ಹೇಳಲ್ಪಟ್ಟಿದೆ.

ತಸ್ಮಿನ್ ಸತಿ ಹರೌ ಭಕ್ತಿಃ ಸುದೃಢಾ ನೈವ ಜಾಯತೇ।
ಸರ್ವಸಂಗಂ ಪರಿತ್ಯಜ್ಯ ಹರೌ ಭಕ್ತಿಂ ಸಮಾಚರೇತ್ ॥೪೧॥

ಹರಿಭಕ್ತಿಶ್ಚ ಲೋಕೇಽತ್ರ ದುರ್ಲಭಾ ಹಿ ಮತಾ ಮಮ।
ಹರೌ ಯಸ್ಯ ಭವೇದ್ಭಕ್ತಿಃ ಸ ಕೃತಾರ್ಥೋ ನ ಸಂಶಯಃ ॥೪೨॥

ತತ್ತದೇವಾಽಽಚರೇತ್ಕರ್ಮ ಹರಿಃ ಪ್ರೀಣಾತಿ ಯೇನ ಹಿ।
ತಸ್ಮಿಂಸ್ತುಷ್ಟೇ ಜಗತ್ತುಷ್ಟಂ ಪ್ರೀಣತೇ ಪ್ರೀಣಿತಂ ಜಗತ್ ॥೪೩॥

ಹರೌ ಭಕ್ತಿಂ ವಿನಾ ನೃಣಾಂ ವೃಥಾ ಜನ್ಮ ಪ್ರಕೀರ್ತಿತಂ।
ಬ್ರಹ್ಮಾದಯಃ ಸುರಾ ಯಸ್ಯ ಯಜಂತೆ ಪ್ರೀತಿಹೇತವೇ ॥೪೪॥

ನಾರಾಯಣಮನಾವ್ಯಕ್ತಂ ನ ತಂ ಸೇವೇತ ಕೋ ಜನಃ।
ಯಸ್ಯ ಮಾತಾ ಮಹಾಭಾಗಾ ಪಿತಾ ತಸ್ಯ ಮಹಾಕೃತೀ॥
ಜನಾರ್ದನ ಪದದ್ವಂದ್ವಂ ಹೃದಯೇ ಯೇನ ಧಾರ್ಯತೇ ॥೪೫॥

---

೪೧. ಆ ಯೋನಿ ಸಂಬಂಧವಿದ್ದರೆ ಹರಿಭಕ್ತಿ ಉಂಟಾಗುವುದೇ ಇಲ್ಲ. ಆದ್ದರಿಂದ ಸರ್ವಸಂಗವನ್ನೂ ಬಿಟ್ಟು ಹರಿಯಲ್ಲಿ ಭಕ್ತಿಯನ್ನಿಡಬೇಕು.

೪೨. ಹರಿಭಕ್ತಿಯು ಬರುವುದು ಲೋಕದಲ್ಲಿ ಕಷ್ಟವೆಂದು ನನಗೆ ತೋರುತ್ತದೆ. ಹರಿಯಲ್ಲಿ ಭಕ್ತಿ ಬಂದರೆ ಅವನೇ ಕೃತಾರ್ಥನು. ಸಂಶಯವಿಲ್ಲ.

೪೩. ಹರಿಯು ಸಂತೋಷಪಡುವ ಕೆಲಸಗಳನ್ನೇ ಮಾಡಬೇಕು. ಅವನು ಪ್ರೀತನಾದರೆ ಪ್ರಪಂಚವೇ ಪ್ರೀತವಾಗುತ್ತದೆ.

೪೪. ಹರಿಯಲ್ಲಿ ಭಕ್ತಿಯಿಲ್ಲದಿದ್ದರೆ ಮನುಷ್ಯನ ಜನ್ಮವು ವ್ಯರ್ಥವು. ಬ್ರಹ್ಮಾದಿ ದೇವತೆಗಳೂ ಕೂಡ ಅವನ ಪ್ರೀತಿಗೋಸ್ಕರ ಯಾಗಾದಿಗಳನ್ನು ಮಾಡುತ್ತಿರುವಾಗ ಮನುಜನು ಖಂಡಿತವಾಗಿಯೂ ಭಕ್ತಿಯನ್ನಿಡಬೇಕು.

೪೫. ನಾರಾಯಣನಲ್ಲಿ ಯಾರು ತಾನೆ ಮನಸ್ಸಿಟ್ಟು ಭಕ್ತಿಮಾಡುವುದಿಲ್ಲ ? ಎಲ್ಲರೂ ಮಾಡುತ್ತಾರೆ. ಜನಾರ್ದನನನ್ನು ಸೇವಿಸುವವನಲ್ಲದೆ ಅವನ ತಂದೆ ಮತ್ತು ತಾಯಿಯೂ ಕೂಡ ಪೂತರಾಗಿ ಧನ್ಯರಾಗುತ್ತಾರೆ.

ಜನಾರ್ದನ ಜಗದ್ವಂದ್ಯ ಶರಣಾಗತವತ್ಸಲ ।
ಇತೀರಯಂತಿ ಯೇ ಮರ್ತ್ಯಾ ನ ತೇಷಾಂ ನಿರಯೇ ಗತಿಃ ॥೪೬॥

ಬ್ರಾಹ್ಮಣಾ ಹಿ ವಿಶೇಷೇಣ ಪ್ರತ್ಯಕ್ಷಂ ಹರಿರೂಪಿಣಃ ।
ಪೂಜಯೇಯುಃ ಯಥಾಯೋಗಂ ಹರಿಸ್ತೇಷಾಂ ಪ್ರಸೀದತಿ ॥೪೭॥

ವಿಷ್ಣುಃ ಬ್ರಾಹ್ಮಣರೂಪೇಣವಿಚರೇತ್ ಪೃಥಿವೀಮಿಮಾಂ ।
ಬ್ರಾಹ್ಮಣೇನ ವಿನಾ ಕರ್ಮ ಸಿದ್ಧಿಂ ಪ್ರಾಪ್ನೋತಿ ನೈವ ಹಿ ॥೪೮॥

ದ್ವಿಜಪಾದಾಂಬು ಭಕ್ತ್ಯಾ ಯೈಃ ಪೀತ್ವಾ ಶಿರಸಿ ಚಾರ್ಪಿತಂ ।
ತರ್ಪಿತಾಃ ಪಿತರಸ್ತೇನ ಆತ್ಮಾಽಪಿ ಕಿಲ ತಾರಿತಃ ॥೪೯॥

ಬ್ರಾಹ್ಮಣಾನಾಂ ಮುಖೇ ಯೇನ ದತ್ತಂ ಮಧುರಮರ್ಚಿತಂ ।
ಸಾಕ್ಷಾತ್ಕೃಷ್ಣಮುಖೇ ದತ್ತಂ ತದ್ವೈ ಭುಂಕ್ತೇ ಹರಿಃ ಸ್ವಯಂ ॥

---

೪೬. ಜನಾರ್ದನ, ಜಗದ್ವಂದ್ಯ, ಶರಣಾಗತವತ್ಸಲ ಎಂದು ಯಾರು ಯಾವಾಗಲೂ, ಸ್ಮರಿಸುತ್ತಾರೋ ಅವರಿಗೆ ನರಕಭಯವಿಲ್ಲ.

೪೭. ಬ್ರಾಹ್ಮಣರು ಪ್ರತ್ಯಕ್ಷರಾದ ಹರಿಯ ರೂಪಿಗಳು. ಯಾರು ಆ ಬ್ರಾಹ್ಮಣರನ್ನು ಪೂಜಿಸುತ್ತಾರೋ ಅವರಿಗೆ ಹರಿಯು ಪ್ರಸನ್ನನಾಗುತ್ತಾನೆ.

೪೮. ವಿಷ್ಣುವು ಬ್ರಾಹ್ಮಣರೂಪದಿಂದ ಈ ಭೂಮಿಯನ್ನು ಸುತ್ತುತ್ತಿರುತ್ತಾನೆ. ಬ್ರಾಹ್ಮಣನಿಲ್ಲದ ಕರ್ಮವು ಸಿದ್ಧಿಯಾಗುವುದಿಲ್ಲ.

೪೯. ಯಾರು ಬ್ರಾಹ್ಮಣಪಾದೋದಕವನ್ನು ತಲೆಯಲ್ಲಿ ಪ್ರೋಕ್ಷಿಸಿಕೊಳ್ಳುತ್ತಾರೋ ಅವರ ಪಿತೃಗಳೂ ತೃಪ್ತರಾಗಿ ಅವರ ಆತ್ಮವೂ ತಾರಿತವಾಗುತ್ತದೆ.

೫೦. ಬ್ರಾಹ್ಮಣರಿಗೆ ದಾನಮಾಡಿದ್ದು, ಹೇಳಿದ್ದು, ಪೂಜಿಸಿದ್ದು, ಕೃಷ್ಣನಿಗೆ ಸಾಕ್ಷಾತ್ತಾಗಿ ಮಾಡಿದಂತೆ ಆಗುತ್ತದೆ. ಹರಿಯು ಅದನು ಪ್ರತ್ಯಕ್ಷವಾಗಿ ತಿನ್ನುತ್ತಾನೆ.

ಅಹೋಽತಿದುರ್ಭಗಾ ಲೋಕಾಃ ಪ್ರತ್ಯಕ್ಷೇ ಕೇಶವೇ ದ್ವಿಜೇ ।
ಪ್ರತಿಮಾದಿಷು ಸೇವಂತೇ ತದಭಾವೇ ಹಿ ತತ್ಕ್ರಿಯಾ ॥೫೧॥

ಬ್ರಾಹ್ಮಣಾನಾಮಧಿಷ್ಠಾನಾತ್ ಪೃಥ್ವೀ ಧನ್ಯೇತಿ ಗೀಯತೇ ।
ತೇಷಾಂ ಪಾಣೌ ಚ ಯದ್ದತ್ತಂ ಹರಿಪಾಣೌ ತದರ್ಪಿತಂ ॥೫೨॥

ತೇಭ್ಯಃ ಕೃತಾನ್ನಮಸ್ಕಾರಾತ್ತಿರಸ್ಕಾರೋ ಹಿ ಪಾಪ್ಮನಾಂ ।
ಮುಚ್ಯತೆ ಬ್ರಹ್ಮಹತ್ಯಾದಿ ಪಾಪೇಭ್ಯೋ ವಿಪ್ರವಂದನಾತ್ ॥೫೩॥

ತಸ್ಮಾತ್ಸತಾಂ ಸಮಾರಾಧ್ಯೋ ಬ್ರಾಹ್ಮಣೋ ವಿಷ್ಣುಬುದ್ಧಿತಃ ।
ಕ್ಷುಧಿತಸ್ಯ ದ್ವಿಜಸ್ಯಾಽಽಸ್ಯೇ ಯತ್ಕಿಂಚಿದ್ದೀಯತೇ ಯದಿ ॥೫೪॥

ಪ್ರೇತ್ಯ ಪೀಯೂಷಧಾರಾಭಿಃ ಸಿಚ್ಯತೇ ಕಲ್ಪಕೋಟಿಕಂ ।
ದ್ವಿಜತುಂಡಂ ಮಹಾಕ್ಷೇತ್ರಮನೂಷರಮಕಂಟಕಂ ॥೫೫॥

---

೫೧. ಅಯ್ಯೋ! ಜನರು ಮೂಢರು. ಬ್ರಾಹ್ಮಣರೂಪರಾದ ಪ್ರತ್ಯಕ್ಷ ಕೇಶವನಿರಲು ಪ್ರತಿಮೆಗಳಲ್ಲಿ ಕೇಶವನನ್ನು ಪೂಜಿಸುತ್ತಾರಲ್ಲ! ಅವನಿಲ್ಲದಿದ್ದರಷ್ಟೆ ಪ್ರತಿಮಾಪೂಜೆಯು!

೫೨. ಬ್ರಾಹ್ಮಣರು ಭೂಮಿಯಲ್ಲಿರುವುದರಿಂದಲೇ ಭೂಮಿಯು ಧನ್ಯವು ಎಂದು ಹೇಳಲ್ಪಟ್ಟಿದೆ. ಅವರ ಕೈಲಿ ಕೊಟ್ಟದ್ದು ಹರಿಯ ಕೈಯಲ್ಲಿ ಕೊಟ್ಟಂತೆಯೇ.

೫೩. ಅವರಿಗೆ ನಮಸ್ಕಾರ ಮಾಡಿದರೆ ಪಾಪಗಳನ್ನು ತಿರಸ್ಕಾರ ಮಾಡಿದಂತಾಯಿತು. ಅವರಿಗೆ ವಂದಿಸಿದರೆ ಬ್ರಹ್ಮಹತ್ಯಾದಿ ದೋಷಗಳು ನಾಶವಾಗುತ್ತವೆ.

೫೪. ಆದ್ದರಿಂದ ಸತ್ಪುರುಷರು ವಿಷ್ಣುಬುದ್ಧಿಯಿಂದ ಬ್ರಾಹ್ಮಣರನ್ನು ಪೂಜಿಸಬೇಕು.

೫೫. ಹಸಿವುಗೊಂಡ ಬ್ರಾಹ್ಮಣನಿಗೆ ಅನ್ನ ಹಾಕಿದರೆ ಹರಿಗೆ ಹಾಕಿದಂತಾಯಿತು. ಅವನು ಮೃತನಾದಮೇಲೆ ಅಮೃತಧಾರೆಗಳಿಂದ ಕೋಟಿ ಕಲ್ಪಗಳ ತನಕ ಚುಮುಕಿಸಲ್ಪಡುತ್ತಾನೆ.

ತತ್ರ ಚೇದುಚ್ಯತೇ ಕಿಂಚಿತ್ಕೋಟಿಕೋಟಿಫಲಂ ಲಭೇತ್ ।
ಸಘೃತಂ ಭೋಜನಂ ಚಾಸ್ಮೈ ದತ್ತ್ವಾ ಕಲ್ಪಂ ಸ ಮೋದತೇ ॥೫೬॥

ನಾನಾಸುವಿಷ್ಟಮನ್ನಂ ಯೋ ದದಾತಿ ದ್ವಿಜತುಷ್ಟಯೇ ।
ತಸ್ಯಲೋಕಾ ಮಹಾಭೋಗಾಃ ಕೋಟಿಕಲ್ಪಾಂತಮುಕ್ತಿದಾಃ॥೫೭॥

ಬ್ರಾಹ್ಮಣಂ ಚ ಪುರಸ್ಕೃತ್ಯ ಬ್ರಾಹ್ಮಣೇನ ಚ ಕೀರ್ತಿತಂ ।
ಪುರಾಣಂ ಶೃಣುಯಾನ್ನಿತ್ಯಂ ಮಹಾಪಾಪದವಾನಲಂ ॥೫೮॥

ಪುರಾಣಂ ಸರ್ವತೀರ್ಥೇಷು ತೀರ್ಥಂ ಚಾಧಿಕಮುಚ್ಯತೇ ।
ಯಸ್ಮೈಕಪಾದಶ್ರವಣಾದ್ಧರಿರೇವ ಪ್ರಸೀದತಿ ॥೫೯॥

ಯಥಾ ಸೂರ್ಯವಪುರ್ಭೂತ್ವಾ ಪ್ರಕಾಶಾಯ ಚರೇದ್ಧರಿಃ ।
ಸರ್ವೇಷಾಂ ಜಗತಾಮೇವ ಹರಿರಾಲೋಕಹೇತವೇ ॥೬೦॥

---

೫೬. ಬ್ರಾಹ್ಮಣಮುಖವೆಂಬ ಕರಲಿಲ್ಲದ. ಮುಳ್ಳಿಲ್ಲದ ಭೂಮಿಯಲ್ಲಿ ಏನನ್ನು ಬಿತ್ತಿದರೂ ಕೋಟಿಕೋಟಿ ಫಲಗಳನ್ನು ಕೊಡುತ್ತವೆ; ತುಪ್ಪದಿಂದ ಕೂಡಿದ ಭೋಜನವನ್ನು ಹಾಕಿದರೆ ಒಂದು ಕಲ್ಪದವರೆಗೂ ಸುಖಪಡುತ್ತಾನೆ.

೫೭. ಬ್ರಾಹ್ಮಣನಿಗೆ ನಾನಾಬಗೆಯಾದ ಅನ್ನವನ್ನು ಹಾಕಿದರೆ ಅವನಿಗೆ ಮಹಾಭೋಗವುಳ್ಳ ಲೋಕವು ಕಲ್ಪಕೋಟಿಯ ವರೆಗೂ ಸಿಕ್ಕಿ ಮುಕ್ತಿಯನ್ನು ಕೊಡುತ್ತದೆ.

೫೮. ಬ್ರಾಹ್ಮಣನನ್ನು ಪುರಸ್ಕರಿಸಿ ಬ್ರಾಹ್ಮಣನು ಹೇಳಿದ ಪುರಾಣವನ್ನು ನಿತ್ಯವೂ ಕೇಳಿದರೆ ಮಹಾಪಾಪಗಳೆಲ್ಲವೂ ಹೋಗುತ್ತವೆ.

೫೯. ಪುರಾಣವು ತೀರ್ಥಗಳಿಗೆಲ್ಲಕ್ಕೂ ತೀರ್ಥವು. ಯಾವನು ಒಂಟಿಗಾಲಿನಲ್ಲಿ ನಿಂತು ಕೇಳುತ್ತಾನೋ ಅವನಿಗೆ ಹರಿಯು ಪ್ರಸನ್ನನಾಗುತ್ತಾನೆ.

೬೦. ಹರಿಯು ಸೂರ್ಯನ ಶರೀರವನ್ನು ಹೊಂದಿ ಎಲ್ಲ ಜಗತ್ತಿಗೂ ಬೆಳಕಿಗೆ ಕಾರಣನಾಗಿದ್ದಾನೆ.

ತದ್ವೈವಾಂತಃಪ್ರಕಾಶಾಯ ಪುರಾಣಾವಯವೋಹರಿಃ ।
ವಿಚರೇದಿಹ ಭೂತೇಷು ಪುರಾಣಂ ಪಾವನಂ ಪರಂ ॥೬೧॥

ತಸ್ಮಾದ್ಯದಿ ಹರೇಃ ಪ್ರೀತೆರುತ್ಪಾದೇ ಧೀಯತೇ ಮತಿಃ ।
ಶ್ರೋತವ್ಯಮನಿಶಂ ಪುಂಭಿಃ ಪುರಾಣಂ ಕೃಷ್ಣರೂಪಿಣಃ ॥೬೨॥

ವಿಷ್ಣುಭಕ್ತೇನ ಶಾಂಶೇನ ಶ್ರೋತವ್ಯಮಿತಿ ದುರ್ಲಭಂ ।
ಪುರಾಣಾಖ್ಯಾನಮಮಲಮಮಲೀಕರಣಂ ಪರಂ ॥೬೩॥

ಯಸ್ಮಿನ್ ವೇದಾರ್ಥಮಾಹೃತ್ಯ ಹರಿಣಾ ವ್ಯಾಸರೂಪಿಣಾ ।
ಪುರಾಣಂ ನಿರ್ಮಿತಂ ವಿಪ್ರ ತಸ್ಮಾತ್ತತ್ಪರಮೋಭವೇತ್ ॥೬೪॥

ಪುರಾಣೇ ನಿಶ್ಚಿತೋ ಧರ್ಮೋ ಧರ್ಮಶ್ಚ ಕೇಶವಃ ಸ್ವಯಂ ।
ತಸ್ಮಾಚ್ಛೃತೇ ಪುರಾಣೇ ಹಿ ಶ್ರುತೇ ವಿಷ್ಣುರ್ಭವೇದಿತಿ ॥೬೫॥

---

೬೧. ಸೂರ್ಯನಂತೆ, ಹರಿಯು ಪುರಾಣದ ಅವಯವವಾಗಿ ಅಂತಃ ಪ್ರಕಾಶಕ್ಕೋಸ್ಕರ ಎಲ್ಲಾ ಪ್ರಾಣಿಗಳಲ್ಲೂ ಸಂಚರಿಸುತ್ತಾನೆ. ಆದ್ದರಿಂದ ಪುರಾಣವು ಪಾವನವಾದುದು. ಉತ್ತಮವಾದುದು.

೬೨. ಹರಿಯ ಪ್ರೀತಿಗೋಸ್ಕರ ಮನಸ್ಸಿಡುವುದಾದರೆ ಮನುಷ್ಯರು ಕೃಷ್ಣರೂಪಿಯಾದ ಪುರಾಣವನ್ನು ಯಾವಾಗಲೂ ಕೇಳುತ್ತಿರಬೇಕು.

೬೩. ಆದ್ದರಿಂದ ವಿಷ್ಣುಭಕ್ತನಾದವನು ನಿರ್ದುಷ್ಟವಾದ ಪುರಾಣ ವೆಂಬ ಮಲನಾಶಕವನ್ನು ಕೇಳಬೇಕು.

೬೪. ವ್ಯಾಸರೂಪಿಯಾದ ಹರಿಯು ವೇದಾರ್ಥಗಳನ್ನು ಸಂಗ್ರಹಿಸಿ ಪುರಾಣವನ್ನು ನಿರ್ಮಿಸಿರುವನು. ಆದ್ದರಿಂದ ಅದನ್ನು ಕೇಳಬೇಕು.

೬೫. ಪುರಾಣದಲ್ಲಿ ಧರ್ಮವು ನಿಶ್ಚಯಿಸಲ್ಪಟ್ಟಿದೆ. ಕೇಶವನೇ ಧರ್ಮ ಸ್ವರೂಪನು. ಆದ್ದರಿಂದ ಪುರಾಣವನ್ನು ಕೇಳಿದ ಪುಣ್ಯಾತ್ಮನು ಕೃಷ್ಣನೇ ಆಗುತ್ತಾನೆ.

ಸಾಕ್ಷಾತ್ಸ್ವಯಂ ಹರಿರ್ವಿಪ್ರಃ ಪುರಾಣಂ ಚ ತಥಾವಿಧಂ ।
ಏತಯೋಃ ಸಂಗಮಾಸಾದ್ಯ ಹರಿರೇವ ಭವೇನ್ನರಃ ॥೬೬॥

ತಥಾ ಗಂಗಾಂಬುಸೇಕೇನ ನಾಶಯೇತ್ಕಿಲ್ಬಿಷಂ ಸ್ವಕಂ ।
ಕೇಶವೋ ದ್ರವರೂಪೇಣ ಪಾಪಾತ್ತಾರಯತೇ ಮಹೀಂ ॥೬೭॥

ವೈಷ್ಣವೋ ವಿಷ್ಣುಭಜನಸ್ಯಾಽಽಕಾಂಕ್ಷೀ ಯದಿ ವರ್ತತೇ ।
ಗಂಗಾಂಬುಸೇಕಮಮಲಮಮಲೀಕರಣಂ ಚರೇತ್ ॥೬೮॥

ವಿಷ್ಣುಭಕ್ತಿಪ್ರದಾ ದೇವೀ ಗಂಗಾ ಭುವಿ ಚ ಗೀಯತೆ ।
ವಿಷ್ಣುರೂಪಾ ಹಿ ಸಾ ಗಂಗಾ ಲೋಕನಿಸ್ತಾರಕಾರಿಣೀ ॥೬೯॥

ಬ್ರಾಹ್ಮಣೇಷು ಪುರಾಣೇಷು ಗಂಗಾಯಾಂ ಗೋಷು ಪಿಪ್ಪಲೇ ।
ನಾರಾಯಣಧಿಯಾ ಪುಂಭಿಃ ಭಕ್ತಿಃ ಕಾರ್ಯಾ ಹ್ಯಹೈತುಕೀ ॥೭೦॥

---

೬೬. ಬ್ರಾಹ್ಮಣ, ಪುರಾಣಗಳೆರಡೂ ಸಾಕ್ಷಾತ್ತಾಗಿ ಹರಿಗಳೇ, ಇವೆರಡರ ಸಹವಾಸವನ್ನು ಹೊಂದಿದರೆ ಹರಿಯೇ ನಗುತ್ತಾನೆ.

೬೭. ಕೇಶವನು ನೀರಿನ ರೂಪನ್ನು ತಾಳಿ ಗಂಗಾದಿಗಳ ರೂಪದಿಂದ ಹರಿಯುತ್ತ ಎಲ್ಲರ ಪಾಪವನ್ನೂ ನಾಶಮಾಡುತ್ತ ಭೂಮಿಯನ್ನು ಉದ್ಧರಿಸುತ್ತಾನೆ.

೬೮. ವೈಷ್ಣವನು ವಿಷ್ಣುಭಜನದಲ್ಲಿ ಅಪೇಕ್ಷಿತನಾದರೆ ಗಂಗಾದಿ ನೀರನ್ನು ಸೇವಿಸಿ ಪಾಪನಾಶಮಾಡಿಕೊಳ್ಳ ಬಹುದು.

೬೯. ಗಂಗೆಯು ವಿಷ್ಣುಭಕ್ತಿಯನ್ನು ಕೊಡುವವಳೆಂದು ಭೂಮಿಯಲ್ಲಿ ಪ್ರಸಿದ್ಧವಾಗಿದೆ. ವಿಷ್ಣುರೂಪವಾದ ಗಂಗೆಯು ಲೋಕದ ಪಾಪವನ್ನು ನಾಶಮಾಡುತ್ತಾಳೆ.

೭೦. ಬ್ರಾಹ್ಮಣ, ಪುರಾಣ, ಗಂಗೆ, ಗೋವು, ಅಶ್ವತ್ಥಗಳಲ್ಲಿ ನಾರಾಯಣನೆಂಬ ಬುದ್ಧಿಯಿಂದ ಕಾರಣವಿಲ್ಲದೆ ಭಕ್ತಿಯನ್ನು ಮಾಡಬೇಕು.

ಪ್ರತ್ಯಕ್ಷ ವಿಷ್ಣುರೂಪಾ ಹಿ ತತ್ತ್ವಜ್ಞೈಃ ನಿಶ್ಚಿತಾ ಅಮೀ ।
ತಸ್ಮಾತ್ಸತತಮಭ್ಯರ್ಚ್ಯಾ ವಿಷ್ಣುಭಕ್ತ್ಯಭಿಲಾಷಿಣಾ ॥೭೧॥

ವಿಷ್ಣೌ ಭಕ್ತಿಂ ವಿನಾ ನೄಣಾಂ ನಿಷ್ಫಲಂ ಜನ್ಮ ಚೋಚ್ಯತೇ ।
ಕಲಿಕಾಲಪಯೋರಾಶಿಂ ಪಾಪಗ್ರಾಹಸಮಾಕುಲಂ ॥೭೨॥

ವಿಷಯಾಸಂ ಜಲಾವರ್ತಂ ದುರ್ಬೋಧಫೇನಿಲಂ ಪರಂ ।
ಮಹಾದುಷ್ಟಜನವ್ಯಾಲಮಹಾಭೀಮಂ ಭಯಾನಕಂ ॥೭೩॥

ದುಸ್ತರಂ ಚ ತರನ್ತ್ಯೇವ ಹರಿಭಕ್ತಿತರಿಸ್ಥಿತಾಃ ।
ತಸ್ಮಾದ್ಯತೇತ ವೈ ಲೋಕೋ ವಿಷ್ಣುಭಕ್ತಿಪ್ರಸಾಧನೇ ॥೭೪॥

ಕಿಂ ಸುಖಂ ಲಭತೇ ಜಂತುಃ ಅಸದ್ವಾರ್ತಾವಧಾರಣೇ ।
ಹರೇರದ್ಭುತಲೀಲಸ್ಯ ಲೀಲಾಖ್ಯಾನೇ ನ ಸಜ್ಜತೇ ॥೭೫॥

---

೭೧. ಈ ಬ್ರಾಹ್ಮಣರು ಪ್ರತ್ಯಕ್ಷ ವಿಷ್ಣುರೂಪರೆಂದು ತತ್ತ್ವವನ್ನರಿತು ಇರುವವರು ಹೇಳಿದ್ದಾರೆ, ಆದ್ದರಿಂದ ವಿಷ್ಣುಭಕ್ತಿಯನ್ನಪೇಕ್ಷಿಸುವವರು ಯಾಗಲೂ ಅವರನ್ನು ಪೂಜಿಸಬೇಕು.

೭೨-೭೪. ವಿಷ್ಣುಭಕ್ತಿಯಿಲ್ಲದಿದ್ದರೆ ಮನುಷ್ಯರ ಜನ್ಮ ನಿಷ್ಫಲವಾಗುತ್ತದೆ. ಕಲಿಕಾಲವೆಂಬ ಸಮುದ್ರವು ಪಾಪವೆಂಬ ಮೊಸಳೆಯಿಂದಲೂ, ವಿಷಯಗಳೆಂಬ ಸುಳಿಗಳಿಂದಲೂ, ದುರ್ಬೋಧವೆಂಬ ನೊರೆಯಿಂದಲೂ, ದುಷ್ಟ ಜನರೆಂಬ ಸರ್ಪಗಳಿಂದಲೂ, ಭಯಂಕರವಾಗಿದೆ. ಇಂಥ ಸಮುದ್ರವನ್ನು ಹರಿಭಕ್ತಿಯೆಂಬ ದೋಣಿಯಿಂದ ಸುಖವಾಗಿ ದಾಟಬಹುದು. ಆದ್ದರಿಂದ ಲೋಕವು ವಿಷ್ಣುಭಕ್ತಿಮಾಡುವುದರಲ್ಲಿ ನಿರತವಾಗಿರಬೇಕು

೭೫. ಕೆಟ್ಟವಿಷಯಗಳನ್ನು ಕೇಳವುದರಲ್ಲಿ ಪ್ರಾಣಿಗಳು ಮನಸ್ಸುಮಾಡಿ ಸುಖವನ್ನು ಹೊಂದುವುದಿಲ್ಲ. ಹೊಂದಿದರೂ ಅತ್ಯಲ್ಪವಾದುದು. ಅದ್ಭುತ ಲೀಲೆಯುಳ್ಳ ವಿಷ್ಣುವಿನ ಲೀಲೆಯಲ್ಲಿ ಆಸಕ್ತವಾಗುವುದಿಲ್ಲ.

ತದ್ವಿಚಿತ್ರಕಥಾ ಲೋಕೇ ನಾನಾ ವಿಷಯಮಿಶ್ರಿತಾ ।
ಶ್ರೋತವ್ಯಾ ಯದಿ ವೈ ನೃಣಾಂ ವಿಷಯೇ ಸಜ್ಜತೇ ಮನಃ ॥೭೬॥

ನಿರ್ವಾಣೇ ಯದಿ ವಾ ಚಿತ್ತಂ ಶ್ರೋತವ್ಯಾ ತದಪಿ ದ್ವಿಜಾಃ ।
ಹೇಲಯಾ ಶ್ರವಣಾಚ್ಚಾಪಿ ತಸ್ಯ ತುಷ್ಟೋ ಭವೇದ್ಧರಿಃ ॥೭೭॥

ನಿಷ್ಕ್ರಿಯೋಽಪಿ ಹೃಷೀಕೇಶೋ ನಾನಾಕರ್ಮ ಚಕಾರ ಸಃ ।
ಶುಶ್ರೂಷೂಣಾಂ ಹಿತಾರ್ಥಾಯ ಭಕ್ತಾನಾಂ ಭಕ್ತವತ್ಸಲಃ ॥೭೮॥

ನ ಲಭ್ಯತೆ ಕರ್ಮಣಾಽಪಿ ವಾಜಪೇಯ ಶತಾದಿನಾ ।
ರಾಜಸೂಯಾಯುತೇ ನಾಪಿ ಯಥಾ ಭಕ್ತ್ಯಾ ಸ ಲಭ್ಯತೇ ॥೭೯॥

ಯತ್ಪದಂ ಚೇತಸಾ ಸೇವ್ಯಂ ಸದ್ಭಿರಾಚರಿತಂ ಮುಹುಃ ।
ಭವಾಬ್ಧಿತರಣೇ ಸಾರಂ ಆಶ್ರಯಧ್ವಂ ಹರೇಃ ಪದಂ ॥೮೦॥

---

೭೬. ನಾನಾ ಬಗೆಯಾದ ವಿಷಯಗಳಿಂದ ಕೂಡಿರುವ ಲೋಕದ ಕಥೆಗಳನ್ನು ಕೇಳುವುದರಲ್ಲಿ ಜನರ ಮನಸ್ಸು ಆಸಕ್ತವಾಗುತ್ತದೆಯೋ ಹೊರತು ವಿಷ್ಣುವಿನ ಕಥೆಯಲ್ಲಿ ಸಜ್ಜಿಸುವುದಿಲ್ಲ.

೭೭. ಮೋಕ್ಷದಲ್ಲಿ ಮನಸ್ಸಿದ್ದರೆ ಆ ಹರಿನಾಮವನ್ನು ಕೇಳಬೇಕು. ಅವಜ್ಞೆಯಿಂದ ಕೇಳಿದರೂ ಕೂಡ ಅದರಿಂದಲೇ ವಿಷ್ಣುವು ತುಷ್ಟನಾಗುತ್ತಾನೆ.

೭೮. ಹರಿಯು ತಾನು ನಿಷ್ಕ್ರಿಯನಾದರೂ ಶ್ರೋತೃಗಳ ಹಿತಕ್ಕೋಸ್ಕರ ಅನೇಕ ಕೆಲಸಗಳನ್ನು ಮಾಡಿದ್ದಾನೆ.

೭೯. ಭಕ್ತಿಯಿಂದ ಸಿಕ್ಕತಕ್ಕ ಸ್ಥಾನವು ಕರ್ಮಗಳಿಂದಲೂ, ನೂರು ವಾಜಪೇಯ ಯಾಗಗಳಿಂದಲೂ ಲಭಿಸುವುದಿಲ್ಲ.

೮೦. ಯಾವ ಸ್ವಾಮಿಯ ಪದವು ಚೇತಸ್ಸಿನಿಂದಲೇ ಸೇವಿಸಲ್ಪಡತಕ್ಕದೋ ಸತ್ಪುರುಷರೂ ಸೇವಿಸುತ್ತಾರೋ ಅಂಥ ಸಂಸಾರವೆಂಬ ಸಮುದ್ರವನ್ನು ದಾಟುವುದರಲ್ಲಿ ಸಾರವಾದ ಹರಿಯ ಪದವನ್ನು ಆಶ್ರಯಿಸಿರಿ.

ರೇ ರೇ ವಿಷಯಸಂಲುಬ್ಧಾಃ ಪಾಮರಾ ನಿಷ್ಠುರಾ ನರಾಃ ।
ರೌರವೇ ಹಿ ಕಿಮಾತ್ಮಾನಮಾತ್ಮನಾ ಪಾತಯಿಷ್ಯಥ ॥೬೧॥

ವಿನಾ ಗೋವಿಂಧ ಸೌಮ್ಯಾಂಘ್ರಿ ಸೇವನಂ ಮಾ ಗಮಿಷ್ಯಥ ।
ಅನಾಯಾಸೇನ ದುಃಖಾನಾಂ ತರಣಂ ಯದಿ ವಾಂಛಥ ॥೬೨॥

ಭಜಧ್ವಂ ಕೃಷ್ಣ ಚರಣಾವಪುನರ್ಭವಕಾರಣೇ ।
ಕುತ ಏವಾಽಽಗತೋ ಮರ್ತ್ಯಃ ಕುತ ಏವ ಪುನರ್ವ್ರಜೇತ್ ॥೬೩॥

ಏತದ್ವಿಚಾರ್ಯಮತಿಮಾನ್ ಅಶ್ರಯೇದ್ಧರ್ಮಸಂಗ್ರಹಂ ।
ನಾನಾನರಕಸಂಪಾತಾದುತ್ಥಿತೋ ಯದಿ ಪೂರುಷಃ ॥೬೪॥

ಸ್ಥಾವರಾದಿ ತನುಂ ಲಬ್ಧ್ವಾ ಯದಿ ಭಾಗ್ಯವಶಾತ್ಪುನಃ ।
ಮಾನುಷ್ಯಂ ಲಭತೇ ತತ್ರ ಗರ್ಭವಾಸೋಽತಿ ದುಃಖದಃ । ॥೬೫॥

---

೬೧. ವಿಷಯಾಭಿಲಾಷೆಯುಳ್ಳ ಎಲೈ ನಿಷ್ಠುರರಾದ ಮನುಜರೇ ಏತಕ್ಕೋಸ್ಕರ ರೌರವ ನರಕದಲ್ಲಿ ನಿಮ್ಮನ್ನು ಕೆಡಗಿಕೊಳ್ಳುತ್ತೀರಿ ?

೬೨. ಗೋವಿಂದನ ಸೌಮ್ಯಾಂಘ್ರಿ ಸೇವನವನ್ನು ಹೊಂದದೆ ಹೋಗಬೇಡಿ. ಅನಾಯಾಸದಿಂದ ದುಃಖದ ತರಣವಾಗುತ್ತದೆ.

೬೩. ಪುನರ್ಜನ್ಮವನ್ನು ಕೊಡದಿರುವ ಕೃಷ್ಣನ ಚರಣಗಳನ್ನು ಭಜಿಸಿರಿ. ಮನುಷ್ಯನು ಯಾವ ಯೋನಿಯಿಂದ ಬಂದನೋ ಪುನಃ ಅಲ್ಲೇ ಹೋಗುವಿಕೆಯನ್ನು ತಪ್ಪಿಸುತ್ತಾನೆ. (ಮೋಕ್ಷಕೊಡುತ್ತಾನೆ)

೬೪–೬೫. ಇದನ್ನು ವಿಚಾರಿಸಿ ಬುದ್ಧಿವಂತನಾದ ಮನುಷ್ಯನು ಧರ್ಮವನ್ನು ಸಂಗ್ರಹಿಸಬೇಕು. ನಾನಾ ಬಗೆಯಾದ ನರಕಗಳಿಂದ ಎದ್ದ ಮೇಲೆ, ಸ್ಥಾವರದಲ್ಲಿ ದೇಹವನ್ನು ಹೊಂದುತ್ತಾನೆ. ಆಮೇಲೆ ಭಾಗ್ಯವಶದಿಂದ ಮನುಷ್ಯನಾಗಿ ಹುಟ್ಟುತ್ತಾನೆ. ಗರ್ಭವಾಸವು ಬಹುಕಷ್ಟವಾದುದು.

ತತಃ ಕರ್ಮವಶಾಜ್ಜಂತುರ್ಯದಿ ವಾ ಜಾಯತೇ ಭುವಿ ।
ಬಾಲ್ಯಾದಿ ಬಹುದೋಷೇಣ ಪೀಡಿತೋ ಭವತಿ ದ್ವಿಜಾಃ ॥೮೬॥

ಪುನರ್ಯೌವನಮಾಸಾದ್ಯ ದಾರಿದ್ರ್ಯೇಣ ಪ್ರಪೀಡ್ಯತೇ ।
ರೋಗೇಣ ಗುರುಣಾ ವಾಪಿ ಅನಾವೃಷ್ಟ್ಯಾದಿನಾ ತಥಾ ॥೮೭॥

ವಾರ್ಧಕೇನ ಲಭೇತ್ಪೀಡಾಂ ಅನಿರ್ವಾಚ್ಯಾಮಿತಸ್ತತಃ ।
ಮನಸಶ್ಚಲನಾದ್ವ್ಯಾಧೇಃ ತತೋ ಮರಣಮಾಪ್ನುಯಾತ್ ॥೮೮॥

ನ ತಸ್ಮಾದಧಿಕಂ ದುಃಖಂ ಸಂಸಾರೇಪ್ಯನುಭೂಯತೇ ।
ತತಃ ಕರ್ಮವಶಾಜ್ಜಂತುಃ ಯಮಲೋಕೇ ಪ್ರಪೀಡ್ಯತೇ ॥೮೯॥

ತತ್ರಾತಿಯಾತನಾಃ ಭುಕ್ತ್ವಾ ಪುನರೇವ ಪ್ರಜಾಯತೇ ।
ಜಾಯತೇ ಮ್ರಿಯತೇ ಜಂತುಃ ಮ್ರಿಯತೇ ಜಾಯತೇ ಪುನಃ ॥

---

೮೬. ಆಮೇಲೆ ಕರ್ಮವಶದಿಂದ ಜನ್ತುವು ಭೂಮಿಯಲ್ಲಿ ಹುಟ್ಟಿದರೆ ಬಾಲ್ಯದಲ್ಲಿ ಅನೇಕ ದೋಷಗಳಿಂದ ತೊಂದರೆ ಪಡುತ್ತಾನೆ.

೮೭. ಪುನಃ ಯೌವನವನ್ನು ಹೊಂದಿ ದಾರಿದ್ರ್ಯದಿಂದ ತೊಂದರೆ ಪಡುತ್ತಾನೆ. ಅಥವಾ ರೋಗದಿಂದಲೋ, ಅನಾವೃಷ್ಟಿಯೇ ಮೊದಲಾದವುಗಳಿಂದಲೋ ಪೀಡಿಸಲ್ಪಡುತ್ತಾನೆ.

೮೮. ಮುಪ್ಪಿನಿಂದ ಹೇಳಲಸಾಧ್ಯವಾದ ಪೀಡೆಯನ್ನು ಹೊಂದುತ್ತಾನೆ. ಮನಸ್ಸಿಗೂ ನೆಮ್ಮದಿ ಇರುವುದಿಲ್ಲ. ಆಮೇಲೆ ಆ ರೋಗದ ದೆಸೆಯಿಂದ ಮರಣವನ್ನು ಹೊಂದುತ್ತಾನೆ.

೮೯. ಸಂಸಾರದಲ್ಲಿ ಇದಕ್ಕಿಂತ ಹೆಚ್ಚಾದ ದುಃಖವಿರುವುದಿಲ್ಲ. ಆ ಮೇಲೆ ಕರ್ಮವಶದಿಂದ ಪ್ರಾಣಿಯು ಯಮಲೋಕದಲ್ಲಿ ತೊಂದರೆ ಪಡುತ್ತಾನೆ.

೯೦. ಅಲ್ಲಿ ಬಹು ಯಾತನೆಯನ್ನು ಹೊಂದಿ ತಿರುಗಿಯೂ ಹುಟ್ಟುತ್ತಾನೆ. ಸಾಯುತ್ತಾನೆ. ಪುನಃ ಹುಟ್ಟುತ್ತಾನೆ. ಸಾಯುತ್ತಾನೆ.

ಅನಾರಾಧಿತ ಗೋವಿಂದ ಚರಣೇಷ್ವೀದೃಶೀ ದಶಾ ।
ಅನಾಯಾಸೇನ ಮರಣಂ ವಿನಾಽಽಯಾಸೇನ ಜೀವನಂ ॥೯೧॥

ಅನಾರಾಧಿತ ಗೋವಿಂದ ಚರಣಸ್ಯ ನ ಜಾಯತೇ ।
ಧನಂ ಯದಿ ಭವೇದ್ಗೇಹೆ ರಕ್ಷಣಾತ್ತಸ್ಯ ಕಿಂ ಫಲಂ ॥೯೨॥

ಯದಾಽಸೌ ಕೃಷ್ಯತೇ ಯಾಮ್ಯೈಃ ದೂತೈಃ ಕಿಂ ಧನಮನ್ವಿಯಾತ್ ।
ತಸ್ಮಾದ್ದ್ವಿಜಾತಿ ಸತ್ಕಾರ್ಯರ್ಥಂ ದ್ರವಿಣಂ ಸರ್ವಸೌಖ್ಯದಂ ॥೯೩॥

ದಾನಂ ಸ್ವರ್ಗಸ್ಯ ಸೋಪಾನಂ ದಾನಂ ಕಿಲ್ಬಿಷನಾಶನಂ ।
ಗೋವಿಂದ ಭಕ್ತಿಭಜನಂ ಮಹಾಪುಣ್ಯ ವಿವರ್ಧನಂ ॥೯೪॥

ಬಲಂ ಯದಿ ಭವೇನ್ಮರ್ತ್ಯೇ ನ ವೃಥಾ ತದ್ವ್ಯಯಂ ಚರೇತ್ ।
ಹರೇರಗ್ರೇ ನೃತ್ಯಗೀತಂ ಕುರ್ಯಾದೇವ ಮತಂದ್ರಿತಃ ॥ ॥೯೫॥

---

೯೧. ಗೋವಿಂದನ ಚರಣಗಳನ್ನು ಆರಾಧಿಸದಿದ್ದರೆ ಈ ಸ್ಥಿತಿಯು ಉಂಟಾಗುತ್ತದೆ. ಅನಾಯಾಸದಿಂದ ಮರಣವೂ, ಆಯಾಸ ವಿಲ್ಲದೇ ಜೀವನವೂ ಗೋವಿಂದನನ್ನು ಆರಾಧಿಸದಿದ್ದವನಿಗೆ ಬರುವುದಿಲ್ಲ.

೯೨.-೯೩. ಹಣವು ಮನೆಯಲ್ಲಿದ್ದರೆ ಅದರ ರಕ್ಷಣೆಯಿಂದ ಫಲವೇನು ? ಇವನು ಯಮನಾಳುಗಳಿಂದ ಎಳೆಯಲ್ಪಡುತ್ತಿದ್ದರೆ ಧನವು ಹಿಂದೆ ಬರುತ್ತದೆಯೇ ? ಆದ್ದರಿಂದ ಬ್ರಾಹ್ಮಣರಿಗೆ ಸತ್ಕರಿಸಿದ ಹಣವು ಎಲ್ಲಾ ಸೌಖ್ಯವನ್ನೂ ಕೊಡುತ್ತದೆ.

೯೪. ದಾನವು ಸ್ವರ್ಗಕ್ಕೆ ಸೋಪಾನವು. ದಾನವೇ ಪಾಪನಾಶಕವು. ಗೋವಿಂದನನ್ನು ಭಕ್ತಿಯಿಂದ ಭಜಿಸುವುದು ಮಹಾಪುಣ್ಯವನ್ನುಂಟು ಮಾಡುತ್ತದೆ.

೯೫. ಮನುಜನಲ್ಲಿ ಬಲವಿದ್ದರೆ ಅದನ್ನು ವ್ಯರ್ಥಮಾಡಬಾರದು. ಹರಿಯಮುಂದೆ ಉದಾಸೀನಮಾಡದೆ ನೃತ್ತಗೀತಗಳನ್ನು ಆಚರಿಸಬೇಕು.

ಯತ್ಕಿಂಚಿದ್ವಿದ್ಯತೇ ಪುಂಸಾಂ ತಚ್ಚ ಕೃಷ್ಣೇ ಸಮರ್ಪಯೇತ್ ।
ಕೃಷ್ಣಾರ್ಪಿತಂ ಕುಶಲದಮನ್ಯಾರ್ಪಿತಮಸೌಖ್ಯದಂ ॥೯೬॥

ಚಕ್ಷುರ್ಭ್ಯಾಂ ಶ್ರೀಹರೇರೇವ ಪ್ರತಿಮಾದಿ ನಿರೂಪಣಂ ।
ಶ್ರೋತ್ರಾಭ್ಯಾಂ ಕಲಯೇತ್ಕೃಷ್ಣಗುಣನಾಮಾನ್ಯಹರ್ನಿಶಂ ॥೯೭॥

ಜಿಹ್ವಯಾ ಹರಿಪಾದಾಂಬು ಸ್ವಾದಿತವ್ಯಂ ವಿಚಕ್ಷಣೈಃ ।
ಘ್ರಾಣೇನಾಘ್ರಾಯ ಗೋವಿಂದ ಪಾದಾಬ್ಜತುಳಸೀದಳಂ ॥೯೮॥

ತ್ವಚಾಽಸ್ಪೃಶ್ಯ ಹರೇರ್ಭಕ್ತಂ ಮನಸಾಽಧ್ಯಾಯತತ್ಪದಂ ।
ಕೃತಾರ್ಥೋ ಜಾಯತೇ ಜಂತುರ್ನಾತ್ರ ಕಾರ್ಯಾ ವಿಚಾರಣಾ ॥೯೯॥

ತನ್ಮನಾ ಹಿ ಭವೇತ್ಪ್ರಾಜ್ಞಃ ತಥಾ ಸ್ಯಾತ್ತದ್ಗತಾಶಯಃ ।
ತಮೇವಾಂತೇಽಭ್ಯೇತಿ ಲೋಕೋ ನಾತ್ರ ಕಾರ್ಯಾ ವಿಚಾರಣಾ ॥

---

೯೬. ಮನುಷ್ಯನಲ್ಲಿ ಏನಿದ್ದರೂ ಸರಿ, ಅದನ್ನು ಕೃಷ್ಣನಲ್ಲಿ ಅರ್ಪಿಸಬೇಕು. ಕೃಷ್ಣಾರ್ಪಿತವಾದುದು ಕುಶಲವನ್ನು ಕೊಡುತ್ತದೆ. ಅನ್ಯಾರ್ಪಿತವಾದುದು ಸೌಖ್ಯವನ್ನು ಕೊಡುವುದಿಲ್ಲ.

೯೭. ಕಣ್ಣುಗಳಿಂದ ಹರಿಯ ಪ್ರತಿಮೆಯನ್ನೇ ನೋಡಬೇಕು, ಕಿವಿಗಳಿಂದ ಕೃಷ್ಣನ ಗುಣನಾಮಗಳನ್ನೇ ಕೇಳುತ್ತಿರಬೇಕು.

೯೮-೯೯. ನಾಲಿಗೆಯಿಂದ ಹರಿಪಾದೋದಕವನ್ನು ಆಸ್ವಾದನೆ ಮಾಡಬೇಕು. ಮೂಗಿನಿಂದ ಗೋವಿಂದನ ಪಾದಕ್ಕೆ ಅರ್ಪಿಸಿದ ತುಳಸೀದಳವನ್ನು ಮೂಸಬೇಕು. ಚರ್ಮದಿಂದ ಹರಿಭಕ್ತನನ್ನು ಸ್ಪರ್ಶಿಸಬೇಕು. ಮನಸ್ಸಿನಿಂದ ಹರಿಪದವನ್ನು ಧ್ಯಾನಿಸಬೇಕು. ಹೀಗೆ ಮಾಡಿದರೆ ಪ್ರಾಣಿಯು ಕೃತಾರ್ಥನಾಗುತ್ತಾನೆ, ಸಂಶಯವಿಲ್ಲ.

೧೦೦. ಪ್ರಾಜ್ಞನಾದವನು ಹರಿಯಲ್ಲೇ ಮನಸ್ಸಿಡಬೇಕು: ಅವನ ಅಭಿಪ್ರಾಯವು ಹರಿಯಲ್ಲೇ ನಿಂತಿರಬೇಕು. ಹೀಗೆ ಮಾಡಿದರೆ ಜನ್ಮವು ಆ ಕೃಷ್ಣನನ್ನೇ ಹೊಂದುತ್ತದೆ. ಈ ವಿಷಯದಲ್ಲಿ ಸಂಶಯವಿಲ್ಲ.

ಚೇತಸಾ ಚಾಪ್ಯನುಧ್ಯಾತಃ ಸ್ವಪದಂ ಯಃ ಪ್ರಯಚ್ಛತಿ ।
ನಾರಾಯಣಮನಾದ್ಯಂತಂ ನ ತಂ ಸೇವೇತ ಕೋ ಜನಃ ॥೧೦೧॥

ಸತತ ನಿಯತ ಚಿತ್ತೋ ವಿಷ್ಣುಪಾದಾರವಿಂದೇ
ವಿತರಣಮನುಶಕ್ತಿ ಪ್ರೀತಯೇ ತಸ್ಯ ಕುರ್ಯಾತ್ ।
ನತಿಮತಿರತಿಮಸ್ಯಾಂಘ್ರಿದ್ವಯೇ ಸಂವಿದಧ್ಯಾತ್
ಸ ಹಿ ಖಲು ನರಲೋಕೇ ಪೂಜ್ಯತಾಮಾಪ್ನುಯಾಚ್ಚ ॥೧೦೨॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ಏಕಷಷ್ಟಿತಮೋಽಧ್ಯಾಯಃ

---

೧೦೧. ಮನಸ್ಸಿನಿಂದ ಧ್ಯಾನಮಾಡಿದ ಮಾತ್ರದಿಂದ ಯಾವನು ಸ್ಥಾನವನ್ನೇ ಕೊಡುತ್ತಾನೋ ಅಂಥ ಆದ್ಯಂತರಹಿತನಾದ ನಾರಾಯಣನನ್ನು ಯಾವನು ತಾನೇ ಸೇವಿಸುವುದಿಲ್ಲ ?

೧೦೨. ಯಾವಾಗಲೂ ವಿಷ್ಣುಪಾದಾರವಿಂದದಲ್ಲಿ ಚಿತ್ತವುಳ್ಳವನಾಗಿ ಅವನ ಪ್ರೀತಿಗೋಸ್ಕರ ದಾನವನ್ನು ಮಾಡುತ್ತಿರಬೇಕು. ಅವನ ಪಾದದಲ್ಲಿ ನಮಸ್ಕಾರಬುದ್ಧಿಯನ್ನಿಡಬೇಕು. ಅವನೇ ಲೋಕದಲ್ಲಿ ಪೂಜ್ಯತೆಯನ್ನು ಹೊಂದುತ್ತಾನೆ.

ಪದ್ಮಮಹಾಪುರಾಣದ ಆದಿಖಂಡದ ಅರವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ಅಥ ಪದ್ಮಪುರಾಣೇ ಆದಿಖಂಡೇ ದ್ವಿಷಷ್ಟಿತಮೋಽಧ್ಯಾಯಃ

॥ ಸೂತ ಉವಾಚ ॥

ಏವಂ ಯನ್ಮಹಿಮಾ ಲೋಕೇ ಶೋಕನಿಸ್ತಾರಕಾರಣಂ ।
ತಸ್ಯ ವಿಷ್ಣೋಃ ಪರೇಶಸ್ಯ ನಾನಾವಿಗ್ರಹಧಾರಿಣಃ ॥ ೧ ॥
ಏವಂ ಪುರಾಣಂ ರೂಪಂ ವೈ ತತ್ರ ಪಾದ್ಮಂ ಪರಂ ಮಹತ್ ।
ಬ್ರಾಹ್ಮಂ ಮೂರ್ಧಾ ಹರೇರೇವ ಹೃದಯಂ ಪದ್ಮಸಂಜ್ಞಿತಂ ॥ ೨ ॥
ವೈಷ್ಣವಂ ದಕ್ಷಿಣೋ ಬಾಹುಃ ಶೈವಂ ವಾಮೋ ಮಹೇಶಿತುಃ ।
ಊರೂ ಭಾಗವತಂ ಪ್ರೋಕ್ತಂ ನಾಭಿಃ ಸ್ಯಾನ್ನಾರದೀಯಕಂ ॥ ೩ ॥
ಮಾರ್ಕಂಡೇಯಂ ಚ ದಕ್ಷಾಂಘ್ರಿಃ ವಾಮೋ ಹ್ಯಾಗ್ನೇಯಮುಚ್ಯತೇ
ಭವಿಷ್ಯಂ ದಕ್ಷಿಣೋ ಜಾನುಃ ವಿಷ್ಣೋರೇವ ಮಹಾತ್ಮನಃ ॥ ೪ ॥

---

ಪದ್ಮ ಪುರಾಣದ ಆದಿಖಂಡದ ಅರವತ್ತೆರಡನೆಯ ಅಧ್ಯಾಯವು

೧–೨. ಸೂತರು ಹೇಳುತ್ತಾರೆ: ಯಾವನ ಮಹಿಮೆಯು ಲೋಕದಲ್ಲಿ ಮನುಜನ ಉದ್ಧಾರಕ್ಕೆ ಕಾರಣವಾಗಿದೆಯೋ ಅವನ ಮಹಿಮೆಯನ್ನು ಹೇಳುತ್ತೇನೆ ಕೇಳು. ಆ ವಿಷ್ಣುವಿನರೂಪವು ಪುರಾಣವು. ಅದರಲ್ಲಿ ಪದ್ಮಸಂಬಂಧವಾದುದೇ ದೊಡ್ಡದು. ಬ್ರಹ್ಮಪುರಾಣವು ತಲೆ, ಪಾದ್ಮವು ಹೃದಯವು.

೩–೪. ವಿಷ್ಣುಪುರಾಣವು ದಕ್ಷಿಣಬಾಹುವು. ಶೈವಪುರಾಣವು ಎಡಬಾಹುವು. ಭಾಗವತವು ತೊಡೆಗಳು. ನಾರದೀಯವು ನಾಭಿಯು (ಹೊಕ್ಕಳು), ಮಾರ್ಕಂಡೇಯ ಪುರಾಣವು ಬಲಗಾಲು, ಆಗ್ನೇಯವು ಎಡಗಾಲು. ಭವಿಷ್ಯಪುರಾಣವು ಬಲಮಂಡಿ.

ಬ್ರಹ್ಮವೈವರ್ತಸಂಜ್ಞಂ ತು ವಾಮಜಾನುರುದಾಹೃತಃ ।
ಲೈಂಗಂ ತು ಗುಲ್ಫಕಂ ದಕ್ಷಂ ವಾರಾಹಂ ವಾಮಗುಲ್ಫಕಂ ॥ ೫ ॥
ಸ್ಕಾಂದಂ ಪುರಾಣಂ ಲೋಮಾನಿ ತ್ವಗಸ್ಯ ವಾಮನಂ ಸ್ಮೃತಂ ।
ಕೌರ್ಮಂ ಪೃಷ್ಠಂ ಸಮಾಖ್ಯಾತಂ ಮಾತ್ಸ್ಯಂ ಮೇದಃ ಪ್ರಕೀರ್ತ್ಯತೇ॥
ಮಜ್ಜಾ ತು ಗಾರುಡಂ ಪ್ರೋಕ್ತಂ ಬ್ರಹ್ಮಾಂಡಮಸ್ಥಿ ಗೀಯತೇ ।
ಏವಮೇವಾಭವದ್ವಿಷ್ಣುಃ ಪುರಾಣಾವಯವೋ ಹರಿಃ ॥ ೭ ॥
ಹೃದಯಂ ತತ್ರ ವೈ ಪಾದ್ಮಂ ಯಃ ಶ್ರುತ್ವಾಽಮೃತಮಶ್ನುತೇ ।
ಪಾದ್ಮಮೇತತ್ಪುರಾಣಂತು ಸ್ವಯಂ ದೇವೋಽಭವದ್ಧರಿಃ ॥ ೮ ॥
ಯಸ್ಯೈಕಾಧ್ಯಾಯಮಧ್ಯಾಪ್ಯ ಸರ್ವಪಾಪೈಃ ಪ್ರಮುಚ್ಯತೇ ।
ತತ್ರಾಽಽದಿಮಂ ಖಂಡಮಿಮಂ ಸರ್ವಪಾದ್ಮಫಲಪ್ರದಂ ॥ ೯ ॥
ಆದಿಖಂಡಂ ಸಮಾಕರ್ಣ್ಯ ಮಹಾಪಾತಕಿನೋಽಪಿಯೇ ।
ಮುಚ್ಯಂತೇ ತೇಽಪಿ ಪಾಪೇಭ್ಯಃ ತ್ವಚೋ ಜೀರ್ಣಾದ್ಯಥೋರಗಾಃ ॥

---

೫-೬. ಬ್ರಹ್ಮವೈವರ್ತಪುರಾಣವು ಎಡಮಂಡಿ, ಲಿಂಗಪುರಾಣವು ಹಿಮ್ಮಡಿ. ವಾರಾಹವು ಎಡಹಿಮ್ಮಡಿ. ಸ್ಕಾಂದವು ಕೂದಲುಗಳು ವಾಮನವು ಚರ್ಮವು. ಕೂರ್ಮಪುರಾಣ ಪೃಷ್ಠಪ್ರದೇಶ. ಮಾತ್ಸ್ಯವು ಮೇದಸ್ಸು.

೭. ಗಾರುಡವು ಕೊಬ್ಬು. ಬ್ರಹ್ಮಾಂಡವು ಮೂಳೆಯು, ಈ ರೀತಿ ಯಾಗಿ ವಿಷ್ಣುವಿನ ಅವಯವಗಳು.

೮. ಹೃದಯರೂಪವಾದ ಪಾದ್ಮದ ವಿಷಯವನ್ನು ಯಾವನು ಪಾನಮಾಡುತ್ತಾನೋ ಅವನು ವಿಷ್ಣುವಿನ ಅಂಶವನ್ನು ಹೊಂದು ವನು.

೯-೧೦. ಈ ಪದ್ಮಪುರಾಣದ ಒಂದು ಅಧ್ಯಾಯವನ್ನು ಕೇಳಿದ ಮಾತ್ರ ದಿಂದ ಎಲ್ಲಾ ಪಾಪಗಳೂ ಹೋಗುತ್ತವೆ. ಅದರಲ್ಲಿ ಈ ಮೊದಲನೆಯ ಖಂಡವು ಸರ್ವಪದ್ಮಪ್ರಧಾನವಾದ ಫಲಗಳನ್ನು ಕೊಡುತ್ತದೆ. ಆದಿಖಂಡ ದಲ್ಲಿರುವ ವಿಷಯನನ್ನು ಕೇಳಿದರೆ ಪಾತಕಿಗಳಾದರೂ, ಸರ್ಪವು ತನ್ನ ಶಲಬೆಯನ್ನು ಬಿಟ್ಟು ಪ್ರಕಾಶಿಸುವಂತೆ ಪಾಪನಿರ್ಮುಕ್ತನಾಗಿ ಪ್ರಕಾಶಿ ಸುತ್ತಾರೆ.

ಅಪಿ ಚೇತ್ಸದುರಾಚಾರಃ ಸರ್ವಧರ್ಮಬಹಿಷ್ಕೃತಃ ।
ಆದಿಖಂಡಂ ಸಮಾಕರ್ಣ್ಯ ಪೂಯತೇ ನಾತ್ರ ಸಂಶಯಃ ॥೧೧॥

ಸರ್ವಂ ಪುರಾಣಮಾಕರ್ಣ್ಯ ಯತ್ಫಲಂ ಲಭತೇ ನರಃ ।
ತತ್ಸರ್ವಂ ಸಮವಾಪ್ನೋತಿ ಶ್ರುತ್ವಾ ಪಾದ್ಮಮಹೋ ದ್ವಿಜಾಃ॥೧೨॥

ಸಮಗ್ರಂ ಪಾದ್ಮಮಾಕರ್ಣ್ಯ ಯತ್ಫಲಂ ಸಮವಾಪ್ನುಯಾತ್ ।
ಆದಿಖಂಡಮಿದಂ ಶ್ರುತ್ವಾ ತತ್ಫಲಂ ಲಭತೇ ನರಃ ॥೧೩॥

ಮಾಘೇ ಮಾಸಿ ಪ್ರಯಾಗೇ ತು ಸ್ನಾತ್ವಾ ಪ್ರತಿದಿನಂ ನರಃ ।
ಯಥಾ ಪಾಪಾತ್ಪ್ರಮುಚ್ಯೇತ ತಥಾ ಹಿ ಶ್ರವಣಾದ್ಭವೇತ್ ॥೧೪॥

ದತ್ತಾ ತೇನ ಸ್ವರ್ಣತುಲಾ ದತ್ತಾ ಚೈವ ಧರಾಖಿಲಾ ।
ಕೃತಂ ವಿತರಣಂ ತೇನ ದರಿದ್ರೇ ಯತ್ಕೃತಮೃಣಂ ॥೧೫॥

---

೧೧. ದುರಾಚಾರಿಯೂ ಸರ್ವಧರ್ಮಬಹಿಷ್ಕೃತನೂ ಆದರೂ ಈ ಆದಿ ಖಂಡವನ್ನು ಕೇಳಿದರೆ ಪವಿತ್ರನಾಗುತ್ತಾನೆ. ಸಂಶಯವಿಲ್ಲ.

೧೨. ಸರ್ವಪುರಾಣಗಳನ್ನು ಕೇಳಿದರೆ ಮನುಷ್ಯನಿಗೆ ಯಾವ ಫಲಬರುತ್ತದೋ ಆ ಫಲವೆಲ್ಲವೂ ಪದ್ಮಪುರಾಣವನ್ನು ಕೇಳಿದುದರಿಂದ ಬರುತ್ತದೆ.

೧೩. ಪದ್ಮಪುರಾಣವನ್ನು ಪೂರ್ತಿ ಕೇಳಿ ಮನುಷ್ಯನು ಯಾವ ಫಲವನ್ನು ಹೊಂದುತ್ತಾನೋ ಆ ಫಲವನ್ನು ಆದಿಖಂಡವನ್ನು ಕೇಳುವುದರಿಂದ ಹೊಂದುತ್ತಾನೆ.

೧೪. ಮಾಘಮಾಸದಲ್ಲಿ ಪ್ರತಿದಿನವೂ ಪ್ರಯಾಗದಲ್ಲಿ ಸ್ನಾನಮಾಡುವುದರಿಂದ ಪಾಪ ಹೇಗೆ ಹೋಗುತ್ತದೊ ಹಾಗೆ ಇದನ್ನು ಕೇಳುವುದರಿಂದಲೇ ಪಾಪವೆಲ್ಲವೂ ಹೋಗುತ್ತದೆ.

೧೫. ಹಾಗೆ ಕೇಳಿದರೆ ಚಿನ್ನದ ತಕ್ಕಡಿಯನ್ನು ದಾನಮಾಡಿದಂತಾಗುವುದು. ಎಲ್ಲಾ ಭೂಮಿಯನ್ನು ದಾನಮಾಡಿದ ಫಲಬರುತ್ತದೆ. ದರಿದ್ರನಲ್ಲಿ ಮಾಡಿದ ಸಾಲವೂ ಕೊಟ್ಟಂತಾಗುವುದು.

ಪಠೇನ್ನಾಮಸಹಸ್ರಾಣಿ ಪಠಿತಾನಿ ಹ್ಯಭೀಕ್ಷ್ಣಶಃ ।
ಸರ್ವೇ ವೇದಾಸ್ತಥಾಽಧೀತಾಸ್ತತ್ತತ್ಕರ್ಮ ಕೃತಂ ತಥಾ ॥೧೬॥

ಅಧ್ಯಾಪಕಾಶ್ಚ ಬಹವಃ ಸ್ಥಾಪಿತಾ ವೃತ್ತಿದಾನತಃ ।
ಅಭಯಂ ಭಯಲೋಕೇಭ್ಯೋ ದತ್ತಂ ತೇನ ತಥಾ ದ್ವಿಜಾಃ ॥೧೭॥

ಗುಣವಂತೋ ಜ್ಞಾನವಂತೋ ಧರ್ಮವಂತೋಽನುಮಾನಿತಾಃ ।
ಮೇಷಕರ್ಕಟಯೋರ್ಮಧ್ಯೇ ತೋಯಂ ದತ್ತಂ ಸುಶೀತಲಂ ॥

ಬ್ರಾಹ್ಮಣಾರ್ಥೇ ಗವಾರ್ಥೇ ಚ ಪ್ರಾಣಾಸ್ತ್ಯಕ್ತಾಶ್ಚ ತೇನ ಹಿ ।
ಅನ್ಯಾನಿ ಚ ಸುಕರ್ಮಾಣಿ ಕೃತಾನಿ ತೇನ ಧೀಮತಾ ॥೧೯॥

ಯೇನಾಽಽದಿಖಂಡಂ ಸದಸಿ ಶ್ರುತಂ ಸಂಶ್ರಾವಿತಂ ತಥಾ ।
ಆದಿಖಂಡಂ ಸಮಾಧೀತ್ಯ ನಾನಾ ಭೋಗಾನ್ ಸಮಶ್ನುತೇ ॥೨೦॥

---

೧೬. ಹಾಗೆ ಕೇಳಿದರೆ ಹರಿಯ ಸಹಸ್ರನಾಮವನ್ನು ಹೇಳಿದಂತಾಗುವುದು. ಎಲ್ಲಾ ವೇದಗಳನ್ನೂ ಓದಿದಂತಾಗುವುದು. ಎಲ್ಲಾ ಕರ್ಮಗಳನ್ನೂ ಮಾಡಿದಂತಾಗುವುದು.

೧೭. ಹಾಗೆ ಕೇಳಿದರೆ ಅನೇಕ ಜನ ವೇದಾಧ್ಯಯನ ಮಾಡಿದವರನ್ನು ಜೀವನಕ್ಕೆ ಕೊಟ್ಟು ನಿಲ್ಲಿಸಿದಂತಾಗುವುದು. ಹೆದರಿರುವವರಿಗೆ ಅಭಯವನ್ನು ಕೊಟ್ಟಂತಾಗುತ್ತದೆ.

೧೮. ಗುಣವಂತರೂ, ಜ್ಞಾನವಂತರೂ, ಧರ್ಮವಂತರೂ, ಮಾನಿತರಾದಂತಾಗುತ್ತಾರೆ. ಆಡುಕುರಿಗಳಮಧ್ಯದಲ್ಲಿ ಶೀತಲವಾದ ನೀರನ್ನಿಟ್ಟಂತಾಗುತ್ತದೆ.

೧೯-೨೦. ಪುರಾಣಶ್ರವಣದಿಂದ, ಬ್ರಾಹ್ಮಣರಿಗೋಸ್ಕರ, ಗೋಗಳಿಗೋಸ್ಕರ ಪ್ರಾಣವನ್ನು ತ್ಯಜಿಸಿದಷ್ಟು ಪುಣ್ಯಬರುತ್ತದೆ. ಇನ್ನೂ ಅನೇಕವಾದ ಸುಕರ್ಮಗಳನ್ನು ಮಾಡಿದಂತಾಗುತ್ತವೆ. ಯಾವನು ಸಭೆಯಲ್ಲಿ ಓದುತ್ತಾನೋ ಕೇಳಿಸುತ್ತಾನೋ ಅವನು ನಾನಾ ಭೋಗಗಳನ್ನು ಅನುಭವಿಸುತ್ತಾನೆ.

ಅತಃ ಪರಮನಾರೀಣಾಂ ಸುಖಸುಪ್ತಃ ಪ್ರಬುಧ್ಯತೇ ।
ಕಿಂಕಿಣೀರವಸಂನಾದೈಸ್ತಥಾ ಮಧುರಭಾಷಣೈಃ ॥೨೧॥

ಇಂದ್ರಸ್ಯಾರ್ಧಾಸನಂಭುಂಕ್ತ ಇಂದ್ರಲೋಕೇ ವಸೇಚ್ಚಿರಂ ।
ತತಃ ಸೂರ್ಯಸ್ಯ ಭವನಂ ಚಂದ್ರಲೋಕಂ ತತೋ ವ್ರಜೇತ್ ॥೨೨॥

ಸಪ್ತರ್ಷಿಭವನೇ ಭೋಗಾನ್ ಭುಕ್ತ್ವಾ ಯಾತಿ ತತೋ ಧ್ರುವಂ ।
ತತಶ್ಚ ಬ್ರಹ್ಮಣೋ ಲೋಕಂ ಪ್ರಾಪ್ಯ ತೇಜೋಮಯಂ ವಪುಃ ॥
ತತ್ರೈವ ಜ್ಞಾನಮಾಸಾದ್ಯ ನಿರ್ವಾಣಂ ಪರಮೃಚ್ಛತಿ ॥
ಸದ್ಭಿಃ ಸಹ ವಸೇದ್ಧೀಮಾನ್ ಸತೀರ್ಥೇ ಸ್ನಾನಮಾಚರೇತ್ ।
ಕುರ್ಯಾದೇವ ಸದಾಲಾಪಂ ಸಚ್ಛಾಸ್ತ್ರಂ ಶೃಣುಯಾನ್ನರಃ ॥೨೪॥

ತತ್ರ ಪಾದ್ಮಂ ಮಹಾಶಾಸ್ತ್ರಂ ಸರ್ವಾಮ್ನಾಯಫಲಪ್ರದಂ ।
ಆದಿಖಂಡಂ ಚ ತನ್ಮಧ್ಯೇ ಮಹಾಪುಣ್ಯಫಲಪ್ರದಂ ॥೨೫॥

---

೨೧. ಅವನು ಉತ್ತಮವಾದ ಹೆಂಗಸರ ಒಡವೆಯ ಧ್ವನಿಯಿಂದಲೂ ಒಳ್ಳೆಯ ಮಾತಿನಿಂದಲೂ ಎಬ್ಬಿಸಲ್ಪಡುತ್ತಾನೆ.

೨೨. ಅವನು ಇಂದ್ರನ ಅರ್ಧಾಸನವನ್ನು ಅನುಭವಿಸುತ್ತಾನ್ನೆ ಇಂದ್ರ ಲೋಕದಲ್ಲಿ ಬಹುಕಾಲವಿರುತ್ತಾನೆ. ಆ ಮೇಲೆ ಸೂರ್ಯಲೋಕದಲ್ಲಿದ್ದು ಚಂದ್ರಲೋಕಕ್ಕೆ ಹೋಗುತ್ತಾನೆ.

೨೩. ಸಪ್ತ ಋಷಿಗಳ ಸ್ಥಾನದಲ್ಲಿ ಸುಖಾನುಭವಮಾಡಿ, ಆಮೇಲೆ ಧ್ರುವ ಲೋಕವನ್ನು ಹೊಂದುತ್ತಾನೆ. ಆ ಮೇಲೆ ಬ್ರಹ್ಮಲೋಕವನ್ನು ಹೊಂದುತ್ತಾನೆ. ಅಲ್ಲಿ ಜ್ಞಾನವನ್ನು ಹೊಂದಿ ಅನಂತರ ಮೋಕ್ಷವನ್ನು ಹೊಂದುತ್ತಾನೆ.

೨೪. ಮನುಷ್ಯನು ಸತ್ಪುರುಷರೊಡನೆ ಸೇರಬೇಕು. ಒಳ್ಳೆಯ ತೀರ್ಥದಲ್ಲಿ ಸ್ನಾನಮಾಡಬೇಕು. ಒಳ್ಳೆವಿಷಯಗಳ ಮೇಲೆ ಮಾತನಾಡಬೇಕು. ಒಳ್ಳೆಯ ಶಾಸ್ತ್ರವನ್ನು ಓದಬೇಕು.

೨೫. ಇದರಲ್ಲಿ ಪಾದ್ಮವೇ ಮಹಾಶಾಸ್ತ್ರವು. ಸರ್ವವೇದಗಳ ಫಲವನ್ನೂ ಕೊಡುತ್ತದೆ. ಇದರಲ್ಲಿ ಆದಿಖಂಡವು ಮಹಾಪುಣ್ಯವನ್ನು ಕೊಡುತ್ತದೆ.

ಭಜಧ್ವಂ ಗೋವಿಂದಂ ನಮತ ಹರಿಮೇಕಂ ಸುರವರಂ।
ಗಮಿಷ್ಯಧ್ವಂ ಲೋಕಾನತಿವಿಮಲಭೋಗಾನತಿತರಾ॥
ಶೃಣುಧ್ವಂ ಹೇ ಲೋಕಾ ವದತ ಹರಿನಾಮ್ನೈಕಮತುಲಂ।
ಯದಿಚ್ಛಾವೀಚೀನಾಂ ಸುಖತರಣಮಿಷ್ಟಾನಿ ಲಭತೆ ॥೨೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಆದಿಖಂಡೇ ದ್ವಿಷಷ್ಟಿತಮೋಽಧ್ಯಾಯಃ।

ಇತಿ ಮಹಾಮುನಿ ಶ್ರೀವ್ಯಾಸಪ್ರಣೀತೇ
ಮಹಾಪುರಾಣೇ ಪಾದ್ಮೇ ಆದಿಮಮಾದಿಖಂಡಂ ಸಮಾಪ್ತಂ॥

---

೨೬. ಎಲ್ಲೈ ಜನಗಳೇ, ಗೋವಿಂದನನ್ನು ಭಜಿಸಿರಿ. ಸುರಶ್ರೇಷ್ಠನನ್ನು ನಮಸ್ಕರಿಸಿರಿ. ಉತ್ತಮೋತ್ತಮಲೋಕಗಳನ್ನು ಹೊಂದಿರಿ ಹರಿನಾಮವನ್ನು ಕೇಳಿರಿ. ಇಚ್ಛೆಗಳೆಂಬ ಅಲೆಗಳನ್ನು ದಾಟುವ ಆ ನಾಮಗಳನ್ನು ಕೇಳಿ, ಇಷ್ಟಾರ್ಥಗಳನ್ನು ಹೊಂದಿ.

ಇಲ್ಲಿಗೆ ಶ್ರೀ ಪದ್ಮಮಹಾಪುರಾಣದ
ಆದಿಖಂಡಲ್ಲಿ ಅರವತ್ತೆರಡನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ಮಹಾಮುನಿಯಾದ ಶ್ರೀ ವ್ಯಾಸರು ರಚಿಸಿದ
ಪದ್ಮಮಹಾಪುರಾಣದಲ್ಲಿ ಆದಿಯಾದ ಆದಿಖಂಡವು ಸಮಾಪ್ತವಾದುದು.



---

ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚ್, ಮೈಸೂರು.